# ನೂರ್ ಜಹಾನ್

ಐತಿಹಾಸಿಕ ಕಾದಂಬರಿ

ಡಾ|| ವಿಜಯಾ ಸುಬ್ಬರಾಜ್



ನವಕರ್ನಾಟಕ ಪ್ರಕಾಶನದ ೫೯೫ನೇ ಪ್ರಕಟಣೆ

# ನೂರ್ ಜಹಾನ್

(ಐತಿಹಾಸಿಕ ಕಾದಂಬರಿ)

ಡಾ॥ ವಿಜಯಾ ಸುಬ್ಬರಾಜ್



ನವಕರ್ನಾಟಕ ಪ್ರಕಾಶನ

**NUR JAHAN** - AITIHAASIKA KAADAMBARI (Kannada)
*NUR JAHAN - A historical novel*
*by Dr. Vijaya Subbaraj*

First Edition : 2020 Pages : 304 Price : ₹ 290
Paper : 70 gsm NS Maplitho 18.6 Kg (1/8 Demy Size)

ಮೊದಲ ಮುದ್ರಣ : 2020

ಪ್ರತಿಗಳ ಸಂಖ್ಯೆ : 500



**ಬೆಲೆ : ₹ 290**

ಮುಖಪುಟ : ಹಜರತ್ ಅಲಿ

ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – 560 001
ದೂರವಾಣಿ : 080–22161900 / 22161901 / 22161902

*ಶಾಖೆಗಳು/ ಮಳಿಗೆಗಳು*
ನವಕರ್ನಾಟಕ, ಕ್ರೆಸೆಂಟ್ ರಸ್ತೆ, ಬೆಂಗಳೂರು – 1, ✆ 080–22161913/14, Email : nkpsales@gmail.com
ನವಕರ್ನಾಟಕ, ಕೆಂಪೇಗೌಡ ರಸ್ತೆ, ಬೆಂಗಳೂರು – 9, ✆ 080–22203106, Email : nkpkgr@gmail.com
ನವಕರ್ನಾಟಕ, ಕೆ.ಎಸ್.ರಾವ್ ರಸ್ತೆ, ಮಂಗಳೂರು – 1, ✆ 0824–2441016, Email : nkpmng@gmail.com
ನವಕರ್ನಾಟಕ, ಬಲ್ಮಠ, ಮಂಗಳೂರು – 1, ✆ 0824–2425161, Email : nkpbalmatta@gmail.com
ನವಕರ್ನಾಟಕ, ರಾಮಸ್ವಾಮಿ ವೃತ್ತ, ಮೈಸೂರು–24, ✆ 0821–2424094, Email : nkpmysuru@gmail.com
ನವಕರ್ನಾಟಕ, ಸ್ಟೇಷನ್ ರಸ್ತೆ, ಕಲಬುರಗಿ – 2, ✆ 08472–224302, Email : nkpglb@gmail.com

ಮುದ್ರಕರು : ಪ್ರಿಂಟೆಕ್ ಪ್ರಿಂಟರ್ಸ್, ಬೆಂಗಳೂರು – 560 079

**0110205595** **ISBN 978-93-89308-73-0**

Published by Navakarnataka Publications Private Limited, Embassy Centre Crescent Road, Bengaluru - 560 001 (India). Email : navakarnataka@gmail.com

## ನವಕರ್ನಾಟಕ ಪ್ರಕಾಶನ

# ಅಕ್ಷರ ಪಯಣ-೬೦

## (೧೯೬೦ – ೨೦೨೦)

'ಪುಸ್ತಕಗಳ ಮೂಲಕ ಮಾನವ ಕುಲದ ಸೇವೆ' ಎಂಬ ಧ್ಯೇಯವಾಕ್ಯದೊಂದಿಗೆ ಆರಂಭವಾದ ನವಕರ್ನಾಟಕ ಪ್ರಕಾಶನಕ್ಕೆ ಈಗ ಅರವತ್ತರ ಸಂಭ್ರಮ. ಏಕೀಕರಣಗೊಂಡ 'ಕರ್ನಾಟಕ' ರಾಜ್ಯದ ಭಾಗವಾಗಿಯೇ ಬೆಳೆದ ನವಕರ್ನಾಟಕ ಪ್ರಕಾಶನ ರಾಜ್ಯದ ಬಹುತೇಕ ಓದುಗರನ್ನು ತಲುಪಿದ ಏಕೈಕ ಸಂಸ್ಥೆ ಎಂಬುದು ಹೆಮ್ಮೆಯ ಸಂಗತಿ. ೧೯೫೦ರ ದಶಕದಲ್ಲಿ ನ್ಯೂ ಸೆಂಚುರಿ ಬುಕ್ ಹೌಸ್ (ಬೆಂಗಳೂರು), ಪ್ರಭಾತ್ ಬುಕ್ ಹೌಸ್ (ಮಂಗಳೂರು), ಜನಶಕ್ತಿ ಪ್ರಿಂಟರ್ಸ್ ಮತ್ತು ಜನಶಕ್ತಿ ಪ್ರಕಾಶನ (ಬೆಂಗಳೂರು) – ಈ ನಾಲ್ಕೂ ಸಂಸ್ಥೆಗಳು ಜನಪರ ಚಿಂತನೆಯ ಪುಸ್ತಕ, ಪತ್ರಿಕೆಗಳ ಮುದ್ರಣ, ಪ್ರಕಟಣೆ ಮತ್ತು ವಿತರಣೆಗೆ ಹೆಸರುವಾಸಿಯಾಗಿದ್ದವು. ಈ ನಾಲ್ಕೂ ಸಂಸ್ಥೆಗಳನ್ನು ಒಗ್ಗೂಡಿಸಿ ೧೯೬೦ರಲ್ಲಿ ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಎಂಬ ಸಂಸ್ಥೆಯನ್ನು ಆರಂಭಿಸಲಾಯಿತು. ಶ್ರೀಯುತರುಗಳಾದ ಬಿ. ವಿ. ಕಕ್ಕಿಲ್ಲಾಯ, ಎಂ. ಎಸ್. ಕೃಷ್ಣನ್, ಎಸ್. ಆರ್. ಭಟ್, ಎಂ. ಸಿ. ನರಸಿಂಹನ್, ಸಿ. ಆರ್. ಕೃಷ್ಣರಾವ್ ಮುಂತಾದ ಕರ್ನಾಟಕದ ಜನನಾಯಕರೂ, ಚಿಂತಕರೂ ಸೇರಿ ಆರಂಭಿಸಿದ ಈ ಸಂಸ್ಥೆ ಇಂದು ಜನಪರ ಚಿಂತನೆಯ ಪುಸ್ತಕಗಳ ಬೃಹತ್ ಪ್ರಕಾಶನ ಸಂಸ್ಥೆಯಾಗಿ ಬೆಳೆದು ನಿಂತಿದೆ.

೧೯೭೦ರ ನಂತರ ನವಕರ್ನಾಟಕ ಪ್ರಕಾಶನ, ಇತ್ತೀಚೆಗೆ (೨೦೧೮) ಕರ್ನಾಟಕ ಸರಕಾರದಿಂದ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾದ ಶ್ರೀ ಆರ್. ಎಸ್. ರಾಜಾರಾಮ್ ಅವರ ಕನಸು ಮತ್ತು ಕ್ರಿಯಾಶೀಲತೆಯಿಂದಾಗಿ 'ಪುಸ್ತಕಗಳ ಮೂಲಕ ಮಾನವ ಕುಲದ ಸೇವೆ' ಎಂಬ ಧ್ಯೇಯವಾಕ್ಯಕ್ಕೆ ಅರ್ಥ ತಂದುಕೊಟ್ಟಿತು. ಈವರೆಗೆ ಸುಮಾರು ೫೬೦೦ ಪ್ರಕಟಣೆಗಳನ್ನು ಹೊರತಂದಿರುವ ನವಕರ್ನಾಟಕ ಈ ಪುಸ್ತಕಗಳನ್ನು ಓದುಗರೆಡೆಗೇ ಕೊಂಡೊಯ್ಯುವ ಸಾಹಸವನ್ನು ರಾಜ್ಯಾದ್ಯಂತ ತಾಲೂಕು–ಜಿಲ್ಲಾ ಕೇಂದ್ರಗಳಲ್ಲಿ ಹಾಗೂ ಸಮ್ಮೇಳನ, ವಿಚಾರ ಸಂಕಿರಣಗಳಲ್ಲಿ ಪ್ರದರ್ಶನಗಳನ್ನೇರ್ಪಡಿಸುವ ಮೂಲಕ ಮಾಡಿದೆ. ರಾಜಾರಾಮ್‌ರವರ ಜೊತೆಗೂಡಿ ದಶಕಗಳ ಕಾಲ ದುಡಿದ ಎ. ರಮೇಶ ಉಡುಪ ಮತ್ತು ನವಕರ್ನಾಟಕದ ನೂರಾರು ವಿವಿಧ ಹಂತದ ಸಿಬ್ಬಂದಿಯ ಪರಿಶ್ರಮ ಈ ಸಂಸ್ಥೆಯ ವಿಕಾಸದ ಮಾರ್ಗದಲ್ಲಿ ಸ್ಮರಿಸುವಂಥದ್ದು. ಆರ್. ಎಸ್. ರಾಜಾರಾಮ್ ಅವರ ನಿವೃತ್ತಿ (೨೦೧೬)ಯ ನಂತರ ಸಂಸ್ಥೆ ಡಾ॥ ಸಿದ್ದನಗೌಡ ಪಾಟೀಲರ ನೇತೃತ್ವದಲ್ಲಿ ಪುಸ್ತಕ ಸಂಸ್ಕೃತಿಯ ಮುನ್ನಡೆಗಾಗಿ ಶ್ರಮಿಸುತ್ತಿದೆ.

ಭೂಗರ್ಭದಿಂದ ಆಕಾಶದವರೆಗಿನ ವ್ಯಾಪ್ತಿಯುಳ್ಳ ವಿವಿಧ ವಿಷಯಗಳಾದ ಮಾನವ

ವಿಕಾಸ, ವಿಜ್ಞಾನ, ತಂತ್ರಜ್ಞಾನ, ಗಣಿತ, ಮನೋವಿಜ್ಞಾನ, ತತ್ವಶಾಸ್ತ್ರ, ಇತಿಹಾಸ, ಕೃಷಿ, ಸಾಹಿತ್ಯ, ಸಂಸ್ಕೃತಿ, ಭಾಷಾಶಾಸ್ತ್ರ, ಸಮಾಜಶಾಸ್ತ್ರ, ರಾಜಕೀಯ, ಆರ್ಥಿಕತೆ, ಕಾನೂನು, ಆರೋಗ್ಯ, ಪರಿಸರ, ಶಿಕ್ಷಣ, ಜನಪದ, ಕಲೆ, ಮಕ್ಕಳ ಸಾಹಿತ್ಯ, ಜೀವನ ಚರಿತ್ರೆಗಳು, ನಿಘಂಟುಗಳು, ಅನುವಾದಗಳು – ಹೀಗೆ ಎಲ್ಲವನ್ನೂ ಒಳಗೊಂಡು ವೈಚಾರಿಕ, ವೈಜ್ಞಾನಿಕ ಮನೋಭಾವದ ಹಿನ್ನೆಲೆಯಲ್ಲಿ ಅಸಂಖ್ಯ ವಸ್ತು, ವಿಷಯ ವೈವಿಧ್ಯತೆಯುಳ್ಳ ಪುಸ್ತಕಗಳನ್ನು ನವಕರ್ನಾಟಕ ಪ್ರಕಾಶನ ಪ್ರಕಟಿಸಿದೆ. ರಾಷ್ಟ್ರೀಯ, ಅಂತರರಾಷ್ಟ್ರೀಯ ಮಟ್ಟದಲ್ಲಿ ಖ್ಯಾತಿ ಪಡೆದ ಚಿಂತಕರು, ಬರಹಗಾರರು ಈ ಎಲ್ಲ ವಿಷಯಗಳ ಕುರಿತು ವಿದ್ವತ್‌ಪೂರ್ಣ ಕೃತಿಗಳನ್ನು ರಚಿಸಿ, ಸಂಪಾದಿಸಿ ಕೊಟ್ಟು ನವಕರ್ನಾಟಕ ಪ್ರಕಾಶನದ ಘನತೆ ಹೆಚ್ಚಲು, ಅದರ ಆಶಯ ಈಡೇರಲು, ನಿರಂತರವಾಗಿ ಆರು ದಶಕಗಳ ಕಾಲ ಅರ್ಥಪೂರ್ಣವಾಗಿ ಬೆಳೆದು ಬರಲು ಕಾರಣರಾಗಿದ್ದಾರೆ. ಈ ವೈವಿಧ್ಯಮಯ ಪುಸ್ತಕಗಳು ಓದುಗರ ಅರಿವು ಮತ್ತು ವೈಚಾರಿಕತೆಯನ್ನು ಹೆಚ್ಚಿಸುವುದರ ಜೊತೆಗೆ ಸಂಸ್ಥೆಗೆ ಹಾಗೂ ಲೇಖಕರಿಗೆ ಪ್ರತಿಷ್ಠಿತ ಪ್ರಶಸ್ತಿಗಳನ್ನು, ಬಹುಮಾನಗಳನ್ನು ತಂದುಕೊಟ್ಟಿವೆ. ಹೊಸ ಪೀಳಿಗೆಯ ಲೇಖಕರನ್ನೂ, ಓದುಗರನ್ನೂ, ಅವರ ಚಿಂತನೆಗಳನ್ನೂ ಒಳಗೊಳ್ಳುತ್ತಲೇ ಬೆಳೆದ ನವಕರ್ನಾಟಕ ಆಧುನಿಕ ತಂತ್ರಜ್ಞಾನವನ್ನೂ ತನ್ನ ವಿಕಾಸದ ಭಾಗವಾಗಿಸಿ ಕೊಂಡಿದೆ. ನವಕರ್ನಾಟಕ ಆನ್‌ಲೈನ್ ಮಳಿಗೆ, ವಿದ್ಯುನ್ಮಾನ ಪುಸ್ತಕಗಳು, ಹೀಗೆ ಕಾಲಕಾಲಕ್ಕೆ ಬೆಳೆಯುವ ವಿಜ್ಞಾನ, ತಂತ್ರಜ್ಞಾನಗಳಿಗೆ ಮೈಯೊಡ್ಡುತ್ತ ಈ ಸಂಸ್ಥೆ ಮುನ್ನಡೆಯುತ್ತಿದೆ.

ಇಪ್ಪತ್ತು ವರ್ಷದ ಹಿಂದೆ (೧೯೯೯) ಡಾ॥ ಜಿ. ರಾಮಕೃಷ್ಣ ಅವರ ಸಂಪಾದಕತ್ವದಲ್ಲಿ ನವಕರ್ನಾಟಕ ಪ್ರಕಾಶನದಿಂದ ಆರಂಭವಾದ 'ಹೊಸತು' ತಿಂಗಳ ಪತ್ರಿಕೆ ಕನ್ನಡದ ವಿಚಾರವಾದಿ ಬರಹಗಾರರ, ಓದುಗರ ವೇದಿಕೆಯಾಗಿ ರೂಪುಗೊಂಡಿದೆ. 'ನೆಮ್ಮದಿಯ ನಾಳೆ ನಮ್ಮದು' ಎಂಬ ಘೋಷವಾಕ್ಯದ ಈ ಪತ್ರಿಕೆ ಕನ್ನಡ ಪತ್ರಿಕೋದ್ಯಮಕ್ಕೆ ವಿಶಿಷ್ಟ ಕಾಣಿಕೆಯಾಗಿದೆ.

ಜನಪರ ಲೇಖಕರಿಂದ, ಪ್ರಜ್ಞಾವಂತ ಓದುಗರಿಂದ ಬೆಳೆದ ನವಕರ್ನಾಟಕ ಪ್ರಕಾಶನ ಬೆಂಗಳೂರು, ಮೈಸೂರು, ಮಂಗಳೂರು, ಕಲಬುರಗಿ ನಗರಗಳಲ್ಲಿ ಮಳಿಗೆಗಳನ್ನು ಹೊಂದಿದೆ. ಧಾರವಾಡ, ಶಿವಮೊಗ್ಗ, ದಾವಣಗೆರೆ ಮುಂತಾದ ಕಡೆ ಮಳಿಗೆಗಳನ್ನು ಆರಂಭಿಸಿ ಹೆಚ್ಚಿನ ಮಟ್ಟದಲ್ಲಿ ಜನಮನ ತಲುಪುವ ಗುರಿ ಹೊಂದಿದೆ. ಪ್ರತಿ ಜಿಲ್ಲೆ, ತಾಲೂಕುಗಳಲ್ಲಿ ಪುಸ್ತಕ ಪ್ರದರ್ಶನ ಆಯೋಜನೆ, ಸಂಚಾರಿ ಪುಸ್ತಕ ಪ್ರದರ್ಶನ ಯೋಜನೆ, ವಿಭಿನ್ನ ವಸ್ತು–ವಿಷಯಗಳನ್ನೊಳಗೊಂಡ ಅರವತ್ತು ಪುಸ್ತಕಗಳ ಪ್ರಕಟಣೆ, ಹೀಗೆ ಆರು ದಶಕಗಳನ್ನು ಪೂರೈಸುತ್ತಿರುವ ಸಂದರ್ಭದಲ್ಲಿ (೨೦೧೯–೨೦) ಹಲವಾರು ಯೋಜನೆಗಳನ್ನು ಹಮ್ಮಿಕೊಂಡಿದೆ. ಅಕ್ಷರ ಪಯಣ–೬೦ರ ಈ ಹೊತ್ತಿನಲ್ಲಿ ಲೇಖಕರ, ಕಲಾವಿದರ, ಓದುಗರ, ಪುಸ್ತಕ ವಿತರಕರ, ಹಾಗೆಯೇ ಸಮಗ್ರ ಕನ್ನಡನಾಡಿನ ಜನತೆಯ ಸಹಕಾರ ಹಿಂದಿನಂತೆಯೇ ಮುಂದೆಯೂ ಇರಲೆಂದು ವಿನಯಪೂರ್ವಕವಾಗಿ ಮನವಿ ಮಾಡುತ್ತೇವೆ.

ನಿರ್ದೇಶಕ ಮಂಡಳಿ
***ನವಕರ್ನಾಟಕ ಪ್ರಕಾಶನ***

# ಚರಿತ್ರೆಯ ನೆಪ - ವರ್ತಮಾನದ ತಾಪ

ಇತಿಹಾಸ, ಪುರಾಣ, ಕಲ್ಪನೆ, ಫ್ಯಾಂಟಸಿ ಮುಂತಾದ ಎಲ್ಲ ಸಲಕರಣೆಗಳೂ ವರ್ತಮಾನದ ಪಡಿಪಾಟಲುಗಳನ್ನು ತೋಡಿಕೊಳ್ಳುವ ಹುನ್ನಾರಗಳು. ಅವುಗಳ ಮೂಲಕ ನಾವು ಕಟ್ಟಿಕೊಡುವ ವಾಸ್ತವಗಳು ನಮ್ಮ ಇಂದಿನ ಅಜೆಂಡಾಗಳನ್ನು ಸಮರ್ಥಿಸುವ ನೆಲೆಯಲ್ಲಿಯೇ ಹುಟ್ಟಿಕೊಳ್ಳುತ್ತವೆ. ಇದು ದೋಷವಲ್ಲ. ಹೀಗಾಗುವುದು ಅನಿವಾರ್ಯ. ಆದ್ದರಿಂದಲೇ ಇಂತಹ ಕೃತಿಗಳು ಮೆಚ್ಚಿಗೆ ಮತ್ತು ಟೀಕೆಗಳ ಜೋಡಿ ಸ್ವಾಗತವನ್ನು ಪಡೆಯುತ್ತವೆ. ಕೃತಿಯ ಸಾಹಿತ್ಯಕ ಗುಣಕ್ಕೂ ಈ ಸ್ವಾಗತದ ಪರಿಗೂ ಅಂತಹ ಸಂಬಂಧವೇನೂ ಇರುವುದಿಲ್ಲ. 'ಚಿಕವೀರರಾಜೇಂದ್ರ'ವಾದರೂ ಸರಿ, 'ಆವರಣ'ವಾದರೂ ಅಷ್ಟೆ. ಕಾರಣಗಳು ಬೇರೆಯಾದರೂ ಪರಿಣಾಮ ಅದೇ. ನಮಗೆ ಮುಖ್ಯವೆನಿಸುವುದು ವರ್ತಮಾನವನ್ನು ನಿರ್ವಹಿಸಲು ಇಂತಹ ಕೃತಿಗಳು ನೀಡುವ ತಿಳಿವಳಿಕೆ ಮತ್ತು ಕೃತಿಯ ಕಟ್ಟುವಿಕೆಯಲ್ಲಿ ಕಾಣಿಸುವ ಕಲಾತ್ಮಕತೆಗಳು. ಅಷ್ಟೇ ಅಲ್ಲ, ಲೇಖಕ/ಲೇಖಕಿಯರು ಜೀವನಪರವಾಗಿದ್ದರೂ ಒಂದು ಬಗೆಯ ನಿರ್ಮಮತೆಯನ್ನೂ ಹೊಂದಿರಬೇಕಾಗುತ್ತದೆ. ಯಾಕೆಂದರೆ, ವಿಶ್ವಸನೀಯತೆಯು ಇಂತಹ ಕೃತಿಗಳ ನಿಜವಾದ ಮಾನದಂಡ. ಕಪ್ಪು-ಬಿಳುಪುಗಳ ರಾಜ್ಯಭಾರವು ಇಲ್ಲಿ ಸರಿಯೆನಿಸುವುದಿಲ್ಲ.

ಸುಮಾರು ಐವತ್ತು ವರ್ಷಗಳಿಂದ ಹಲವು ಬಗೆಯ ಸೃಜನಶೀಲ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವ ಡಾ॥ ವಿಜಯಾ ಸುಬ್ಬರಾಜ್ ಅವರು ಅಷ್ಟು ಕಾಲದಿಂದಲೂ ನನಗೆ ಚೆನ್ನಾಗಿ ಗೊತ್ತಿರುವವರು. ಕವಿತೆ, ಕಥೆ, ನಾಟಕ, ಕಾದಂಬರಿ, ವಿಮರ್ಶೆ, ಅನುವಾದ, ರಂಗಭೂಮಿ ಮುಂತಾದ ಹಲವು ಪ್ರಕಾರಗಳಲ್ಲಿ ತೊಡಗಿಕೊಂಡಿರುವ ಅವರು, ಕನ್ನಡ ಲೇಖಕಿಯರ ಸಮುದಾಯದಲ್ಲಿ 'ನಿಮ್ಮೊಡನಿದ್ದೂ ನಿಮ್ಮಂತಾಗದ' ಸ್ಥಿತಿಯನ್ನು ಅನುಭವಿಸಿದ್ದಾರೆ. ಸ್ತ್ರೀವಾದಿಗಳು, 'ಜನಪ್ರಿಯ' ಬರಹಗಾರರು, ಹೋರಾಟಗಾರ್ತಿಯರು ಮುಂತಾದ ಯಾವುದೇ ವರ್ಗೀಕರಣಕ್ಕೆ ಸಾರಾಸಗಟಾಗಿ ಅಂಟಿಕೊಳ್ಳಲು ಅವರು ಇಷ್ಟಪಟ್ಟಿಲ್ಲ. ಆದ್ದರಿಂದಲೇ ಅವರಿಗೆ ಯಾವುದೇ ಗುಂಪಿನ ಸುರಕ್ಷಾವಲಯವೂ ಇಲ್ಲ. ಅವರ ಬರವಣಿಗೆಯು ವಿಮರ್ಶೆ, ಅಧ್ಯಯನಗಳಿಗೆ ಒಳಪಟ್ಟಿರುವುದೂ ಕಡಿಮೆಯೇ. ಕನ್ನಡ, ಇಂಗ್ಲಿಷ್, ಹಿಂದಿ, ತೆಲುಗುಗಳ ಜೊತೆಗೆ ಫ್ರೆಂಚ್ ಭಾಷೆಯನ್ನೂ ಕಲಿತಿರುವ ವಿಜಯಾ ಅವರು ತಮ್ಮ ಪ್ರತಿಭೆಯ ಚೌಕಟ್ಟಿನೊಳಗೆ ಶ್ರದ್ಧೆಯಿಂದ ಕೆಲಸ ಮಾಡಿಕೊಂಡು ಬಂದಿದ್ದಾರೆ. ಬಹಳ ಕಷ್ಟಪಟ್ಟು ಬರವಣಿಗೆಯ ಕಿಚ್ಚನ್ನು ಉರಿಸಿಕೊಂಡು ಬಂದಿದ್ದಾರೆ. ಹೊಸ ಬಗೆಯ ಸವಾಲುಗಳನ್ನು ನಿರ್ವಹಿಸಲು ಅವರು ಯಾವಾಗಲೂ ಹಿಂಜರಿದಿಲ್ಲ.

ಇತ್ತೀಚೆಗೆ ಕಸ್ತೂರ್ ಬಾ ಅವರ ಜೀವನವನ್ನು ಆಧರಿಸಿದ 'ಬೆಸುಗೆಯ ಬಂಧನದಲ್ಲಿ' ಕಾದಂಬರಿಯನ್ನು ಬರೆದ ವಿಜಯಾ ಅವರು ಕಾಲದಲ್ಲಿ ಹಿಂದೆ ಸರಿದು ನೂರ್ ಜಹಾನ್

(1577–1645) ಬಗ್ಗೆ ಮತ್ತೊಂದು ಸುದೀರ್ಘ ಕೃತಿಯನ್ನು ರೂಪಿಸಿಕೊಟ್ಟಿದ್ದಾರೆ. ನಮ್ಮ ಲೇಖಕಿಯರು ತಮ್ಮ ಅಸ್ಮಿತೆ, ಅಸ್ತಿತ್ವಗಳ ವರ್ತಮಾನವನ್ನು ಬಳಸಿಕೊಂಡಿರುವಷ್ಟು ವ್ಯಾಪಕವಾಗಿ ಇತಿಹಾಸವನ್ನು ಬಳಸಿಕೊಂಡಿರುವಂತೆ ಕಾಣುವುದಿಲ್ಲ. ಎಚ್. ವಿ. ಸಾವಿತ್ರಮ್ಮನವರ 'ರಾಮ, ಸೀತೆ, ರಾವಣ', ಅನುಪಮಾ ನಿರಂಜನ ಅವರ 'ಮಾಧವಿ' ಮುಂತಾದ ಕಾದಂಬರಿಗಳು ಈ ಕೆಲಸವನ್ನು ಸಮರ್ಥವಾಗಿ ಮಾಡಿವೆ. ಆದರೆ ಡಾ॥ ವಿಜಯಾ ಅವರು ಚರಿತ್ರೆಯ ಭಿತ್ತಿಯಲ್ಲಿ ಈ ಕೆಲಸ ನಿರ್ವಹಿಸಿದ್ದಾರೆ. ಅಲ್ಪ ಪರಿಚಿತವಾದ ವಸ್ತುವನ್ನು ತೆಗೆದುಕೊಂಡು ಸಾಕಷ್ಟು ಅಧ್ಯಯನ ಮಾಡಿ ಈ ಕಾದಂಬರಿಯನ್ನು ರಚಿಸಿದ್ದಾರೆ.

ಮಾಧ್ಯಮಿಕ ಶಾಲೆಯಲ್ಲಿ ಓದುವಾಗ ನಮಗೆಲ್ಲ ಜಹಾಂಗೀರನ ರಾಣಿಯೆಂದು ಪರಿಚಿತಳಾದ ಮೆಹರುನ್ನೀಸಾ (ನೂರ್ ಜಹಾನ್) ಅವರದು ಇಷ್ಟೊಂದು ಸಂಕೀರ್ಣವಾದ ವ್ಯಕ್ತಿತ್ವವೆಂದು ನಮ್ಮಲ್ಲಿ ಬಹಳ ಜನಕ್ಕೆ ತಿಳಿದಿಲ್ಲ. ಅನಾರ್ಕಲಿಯ 'ದುರಂತ ಕಥನ'ಕ್ಕೆ ಸಿಕ್ಕಷ್ಟು ಗಮನವೂ ಇವಳಿಗೆ ಸಿಕ್ಕಿರಲಿಲ್ಲ. ಹೆರಾಲ್ಡ್ ಲ್ಯಾಂಬ್ ಅವರು 1935ರಲ್ಲಿ ಬರೆದ 'ನೂರ್ ಮಹಲ್' ಮತ್ತು ಇಂದು ಸುಂದರೇಶನ್ ಅವರು ಬರೆದ ಮೂರು ಕಾದಂಬರಿಗಳ ಸರಣಿಯನ್ನು ಹೊರತುಪಡಿಸಿದರೆ ಆಕೆಯ ಬಗ್ಗೆ ಬಂದಿರುವ ಬರವಣಿಗೆ ಬಹಳ ಕಡಿಮೆ. ('Twentieth Wife', 'The Feast of Roses' ಮತ್ತು 'Shadow Princess') ಆದರೂ ಪುರುಷಪ್ರಣೀತವಾದ ಇತಿಹಾಸದ ಪುಸ್ತಕಗಳು ಕೂಡ ಆಕೆಯ ಪ್ರತಿಭೆ ಮತ್ತು ಜನಪರತೆಗಳನ್ನು ಕುರಿತು ಸಾಕಷ್ಟು ವಿವರವಾಗಿ ಪ್ರಸ್ತಾಪಿಸುತ್ತವೆ, ಮೆಚ್ಚಿಕೊಳ್ಳುತ್ತವೆ. ಡಾ॥ ವಿಜಯಾ ಅವರು ಚರಿತ್ರೆಯ ವಿವರಗಳಿಗೆ ಯಾವುದೇ ಭಂಗ ತರದೆ, ಕಾಲ್ಪನಿಕವಾದ ಸಂಗತಿಗಳನ್ನು ಸೇರಿಸದೆ ಈ ಕಥಾನಕವನ್ನು ರೂಪಿಸಿದ್ದಾರೆ. ಮೆಹರುನ್ನೀಸಾಳ ಮೊದಲ ಮದುವೆಯಾಗುವುದಕ್ಕೆ ಮೊದಲೇ ಅವಳು ಮತ್ತು ಸಲೀಮನ ನಡುವೆ ಪ್ರೀತಿ–ಪ್ರೇಮಗಳ ಸಂಬಂಧವಿತ್ತೇ ಎನ್ನುವುದರ ಬಗ್ಗೆ ಎರಡು ಬಗೆಯ ಆವೃತ್ತಿಗಳಿವೆ. ಮೊದಲನೆಯದು ಅಂತಹ ಸಂಬಂಧವನ್ನು ಅಲ್ಲಗಳೆದು, ಅವಳ ಮೊದಲ ಪತಿಯ ಮರಣದ ಬಳಿಕವೇ ಅವರು ಭೇಟಿಯಾದರೆಂದು ಹೇಳುತ್ತದೆ. ಇನ್ನೊಂದು ಆವೃತ್ತಿಯು ಅಂತಹ ಸಂಬಂಧವಿತ್ತೆಂದು ಹೇಳುತ್ತಾ ಜಹಾಂಗೀರನು ಚಕ್ರವರ್ತಿಯಾದ ಬಳಿಕ ಅವಳ ಮೊದಲ ಪತಿಯನ್ನು ಕೊಲ್ಲಿಸಿದನೆನ್ನುವ ತನಕ ಹೋಗುತ್ತದೆ. ವಾಸ್ತವವಾಗಿ ಅವಳ ಮೊದಲ ಪತಿಯ ಸಾವು ಸಂಭವಿಸಿ ನಾಲ್ಕು ವರ್ಷಗಳು ಕಳೆಯುವ ತನಕ, ಅವಳು ಚಕ್ರವರ್ತಿಯ ಅಂತಃಪುರವೆಂಬ ಗೊಂಡಾರಣ್ಯದಲ್ಲಿಯೇ ಇದ್ದರೂ ಅವರ ಮದುವೆ ನಡೆಯುವುದಿಲ್ಲ. ವಿಜಯಾ ಅವರು ಎರಡನೆಯ ಆವೃತ್ತಿಯನ್ನು ಒಪ್ಪಿಕೊಂಡು ಅವರಿಬ್ಬರ ಪ್ರಣಯ ಕಥಾನಕವನ್ನು ವಾಸ್ತವದ ಚೌಕಟ್ಟಿನಲ್ಲಿಯೇ ರೂಪಿಸಿದ್ದಾರೆ. ಕಾದಂಬರಿಯನ್ನು ಆವರಿಸಿರುವ ಹಲವು ಬಗೆಯ ಭಾವತುಮುಲಗಳಿಗೆ ಅವರ ಈ ಆಯ್ಕೆಯೂ ಕಾರಣವಾಗುತ್ತದೆ. ಅಂತೆಯೇ ಜಹಾಂಗೀರನ ಮರಣದ ನಂತರ ನೂರ್ ಜಹಾನ್ ಅನುಭವಿಸಿದ ಪಡಿಪಾಟಲುಗಳು ಮತ್ತು ಅವಳು ತನ್ನ ಬದುಕನ್ನು ಮರುರೂಪಿಸಿಕೊಂಡ ಬಗೆಯನ್ನು ಕುರಿತ ವಿವರಗಳಿಗೂ ಸಾಕಷ್ಟು ಮಹತ್ವ ಕೊಡಲಾಗಿದೆ. ಹಾಗೆ

ಮಾಡುವುದರಿಂದ ಈ ನತದೃಷ್ಟ ರಾಣಿಯ ಹುಟ್ಟಿನಿಂದ ಸಾವಿನವರೆಗಿನ ಸ್ವನಿಯಂತ್ರಿತವಲ್ಲದ ಪಯಣದ ಚಿತ್ರವನ್ನು ಕಟ್ಟಿಕೊಡಲು ಸಾಧ್ಯವಾಗಿದೆ.

'ನಿಮ್ಮ ಚರಿತ್ರೆಯಲ್ಲಿ ನಮಗೆ ಜಾಗವಿಲ್ಲ' ಎನ್ನುವುದು ಶ್ರೀಮತಿ ಪಿ. ಚಂದ್ರಿಕಾ ಅವರ ಕವನ ಸಂಕಲನವೊಂದರ ಅರ್ಥಪೂರ್ಣವಾದ ಶೀರ್ಷಿಕೆ. ಆ ಮಾತು ಹಲವರಿಗೆ ಅನ್ವಯಿಸುತ್ತದೆ. ಈ ಕಾದಂಬರಿಯಲ್ಲಿ ಹಾಗೆ ಪಕ್ಕಕ್ಕೆ ತಳ್ಳಲಾದ ಹೆಣ್ಣೊಬ್ಬಳ ಬದುಕಿನ ಮರುನಿರೂಪಣೆಯಿದೆ. ಅಂತಹ ಆಯ್ಕೆಯಲ್ಲಿಯೇ ಸಹಜವಾದ ಸರಿಯಾದ ಸ್ತ್ರೀವಾದದ ಒತ್ತಾಯಗಳಿವೆ. ನೂರ್ ಜಹಾನ್ ಹುಟ್ಟಿನಿಂದ ಮೊದಲಾಗಿ ಕೊನೆಯ ಕ್ಷಣದವರೆಗೆ ಅವಳ ಜೀವನದ ಹಲವು ಆಯಾಮಗಳನ್ನು ನಿರೂಪಿಸುವ ಕಾದಂಬರಿಯು ಉದ್ದಕ್ಕೂ ವಾಸ್ತವ ಲೋಕದ ಹಲವು ನೆಲೆಗಳನ್ನು ಮರುಸೃಷ್ಟಿಸುತ್ತಲೇ ಸ್ತ್ರೀಪರವಾದ ನೋಡುವ ಬಗೆಯನ್ನು ಕಾಪಾಡಿಕೊಂಡಿದೆ. ಆಕೆಯು ಬಾಲ್ಯದಿಂದಲೂ ಲಿಂಗನಿರ್ದಿಷ್ಟತೆಯನ್ನು ಮೀರಿದ ಹಲವು ವಿಷಯಗಳಲ್ಲಿ ಆಸಕ್ತಿಯನ್ನು ಹೊಂದಿದವಳು. ತನ್ನ ಮನೆಯ ವಾತಾವರಣವೇ ಅವಳಲ್ಲಿ ಓದು, ರಾಜಕಾರಣ, ವಸ್ತ್ರವಿನ್ಯಾಸ ಮುಂತಾದ ಹತ್ತು ಹಲವು ಆಸಕ್ತಿಗಳನ್ನು ಹುಟ್ಟಿಸುತ್ತದೆ ಮತ್ತು ಪೋಷಿಸುತ್ತದೆ. ಆದರೆ ಇವೆಲ್ಲವನ್ನೂ ಮೀರಿ ಅವಳ ರೂಪವು ಆಕೆಯ ಬದುಕಿನ ಏರುಪೇರುಗಳನ್ನು ರೂಪಿಸುತ್ತದೆ. ರಜಿಯಾ ಸುಲ್ತಾನಾ ಇವಳಿಗಿಂತ ಮುಂಚೆಯೇ ಸ್ವತಃ ರಾಣಿಯಾಗಿ ರಾಜಕೀಯ ಸಾಮರ್ಥ್ಯವನ್ನು ತೋರಿಸಿದವಳು. ಮುಗ್ಧತೆಯಿಂದ ಪ್ರಬುದ್ಧತೆಯ ಕಡೆಗೆ ನೂರ್ ಜಹಾನ್ ಮಾಡುವ ಪಯಣವು 'ಜಾಣತನ' ಮತ್ತು 'ತಂತ್ರಗಾರಿಕೆ'ಗಳನ್ನೂ ಕಲಿಸುತ್ತದೆ. ಅವು ಅವಳಂತಹವರಿಗೆ ಬದುಕುಳಿಯಲು ಅತ್ಯಗತ್ಯವಾದ ಕೌಶಲ್ಯಗಳು. ಅಲ್ಲದೆ ಪುರುಷಪ್ರಧಾನವಾದ ಅಧಿಕಾರ ರಾಜಕಾರಣದಲ್ಲಿ, ನೇರವಾದ ಮುಖಾಮುಖಿ ಸಾಧ್ಯವಿಲ್ಲದಾಗ 'ಗೆರಿಲ್ಲಾ' ಯುದ್ಧತಂತ್ರಗಳನ್ನು ಬಳಸುವುದು ದುರ್ಬಲರಿಗೆ, ಹೆಣ್ಣುಮಕ್ಕಳಿಗೆ ಅನಿವಾರ್ಯವಾಗುತ್ತದೆ. ತಂದೆ, ಅಣ್ಣ, ಗಂಡ, ಪ್ರಿಯಕರ, ಮಲಮಕ್ಕಳು ಎಲ್ಲರೂ ತಮ್ಮ ತಮ್ಮ ಸ್ವಾರ್ಥದ ದಾಳಗಳನ್ನು ಉರುಳಿಸುವಾಗ ನೂರ್ ಜಹಾನ್ ಜೊತೆಗೆ ಉಳಿಯುವುದು ಅವಳ ಮುಗ್ಧ ಮಗಳು ಲಾಡ್ಲಿ ಮಾತ್ರವೇ. ಆವಳಿಗೂ ತಾಯಿಯ ಸಂಗಡ ಆಕರ್ಷಣೆ ಮತ್ತು ವಿಕರ್ಷಣೆಗಳ ಸಂಬಂಧವೇ. ಇಂತಹ ಇಕ್ಕಟ್ಟಿನಲ್ಲಿ ಬೆಳೆಯುವ, ಉಳಿಯುವ ಮತ್ತು ಅಳಿಯುವ ನೂರ್ ಜಹಾನ್ ಪಾತ್ರವನ್ನು ಮಮತೆ ಪಕ್ಷಪಾತಗಳಿಲ್ಲದೆ ಚಿತ್ರಿಸಿರುವುದು ಕಾದಂಬರಿಯ ಒಳ್ಳೆಯ ಲಕ್ಷಣ. ಇಂತಹ ಅನಿವಾರ್ಯ ರಾಜಕೀಯಕ್ಕಿಂತ ನಮಗೆ ಮುಖ್ಯವೆನಿಸುವುದು ಅವಳ ಜನಪರವಾದ, ಸುಧಾರಣೆಯ ಕೆಲಸಗಳು. ಉಡುಪುಗಳ ಮತ್ತು ಒಡವೆಗಳ ವಿನ್ಯಾಸದಿಂದ ಮೊದಲಾಗಿ ಹತ್ತು ಹಲವು ನಿಟ್ಟುಗಳಲ್ಲಿ ಹರಿಯುವ ಅವಳ ಚಟುವಟಿಕೆಗಳ ಉದ್ದೇಶವು ಅಸಹಾಯಕರಾದ ಹೆಣ್ಣುಮಕ್ಕಳಿಗೆ ಆಸರೆಯನ್ನು ಕಲ್ಪಿಸಬೇಕು ಎನ್ನುವುದೇ ಆಗಿರುತ್ತದೆ. ನಿರಾತಂಕವಾಗಿ ಅಧಿಕಾರ ನಡೆಸುವ ಅವಕಾಶ ಸಿಕ್ಕಿದ್ದರೆ, ಆಕೆಯು ಈ ದೇಶ ಕಂಡ ಒಳ್ಳೆಯ ಸಾರ್ವಭೌಮರಲ್ಲಿ ಒಬ್ಬಳಾಗುತ್ತಿದ್ದಳೆಂಬ ಭಾವನೆಯು ಓದುಗರಲ್ಲಿ ಮೂಡುತ್ತದೆ. ನಮ್ಮ ಕಾಲದ ರಾಜಕಾರಣದಲ್ಲಿಯೂ ಇಂತಹುದೇ ಸ್ತ್ರೀವಿರೋಧಿಯಾದ ರಾಜಕಾರಣ ಇರುವುದನ್ನೂ ಇಂದಿರಾ

ಗಾಂಧಿಯವರಿಂದ ಮೊದಲಾಗಿ ಮಮತಾ ಬ್ಯಾನರ್ಜಿಯವರವರೆಗೆ ಹಲವರು ಅದನ್ನು ನಿರ್ವಹಿಸಿರುವ ಬಗೆಗಳನ್ನೂ ನಾವು ಬಲ್ಲೆವು. ಪ್ರಜಾಪ್ರಭುತ್ವದಲ್ಲಿ ಅಧಿಕಾರವನ್ನು ಪಡೆಯುವ, ಕಾಪಾಡಿಕೊಳ್ಳುವ ಬಗೆಗಳು ಬೇರೆ ಬಗೆಯವು. ಆದರೆ, ಒಲೆ ಬೇರೆಯಾದರೂ ಉರಿ ಮಾತ್ರ ಬದಲಾಗಿಲ್ಲ. ಇಂತಹ ಕೃತಿಯಲ್ಲಿ, ಕೇಂದ್ರಪಾತ್ರದ ಭಾವಲೋಕ ಮತ್ತು ಕ್ರಿಯಾಲೋಕಗಳ ನಡುವೆ ಇರುವ ಸಂಬಂಧಗಳ ಹುಡುಕಾಟ ಸರಳವಲ್ಲ. ತನ್ನನ್ನು ಮತ್ತು ತನ್ನನ್ನು ಮಾತ್ರವೇ ಪ್ರೀತಿಸುವವನಿಗೆ, ತಾನು ಇಪ್ಪತ್ತನೆಯ ಹೆಂಡತಿಯೆಂಬ ಸಂಗತಿಯನ್ನು ಒಪ್ಪಿಕೊಳ್ಳುವುದು ಮತ್ತು ಅದು ಸಹಜವೆಂಬಂತೆ ತೆಗೆದುಕೊಳ್ಳುವುದು ಆಧುನಿಕರ ಕಲ್ಪನೆಗೂ ನಿಲುಕಲು ಸಾಧ್ಯವಿಲ್ಲ. ಆದರೆ ಕೃಷ್ಣನ ಅಷ್ಟಮಹಿಷಿಯರು, ದ್ರೌಪದಿಯ ಐವರು ಗಂಡಂದಿರೂ ಸೇರಿದಂತಹ ಲೋಕವನ್ನು ರೂಪಿಸಿದ ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳುವುದು, ಒಪ್ಪಿಕೊಳ್ಳುವುದು ಕೂಡ ಬಿಕ್ಕಟ್ಟಿನ ಸಂಗತಿಯೇ. ನೂರ್ ಜಹಾನಳ ಪ್ರೀತಿ ಯಾವ ಬಗೆಯದು ಮತ್ತು ಷಹಜಹಾನನ 'ಪ್ರೀತಿ' ಯಾವ ಬಗೆಯದು ಎಂದು ಊಹಿಸುವುದೂ ನಮಗೆ ಕಷ್ಟವಾದೀತು. ಆದರೆ, ಸ್ವಲ್ಪ ಹರಿತವಾಗಿ ನೋಡಿದರೆ, ನಮ್ಮ ಕಾಲವೂ ಅಂತಹುದೇ ಏನೋ ಎಂಬ ಸಂಶಯವೂ ಬರುತ್ತದೆ. ಕಳೆದ ಕಾಲಕ್ಕೂ ನಾವಿರುವ ಕಾಲಕ್ಕೂ ಸಮಾನವಾದುದನ್ನು ಕಂಡುಕೊಳ್ಳುವ ಹಾಗೂ ಅದನ್ನು ಪ್ರಸ್ತುತವಾಗಿಸುವ ಕೆಲಸ ಸುಲಭವೇನೂ ಅಲ್ಲ. ಆದ್ದರಿಂದಲೇ ಇಂತಹ ಬರವಣಿಗೆಯನ್ನು ನಾವು ಸ-ವಿಮರ್ಶಕವಾಗಿಯೇ ನೋಡುತ್ತೇವೆ. ಈ ಕಾದಂಬರಿಯಲ್ಲಿಯೂ ಆ ರೀತಿಯ ಮೂಕಯಾತನೆಯ ಅಂತರ್ಜಲ ಇದ್ದೇ ಇದೆ.

ಪ್ರಸ್ತುತ ಕಾದಂಬರಿಯು, ಈ ದೇಶದ ಚರಿತ್ರೆಯಲ್ಲಿ ಮೊಗಲ್ ಸಾಮ್ರಾಜ್ಯದ ಉನ್ನತಿಯ ಕಾಲದಲ್ಲಿ ನಡೆದಿದ್ದು. ಅಕ್ಬರ್, ಜಹಾಂಗೀರ್ ಮತ್ತು ಷಹಜಹಾನ್ ಆ ಕಾಲದಲ್ಲಿ ಆಳಿದ ಚಕ್ರವರ್ತಿಗಳು. ಅದಕ್ಕೆ ಮುಂಚಿನದು ಸಾಮ್ರಾಜ್ಯವನ್ನು ಕಟ್ಟಿದ ಕಾಲವಾದರೆ, ನಂತರದ್ದು ಅವನತಿಯ ಹಾದಿ. ಇಂಥ ಕಡೆ ಅಲ್ಪಸಂಖ್ಯಾತ ಪ್ರಭುಗಳು ಮತ್ತು ಬಹುಸಂಖ್ಯಾತ ಪ್ರಜೆಗಳ ನಡುವಿನ ಸಂಬಂಧವನ್ನು ಕುರಿತ ಹಲವು ನೆಲೆಗಳನ್ನು ಪರಿಶೀಲಿಸಲು ಸಾಧ್ಯ. ವರ್ತಮಾನದ ಸಮಸ್ಯೆಗಳ ಸುಡುಕೊಂಡದಲ್ಲಿ ಗತಕಾಲವನ್ನು ಕಟ್ಟಿಕೊಡುವ ಪ್ರಯತ್ನಗಳ ಹಿಂದೆ ಅಜೆಂಡಾಗಳು ಇದ್ದೇ ಇರುತ್ತವೆ. ಟಿಪ್ಪು ಸುಲ್ತಾನ್ ಕುರಿತ ಸೃಜನಶೀಲ ಕೃತಿಗಳ ಸಂದರ್ಭದಲ್ಲಿ ಇಂತಹ ಪ್ರಶ್ನೆಗಳು ಬಂದಿರುವುದನ್ನು ನಾವು ಬಲ್ಲೆವು. ಆದರೆ, ಪ್ರಜೆಗಳು ಮತ್ತು ಪ್ರಭುಗಳ ನಡುವಿನ ಸಂಬಂಧದ ಸ್ವರೂಪವು ಕೇವಲ ಧರ್ಮವನ್ನು ಅವಲಂಬಿಸಿರುವುದಿಲ್ಲ. ಅಧಿಕಾರವು ವಂಶಪಾರಂಪರ್ಯವಾದಾಗ ಅಥವಾ ಯುದ್ಧದಲ್ಲಿ ಪಡೆಯುವ ಗೆಲುವುಗಳನ್ನು ಅವಲಂಬಿಸಿದಾಗ ಜನಸಾಮಾನ್ಯರ ಜೀವನವು ಯುದ್ಧ ಮತ್ತು ಯುದ್ಧವಿರಾಮಗಳ ಲಯಕ್ಕೆ ಹೊಂದಿಕೊಳ್ಳುತ್ತದೆ. ತಂತ್ರಜ್ಞಾನದ ಫಲವಾದ ಕೇಂದ್ರೀಕರಣವು ಕಡಿಮೆಯಿದ್ದ ಕಾಲದಲ್ಲಿ ಪ್ರಭುತ್ವವು ಕೆಳರಚನೆಗಳನ್ನು ತಲುಪುತ್ತಿದುದೇ ಅಪರೂಪ. ಈ ಕಾದಂಬರಿಯು 'ಅರಮನೆಯ ಕಾರಾಸ್ಥಾನ' (ಪ್ಯಾಲೇಸ್ ಇಂಟ್ರಿಗ್ಯೂಸ್) ಮತ್ತು ಅಂತಃಪುರದ ಅಳಲುಗಳಿಗೆ ಸೀಮಿತವಾಗಿರುವುದು ಆ ಕಾರಣದಿಂದಲೇ ಇರಬೇಕು.

ಕಾದಂಬರಿಯಂತಹ ಪ್ರಕಾರದಲ್ಲಿ ವಿವರಗಳನ್ನು ನಿರ್ವಹಿಸುವುದು ಬಹು ದೊಡ್ಡ ಸವಾಲು. ಘಟನೆಗಳು ಇರುತ್ತವೆ, ವಸ್ತು-ವಿವರಗಳು ಇರುತ್ತವೆ. ಪ್ರತಿಯೊಂದು ಸಂಭಾಷಣೆಯೂ ಕಾಲ್ಪನಿಕವೇ. ಯಾವುದೇ ಪಾತ್ರವು ಆಡಿದ ಯಾವುದೇ ಮಾತನ್ನು ಬೇರೆಯವರು ಕೇಳಿಸಿಕೊಂಡಿರುವುದಿಲ್ಲ. ಕೆಲವು ವಿವರಗಳು ಕೇವಲ ವಾಸ್ತವದ ನಿರೂಪಣೆಯಾದರೆ ಬೇರೆ ಕೆಲವು ಸಾಂಕೇತಿಕವಾಗುವ ಶಕ್ತಿಯನ್ನು ಪಡೆದಿರುತ್ತವೆ. ಹಲವು ಘಟನೆಗಳು ಹಲವು ಕಡೆ ಏಕ ಕಾಲದಲ್ಲಿ ನಡೆಯುತ್ತಿರುವಾಗ ನಿರೂಪಣೆಯ ಅನುಕ್ರಮವೂ ತೊಡಕಾಗುತ್ತದೆ. ನೂರಾರು ಪಾತ್ರಗಳಿರುವಾಗ ಯಾವುದಕ್ಕೆ ಎಷ್ಟು ಮಹತ್ವ ಕೊಡಬೇಕೆಂಬ ಸಮಸ್ಯೆಯೂ ಇರುತ್ತದೆ. ಇಂಥ ದೊಡ್ಡ ಕ್ಯಾನ್ವಾಸನ್ನು ನಿರ್ವಹಿಸಲು ವಿಜಯಾ ಅವರು ಸಾಕಷ್ಟು ಪರಿಶ್ರಮ ಪಟ್ಟಿದ್ದಾರೆ. ಮೊದಮೊದಲು ಬಹಳ ನಿಧಾನಗತಿಯಲ್ಲಿ ನಡೆಯುವ ಕಾದಂಬರಿಯು ಕೊನೆಕೊನೆಗೆ ಅನೇಕಾನೇಕ ಘಟನೆಗಳನ್ನು ನಾಗಾಲೋಟದಲ್ಲಿ ನಿರೂಪಿಸುತ್ತದೆ. ಆದ್ದರಿಂದ ಕಾದಂಬರಿಯ ಶಿಲ್ಪಕ್ಕೆ ಧಕ್ಕೆ ಬರದಂತೆ ಘಟನೆಗಳ ನಿಬಿಡತೆಯನ್ನು ಕಡಿಮೆ ಮಾಡಬಹುದಿತ್ತೇನೋ ಅನ್ನಿಸುತ್ತದೆ. ನಡೆದುದೆಲ್ಲವನ್ನೂ ಹೇಳದೆಯೂ ಇತಿಹಾಸವನ್ನು ಸಶಕ್ತವಾಗಿ ಕಟ್ಟಿಕೊಡಲು ಸಾಧ್ಯ. ಇಂಥ ಕಡೆ, ಇತಿಹಾಸ, ಸಮಾಜ, ಕುಟುಂಬ, ವ್ಯಕ್ತಿಸಂಬಂಧಗಳು ಮತ್ತು ಅಂತರಂಗ ಇವೆಲ್ಲವನ್ನೂ ಕೆಲವೇ ಕೆಲವು ಗೆರೆಗಳಲ್ಲಿ ಮೂಡಿಸುವುದು ಅತ್ಯಗತ್ಯ. ಇಲ್ಲವಾದರೆ ಶಾಲೆ-ಕಾಲೇಜುಗಳ ವಿದ್ಯಾರ್ಥಿಗಳು ತೆಗೆಸಿಕೊಳ್ಳುವ ಗ್ರೂಪ್ ಫೋಟೋಗಳಲ್ಲಿ ಆಗುವಂತೆ ಎಲ್ಲರೂ ಇದ್ದು, ಯಾರೂ ಸರಿಯಾಗಿ ಕಾಣದ ಸನ್ನಿವೇಶ ಬರುತ್ತದೆ. ಈ ಕಾದಂಬರಿಯ ರಚನೆಯಲ್ಲಿ ವಿಜಯಾ ಅವರು ಎದುರಿಸಿರುವ ಸವಾಲುಗಳ ಕಲ್ಪನೆ ಬರಲೆಂದು ಈ ಮಾತುಗಳನ್ನು ಬರೆಯುತ್ತಿದ್ದೇನೆ. ಅಲ್ಲದೆ ಇಡೀ ಕಾದಂಬರಿಯನ್ನು ಪ್ರಥಮ ಪುರುಷದಲ್ಲಿ, ಸಾರ್ವಸಾಕ್ಷಿಕ ಧಾಟಿಯಲ್ಲಿ ಬರೆದರೆ ವೈವಿಧ್ಯಕ್ಕೆ ಇರುವ ಅವಕಾಶಗಳು ಕಡಿಮೆಯಾಗುತ್ತವೆ. ಬರವಣಿಗೆಗೆ ವರದಿಯ ಸ್ವರೂಪ ಬರುತ್ತದೆ. ಧ್ವನಿಶಕ್ತಿಯು ಕೊಂಚ ಕಡಿಮೆಯಾಗುತ್ತದೆ. ಆ ಕಾಲದ ಜೀವನವನ್ನು ಸರಿಯಾಗಿ ಕಟ್ಟಿಕೊಡಲೆಂದು ಕಾದಂಬರಿಕಾರ್ತಿಯು ಸಾಕಷ್ಟು ಕ್ಷೇತ್ರಕಾರ್ಯ ಮಾಡಿದ್ದಾರೆ. ಅದು ಒಳ್ಳೆಯದು. ನಿರೂಪಕಿಯು ನಮ್ಮ ಕಾಲದಲ್ಲಿ ನಿಂತುಕೊಂಡು ಆ ಕಾಲನ್ನು ಕಟ್ಟಿಕೊಡುವಂತೆ ತೋರುತ್ತದೆ. 'ನೆಕ್ ಲೇಸ್'ನಂತಹ ಇಂಗ್ಲಿಷ್ ಪದ ಬರುವುದಲ್ಲದೆ ಕನ್ನಡದ ಪ್ರಸ್ತಾಪವೂ ಬರುತ್ತದೆ. ಸಹಜವಾಗಿಯೇ ಅನ್ಯಭಾಷೆಗಳನ್ನು ಬಳಸುವವರ ಕಥೆಯನ್ನು ಕನ್ನಡದಲ್ಲಿ ಹೇಳುವಾಗ ಏನು ಮಾಡಿದರೂ ನಮ್ಮ ಭಾಷೆಯ ಛಾಪು ಅಂಟಿಕೊಳ್ಳುತ್ತದೆ. ಆಗ ವಿಜಯಾ ಅವರು ಮೊದಲಿನಿಂದಲೂ ಬಳಸಿಕೊಂಡು ಬಂದಿರುವ ವಿಚಾರ, ಭಾವನೆ, ಭಾವುಕತೆ ಮತ್ತು ಉತ್ಸಾಹಗಳ ಮಿಶ್ರಣವಾದ ಶೈಲಿಯು ಬಳಕೆಯಾಗುತ್ತದೆ. ಅವರು ಮಾತಿನ ಮಿತವ್ಯಯವನ್ನು ರೂಢಿಸಿಕೊಂಡವರಲ್ಲ. ಆದರೆ ನೂರ್ ಜಹಾನ್ ಬದುಕಿನ ಏರುಪೇರುಗಳು ಕುತೂಹಲ ಕೆರಳಿಸುತ್ತದೆ. ಕಾದಂಬರಿಯು ತನ್ನದೇ ಆದ ಓದುಗರನ್ನು ಪಡೆಯುತ್ತದೆ. ಒಂದು ಭಾಷೆಯಲ್ಲಿ ಯಾರು ಯಾವುದನ್ನು ಎಷ್ಟು ಯಾಕೆ ಓದುವರೆಂಬ ಸಂಗತಿಯನ್ನು ಕರಾರುವಾಕ್ಕಾಗಿ ಹೇಳುವ ಪ್ರಯತ್ನಗಳು ಇನ್ನೂ ನಡೆದಿಲ್ಲ.

ಕನ್ನಡದ ವಿಮರ್ಶಕ ವಲಯ ಮತ್ತು ಸಮಗ್ರ ವಾಚಕ ವಲಯಗಳ ನಡುವೆ ಬಿರುಕು ಮೂಡಿ ದಶಕಗಳೇ ಕಳೆದವು. ವಿಮರ್ಶೆ ಹಾಗೂ ಸಾಹಿತ್ಯಬೋಧನೆಗಳು ಓದುವವರ ಆಯ್ಕೆ ಮತ್ತು ಅವರು ಓದುವ ಬಗೆಗಳನ್ನು ನಿರ್ದೇಶಿಸುವ ಕಾಲ ಈಗ ಇಲ್ಲ. ಮಾಧ್ಯಮಗಳು ಮತ್ತು ಸಾಮಾಜಿಕ ಮಾಧ್ಯಮಗಳಲ್ಲಿ ನಡೆಯುವ ಕಿರಿಯಾಳದ ಪರಿಚಯ–ಪ್ರಚಾರಗಳು ಮತ್ತು ಸಣ್ಣಪುಟ್ಟ ಲಾಬಿಗಳು ಸ್ವಲ್ಪಮಟ್ಟಿಗೆ ಈ ಕೆಲಸ ಮಾಡುತ್ತಿವೆ. ಇಂತಹ ಸನ್ನಿವೇಶದಲ್ಲಿ ನನ್ನ ಈ ಮಾತುಗಳ ತಾಳಿಕೆ ಮತ್ತು ಅವಶ್ಯಕತೆಗಳ ಬಗ್ಗೆ ನನಗೇ ಅನುಮಾನ ಮೂಡುತ್ತಿದೆ. ಆದರೂ ಡಾ॥ ವಿಜಯಾ ಅವರ ಕಾದಂಬರಿಯನ್ನು ಕುತೂಹಲ ಮತ್ತು ಪ್ರೀತಿಯಿಂದ ಓದಿ ಇಲ್ಲಿ ಬರೆದಿದ್ದೇನೆ. ಈ ಅವಕಾಶ ಕೊಟ್ಟಿದ್ದಕ್ಕಾಗಿ ಡಾ॥ ವಿಜಯ ಸುಬ್ಬರಾಜ್ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

21–09–2020 **ಎಚ್. ಎಸ್. ರಾಘವೇಂದ್ರ ರಾವ್**

# ಒಂದೆರಡು ಮಾತು

ಸ್ತ್ರೀ ಜಗತ್ತಿನ ಸೂರ್ಯ, ಜಗತ್ತಿನ ಬೆಳಕು ಎಂದು ಅರ್ಥ ಬರುವ ಅನ್ವರ್ಥ ನಾಮಗಳಾದ ಮೆಹರುನ್ನೀಸಾ, ನೂರ್ ಜಹಾನ್ ಎಂಬ ಹೆಸರುಗಳಿಂದ ಗುರುತಿಸಿಕೊಂಡ ಮತ್ತು ಮುನ್ನೂರು ವರ್ಷಗಳಿಗೂ ಮಿಕ್ಕು ಆಳಿದ ಮೊಘಲ್‌ಶಾಹಿ ಪರಂಪರೆಯಲ್ಲಿ ಹೊಸ ಮನ್ವಂತರವನ್ನು ಸೃಷ್ಟಿಸಿದ, ಸುವರ್ಣಾಕ್ಷರ ಪುಟಗಳನ್ನು ಮೊಘಲ್‌ವಂಶ ಚರಿತ್ರೆಯಲ್ಲಿ ಸೇರಿಸಿದ ಏಕಮಾತ್ರ ಹೆಣ್ಣೆಂದರೆ ನೂರ್ ಜಹಾನ್!

ನೂರ್ ಜಹಾನ್ ಕೇವಲ ಹೆಣ್ಣಲ್ಲ. ಮೊಘಲ್ ಸಾಮ್ರಾಜ್ಯದಾಗಸದಲ್ಲಿ ಪ್ರಖರವಾದ ಬೆಳಕಿನೊಂದಿಗೆ ಮಿನುಗುತ್ತಿರುವ ನಕ್ಷತ್ರ. ಮೊಘಲ್ ವಂಶದ ಯಾವ ಪರಾಕ್ರಮಿ ಸುಲ್ತಾನ ಅಥವಾ ಬಾದಶಾಹನಿಗೂ ಕಡಿಮೆಯಿಲ್ಲದಂತೆ ಟೊಂಕ ಕಟ್ಟಿ, ಇಡೀ ಸಾಮ್ರಾಜ್ಯದ ಆಡಳಿತ ವ್ಯವಸ್ಥೆಯನ್ನು ಅನನ್ಯವಾಗಿ ರೂಪಿಸಿದವಳು. ಜನಪರ ಯೋಜನೆಗಳನ್ನು ಹುಟ್ಟುಹಾಕಿದವಳು. ಅನಾದಿಕಾಲದಿಂದಲೂ ಜಾತಿ, ನೀತಿ, ಮತ, ಧರ್ಮಗಳ ಹೆಸರಿನಲ್ಲಿ, ಪುರುಷ ಸಮಾಜದ ಯಾಜಮಾನ್ಯದ ಅಡಿಯಲ್ಲಿ, ನಿರಂತರ ದಬ್ಬಾಳಿಕೆ, ಶೋಷಣೆಗಳಿಗೆ ಒಳಗಾಗಿ ನರಕವನ್ನೇ ಅನುಭವಿಸುತ್ತಿದ್ದ ಮಹಿಳೆಯರಿಗೆ ಹೊಸ ಬದುಕಿನ ದಾರಿಗಳನ್ನು ತೋರಿದವಳು. ಅವರ ಭಾವನೆಗಳಿಗೆ ದನಿಕೊಟ್ಟವಳು.

ದೈಹಿಕ ಸಾಮರ್ಥ್ಯ, ಬೌದ್ಧಿಕ ಸಾಮರ್ಥ್ಯಗಳ ಜೊತೆಗೆ, ಬಹುಮುಖ ಪ್ರತಿಭೆಯನ್ನು ಉಳ್ಳವಳಾಗಿದ್ದಳು. ಶಸ್ತ್ರಾಸ್ತ್ರ ಸಾಮರ್ಥ್ಯ, ಶಾಸ್ತ್ರಾರ್ಥ ಸಾಮರ್ಥ್ಯ, ಸೃಜನಶೀಲತೆ, ದೂರದೃಷ್ಟಿಗಳಿಂದ ಪರಾಕ್ರಮದೊಂದಿಗೆ ಚಿತ್ರಕಲೆ, ಸಂಗೀತ, ನೃತ್ಯಗಳೇ ಅಲ್ಲದೆ ಕರಕುಶಲಕಲೆಗಳಾದ ಕುಸುರಿ ಕೆಲಸ, ಕಸೂತಿ, ವಸ್ತ್ರವಿನ್ಯಾಸ, ಹೊಲಿಗೆ, ಸುಗಂಧ ದ್ರವ್ಯಗಳ ತಯಾರಿಕೆ ಇತ್ಯಾದಿಗಳಲ್ಲಿ ಸಿದ್ಧಹಸ್ತಳಾಗಿದ್ದಳು.

ನಯವಿನಯ, ಜಾಣ್ಮೆ, ಚಾಣಾಕ್ಷ್ಯತೆ, ಗಾಂಭೀರ್ಯ, ಆತ್ಮವಿಶ್ವಾಸ, ಆತ್ಮಸ್ಥೈರ್ಯಗಳ ಜೊತೆಗೆ, ಅನಿವಾರ್ಯವಾದಾಗ, ಕ್ರೌರ್ಯ, ನೈಷ್ಠುರ್ಯ, ನಿರ್ದಯತೆಗಳನ್ನೂ ರೂಢಿಸಿಕೊಂಡು, ದ್ವಂದ್ವ ಮನಃಸ್ಥಿತಿಗಳೊಂದಿಗೆ ಎಂತಹ ಸಂದರ್ಭ, ಸನ್ನಿವೇಶಗಳನ್ನೂ ಲೀಲಾಜಾಲವಾಗಿ ಎದುರಿಸಿ ನಿಲ್ಲಬಲ್ಲವಳಾಗಿದ್ದಳು. ಎಲ್ಲಿಯೋ ಮರಳುಗಾಡಿನಲ್ಲಿ ಹುಟ್ಟಿ ಅನಾಥವಾಗಿ ಕಾಲಗರ್ಭದಲ್ಲಿ ಕರಗಿಹೋಗಬೇಕಿದ್ದವಳು, ಅರಸಿಬಂದ ಅದೃಷ್ಟ, ಅವಳನ್ನು ದಿಗಂತದೆತ್ತರಕ್ಕೆ ಬೆಳೆಯುವಂತೆ ಮಾಡಿತು. ಅವಳ ಅಲೌಕಿಕ ಸೌಂದರ್ಯವೇ ಮುಂದೆ ಮೊಘಲ್ ಸಾಮ್ರಾಜ್ಞಿಯಾಗಲು ಅತ್ಯಂತ ಪ್ರಬಲ ಅಸ್ತ್ರವಾಗಿ ಪರಿಣಮಿಸಿತು.

ರಾಜಪರಿವಾರದ ಭಾಗವಾಗಬೇಕು, ತಾನೂ ಸಾಮ್ರಾಜ್ಞಿಯಾಗಿ ಬದುಕಬೇಕು ಎನ್ನುವ ಅವಳ ಬಾಲ್ಯದ ಆಸೆಯೂ, ಅವಳ ವ್ಯಕ್ತಿತ್ವ, ಸಾಮರ್ಥ್ಯಗಳಿಂದ ಪರಿಪೂರ್ಣವಾಯಿತು. ಕೇವಲ ಮೆಹರುನ್ನೀಸಾ ಆಗಿದ್ದವಳು, ಕೈಹಿಡಿದ ಗಂಡ ಜಹಾಂಗೀರನಿಂದಾಗಿ ಮಲಿಕಾ-ಎ-ಹಿಂದುಸ್ತಾನ್ ಎಂದು ಗುರುತಿಸಿಕೊಂಡಳು.

ಜಹಾಂಗೀರನ ಆಡಳಿತದ ಕಾಲದಲ್ಲಿನ ಸಾಧನೆ, ಸುಧಾರಣೆಗಳ ಹಿಂದೆ ಇದ್ದದ್ದೆಂದರೆ ನೂರ್ ಜಹಾನಳ ಶಕ್ತಿ, ಸಾಮರ್ಥ್ಯ, ಜಾಣ್ಮೆ, ಪ್ರತಿಭೆ, ಬುದ್ಧಿವಂತಿಕೆ, ರಾಜನೀತಿ ಚಾತುರ್ಯ, ದೂರದೃಷ್ಟಿ, ಚಾಣಾಕ್ಷತೆ, ಶಿಸ್ತು, ನಿಯಮ ಪಾಲನೆ, ಕರುಣೆ, ದಯೆ, ಮಾನವೀಯತೆ ಮತ್ತು ಧಾರ್ಮಿಕ ಮನೋವೃತ್ತಿ ಮೊದಲಾದವುಗಳೇ ಆಗಿದ್ದವು!

ಆದರೆ ಅವಳ ಪ್ರಗತಿಪರ ಆಲೋಚನೆಗಳು, ಕ್ರಾಂತಿಕಾರಿ ಹೆಜ್ಜೆಗಳು ಮುಸ್ಲಿಂ ಸಮಾಜದ ಮೂಲಭೂತವಾದಿಗಳ ಅಸಮಾಧಾನಕ್ಕೆ ಕಾರಣವಾಗಿ ಹಲವು ರೀತಿಯ ವಿರೋಧಗಳನ್ನು, ಸಂಘರ್ಷಗಳನ್ನು ಎದುರಿಸಬೇಕಾಗಿ ಬಂದರೂ ಧೈರ್ಯಗೆಡಲಿಲ್ಲ. ಹತಾಶಳಾಗಲಿಲ್ಲ. ತಾನಿಟ್ಟ ಹೆಜ್ಜೆಗಳಿಂದ ಹಿಂದೆ ಸರಿಯಲಿಲ್ಲ. ಆದರೆ ಇಷ್ಟೆಲ್ಲವನ್ನೂ ನಿರಾಯಾಸವಾಗಿ ಸಾಧಿಸಿದವಳಲ್ಲಿ ಇದ್ದ ಅಧಿಕಾರಾಕಾಂಕ್ಷೆ, ಮಹತ್ವಾಕಾಂಕ್ಷೆಗಳು, ಹಲವು ಬಗೆಯ ಗಲಭೆಗಳಿಗೆ, ರಕ್ತಪಾತ, ಕೊಲೆಗಳಿಗೆ ದಾರಿ ಮಾಡಿದವು. ಅವಳ ರಾಜಕೀಯ ಬುದ್ಧಿ, ಅವಳನ್ನು ನಂಬಿದವರನ್ನೇ ನಾಶಮಾಡುವ ಹಂತಕ್ಕೆ ತಳ್ಳಿದ್ದೇ ಅಲ್ಲದೆ, ಈ ಮೇಲಾಟದಲ್ಲಿ, ಅವಳೂ ಒಂದು ದಾಳವಾಗಿ, ವಿನಾಶದ ಅಂಚನ್ನು ತಲುಪಿದಳು. ಅಂತಿಮ ದಿನಗಳು ಅವಳ ಪಾಲಿಗೆ ದಾರುಣವೂ, ದುರಂತವೂ ಆಗಿ ಅನಾಥ ಸ್ಥಿತಿಯಲ್ಲಿ ಕಳೆಯಬೇಕಾದ ಅನಿವಾರ್ಯತೆಯತ್ತ ಸಾಗಿತು. ಗಂಡನ ಸಾವನ್ನೂ ನೋಡಲಾಗದ ಅಸಹಾಯಕ ಸ್ಥಿತಿಯಲ್ಲಿದ್ದಳು. ದಯಾ ಭಿಕ್ಷೆಯಿಂದ ಬದುಕಬೇಕಾಯಿತು. ಆದರೆ ಆ ಸ್ಥಿತಿಯಲ್ಲಿಯೂ ಸಹಾಯ ಕೋರಿ ಬಂದವರಿಗೆ ಆಸರೆ ನೀಡುತ್ತಿದ್ದಳು. ಅವರ ಬದುಕಿನ ಕತ್ತಲೆಗೆ ಆಸೆ, ಭರವಸೆಯ ಹಣತೆಗಳನ್ನು ಹಚ್ಚಿ ಬೆಳಗುತ್ತಿದ್ದಳು.

ವರ್ಣಮಯವಾದ ಬದುಕನ್ನು ಬದುಕಿದ ನೂರ್ ಜಹಾನಳು ಯಾವುದೋ ಒಂದು, ದೂರದರ್ಶನದಲ್ಲಿ ಬರುತ್ತಿದ್ದ ಸಿಯಾಸತ್ ಎಂಬ ಧಾರಾವಾಹಿಯ ಮೂಲಕ, ನನ್ನನ್ನು ಅತಿಯಾಗಿ ಆಕರ್ಷಿಸಿದಳು. ಹೇಗಾದರೂ ಅವಳನ್ನು ಕುರಿತು ಕಾದಂಬರಿಯೊಂದನ್ನು ಬರೆಯಬೇಕೆಂಬ ತೀರ್ಮಾನದೊಂದಿಗೆ ಅವಳ ಬದುಕಿಗೆ ಸಂಬಂಧಪಟ್ಟ ಹಲವಾರು ಪುಸ್ತಕಗಳನ್ನು ತರಿಸಿಕೊಂಡು ಅಧ್ಯಯನ ಮಾಡಿದೆ. ಕೆಲವು ಕಡೆ ವಿಸಂಗತಿಗಳು, ವೈರುಧ್ಯಗಳು ಇದ್ದವು. ಆದರೂ ಅವೆಲ್ಲವನ್ನೂ ಮೀರಿ, ನಾನು ನನ್ನದೇ ಆದ ದೃಷ್ಟಿಯೊಂದಿಗೆ, ಅವಳ ಕಥೆಯನ್ನು ಕಟ್ಟಿಕೊಂಡೆ. ಅದನ್ನು ಬರಹಕ್ಕೆ ಇಳಿಸಿದೆ. ನನ್ನ ಶ್ರಮವನ್ನೆಲ್ಲ ಧಾರೆಯೆರೆದು ಕಾದಂಬರಿ ಸಿದ್ಧಪಡಿಸಿದೆ. ಆದರೆ ಅದನ್ನು ಪ್ರಕಟಿಸಲು ಯಾರನ್ನು ಕೇಳಬೇಕೆಂಬ ಚಿಂತೆ ಕಾಡತೊಡಗಿತು. ಥಟ್ಟನೆ ಇಂತಹ ಮಹತ್ವಾಕಾಂಕ್ಷೆಯ ಕೃತಿಯನ್ನು ಬೇರೆ ಯಾರ್‍ಯಾರಿಗೋ ಕೊಡಲು ಇಷ್ಟವಾಗದೆ, ಅತ್ಯಂತ ಖ್ಯಾತಿವೆತ್ತ ಮತ್ತು ಸುದೀರ್ಘ ಕಾಲದ ಪ್ರಕಾಶನ ಸಂಸ್ಥೆಯಾಗಿ ಗುರುತಿಸಿಕೊಂಡ ನವಕರ್ನಾಟಕ ಪ್ರಕಾಶನ ಸಂಸ್ಥೆ ನೆನಪಾಗಿ, ಕೂಡಲೇ ಅದರ ಕಾರ್ಯನಿರ್ವಾಹಕ ನಿರ್ದೇಶಕರಾದ ರಮೇಶ ಉಡುಪ ಅವರಿಗೆ ದೂರವಾಣಿಯ ಮೂಲಕ ಮಾತಾಡಿ ಇದರ ಬಗ್ಗೆ ತಿಳಿಸಿದೆ. ಕೂಡಲೇ ಎರಡನೇ ಮಾತಿಲ್ಲದೆ, ನನಗೆ ದಿಗ್ಭ್ರಮೆಯಾಗುವಂತೆ, ಹಸ್ತಪ್ರತಿಯನ್ನು ಕಳಿಸಿಕೊಡಲು ಹೇಳಿದರು. ಅವರ ಮಾತಿನಂತೆ ಕಳಿಸಿಕೊಟ್ಟೆ. ಒಂದು ಮೂರ್‍ನಾಲ್ಕು ತಿಂಗಳ ನಂತರ, ಅವರು ಅದನ್ನು ಪ್ರಕಟಿಸುವುದಾಗಿ ತಿಳಿಸಿದಾಗ

ಒಂದೆರಡು ಕ್ಷಣ ನಂಬಲಾಗಲಿಲ್ಲ. ಆದರೆ ಅವರ ಮಾತು ಸತ್ಯವಾಗಿತ್ತು. ಆ ಪ್ರಕಾಶನದ ಮೂಲಕ ನನ್ನ ಮೊದಲ ಕೃತಿಯಾಗಿ ಬರುತ್ತಿರುವುದು ನನಗೆ ಸಂತೋಷ ಮತ್ತು ಹೆಮ್ಮೆ ಎನಿಸಿದೆ. ಅವರಿಗೆ, ಅವರ ಪ್ರಕಾಶನ ಸಂಸ್ಥೆಗೆ ನಿಜವಾಗಿಯೂ ನಾನು ಆಭಾರಿಯಾಗಿದ್ದೇನೆ.

ಇಂತಹ ಮಹತ್ವಾಕಾಂಕ್ಷೆಯ ಕೃತಿಗೆ ಒಂದು ಮಹತ್ವದ ಮುನ್ನುಡಿ ಇರಬೇಕೆಂಬುದು ಶ್ರೀ ಉಡುಪ ಅವರ ಬಯಕೆಯಾಗಿ, ಅವರು ನಮ್ಮ ನಾಡಿನ ಖ್ಯಾತ ವಿಮರ್ಶಕರ ಮುಂಚೂಣಿಯಲ್ಲಿ ಇರುವ ಡಾ॥ ಎಚ್. ಎಸ್. ರಾಘವೇಂದ್ರರಾವ್ ಅವರ ಕೈಯಲ್ಲಿ ಬರೆಸಿಕೊಡುವಂತೆ ಕೇಳಿದರು. ನನಗೆ ಸಂಕೋಚ. ಒಂದು ವೇಳೆ, ಬರೆಯಲು ನಿರಾಕರಿಸಿದರೆ ಎಂದು ಯೋಚನೆ ಮಾಡಿದೆ. ಆದರೆ ನನ್ನ ಆಲೋಚನೆ ತಪ್ಪೆನಿಸಿತು. ಕೇಳಿದ ಕೂಡಲೇ ಪ್ರೀತಿಯಿಂದ, ಅತ್ಯಂತ ಸಮುಚಿತವಾದ ರೀತಿಯಲ್ಲಿ, ಸರಳವೂ ಸುಂದರವೂ ಆದ, ತೂಕದ ವಿಮರ್ಶೆಯೊಂದನ್ನು (ಕೃತಿಕಾರಳನ್ನೂ ಕೃತಿಯನ್ನೂ ಒಳಗೊಳ್ಳುವಂತೆ!) ಬರೆದುಕೊಟ್ಟರು. ಬರೆಯುವುದಕ್ಕೆ ಮೊದಲೂ ಓದಿದ್ದ ಕಾರಣ ಕೆಲವು ಸೂಚನೆ ಸಲಹೆಗಳನ್ನೂ ನೀಡಿ, ಅಳವಡಿಸುವಂತೆ ಹೇಳಿದರು. ಅವರಿಗೆ ನಾನು ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇನೆ.

ನನ್ನ ಈ ಕೃತಿಯನ್ನು ಪ್ರಕಟಿಸುವುದರ ಮೂಲಕ ಪ್ರೋತ್ಸಾಹಿಸಿದ ನವಕರ್ನಾಟಕ ಪ್ರಕಾಶನ ಸಂಸ್ಥೆಗೆ ಮತ್ತೊಮ್ಮೆ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇನೆ.

**ಡಾ॥ ವಿಜಯಾ ಸುಬ್ಬರಾಜ್**

# ನೂರ್ ಜಹಾನ್

ಸ್ತ್ರೀ ಕುಲದ ಸೂರ್ಯ
ಜಗದ ಝಗಮಗಿಪ ಬೆಳಕು
ಸೌಂದರ್ಯ ಸಾಕಾರಗೊಂಡ
ವಿಶ್ವ ಸುಂದರಿಯೇ
ಹೇಳು ನಿನ್ನ ಕೆತ್ತಿದ ಶಿಲ್ಪಿ ಯಾರು?
ರೂಪ ಲಾವಣ್ಯ ರಸಗಳಲಿ
ಅದ್ದದ್ದಿ ತೆಗೆದು ಉಸಿರು ತುಂಬಿ
ಬುವಿಗಿಳಿಸಿದ ಆ ಖುದಾಗೆ
ನನ್ನ ಕೋಟಿ ನಮನ

ಒನಪು ಒಯ್ಯಾರದಲಿ
ಹೆಜ್ಜೆಯಿಟ್ಟರೆ ಗೆಜ್ಜೆ ಕುಣಿಯುವುದು
ಸ್ವರವೆತ್ತಿದರೆ ರಾಗ ರಾಗಿಣಿಯರು
ಧುಮ್ಮಿಕ್ಕಿ ಜೇನು ನಾದದ
ಹೊಳೆಯಲ್ಲಿ ರಾಸವಾಡುವರು
ಕೊರಳೆತ್ತಿದರೆ ಕೋಗಿಲೆಗಳೇ
ನಾಚಿ ಎದುರಾಳಿ ಯಾರೆಂದು
ಬನಬನದ ಕೊಂಬೆಗಳಲರಸುವರು
ಅರ್ಥಗಳು ಅನ್ವರ್ಥವಾಗಿಸುವ
ಓ ಮೆಹರುನ್ನೀಸಾ! ನೂರ್ ಜಹಾನ್!
ಯಾರು ಇಟ್ಟವರು
ಹೆಸರು ಕೊಟ್ಟವರು?
ನೀನು ಮಾನುಷಿಯಲ್ಲ
ಲೋಕವನೆ ಬೆಚ್ಚಿ ಬೆರಗಾಗಿಸಲು
ಹೊಸ ಚರಿತ್ರೆಯ ಬರೆಸಲು
ಮೊಘಲ್ ಸಾಮ್ರಾಜ್ಯದಾಗಸದಲ್ಲಿ
ಮೂಡಿ ಮಿರುಗಿದ ಮಹಾನಕ್ಷತ್ರ

ಹೆಣ್ತನದ ಶಕ್ತಿ ಸಾಮರ್ಥ್ಯಗಳ
ಪ್ರತಿಭೆಯಖಂಡತೆಯನರಿಯದ
ಮರ್ದಾನಿಗಳ ಮೆಟ್ಟಿ ಸವಾಲೆಸೆದು
ನಿಂತ ದಿಟ್ಟ ಧೀರ ಮಹಾಸೇನಾನಿ

ದೀನ ದಲಿತರ ಅಸಹಾಯಕರ
ಕಂಬನಿಗಳನೊರಸಿ ನೇವರಿಸಿ
ಕತ್ತಲ ಹಾದಿಗಳಲ್ಲಿ ತಡವರಿಸಿ
ಹೆಜ್ಜೆಗಳಿಡುವವರಿಗೆ
ಹಣತೆಗಳ ಹಚ್ಚಿಟ್ಟು
ಭರವಸೆಯ ಬೆಳಕಿತ್ತು
ನಗೆಯ ಹೊಮ್ಮಿಸಿದೆ
ಜನಾನಾದ ನರಕವನು
ನಗುವ ನಂದನವಾಗಿಸಿದೆ

ಓ ನೂರ್ ಜಹಾನ್ ನಿನ್ನ
ನಯ ನಾಜೂಕುಗಳ
ಒನಪು ಒಯ್ಯಾರಗಳ
ಮಿಂಚು ಕಣ್ನೋಟಗಳ
ಕಾಣುವ ತವಕಕ್ಕೆ
ಎರವಾದವರೆನಿತೊ ಲೆಕ್ಕವಿಲ್ಲ.
ಮಡಿಲಲ್ಲಿ ಮನದಲ್ಲಿ
ಮಮತೆ ವಾತ್ಸಲ್ಯ ಚಿಲುಮೆಗಳು
ಎದೆಯಾಳದಲಿ ಸ್ಫೋಟಕ್ಕೆ
ಕಾದ ಮಹತ್ವಾಕಾಂಕ್ಷೆಯ ಕೆಂಡ
ತಖ್ತ ತಾಜ್‌ಗಳ ಕನಸು ಕೋಟೆಯ
ಬಂದಿ.

ಮೊಘಲ್ ಸಾಮ್ರಾಜ್ಯದ
ಮಹಾಸಾಮ್ರಾಜ್ಞಿ!
ಅಲ್ಲಾಹ್‌ನ ದುವಾ ನಿನಗಾಯ್ತು
ಪವಾಡ?
ನಿರ್ಗತಿಕ ನಿರಾಶ್ರಿತ ಕುಟುಂಬದಲಿ
ಸುಡು ಬಿಸಿಲ ಮರಳ ಹಾದಿಗಳಲ್ಲಿ
ನಿಟ್ಟುಸಿರು ನೆಮ್ಮಿ ನಡೆವ
ಕ್ಷಣಗಳಲಿ ಬುವಿಗಿಳಿದು ಬಂದು
ಅನಾಥವಾಗಿ ಅಜ್ಞಾತದಲಿ

ಕಳೆದು ಹೋಗಲಿದ್ದವಳಿಗೆ
ಜನ್ನತದ ದೇವ ಕನ್ನಿಕೆಯ
ಮಂತ್ರದಂಡ
ಕರೆದೊಯ್ದು ಕೂರಿಸಿತು
ಸ್ವರ್ಣ ಸಿಂಹಾಸನದಲಿ

ಏರಿದೇರಿದೆ ಏರಬಾರದ
ಎತ್ತರದ ಶಿಖರಗಳ ಜಾಣ್ಮೆಯಲ್ಲಿ
ಜಗವನಾಳಿದೆ ಕೂಟ ನೀತಿ ರೀತಿಗಳಲ್ಲಿ
ವಿಶ್ವದ ಸಿರಿಸಂಪತ್ತುಗಳ ಕಡಲುಕ್ಕಿ
ಹರಿದು ಕಾಲಕಸದಂತೆ ಸುರಿದಿತ್ತು.

ಆದರೇನು ಹೆಣ್ಣೇ ಶಿಖರಾಗ್ರದಿಂ
ಭೂಗತದ ನೆಲೆ ತಲುಪಿ ನರಳಿದೆ
ಜಹಾಂಗೀರನ ಪರದೆ ಹಿಂದಿನ
ಸೂತ್ರಧಾರಿಯಾಗಿ ನಡೆಸಿದ ಅಧಿಕಾರ
ಅಂತಸ್ತು ಹಮ್ಮು-ಬಿಮ್ಮುಗಳ
ಮೆರೆದು ಮರ್ದಾನಿಯಾಗಿ
ಹೊಸ ಇತಿಹಾಸವನೇ ಬರೆದೆ!

ಯಾರ ಶಾಪವೋ ತಾಪವೋ
ಕಾಲ ರಾಕ್ಷಸನ ಕೈಚಳಕ
ಕಸಿದೆಸೆಯಿತು ಆ ನಿನ್ನ
ಸುಂದರ ಮುಖವಾಡ
ಇದ್ದವರೂ ಇಲ್ಲದಾದರು
ಶತ್ರುಗಳು ಸಾಣೆಗತ್ತಿಯಲಿ
ತಿವಿ ತಿವಿದು ಹತಾಶತೆಗೆ
ದೂಡಿ ದಂಡಿಸಿದರು.

ಅಸಹಾಯಕ ನಿಟ್ಟುಸಿರುಗಳಲಿ
ಯಾವ ಗೀತೆ ಹಾಡುತಿಹೆ ನೂರ್!
ನಿನ್ನ ಸಮಾಧಿಯೂ ಅನಾಥವಾಗಿದೆ
ಹಣತೆಗಳ ಬೆಳಕಿಲ್ಲ
ನಳನಳಿಪ ಗುಲಾಬಿಗಳ ನಗೆಯಿಲ್ಲ
ಕೋಗಿಲೆಗಳು ಬಂದು ಹಾಡುವುದಿಲ್ಲ
ಇತಿಹಾಸವೆಂದರೆ ಇದೇ ಏನು?
ಇದ್ದೂ ಇದ್ದೂ ಇಲ್ಲವಾಗುವುದೇ
ಸತ್ಯ-ಚಿರಸತ್ಯವೆಂದು
ಉಸಿರುತಿಹೆಯೇನು?

**– ಡಾ॥ ವಿಜಯಾ ಸುಬ್ಬರಾಜ್**

## ಕಾದಂಬರಿಯಲ್ಲಿ ಬರುವ ಪ್ರಮುಖ ಪಾತ್ರಗಳು

| | |
|---|---|
| ಅಬ್ದುಲ್ ರಹೀಮ್ | : ಖಾನ್-ಇ-ಖಾನನ್ (ಸೇನಾಧಿಪತಿ) |
| ಅಬುಲ್ ಹಸನ್ | : ಮೆಹರುನ್ನೀಸಾಳ ಸಹೋದರ (ಅಸಫ್ ಖಾನ್) |
| ಅಕ್ಬರ್ | : ಮೊಘಲ್ ಇಂಡಿಯಾದ ಮೂರನೇ ಬಾದಶಾಹ (ಚಕ್ರವರ್ತಿ) |
| ಅಲಿಖುಲಿ ಖಾನ್ ಇಸ್ತಾಜ್ಲು | : ಮೆಹರುನ್ನೀಸಾಳ ಮೊದಲ ಗಂಡ |
| ಅರ್ಜುಮಂದ್ ಬಾನು | : ಮೆಹರುನ್ನೀಸಾಳ ಅಣ್ಣನ ಮಗಳು (ಅಬುಲ್ ಮಗಳು) ಮುಂದೆ ಮುಮ್ತಾಜ್ (ಬೇಗಂ) ಮಹಲ್ |
| ಘಿಯಾಸ್ ಬೇಗ್ | : ಮೆಹರುನ್ನೀಸಾಳ ತಂದೆ |
| ಹೋಷಿಯಾರ್ ಖಾನ್ | : ಜಹಾಂಗೀರನ ಜನಾನಾದ ಪ್ರಮುಖ ನಪುಂಸಕ ಸೇವಕ |
| ಜಗತ್‌ಗೋಸಿನಿ | : ಜಹಾಂಗೀರನ ಎರಡನೇ ಹೆಂಡತಿ |
| ಜಹಾಂಗೀರ್ | : ಅಕ್ಬರನ ಮಗ, ಮೊಘಲ್ ಸಾಮ್ರಾಜ್ಯದ ನಾಲ್ಕನೇ ಬಾದಶಾಹ (ಚಕ್ರವರ್ತಿ) |
| ಖುರ್ರಂ | : ಜಹಾಂಗೀರನ ಮೂರನೇ ಮಗ (ಜಗತ್‌ಗೋಸಿನಿಗೆ ಜನಿಸಿದವನು) |
| ಖುಸ್ರೋ | : ಜಹಾಂಗೀರನ ಮೊದಲ ಮಗ (ಮಾನ್ ಬಾಯಿಗೆ ಜನಿಸಿದವನು) |
| ಲಾಡ್ಲಿ | : ಮೆಹರುನ್ನೀಸಾಳ ಮಗಳು ಅಲಿಖುಲಿ(ಷೇರ್ ಆಫ್ಘನ್)ಗೆ ಜನಿಸಿದವಳು |
| ಮಹಬ್ಬತ್‌ಖಾನ್ | : ಜಹಾಂಗೀರನ ಬಾಲ್ಯದ ಗೆಳೆಯ (ಸಾಮ್ರಾಜ್ಯದ ಪ್ರಧಾನ ಮಂತ್ರಿ) |
| ನೂರ್ ಜಹಾನ್ | : ಮೆಹರುನ್ನೀಸಾಳು ಪಡೆದ ಬಿರುದು (ಸಾಮ್ರಾಜ್ಞಿ) |
| ಪರವೇಜ್ | : ಜಹಾಂಗೀರನ ಎರಡನೆ ಮಗ |
| ರುಖೈಯ್ಯಾ ಸುಲ್ತಾನ್ ಬೇಗಂ | : ಅಕ್ಬರನ ಪಟ್ಟದ ರಾಣಿ |
| ಶಹರಿಯಾರ್ | : ಜಹಾಂಗೀರನ ನಾಲ್ಕನೆ ಮಗ |
| ಥಾಮಸ್‌ರೋ | : ಇಂಗ್ಲೆಂಡ್ ಮತ್ತು 1ನೇ ಜೇಮ್ಸ್‌ನ ಕಡೆಯಿಂದ ಬಂದ ಮೊದಲ ರಾಯಭಾರಿ |
| ಖುತುಬುದ್ದೀನ್ ಕೋಕಾ | : ಜಹಾಂಗೀರನ ಬಾಲ್ಯದ ಗೆಳೆಯ (ಬಂಗಾಳದ ಗವರ್ನರ್) |
| ಮಹಮ್ಮದ್ ಷರೀಫ್ | : ಜಹಾಂಗೀರನ ಬಾಲ್ಯದ ಗೆಳೆಯ (ಪ್ರಧಾನ ಮಂತ್ರಿ) |

# ಬದುಕನ್ನು ಅರಸುತ್ತಾ

ಘಿಯಾಸ್ ಬೇಗ್ ತನ್ನ ನಾಲ್ಕೂ ಜನ ಮಕ್ಕಳನ್ನು ಕಟ್ಟಿಕೊಂಡು ಇರಾನ್‌ನಿಂದ ತನ್ನ ಬದುಕಿನ ಬೇರುಗಳನ್ನು ಕಿತ್ತುಕೊಂಡು, ಅಸ್ಪಷ್ಟ ಭವಿಷ್ಯದ ಕನಸುಗಳನ್ನು ಕಟ್ಟಿಕೊಂಡು ಅನಿವಾರ್ಯವಾಗಿ ಹೊರಡಲೇಬೇಕಾಯಿತು.

ಪರ್ಷಿಯಾದ ಸಫಾಟಿ ದೊರೆಗಳ ಮೆಚ್ಚುಗೆ ಸಂಪಾದಿಸಿ ಅವರ ಆಶ್ರಯದಲ್ಲಿ ಘಿಯಾಸ್‌ನ ತಂದೆ ಮಹಮ್ಮದ್ ಶರೀಫ್ ಅತ್ಯಂತ ಗೌರವ, ಪ್ರತಿಷ್ಠೆಯ ಅಧಿಕಾರದಲ್ಲಿದ್ದ. ಮಹಮ್ಮದ್ ಶರೀಫರ ರಾಜಕೀಯ ಮುತ್ಸದ್ದಿತನ, ಬುದ್ಧಿವಂತಿಕೆ, ಚಾಣಾಕ್ಷತೆಗಳಿಂದ ಪರ್ಷಿಯಾದ 'ಷಾಹ್ ತಹಮಾಸ್ಪ್ ದೊರೆಯ ಆಪ್ತತೆಯನ್ನೂ ಸಂಪಾದಿಸಿ, ಹಣಕಾಸು ವ್ಯವಹಾರದ ಮಹತ್ವದ ಜವಾಬ್ದಾರಿಯನ್ನು ಅತ್ಯಂತ ಸಮರ್ಥವಾಗಿ ನಿರ್ವಹಿಸಿದ್ದ. ಶ್ರೀಮಂತಿಕೆ ಅವನ ಕುಟುಂಬದ ಕಾಲಡಿಗೆ ಬಂದು ಬಿದ್ದಿತ್ತು. ಪ್ರಾಮಾಣಿಕತೆ, ಬದ್ಧತೆ, ವಿಶ್ವಾಸಾರ್ಹತೆಗಳು ಚತುರ ಮಾತುಗಾರಿಕೆ ಅವನ ವ್ಯಕ್ತಿತ್ವದ ಭಾಗವಾಗಿತ್ತು. ಅವನ ಮಕ್ಕಳೂ ಕೂಡ ತನ್ನ ಹಾಗೆಯೇ ಪ್ರತಿಭಾವಂತರು, ಸಮರ್ಥರು, ಚತುರರು. ಅಲ್ಲದೆ ಆ ಕಾಲದ ಪ್ರಸಿದ್ಧ ಕವಿಗಳು ಕೂಡಾ ಆಗಿದ್ದರು. ಆ ಇಬ್ಬರು ಮಕ್ಕಳಲ್ಲಿ ಕ್ವಾಜಾ ಘಿಯಾಸ್ ಬೇಗ್, ತಂದೆಯ ಮರಣ, ದೊರೆ ತಹಮಾಸ್ಪನ ಮರಣದ ನಂತರ ಮತ್ತು ಷಾಹ್ ಇಸ್ಮದ್ (ಎರಡನೆ ದೊರೆ) ಗದ್ದುಗೆ ಏರಿದ ದಿನಗಳಿಂದ ಎಲ್ಲಿಲ್ಲದ ಕಷ್ಟಗಳನ್ನು ಅನುಭವಿಸಬೇಕಾಯಿತು. ಹಿಂದಿನ ದೊರೆಯ ಕೃಪಾ ಪಾತ್ರರಾಗಿದ್ದ ಅಧಿಕಾರಿಗಳು, ಆಸ್ಥಾನಿಕರು, ಶ್ರೀಮಂತರು ಮೊದಲಾದವರ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಂಡ. ಅವರನ್ನೆಲ್ಲಾ ಕ್ರೂರವಾಗಿ ಹಿಂಸಿಸಿದ. ಸಾಲ ಸೋಲ ಮಾಡಿ ಬದುಕಿದ್ದವರು ಸಾಲ ತೀರಿಸಲಾಗದೆ ಹೋಗಿ ಮರಣದಂಡನೆಯ ಶಿಕ್ಷೆಯನ್ನು ಅನುಭವಿಸಬೇಕಾಗಿ ಬಂದದ್ದೇ, ಎಲ್ಲರೂ ತಲೆ ಮರೆಸಿಕೊಂಡು ತಪ್ಪಿಸಿಕೊಳ್ಳಲು ದಾರಿಗಳನ್ನು ಹುಡುಕಿದರು. ಅದರಲ್ಲಿಯೂ ಘಿಯಾಸ್ ಬೇಗ್ ಮೇಲೆ ಹದ್ದಿನ ಕಣ್ಣು! ತಂದೆಯ ಸ್ನೇಹಿತನೊಬ್ಬ ಆದಷ್ಟು ಬೇಗ ಪರ್ಷಿಯಾ ಬಿಟ್ಟು ಹೊರಡುವಂತೆ ಸಲಹೆ ನೀಡಿದ. ಆದರೆ ಹೋಗುವುದೆಲ್ಲಿಗೆ? ಹೆಂಡತಿ ಮಕ್ಕಳನ್ನು ಕಟ್ಟಿಕೊಂಡು ಬದುಕಿನ ಬೆನ್ನು ಹತ್ತಿ ಹೋಗುವುದಾದರೂ ಎಲ್ಲಿಗೆಂಬ ಸವಾಲನ್ನು ಮುಂದಿರಿಸಿಕೊಂಡೇ ಅಲ್ಲಾಹ್‌ನನ್ನು ನಂಬಿ ಹೊರಡಲೇಬೇಕೆಂದು ಇದ್ದಬದ್ದ ಕೆಲವಷ್ಟೇ ಸಾಮಾನುಗಳನ್ನು ಒಂದಷ್ಟು ನಾಣ್ಯಗಳನ್ನು, ಗಂಟು, ಮೂಟೆ ಕಟ್ಟಿಕೊಂಡು ಹೊರಟು ನಿಂತ. ಅವನಿಗಿದ್ದ ಒಂದೇ ಒಂದು ಭರವಸೆಯ ನೆಲೆ ಎಂದರೆ ಮೊಘಲರು ಆಳುತ್ತಿದ್ದ ಭಾರತ. ಅದನ್ನೇ ಗುರಿಯಾಗಿಸಿಕೊಂಡು ಖಾಂದಾಹಾರದ ಕಡೆಗೆ ಪಯಣ ಬೆಳೆಸಿದ.

ಬಂಗಾಳದ ಪಶ್ಚಿಮಕ್ಕಿದ್ದ ಮರುಭೂಮಿ. ಅತ್ಯಂತ ರಭಸವಾಗಿ ಬೀಸುತ್ತಿದ್ದ ಸುಡುಗಾಳಿ. ಮೇಲೆ ನೆತ್ತಿ ಸುಡುವ ಸೂರ್ಯ, ಹೆಜ್ಜೆಯಿಟ್ಟರೆ ಸುಡು ಮರಳಿನಿಂದ ಬೊಬ್ಬೆಗಳು! ಎಂತಹ ಎದೆಗಾರಿಕೆ ತೋರಿದರೂ ಯಾತನೆಯಿಂದ ಮುಕ್ತಿ ಸಾಧ್ಯವಿರಲಿಲ್ಲ. ಸಣ್ಣ ವಯಸ್ಸಿನ ಮಕ್ಕಳು, ಸಾಲದ್ದಕ್ಕೆ ಹೆಂಡತಿ ಅಸ್ಮತ್ ತುಂಬು ಬಸುರಿ ಬೇರೆ! ಯಾವ ಕ್ಷಣದಲ್ಲಾದರೂ ಹೆರಿಗೆ ಆಗಬಹುದು. ಘಿಯಾಸ್‌ಗೆ ದಿಕ್ಕೇ ತೋಚದಂತಾಗಿತ್ತು. ಎಲ್ಲಿಯೂ ವಿಶ್ರಾಂತಿ ಪಡೆಯಲು ಅಂಗುಲದಷ್ಟಾದರೂ ನೆರಳಿನ ತಾಣವಿರಲಿಲ್ಲ. ಹಸಿವು, ಬಾಯಾರಿಕೆಗಳು ಅವರನ್ನು ಇನ್ನಷ್ಟು ದಣಿಸುತ್ತಿದ್ದವು. ಅಲ್ಲಾಹ್‌ನನ್ನು ಪ್ರಾರ್ಥಿಸುವುದೊಂದನ್ನು ಬಿಟ್ಟರೆ ಅವನಿಗೆ ಬೇರೆ ದಾರಿಯೇ ಕಾಣುತ್ತಿರಲಿಲ್ಲ. ಈಗ ಅನುಭವಿಸುತ್ತಿರುವ ಸಂಕಟವೇ ಸಾಲದೆಂಬಂತೆ ಹೆಂಡತಿ ಬೇರೆ ಈಗ ಮತ್ತೊಂದು ಮಗುವನ್ನು ಭೂಮಿಗೆ ಇಳಿಸಲಿದ್ದಾಳೆ. ಅವಳನ್ನು ಎರಡನೇ ಹೆಂಡತಿಯಾಗಿ ಮಾಡಿಕೊಂಡದ್ದು, ಮನೆಯವರ ವಿರುದ್ಧ ನಿಂತು! ಅವರ ಸಿಟ್ಟು ಪ್ರತಿರೋಧಗಳೇ ಅನೇಕ ಕಷ್ಟಗಳನ್ನು ಎದುರಿಸುವಂತೆ ಮಾಡಿತ್ತು. ಹಾಗೆ ನೋಡಿದರೆ ಅದಕ್ಕೂ ಭಯಾನಕವಾದ ದುರ್ದಿನಗಳು ತನ್ನ ಮುಂದಿವೆ!

ಈಗ ಸಾಗುತ್ತಿರುವ ಹಾದಿ ಭಯಂಕರ. ಬತ್ತಿದ ಹಾದಿಯೇ ಆದರೂ ಒಂದು ಬಗೆಯ ಕ್ರೂರ ಚೆಲುವಿನಿಂದ ಕೂಡಿದೆ. ಎಲ್ಲಿಯೂ ನೆರಳಿಲ್ಲ, ಒಂದು ಹಸಿರು ಮೊಳಕೆಯೂ ಇಲ್ಲ. ಇದು ಪ್ರಾಕೃತಿಕ ಪರಿಸರದ ನಿಷ್ಠುರತೆಯಾದರೆ, ಹಾದಿಗಳ್ಳರು ಪ್ರಯಾಣಿಕರಲ್ಲಿದ್ದ ವಸ್ತು, ಒಡವೆ, ತಿಂಡಿ ತೀರ್ಥಗಳನ್ನು ಬಿಡದೆ ದೋಚುತ್ತಿದ್ದರು. ಹಾಗಾಗಿ ಘಿಯಾಸ್ ಬಳಿಯೂ ಒಂದಷ್ಟು ನಾಣ್ಯಗಳನ್ನು ಬಿಟ್ಟರೆ ಬೇರೇನೂ ಉಳಿಸಿರಲಿಲ್ಲ. ಸೋತು ಸುಸ್ತಾಗಿದ್ದರೂ ಕಾಲೆಳೆದುಕೊಂಡಾದರೂ ಹೆಜ್ಜೆ ಸವೆಸಬೇಕಿತ್ತು. ಒಂದಷ್ಟು ದೂರ ಕ್ರಮಿಸಿದ ಮೇಲೆ ಒಂದಷ್ಟು ಅಲೆಮಾರಿ ಕುಟುಂಬಗಳು, ಅಲ್ಲಲ್ಲಿ ಬಿಡಾರಗಳನ್ನು ಹಾಕಿಕೊಂಡಿದ್ದು ಕಾಣಿಸಿತು. ಸ್ವಲ್ಪ ಪ್ರಾಣ ಬಂದಂತಾಯಿತು. ಅವರನ್ನು ಸಮೀಪಿಸಿ ಘಿಯಾಸ್ ಬೇಗ್ ತನ್ನ ಕಷ್ಟವನ್ನು ಹೇಳಿಕೊಂಡ. ಆ ಅಲೆಮಾರಿ ಆಫ್ಘನರು ಕುಚಿ ಬುಡಕಟ್ಟಿನವರಾಗಿದ್ದು ಇವರ ಪರಿಸ್ಥಿತಿ ನೋಡಿ ಆ ಕುಟುಂಬಕ್ಕೆ ಸಹಾಯ ಮಾಡಲು ಮುಂದಾದರು. ಅವರಿಗೂ ಒಂದು ಬಿಡಾರ ಹಾಕಿಕೊಟ್ಟು, ತಮ್ಮಲ್ಲಿದ್ದುದನ್ನೇ ಅವರೊಂದಿಗೆ ಹಂಚಿಕೊಂಡರು. ಅಸ್ಮತ್‌ಗೆ ಅಷ್ಟು ಅನುಕೂಲ ಸಿಕ್ಕಿದ್ದೇ ಸ್ವರ್ಗಕ್ಕಿಂತ ಹೆಚ್ಚಿನ ಸುಖವನ್ನು ಅನುಭವಿಸಿದಳು. ಘಿಯಾಸ್ ತಾನು ಸ್ವಲ್ಪ ಹೊರಗೆ ಹೋಗಿ ಏನಾದರೂ ತಿಂಡಿ ತೀರ್ಥ ಸಿಗುವುದೇನೋ ನೋಡಿ ಬರುತ್ತೇನೆಂದು ಬಿಡಾರದ ಹೊರಗೆ ಹೆಜ್ಜೆಯಿಡುತ್ತಿರುವಷ್ಟರಲ್ಲಿ ಅಸ್ಮತ್‌ಳ ಚೀರಾಟ ಕೇಳಿಸಿತು. ಹೆರಿಗೆ ನೋವು ಅಸಹನೀಯವಾಗಿತ್ತು. ತಾನು ಗಂಡಸು ಹೇಗೆ ಮಾಡುವುದು ಎಂದು ತಿಳಿದಿರಲಿಲ್ಲ. ಕಡೆಗೆ ಅಲೆಮಾರಿ ಗುಂಪಿನಲ್ಲಿದ್ದ ಹೆಂಗಸರನ್ನು ಪ್ರಾರ್ಥಿಸಿ ಕರೆದುಕೊಂಡು ಹೋದ. ದೇವರ ಕೃಪೆಯೋ ಎಂಬಂತೆ ಯಾವುದೇ ಸಂಕಟಗಳಿಲ್ಲದೆ ಸುಸೂತ್ರವಾಗಿ ಮಗು ಹೊರಗೆ ಬಂತು.

ನೋಡುತ್ತಾನೆ! ಆ ಹೆಣ್ಣು ಮಗು ಮುದ್ದಾಗಿ, ಕಣ್ಣು ಕುಕ್ಕುವಷ್ಟು ಸುಂದರವಾಗಿದೆ. ದೇವಲೋಕದ ನಕ್ಷತ್ರವೇ ಭೂಮಿಗೆ ಇಳಿದಿದೆಯೋ ಎಂಬಂತಿದೆ. ಗುಲಾಬಿ ಕೆನ್ನೆಗಳು, ಕೆಂಪು ತುಟಿಗಳು! ದಟ್ಟವಾದ ಕಪ್ಪಾದ ಗುಂಗುರು ಕೂದಲು! ಜೊತೆಗಿದ್ದ ಅವನ ಮಕ್ಕಳು

ಕೇಕೆ ಹೊಡೆದು ಚಪ್ಪಾಳೆ ತಟ್ಟಿ ಆ ಮಗುವನ್ನು ಎತ್ತಿ ಮುದ್ದಿಸಲು ಮುಂದೆ ಬಂದರು. ಇಂಥ ಮುದ್ದಾದ ಮಗುವನ್ನು ಕೊಟ್ಟದ್ದಕ್ಕೆ ಅವಳನ್ನು ಅಭಿನಂದಿಸಿದ. ಅವಳಿಗೆ ಮಗುವಿನ ಹೆಸರನ್ನು ಯೋಚಿಸುವಂತೆ ಹೇಳಿದ.

ಅಸ್ಮತ್‌ಗೆ ಇಂಥ ಮಗುವಿನ ತಾಯಿ ಆಗಿದ್ದ ಹೆಮ್ಮೆ ಬೇರೆ. ಘಿಯಾಸ್, ಕೇಳುವುದಕ್ಕೆ ಮೊದಲೇ ಹೆಸರನ್ನು ಆಲೋಚಿಸಿದ್ದಳು. ಕೇಳಿದ್ದೇ ಥಟ್ಟನೇ ಹೇಳಿದಳು – ಘಿಯಾಸ್, ನನ್ನ ಮಗಳಿಗೆ ಮೆಹರುನ್ನೀಸಾ ಹೆಸರು ತುಂಬಾ ಒಪ್ಪುತ್ತದೆಯಲ್ಲವೇ? "ಏನೆಂದೇ ಮೆಹರುನ್ನೀಸಾ? ಅಬ್ಬ! ಅದ್ಭುತ! ಇಷ್ಟಕ್ಕೂ ಅದರ ಅರ್ಥವಾದರೂ ಗೊತ್ತಿದೆಯೇ?" ಎಂದ.

"ನನಗೆ ಗೊತ್ತಿದೆಯೋ ಇಲ್ಲವೋ? ನೀವೇ ಹೇಳಿ."

"ಅಸ್ಮತ್ ನೀನೆಷ್ಟು ಬುದ್ಧಿವಂತೆ. ಈ ಮಗು ಸೂರ್ಯನಂತೆ. ಹೆಂಗಸರ ನಡುವೆ ಸೂರ್ಯನಿದ್ದಂತೆ" ಎಂದ.

ಅದೆಲ್ಲಾ ನನಗೆ ತಿಳಿಯದು. ಅದೇನೋ ನನಗೆ ಅಚಾನಕವಾಗಿ ಆ ಹೆಸರಿನ ನೆನಪಾಯಿತು. ಅವಳಿಗೆ ಅದನ್ನು ನನ್ನ ಉಡುಗೊರೆಯಾಗಿ ಕೊಟ್ಟು ಬಿಟ್ಟೆ ಎಂದು ಮುಕ್ತವಾಗಿ ನಕ್ಕಳು.

ಅವಳ ಆ ನಗು, ಮಾತು ಎಲ್ಲವನ್ನೂ ಕೇಳಿಸಿಕೊಂಡ, ಆದರೆ ಒಂದೆರಡು ಕ್ಷಣದಲ್ಲಿ ಗಂಭೀರನಾದ, ಮೌನವಾದ, ಘಿಯಾಸ್‌ನ ಮೌನಕ್ಕೆ ಅರ್ಥವೇನೆಂದು ಅಸ್ಮತ್‌ಗೆ ತಿಳಿಯಲಿಲ್ಲ.

"ಘಿಯಾಸ್ ಯಾಕಿಷ್ಟು ಗಂಭೀರವಾಗಿದ್ದೀ? ನಮ್ಮ ಈ ಮುದ್ದಾದ ಮಗು ನೋಡಿ ಸಂತೋಷವಾಗಲಿಲ್ಲವೇ?" ಎಂದಳು.

"ಅಸ್ಮತ್ ಸಂತೋಷದ ಪ್ರಶ್ನೆಯಲ್ಲ. ಈಗಿರುವ ಮಕ್ಕಳ ಜೊತೆ ಈ ಮಗುವನ್ನೂ ಸಾಕುವುದಾದರೂ ಹೇಗೆ? ಇರಲು ನೆಲೆಯಿಲ್ಲ, ಕೈಯಲ್ಲಿ ಕಾಸಿಲ್ಲ, ತಿನ್ನಲು ಅನ್ನವಿಲ್ಲ. ಇನ್ನೂ ನಾವು ಬಹಳಷ್ಟು ದೂರ ಸಾಗಬೇಕಿದೆ."

"ಹಾಗಾದರೆ ಈ ಮಗುವನ್ನು ಏನು ಮಾಡಬೇಕೆಂದಿದ್ದೀರಿ?"

"ಇಲ್ಲಿಯೇ ಎಲ್ಲಾದರೂ ಒಂದು ಸುರಕ್ಷಿತ ಸ್ಥಾನದಲ್ಲಿ ಜನರು ಓಡಾಡುವ ಜಾಗದಲ್ಲಿ ಬಿಟ್ಟು ಬಿಡೋಣ. ನೋಡಿದವರು ಯಾರಾದರೂ ಕನಿಕರಿಸಿ ಮಗುವನ್ನು ಎತ್ತಿಕೊಂಡು ಪೋಷಿಸಿಯಾರು. ಮಗುವಿನ ಅದೃಷ್ಟವೂ ಬದಲಾಗಬಹುದು."

"ಘಿಯಾಸ್, ಕರುಳು ಕಿತ್ತುಕೊಂಡು ಬಂದ ಈ ಮಗುವನ್ನು ತೊರೆಯುವ ಮನಸ್ಸಾದರೂ ನಿನಗೆ ಹೇಗೆ ಬಂತು?"

"ಇದರ ಹೊರತು ನಮಗೆ ಬೇರೆ ದಾರಿಯಿಲ್ಲ ಅಸ್ಮತ್"

"ಈಗಾಗಲೇ ಈ ಮಕ್ಕಳು ಹಸಿವಿನಿಂದ ತತ್ತರಿಸುತ್ತಿದ್ದಾರೆ. ಹೊರಗೆ ಹೋಗಿ, ತಿಂಡಿಯೇನಾದರೂ ಸಿಗಬಹುದೇನೋ, ನೋಡಿ ಬರುತ್ತೇನೆ" ಎಂದು ಹೊರಗೆ ಹೊರಟ.

ಅಸ್ಮತ್‌ಳ ಎದೆಯ ಸಂಕಟ ಹೇಳತೀರದು. ತಮ್ಮ ಅಸಹಾಯಕ ಸ್ಥಿತಿಗಾಗಿ ಮರುಗಿದಳು. ಹಸಿದು ಕಂಗಾಲಾಗಿದ್ದ ಮಹಮ್ಮದ್ ಷರೀಫ್, ಅಬುಲ್ ಹಸನ್, ಸಲೀಹಾ, ನವಜಾತ ಶಿಶುವನ್ನು ಸುತ್ತುವರಿದು ನಿಂತರು.

ಬಹಳಷ್ಟು ಪ್ರಯಾಣಿಕರು ಹೋಗಿ ಬರುತ್ತಿದ್ದುದರಿಂದ ಅಲ್ಲಲ್ಲಿ ಸಣ್ಣ ಅಂಗಡಿಗಳು, ಬೇಕರಿಗಳು ತೆರೆದಿದ್ದವು. ಹೋಗಿ ಬರುವವರಿಗೆ ಇದರಿಂದ ಸ್ವಲ್ಪ ಮಟ್ಟಿಗಾದರೂ

ಅನುಕೂಲವಾಗಿತ್ತು. ಘಿಯಾಸ್ ತನ್ನಲ್ಲಿದ್ದ ಕೆಲವೇ ನಾಣ್ಯಗಳಿಂದ ಮಕ್ಕಳಿಗೆ ಒಂದಷ್ಟು ಬನ್ನುಗಳನ್ನು ಖರೀದಿಸಿದ. ಬಿಸಿಬಿಸಿಯಾದ ಬನ್ನುಗಳನ್ನು ತಾನು ಧರಿಸಿದ್ದ ಖಾಬಾದ ಒಳಗೆ ಬೆಚ್ಚಗೆ ಇರಿಸಿಕೊಂಡು ಒಂದೆರಡು ಹೆಜ್ಜೆ ಇಡುವಷ್ಟರಲ್ಲಿ ಮುಗ್ಗರಿಸಿ ಬಿದ್ದ. ಬನ್ನುಗಳು ಕೆಳಗೆ ಬಿದ್ದವು. ಅದನ್ನು ಎತ್ತಿಕೊಳ್ಳುವ ಆತುರದಲ್ಲಿದ್ದಾಗಲೇ ಹಿಂಬದಿಯಿಂದ ಯಾರೋ ಕರೆದಂತಾಯಿತು. ಹಿಂತಿರುಗಿ ನೋಡಿದ. ಆತನ ಕಣ್ಣುಗಳಲ್ಲಿ ಕರುಣೆ, ದಯಾರ್ದ್ರತೆಗಳನ್ನು ಗುರುತಿಸಿದ. ತನ್ನನ್ನೇಕೆ ಕರೆದು ನಿಲ್ಲಿಸುತ್ತಿದ್ದಾನೆ ಎಂಬುದು ಅರ್ಥವಾಗಲಿಲ್ಲ. ಆದರೆ ಆ ಅಪರಿಚಿತ ವ್ಯಕ್ತಿ ಬಹಳ ಸೂಕ್ಷ್ಮ ದೃಷ್ಟಿ ಉಳ್ಳವನಾಗಿದ್ದ. ಘಿಯಾಸ್‌ನ ಮುಖದಲ್ಲಿದ್ದ ಆತಂಕವನ್ನು ಆತುರವನ್ನು ಗಮನಿಸಿದ.

"ಕ್ಷಮಿಸಿ, ನೀವು ಕರೆದದ್ದು ಕೇಳಿಸಿಕೊಳ್ಳಲಿಲ್ಲ."

"ಪರವಾಗಿಲ್ಲ. ನಾನು ನಿಮ್ಮ ಪರಿಚಯವನ್ನು ಕೇಳಬಹುದೇ?"

"ಧಾರಾಳವಾಗಿ. ಆದರೆ ಪರಿಚಯಿಸಿಕೊಳ್ಳುವಷ್ಟು ದೊಡ್ಡ ವ್ಯಕ್ತಿಯಲ್ಲ ನಾನು. ಅದೆಲ್ಲವೂ ನನ್ನ ಗತಕಾಲಕ್ಕೆ ಸೇರಿದ್ದು. ಈಗ ಮಾತ್ರ ನಾನೊಬ್ಬ ಭಿಕಾರಿ. ಅಸಹಾಯಕ. ಕುಟುಂಬ ಪೋಷಣೆಗೂ ಯೋಗ್ಯನಲ್ಲದ ದರಿದ್ರ."

"ಇಷ್ಟೊಂದೇಕೆ ಆತ್ಮ ನಿಂದನೆ ಮಾಡಿಕೊಳ್ಳುತ್ತೀರಿ? ನೀವು ಎಲ್ಲಿಂದ ಬರುತ್ತಿದ್ದೀರಿ? ನಿಮ್ಮ ತಂದೆ ಯಾರು? ನಿಮಗೆ ಅಭ್ಯಂತರವಿಲ್ಲದಿದ್ದರೆ ತಿಳಿಸಬಹುದು" ಆ ವ್ಯಕ್ತಿ ಹೇಳಿದ.

"ನಾನು ಇಸ್ಫಹಾನ್‌ನ ವಜೀರರಾದ ಮಹಮ್ಮದ್ ಷರೀಫರ ಮಗ" ಎಂದು ಹೇಳುತ್ತಿದ್ದಾಗಲೇ ಆ ವ್ಯಕ್ತಿಯ ಮುಖದ ಮೇಲೆ ಅಚ್ಚರಿಯ ಗೆರೆಗಳು ಮೂಡಿದವು.

"ಅಂದರೆ ಮನೆ ಬಿಟ್ಟು ದೂರ ಹೋಗುವುದರಲ್ಲಿ ಇದ್ದೀರಾ?"

"ಹೌದು, ಇನ್ನು ನಮಗೆ ನಮ್ಮ ದೇಶದಲ್ಲಿ ನೆಲೆಯೂ ಇಲ್ಲ, ಬೆಲೆಯೂ ಇಲ್ಲ. ಇದ್ದ ಬದ್ದದ್ದನ್ನೆಲ್ಲಾ ಕಳೆದುಕೊಂಡು ಹೊಸ ನೆಲೆಯನ್ನು ಹುಡುಕಿಕೊಂಡು ಹೊರಟಿದ್ದೇನೆ. ಹುಲ್ಲು ಕಡ್ಡಿಯಿಂದ ಬದುಕನ್ನು ಕಟ್ಟಿಕೊಳ್ಳಬೇಕಿದೆ ನಮಗೆ."

"ಚಿಂತೆ ಮಾಡಬೇಡಿ. ಅಲ್ಲಾಹ್ ಯಾರನ್ನೂ ಕೈ ಬಿಡುವುದಿಲ್ಲ. ಒಳ್ಳೆಯ ಕಾಲ ಬಂದೇ ಬರುತ್ತದೆ. ಈಗ ನನ್ನ ಜೊತೆ ಬನ್ನಿ. ಅಲ್ಲಿ ಚಹದಂಗಡಿಯಿದೆ. ಚಹಾ ಕುಡಿಯುತ್ತಾ ನಿಮ್ಮ ಕತೆ ಹೇಳಿ. ನನಗಂತೂ ಈ ಥರದ ಪ್ರಯಾಣ ಮಾಮೂಲೆ. ನಿಮ್ಮ ಕಥೆ ಹೇಳಿ. ನನಗೆ ಸಾಧ್ಯವಾದಷ್ಟೂ ಸಹಾಯವನ್ನು ಖಂಡಿತ ನಿಮಗೆ ಮಾಡುತ್ತೇನೆ" ಎಂದು ಆ ವ್ಯಕ್ತಿ ಭರವಸೆ ನೀಡಿದ.

ಘಿಯಾಸ್ ತನ್ನ ಕಥೆಯನ್ನು, ತನ್ನ ಬದುಕಿನ ಆಗುಹೋಗುಗಳನ್ನು ಪರ್ಷಿಯಾದ ದೊರೆ ಎರಡನೇ ಷಾಹ್‌ನಿಂದ ಅನುಭವಿಸಿದ ಸಂಕಟಗಳನ್ನು ವಿವರಿಸಿದ.

"ಘಿಯಾಸ್ ಭಾಯಿ, ನಾನೊಬ್ಬ ವ್ಯಾಪಾರಿ. ಮಾಸೂದ್ ಮಲ್ಲಿಕ್ ನನ್ನ ಹೆಸರು. ದೂರದೂರದ ದೇಶಗಳಿಂದ ಅಪರೂಪದ ವಸ್ತುಗಳನ್ನು ತಂದು ಮೊಘಲ್ ದರ್ಬಾರಿನಲ್ಲಿ ಮಾರುತ್ತೇನೆ. ತುರ್ಕಿಸ್ಥಾನದ ಕಂಬಳಿಗಳು, ಕುದುರೆಗಳು, ನಾಜೂಕಾದ ಪಿಂಗಾಣಿ ವಸ್ತುಗಳು, ಚೈನಾದ ರೇಷ್ಮೆ ಬಟ್ಟೆ, ಅಮೂಲ್ಯವಾದ ಹರಳುಗಳು, ಅಂದರೆ ಮುತ್ತು, ರತ್ನ, ಹವಳ, ಪಚ್ಚೆ ಇತ್ಯಾದಿಗಳನ್ನು ಅಲ್ಲದೆ ಸುಂದರವಾದ ಕಲಾಕೃತಿಗಳು, ಒಣ ಹಣ್ಣುಗಳು ಮೊದಲಾದವುಗಳನ್ನು ಈಗಲೂ ಮಾರಾಟ ಮಾಡುತ್ತೇನೆ."

"ಮಾಸೂದ್ ಭಾಯಿ, ಇಂಥ ಕಠಿಣ ಪರಿಸ್ಥಿತಿಯಲ್ಲಿ ತಮ್ಮ ಪರಿಚಯವಾದದ್ದು ನಿಜಕ್ಕೂ ನನ್ನ ಅದೃಷ್ಟವೇ. ಮತ್ತೆ ಭೇಟಿಯಾಗೋಣ. ಈಗ ಮಕ್ಕಳು ಕಾಯುತ್ತಿರುತ್ತಾರೆ. ಬರುತ್ತೇನೆ. ಖುದಾ ಹಾಫಿಜ್" ಎಂದು ಹೇಳಿ ಅಲ್ಲಿಂದ ಹೊರಟ.

ಒಂದೆರಡು ಹೆಜ್ಜೆ ಇಡುವಷ್ಟರಲ್ಲಿ ಮಾಸೂದ್, ಘಿಯಾಸ್‌ನ ಹೆಸರಿಡಿದು ಕರೆದು ನಿಲ್ಲಿಸಿದ.

"ಘಿಯಾಸ್ ಭಾಯಿ ನಾನೀಗ ನಿಮಗೊಂದು ಅವಕಾಶ ಕೊಡುತ್ತಿದ್ದೇನೆ. ನಾನು ಹೇಗಿದ್ದರೂ ಮೊಘಲ್ ಬಾದಶಾಹ ಅವರನ್ನು ಭೇಟಿಯಾಗಿ ಅವರಿಗೆ ಗೌರವ ಸಲ್ಲಿಸಲು ಪತೇಹ್‌ಪೂರ್ ಸಿಕ್ರಿ ಅಥವಾ ಲಾಹೋರಿಗೆ ಹೋಗುವವನಿದ್ದೇನೆ. ನೀವೂ ಕೂಡಾ ನನ್ನ ಜೊತೆ ಪ್ರಯಾಣಿಸುವುದಾದರೆ ಚೆನ್ನಾಗಿರುತ್ತದೆ. ಒಬ್ಬರಿಗೊಬ್ಬರಿಗೆ ಸಹಾಯವೂ ಸಿಗುತ್ತದೆ."

"ನೀವು ಹೇಳುತ್ತಿರುವುದೇನೋ ಸರಿಯೇ. ನಿಮ್ಮ ಒಳ್ಳೇತನವನ್ನು ದುರುಪಯೋಗ ಪಡಿಸಿಕೊಳ್ಳುವ ಇಚ್ಛೆಯಿಲ್ಲ. ಈಗಾಗಲೇ ನಿಮಗೆ ಋಣಿಯಾಗಿದ್ದೇನೆ."

"ನೋಡಿ ಯೋಚನೆ ಮಾಡಿ. ನಾನಿರುವ ಜಾಗವನ್ನು ತಿಳಿಸುತ್ತೇನೆ. ನನ್ನ ಸೂಚನೆ ನಿಮಗೆ ಒಪ್ಪಿತವಾದಲ್ಲಿ ಬಂದು ಬಿಡಿ. ನಿಮಗೆ ಪ್ರತ್ಯೇಕವಾದ ಬಿಡಾರದ ವ್ಯವಸ್ಥೆ ಮಾಡುತ್ತೇನೆ. ಹವಾಮಾನ ಅನುಕೂಲವಾಗುತ್ತಿದ್ದಂತೆ ಹೊರಟು ಬಿಡೋಣ. ಯೋಚಿಸಿ, ನಿಮಗಾಗಿ ಕಾಯುತ್ತೇನೆ."

"ನಿಮ್ಮ ಇಷ್ಟೊಂದು ಉಪಕಾರಕ್ಕೆ ಪ್ರತಿಯಾಗಿ ನಾನೇನು ತಾನೇ ಕೊಡಬಲ್ಲೆ. ವೃಥಾ ನಿಮಗೆ ತೊಂದರೆ ಕೊಡಬಾರದೆಂದು ಹೇಳಿದೆ. ನನ್ನದು ದೊಡ್ಡ ಕುಟುಂಬ. ಅಷ್ಟೊ ಮಂದಿಯನ್ನು ನೋಡಿಕೊಳ್ಳುವುದು ಸುಲಭದ ಮಾತಲ್ಲ."

"ನಿಮಗ್ಯಾಕೆ ಅಷ್ಟೊಂದು ಸಂಕೋಚ? ಕಷ್ಟ ಕಾಲದಲ್ಲಿ ಒಬ್ಬರಿಗೊಬ್ಬರು ಸಹಾಯವಾಗಲೆಂದೇ ಅಲ್ಲವೇ ಸ್ನೇಹ, ಬಂಧುತ್ವ ಇತ್ಯಾದಿಗಳ ವ್ಯವಸ್ಥೆ. ನನಗೆ ವಯಸ್ಸಾಗಿದೆ. ನಾನೂ ಒಬ್ಬನೇ. ಕಾಯಿಲೆ ಕಸಾಲೆಯೆಂದರೆ ನಿಮ್ಮಂಥವರ ಸಹಾಯ ನನಗೂ ಬೇಕಾಗುವುದಲ್ಲವೇ?"

"ಮನುಷ್ಯತ್ವಕ್ಕೆ ಬೆಲೆ ಕೊಡುವವರು ಯಾರೂ ಪ್ರತ್ಯುಪಕಾರದ ನಿರೀಕ್ಷೆಯಿರಿಸಿಕೊಂಡು ಮಾಡುವುದಿಲ್ಲ. ನೀವು ಉಪಕಾರ ಮಾಡದಿದ್ದರೂ ನಾನು ನಿಮಗೆ ಮಾಡುತ್ತಿದ್ದೆ. ಆದರೆ ಸದ್ಯಕ್ಕೆ ನಾನು ನಿಮ್ಮೊಂದಿಗೆ ಬರುವುದು ಸಾಧ್ಯವಿಲ್ಲ. ನನಗೆ ನಿಮ್ಮ ಅಗತ್ಯ ಬಿದ್ದಾಗ ನಿಸ್ಸಂಕೋಚವಾಗಿ ನಿಮ್ಮ ಬಳಿಗೆ ಬರುತ್ತೇನೆ. ಖುದಾ ಹಾಫಿಜ್" ಎಂದು ಹೇಳಿ ತನ್ನ ಬಿಡಾರದ ಕಡೆ ಹೆಜ್ಜೆ ಹಾಕಿದ. ಮಿರ್ಜಾ ಮಲ್ಲಿಕ್ ಮಾಸೂದ್ ಕೂಡಾ ತನ್ನ ಜೊತೆಯವರೊಡನೆ ಹೊರಟ.

ಇಬ್ಬರೂ ಒಂದೊಂದು ಹಾದಿ ಹಿಡಿದು ಹೋದರು. ಘಿಯಾಸ್ ಮುಂದಿನ ಪ್ರಯಾಣಕ್ಕೆ ಸಿದ್ಧನಾದ. ತಂದಿದ್ದ ವಸ್ತುಗಳನ್ನೆಲ್ಲಾ ಗಂಟು ಕಟ್ಟಿದ. ಮಕ್ಕಳೂ ಸಹಕರಿಸಿದರು. ಸದ್ಯಕ್ಕೆ ಮಾಸೂದ್ ಬಿಡಾರದ ಕಡೆ ಪಯಣಿಸಿ, ಅಲ್ಲಿ ಸ್ವಲ್ಪ ದಿನ ಸುಧಾರಿಸಿಕೊಂಡು ಮುಂದೆ ಹೋಗುವುದೆಂದು ಘಿಯಾಸ್ ತೀರ್ಮಾನಿಸಿದ.

ಮಲ್ಲಿಕ್ ಮಾಸೂದ್ ಸಾಕಷ್ಟು ಸ್ಥಿತಿವಂತ. ವ್ಯಾಪಾರವೂ ಚೆನ್ನಾಗಿತ್ತು. ಪದೇ ಪದೇ ವ್ಯಾಪಾರಕ್ಕೆಂದು ಪಯಣಿಸುತ್ತಿದ್ದ. ಶ್ರೀಮಂತಿಕೆಯ ಜೊತೆಗೆ ಒಳ್ಳೆಯ ಮನಸ್ಸಿತ್ತು.

ಕಷ್ಟವೆಂದು ಬಂದವರಿಗೆ ಮನಃಪೂರ್ವಕವಾಗಿ ಸಹಾಯ ಮಾಡುತ್ತಿದ್ದ. ತನ್ನ ಮಾತಿಗೆ ಬೆಲೆಕೊಟ್ಟು ಘಿಯಾಸ್ ಕುಟುಂಬ ಬಂದದ್ದು ಅವನಿಗೆ ಅತಿಯಾದ ಸಂತೋಷ ನೀಡಿತು. ಆತನ ಕುಟುಂಬದ ವಾಸಕ್ಕೆ ಪ್ರತ್ಯೇಕವಾಗಿ ಬಿಡಾರದ ವ್ಯವಸ್ಥೆ ಮಾಡಿದ. ಸಂಸಾರಕ್ಕೆ ಬೇಕಾದ ಎಲ್ಲ ಅನುಕೂಲಗಳನ್ನೂ ಮಾಡಿಕೊಟ್ಟ. ಘಿಯಾಸ್ ಕುಟುಂಬ ಸಾಕಷ್ಟು ಚೇತರಿಸಿಕೊಂಡಿತು. ಮೆಹರುನ್ನೀಸಾ ಹುಟ್ಟಿ ಒಂದು ತಿಂಗಳಾಗಿತ್ತು. ಅಸ್ಮತ್‌ಗೆ ಮೈಕಟ್ಟು ತುಂಬಿಕೊಂಡಿತು. ಮಗುವಿಗೆ ಹಾಲು ನೀಡುವಷ್ಟು ಚೈತನ್ಯ ತುಂಬಿತು. ಮುಂದಿನ ಪಯಣಕ್ಕೆ ಸಿದ್ಧವಾಗಬೇಕಿತ್ತು.

ಸಮಯ ನೋಡಿ ಘಿಯಾಸ್ ಅಸ್ಮತ್‌ಳನ್ನು ಕರೆದ. "ಅಸ್ಮತ್ ನಿನ್ನ ಜೊತೆ ಮಾತಾಡಬೇಕು. ನೀನಾಡುವ ಮಾತು ನಿನ್ನ ಮೇಲೆ ಯಾವ ರೀತಿ ಪ್ರಭಾವ ಮಾಡಬಹುದೆಂದು ಊಹಿಸಿಕೊಂಡೇ ಮಾತಾಡುತ್ತೇನೆ. ನಾನು ಹೇಳುವುದನ್ನು ಕೇಳಿಸಿಕೋ. ಆದ್ರರೆ ಪ್ರತಿಯಾಡಬೇಡ."

"ಮಾತಿಗೆ ಮೊದಲೇ ಇಷ್ಟು ದೊಡ್ಡ ಪೀಠಿಕೆ ಯಾಕೆ? ಹೇಳಿ. ನೀವು ಏನು ಹೇಳಿದರೂ ಕೇಳುತ್ತೇನೆ."

"ಅಸ್ಮತ್ ನಮಗೆ ಹುಟ್ಟಿರುವ ಈ ಹೆಣ್ಣು ಮಗುವನ್ನು ಸಾಕುವುದು ತುಂಬಾ ಕಷ್ಟ. ಒಂದು ಬಿಡಿಗಾಸಿನ ಆದಾಯವಿಲ್ಲ. ಇದನ್ನು ಪೋಷಿಸುವುದು ಹೇಗೆ? ಇಲ್ಲಿಯೇ ಎಲ್ಲಾದರೂ ಬಿಟ್ಟು ಹೋಗೋಣ. ಯಾರಾದರೂ ಕರುಣಾಮಯಿಗಳ ಕಣ್ಣಿಗೆ ಬಿದ್ದು ಅವರು ಆ ಮಗುವನ್ನು ಸಾಕುತ್ತಾರೆ."

"ಘಿಯಾಸ್ ಇದೇನು ಹೇಳುತ್ತಿರುವಿ? ನನ್ನ ಕರುಳ ಕುಡಿಯನ್ನು ನಿರ್ದಾಕ್ಷಿಣ್ಯವಾಗಿ ತೊರೆದು ಹೋಗುವುದು ಸಾಧ್ಯವೇ? ಇಷ್ಟು ಜನರ ಹೊಟ್ಟೆ ತುಂಬಿಸಿಕೊಳ್ಳುವಾಗ ಆ ಮಗುವಿಗೆ ಒಂದು ತೊಟ್ಟು ಹಾಲೂಡಿಸುವುದು ಸಾಧ್ಯವಿಲ್ಲವೇ? ಘಿಯಾಸ್ ದಯವಿಟ್ಟು ಮತ್ತೊಮ್ಮೆ ಈ ಮಾತು ಹೇಳಬೇಡ."

"ನೀನು ನನ್ನನ್ನು ನಿಷ್ಠುರಿ ಎಂದರೂ ಚಿಂತೆಯಿಲ್ಲ. ಮಾಸೂದ್ ಭಾಯಿಗೆ ಇದು ತಿಳಿಯಬಾರದು. ತಿಳಿದರೆ ಆತ ಒಪ್ಪುವುದಿಲ್ಲ. ನಮ್ಮ ಮೇಲೆ ಇನ್ನಷ್ಟು ಋಣ ಹೇರುತ್ತಾನೆ. ನನ್ನನ್ನು ತಡೆಯಬೇಡ" ಎಂದು ಒಳಗೆ ಹೋಗಿ, ಹಸಿವಿನಿಂದ ಅಳುತ್ತಿದ್ದ ಮಗುವನ್ನು, ಅಸ್ಮತ್ ತಡೆಯುತ್ತಿದ್ದರೂ ಬಲವಂತದಿಂದ ಎತ್ತಿಕೊಂಡು ತಾನು ಹೊದ್ದುಕೊಂಡಿದ್ದ ಶಾಲುವಿನಲ್ಲಿ ಸುತ್ತಿಕೊಂಡು ಧಡಧಡನೆ ಹೊರ ನಡೆದ."

ಅಸ್ಮತ್ ಕಣ್ಣುಗಳಿಂದ ಕಣ್ಣೀರಿನ ಜಲಪಾತ! ಯಾವುದನ್ನೂ ಲೆಕ್ಕಿಸದೆ ಘಿಯಾಸ್ ಮಗುವಿನೊಂದಿಗೆ ಹೊರನಡೆದ. ತಮ್ಮ ಬಿಡಾರದಿಂದ ಸ್ವಲ್ಪ ದೂರ ನಡೆದ. ಇನ್ನಷ್ಟು ದೂರ ನಡೆದ, ಮತ್ತಷ್ಟು ದೂರ ನಡೆದ. ಜನರ ಕಣ್ಣಿಗೆ ಬೀಳದಷ್ಟು ದೂರ ನಡೆದ. ಕೈಲಿ ಹಿಡಿದಿದ್ದ ಲಾಂದ್ರದ ಬೆಳಕನ್ನೂ ಮಂದವಾಗಿರಿಸಿಕೊಂಡಿದ್ದ. ನಿದ್ದೆಗಣ್ಣಿನಲ್ಲಿದ್ದ ಮಗು ಕದಲಿತು. ಕೈಕಾಲು ಅಲುಗಾಡಿಸಲು ಪ್ರಯತ್ನಿಸಿತು. ಹೆದರಿದ. ಒಂದು ವೇಳೆ ಅಳು ಶುರು ಮಾಡಿದರೆ ಗತಿಯೇನು ಎಂದುಕೊಂಡ. ಅದೃಷ್ಟಕ್ಕೆ ದೃಷ್ಟಿಯಳತೆಯಲ್ಲಿ ದಪ್ಪನಾದ ಮರದ ಬೊಡ್ಡೆಯೊಂದು ಕಾಣಿಸಿತು. ಬಿರಬಿರನೆ ಹೆಜ್ಜೆ ಹಾಕಿ ಸಮೀಪಿಸಿದ. ಕೈಲಿದ್ದ ಲಾಂದ್ರವನ್ನು ಪಕ್ಕದಲ್ಲಿರಿಸಿ ಮಗುವನ್ನು ಸುತ್ತಿದ ಶಾಲುವಿನ ಜೊತೆಯಲ್ಲಿಯೇ

ಮಲಗಿಸಿದ. ಮಗು ಬೆಚ್ಚನೆಯ ತೋಳ ತೊಟ್ಟಿಲಿಂದ ಬೇರೆಯಾದ ಕೂಡಲೇ ಮುಲುಗಾಟ ಶುರುಮಾಡಿತು. ಹೆದರಿಕೆಯಿಂದ ಕಂಪಿಸಿದನಾದರೂ ದಿಟ್ಟ ನಿರ್ಧಾರದೊಂದಿಗೆ ಮಗುವಿನತ್ತ ನೋಡದೆ ಹಿಂದಕ್ಕೆ ಹೆಜ್ಜೆ ಹಾಕಿದ. ನಿರ್ಜನ ಹಾದಿಯಾಗಿತ್ತು. ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ ಬಿಡಾರ ತಲುಪಬೇಕು. ಅಸ್ಮತ್ ಹೇಗಿರುವಳೋ ಏನೋ? ಅವಳನ್ನು ಎದುರಿಸುವುದು ಹೇಗೆಂದು ಆಲೋಚಿಸುತ್ತಿದ್ದ. ಅವಳು ತಿಳಿದಷ್ಟು ತಾನು ಕ್ರೂರಿಯಲ್ಲ. ಹಸಿವಿನಿಂದ ಸಾಯಿಸುವುದಕ್ಕೆ ಬದಲಾಗಿ, ಅದೃಷ್ಟದಿಂದ ಸ್ಥಿತಿವಂತರ ಕೈ ಸೇರಿ ಚೆನ್ನಾಗಿ ಬೆಳೆಯಲಿ ಎನ್ನುವ ಉದ್ದೇಶವಷ್ಟೇ ನನ್ನದು ಎಂದುಕೊಂಡ. ಆದರೂ ತಾಯಿ ಕರುಳಿನ ನೋವನ್ನು ಅರ್ಥಮಾಡಿಕೊಳ್ಳಲಾಗದಷ್ಟು ತಾನೇನು ಅಸಮರ್ಥನಲ್ಲ. ತನಗೇ ಅರಿವಿಲ್ಲದಂತೆ ಬಿಡಾರದ ಮುಂಭಾಗದ ಬಳಿ ತಲುಪಿದ್ದ. ಉಳಿದ ಮಕ್ಕಳೂ ನಿದ್ದೆ ಮಾಡಿರಲಿಲ್ಲ. ನೋಡಿದರೆ ಅಸ್ಮತ್‌ಳ ಕಣ್ಣುಗಳು ಊದಿಕೊಂಡಿದ್ದವು.

ಈ ಕಡೆ ಮಾಸೂದ್ ಆ ರಾತ್ರಿಯಲ್ಲಿಯೇ ಜೊತೆಗಾರರೊಡನೆ ಪ್ರಯಾಣ ಮುಂದುವರೆಸಿದ. ರಸ್ತೆಯ ಆಚೆ ಈಚೆ ಬದಿಯಲ್ಲಿ ಅಲ್ಲಲ್ಲಿ ಬೆಂಕಿ ಕಾಯಿಸಿಕೊಳ್ಳುತ್ತಿದ್ದರು. ಮಧ್ಯೆ ಮಧ್ಯೆ ಗಾಳಿಯ ಸೀಟಿ ಸದ್ದು, ಬೋಳು ಮರಗಳ ನಡುವಿನಿಂದ ಬೀಸಿದ ಗಾಳಿಯ ಸದ್ದು ಅಡಗುತ್ತಿದ್ದಂತೆ ಯಾರೋ ಅಳುತ್ತಿರುವ ಸದ್ದು ಅಸ್ಪಷ್ಟವಾಗಿ ಕೇಳಿಸುತ್ತಿತ್ತು. ಮಾಸೂದ್ ಗಮನವಿಟ್ಟು ಕೇಳಿಸಿಕೊಂಡು ತನ್ನ ಜೊತೆಯವರಿಗೆ ಅದೇನೆಂದು ನೋಡಿ ಬರಲು ಹೇಳಿದ. ಕೂಡಲೇ ಅವರು ಮಿಂಚಿನ ವೇಗದಿಂದ ಕುದುರೆಗಳನ್ನು ಓಡಿಸಿದರು. ಅವರಿಗೆ ತೀರಾ ಹತ್ತಿರದಲ್ಲಿಯೇ ಮರದ ಕಾಂಡದ ಬದಿಯಲ್ಲಿ ಏನೋ ಅಲುಗಿದಂತೆ ಕಾಣಿಸಿತು. ಕೂಡಲೇ ಕುದುರೆ ಇಳಿದು ಆ ಜಾಗಕ್ಕೆ ಬಂದಾಗ ದೊಡ್ಡ ಅಚ್ಚರಿಯೊಂದು ಕಾದಿತ್ತು.

ಮಗುವಿನ ತಲೆಯ ಬಳಿ ನಾಗರ ಹಾವೊಂದು ಹೆಡೆ ಬಿಚ್ಚಿ ಮಗುವಿಗೆ ಹಿಡಿದಿತ್ತು. ಈಗ ಮಗು ಅಳುತ್ತಿರಲಿಲ್ಲ. ಕೈಕಾಲುಗಳನ್ನು ಆಡಿಸುತ್ತಾ ಯಾವುದರ ಪರಿವೆಯೂ ಇಲ್ಲದೆ ಆಗಸದತ್ತ ಮುಖ ಮಾಡಿ ಕಿಲಕಿಲನೆ ನಗುತ್ತಿತ್ತು. ಕುದುರೆ ಸವಾರರು ಆಶ್ಚರ್ಯದಿಂದ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಹಾವಿಗೆ ಹೆದರಿ ಸಮೀಪಿಸದೆ ನಿಂತಲ್ಲಿಯೇ ನಿಂತಿದ್ದರು. ಒಂದ್ಯೆದು ನಿಮಿಷದಲ್ಲಿ ಹೆಡೆ ನಾಗರ ಯಾರಿಗೂ ತೊಂದರೆ ಮಾಡದೆ ತನ್ನ ಪಾಡಿಗೆ ತಾನು ಹೊರಟುಹೋಯಿತು. ಬಹುಶಃ ಅದಕ್ಕೆ ಮಗುವಿನ ಸುರಕ್ಷತೆಯ ಬಗ್ಗೆ ಭರವಸೆ ಮೂಡಿರಬೇಕು.

ಸವಾರರಲ್ಲಿ ಒಬ್ಬನು ಮಗುವನ್ನು ಎತ್ತಿಕೊಂಡು ಇಬ್ಬರೂ ಮೂಕವಿಸ್ಮಿತರಾಗಿ ಮಾಸೂದರ ಬಳಿಗೆ ದೌಡಾಯಿಸಿದರು. ಈ ಇಬ್ಬರಿಗಾಗಿ ಎದುರು ನೋಡುತ್ತಿದ್ದ ಮಾಸೂದ್ ಸವಾರನ ಕೈಯಲ್ಲಿ ಏನಿರಬಹುದೆಂದು ಕುತೂಹಲದಿಂದ ಯೋಚಿಸುತ್ತಿದ್ದ. ಅವರಿಬ್ಬರೂ ಇಳಿದು ಕೈಲಿದ್ದ ಮಗುವನ್ನು ಮಾಸೂದನ ಮುಂದೆ ಇರಿಸಿದರು. ಮಾಸೂದ್‌ಗೆ ನಂಬಲಾಗಲಿಲ್ಲ. ಈ ನಿರ್ಜನ ಪ್ರದೇಶದಲ್ಲಿ ಇಂಥಾ ಹೊತ್ತಿನಲ್ಲಿ ಮಗುವನ್ನು ಅನಾಥವಾಗಿ ಯಾರು ತಾನೇ ಎಸೆದು ಹೋಗಿರಬಹುದು? ಎಂದು ಗಾಢವಾಗಿ ಆಲೋಚಿಸಿದ ಕೂಡಲೇ ಅವನಿಗೆ ಥಟ್ಟನೆ ಹೊಳೆಯಿತು. ಮಗುವಿಗೆ ಸುತ್ತಿದ್ದ

ಶಾಲು. ತನ್ನ ಹೊಸ ಗೆಳೆಯ ಘಿಯಾಸ್‌ನದಾಗಿತ್ತು. ಆದರೆ ಮಗು? ಮಾತಿನ ಮಧ್ಯೆ ಘಿಯಾಸ್ ಬಸಿರಿ ಹೆಂಡತಿಯ ಬಗ್ಗೆ ಹೇಳಿದ್ದುದು ಅಸ್ಪಷ್ಟವಾಗಿ ನೆನಪಿಗೆ ಬಂತು. ಎಲ್ಲವೂ ಸ್ಪಷ್ಟವಾಗುತ್ತಾ ಹೋಯಿತು. ತನ್ನ ದೈನ್ಯ ಸ್ಥಿತಿಯ ಬಗ್ಗೆ ಹೇಳಿಕೊಂಡಿದ್ದ. ಅವನ ಬಗ್ಗೆ ಮಾಸೂದ್‌ಗೆ ಕನಿಕರವೆನಿಸಿತ್ತು. ನೋಡಲು ಆಕರ್ಷಕ ವ್ಯಕ್ತಿತ್ವ, ತೀರಾ ಬುದ್ಧಿವಂತನಂತೆ ತೋರುತ್ತಿದ್ದ. ಜೊತೆಗೆ ಅವನ ಮನೆತನವೂ ಪ್ರತಿಷ್ಠಿತವಾಗಿತ್ತು. ಕರುಣೆ ದಯಾರ್ದ್ರತೆಗಳು ಎದ್ದು ಕಾಣುತ್ತಿದ್ದವು. ಹೀಗಿರುವಾಗ ಕಲ್ಲು ಮನಸ್ಸು ಮಾಡಿಕೊಂಡು ಮಗುವನ್ನು ತೊರೆದು ಹೋಗಬೇಕಾದರೆ ಅವನ ಪರಿಸ್ಥಿತಿ ಎಷ್ಟು ದಾರುಣವಾಗಿರಬೇಕೆಂದು ಯೋಚಿಸಿದ.

ಪ್ರಯಾಣವನ್ನು ಹಿಮ್ಮುಖ ಮಾಡಿ ತನ್ನ ಬಿಡಾರದ ಕಡೆಗೆ ತಿರುಗಿ ನಡೆದ. ಸೇವಕನೊಬ್ಬನನ್ನು ಘಿಯಾಸ್‌ನ ಬಿಡಾರಕ್ಕೆ ಕಳಿಸಿ ಘಿಯಾಸ್‌ನನ್ನು ಕರೆತರಲು ಹೇಳಿದ.

ಮಾಸೂದ್ ಋಣ ತನ್ನ ಮೇಲೆ ಎಷ್ಟಿದೆಯೋ? ಎನಿಸಿ ಎದುರು ಮಾತಾಡದೆ ಬಂದವನ ಜೊತೆಯಲ್ಲಿ ಮಾಸೂದ್‌ನ ಬಿಡಾರ ತಲುಪಿದ.

ಮಾಸೂದ್ ಮೊದಲಿನಂತೆಯೇ ಅವನನ್ನು ಬರಮಾಡಿಕೊಂಡ. "ಘಿಯಾಸ್ ಭಾಯಿ ಕ್ಷಮೆಯಿರಲಿ. ನಿಮ್ಮನ್ನು ಬರುವಂತೆ ಮಾಡಿ ತೊಂದರೆ ಕೊಟ್ಟೆ. ಎಲ್ಲರೂ ಆರಾಮವಾಗಿದ್ದಾರೆ ತಾನೇ?"

"ಮಾಸೂದ್ ಭಾಯಿ ತಮ್ಮಂತಹ ಸ್ನೇಹಿತರು ಜೊತೆಗೆ ಇರುವಾಗ ನಮಗೇನು ಕಷ್ಟ? ಹೇಳಿ ಭಾಯಿ. ನನ್ನಿಂದ ನಿಮಗೇನಾದರೂ ಆಗಬೇಕೆ? ಈ ಬಡವನಲ್ಲಿ ಒಣ ಮಾತಿನ ಹೊರತು ಮತ್ತೇನೂ ಸಿಗಲಾರದು."

"ನನಗೆ ನಿಮ್ಮಿಂದ ಒಂದು ಉಪಕಾರವಾಗಬೇಕಿತ್ತು. ಹೀಗೆ ಹೋಗುವಾಗ ಯಾರೋ ಒಬ್ಬರು ಒಂದು ಮಗುವನ್ನು ಅನಾಥವಾಗಿ ಎಸೆದು ಹೋಗಿದ್ದರು. ನನ್ನ ಅದೃಷ್ಟ ಅದು ನನ್ನ ಕಣ್ಣಿಗೆ ಬಿತ್ತು. ಎಷ್ಟು ಮುದ್ದಾಗಿದೆ ಆ ಮಗು ಎಂದರೆ ಒಂದು ಕ್ಷಣವೂ ಆ ಮಗುವನ್ನು ಕೈ ಬಿಡಲಾರೆ ಎನಿಸಿತ್ತು. ಆದರೆ ನಾನು ಗಂಡಸು, ಒಂಟಿ. ಸ್ವಲ್ಪ ದೊಡ್ಡದಾಗುವವರೆಗೂ ಈ ಮಗುವನ್ನು ಸಾಕುವುದಕ್ಕೆ ನಿಮಗೆ ಒಪ್ಪಿಸುತ್ತಿದ್ದೇನೆ. ನೀವು ಯಾವುದಕ್ಕೂ ಚಿಂತೆ ಮಾಡಬೇಕಿಲ್ಲ. ಅದರ ಖರ್ಚಿಗೆ ಬೇಕಾಗುವಷ್ಟು ಹಣವನ್ನು ನಿಮಗೆ ಕೊಡುತ್ತೇನೆ" ಎಂದು ಹೇಳಿ ಮಾಸೂದ್ ನಾಣ್ಯಗಳ ಒಂದು ಚೀಲವನ್ನೂ ತನ್ನ ಕೈಲಿದ್ದ ಮಗುವನ್ನೂ ಘಿಯಾಸ್‌ನ ಮುಂದೆ ಇರಿಸಿದ. "ಘಿಯಾಸ್ ನಾಚಿಕೆ ಮತ್ತು ಪಾಪ ಪ್ರಜ್ಞೆಯಿಂದ ಭೂಮಿಗಿಳಿದು ಹೋದ. ಅವನ ಹೃದಯ ಒಳಗಿನಿಂದ ಚೀರಿ ಚೀರಿ ಅಳುತ್ತಿತ್ತು. ಪರೋಕ್ಷವಾಗಿ ಮಾಸೂದ್ ತನ್ನ ಕ್ರೌರ್ಯವನ್ನು ನಗ್ನವಾಗಿ ತನ್ನ ಮುಂದೆ ಬಿಚ್ಚಿಡುತ್ತಿದ್ದಾನೆ ಎನಿಸಿತು. ಆ ಮಗುವಿನ ಬಗ್ಗೆ ಯಾವ ಪ್ರಶ್ನೆಗಳನ್ನೂ ಕೇಳಲಿಲ್ಲ. ಸುಮ್ಮನೆ ಅದನ್ನೆತ್ತಿಕೊಂಡು ಅಸ್ಮತ್ ಇದ್ದಲ್ಲಿಗೆ ಹೋದ. ಮಗುವಿನ ಅಗಲಿಕೆಯಿಂದ ಅತ್ತು ಅತ್ತು ದಣಿದಿದ್ದವಳ ಕೈಗೆ ಮಗುವನ್ನು ಕೊಟ್ಟಾಗ, ಅಸ್ಮತ್ ನಿಬ್ಬೆರಗಾದಳು. ಏನಿದೆಲ್ಲಾ? ಯಾಕೆ ಹೀಗೆ? ಕಡೆಗೂ ನಿಮ್ಮ ಮನಸ್ಸನ್ನು ಬದಲಾಯಿಸಿದಿರಾ? ನನಗೆ ಗೊತ್ತು ನಿಮ್ಮ ಹೃದಯ. ನಿಮ್ಮ ಸ್ವಂತ ಮಗುವನ್ನು ಅನಾಥವಾಗಿಸುವ, ಇಲ್ಲವೆ ಸಾವಿಗೆ ದೂಡುವಷ್ಟು ಕಠೋರವಲ್ಲ" ಎಂದು ಬಡಬಡನೆ ಸಂತೋಷಾತಿರೇಕದಿಂದ ಮಾತು ಮುಂದುವರಿಸಿದಳು.

"ಅಸ್ಮತ್ ಇದೆಲ್ಲ ಅಲ್ಲಾಹ್‌ನ ಅನುಗ್ರಹ. ಈ ಮಗುವನ್ನು ನಾವೇ ಪೋಷಿಸಬೇಕೆಂಬುದು ಅಲ್ಲಾಹ್‌ನ ಇಚ್ಛೆ ಅನಿಸುತ್ತದೆ. ಮಾಸೂದ್ ಭಾಯಿ ಈ ಮಗುವಿನ ಲಾಲನೆ ಪಾಲನೆ ಜವಾಬ್ದಾರಿ ವಹಿಸಿದ್ದಾನೆ" ಎಂದ.

ಅಸ್ಮತ್‌ಗೆ ಸ್ವರ್ಗ ಮೂರೇ ಗೇಣು ಎನಿಸಿತು. ನನ್ನ ಮಗಳು ಅದೃಷ್ಟವಂತೆ. ಅವಳು ಬಹಳ ದೊಡ್ಡ ಹೆಸರು ಮಾಡುತ್ತಾಳೆ. ಅವಳಿಂದ ಏನೆಲ್ಲ ಆಗಬೇಕೋ ಯಾರಿಗೆ ಗೊತ್ತು. ಯಾ ಖುದಾ? ನಿನ್ನ ಲೀಲೆ ವಿಚಿತ್ರವಾಗಿದೆ. ಕಸಿಯುತ್ತೀಯೆ, ಮತ್ತೆ ಮರಳಿಸುತ್ತೀಯೆ. ನಿನ್ನ ಉದ್ದೇಶ ತಿಳಿಯುವಷ್ಟು ಸಮರ್ಥರಲ್ಲ ನಾವು. ಏನಾದರಾಗಲಿ ನನ್ನ ಮಗು ನನ್ನ ಬಳಿಗೆ ಮರಳಿ ಬಂತಲ್ಲ. ಸಲೀಹಾಮ್ಮದ್, ಅಸಫ್ ಬನ್ನಿ ನೋಡಿ ನಿಮ್ಮ ಪುಟ್ಟ ನೀಸಾ ನಿಮ್ಮನ್ನು ನೋಡಬೇಕಂತೆ ಎಂದು ಹರ್ಷೋದ್ಗಾರದೊಂದಿಗೆ ಕರೆದ ಕೂಡಲೇ ಆ ಮಕ್ಕಳು ಓಡಿ ಬಂದು ಕಿಲಕಿಲನೆ ನಗುತ್ತಿದ್ದ ಮೆಹರುನ್ನೀಸಾಳನ್ನು ಸುತ್ತುವರಿದು ನಿಂತರು. ಅವಳ ಖುಷಿಯೊಂದಿಗೆ ತಮ್ಮ ಖುಷಿಯನ್ನೂ ಸೇರಿಸಿದರು.

ಮರುದಿನ ಮಾಸೂದ್‌ನ ಗುಂಪು ಘಿಯಾಸ್ ಕುಟುಂಬ ಒಟ್ಟಿಗೆ ಪಯಣಿಸಿದರು. ಖೈಬರ್ ಕಣಿವೆಯ ಮೂಲಕ ಲಾಹೋರ್ ತಲುಪಿದರು. ಮಾಸೂದ್ ಫತೇಪುರ್ ಸಿಕ್ರಿಯಲ್ಲಿ ಅಕ್ಬರನ ದರ್ಬಾರ್ ನಡೆಯುತ್ತಿದ್ದುದರಿಂದ ಅಲ್ಲಿಗೇ ಹೋಗಿ ಬಾದಶಹಾರಿಗೆ ಗೌರವ ಸಲ್ಲಿಸಬೇಕಿತ್ತು. ಭಾರತಕ್ಕೆ ಬಂದಾಗಲೆಲ್ಲ ಬಾದಶಾಹರನ್ನು ಭೇಟಿಯಾಗಿ ಅವರಿಗೆ ಅಪರೂಪವಾದ ಕಾಣಿಕೆಗಳನ್ನು ನೀಡುತ್ತಿದ್ದ. ಅಕ್ಬರ್ ಮತ್ತು ಅವನ ಪರಿವಾರದವರೂ ಕೂಡಾ ಮಾಸೂದ್‌ನ ಬರವನ್ನು ಎದುರುನೋಡುತ್ತಿದ್ದರು. ಜನಾನಾದವರಿಗೂ ಮರ್ದಾನದವರಿಗೂ ಅವನು ತರುತ್ತಿದ್ದ ಅಪರೂಪದ ಮತ್ತು ಅಮೂಲ್ಯವಾದ ವಸ್ತುಗಳು ಬಹಳ ಪ್ರಿಯವಾಗಿರುತ್ತಿದ್ದವು. ಎಷ್ಟೇ ಬೆಲೆಯುಳ್ಳದ್ದಾಗಿದ್ದರೂ ಮೊಘಲ್ ಶ್ರೀಮಂತಿಕೆಗೆ ಹೆಚ್ಚೇನೂ ಎನಿಸುತ್ತಿರಲಿಲ್ಲ. ಆರು ತಿಂಗಳ ನಿರಂತರ ಪ್ರಯಾಣ ಮಾಡಿ ಕಡೆಗೆ 1578ರಲ್ಲಿ ಫತೇಪುರ್‌ಸಿಕ್ರಿ ತಲುಪಿದ್ದರು.

ಮಾಸೂದ್‌ನ ಮನೆಯಲ್ಲಿಯೇ ಘಿಯಾಸ್ ಕುಟುಂಬ ಬಿಡಾರ ಹೂಡಿತು. ಮಕ್ಕಳು ದೊಡ್ಡವರು ಎಲ್ಲರೂ ಒಬ್ಬರಿಗೊಬ್ಬರು ಅಪರಿಚಿತರೆಂಬ ಭಾವನೆ ಬಾರದೆ ಜೊತೆಯಾಗಿದ್ದರು. ಘಿಯಾಸ್‌ಗೆ ಒಂದು ದಾರಿಯಾಗುವವರೆಗೂ ಪರಾವಲಂಬಿತನ ಅನಿವಾರ್ಯವಾಗಿತ್ತು. ಘಿಯಾಸ್‌ಗೆ ಜೀವನೋಪಾಯಕ್ಕೆ ಒಂದು ದಾರಿ ಹುಡುಕಿಕೊಳ್ಳಬೇಕಿತ್ತು. ಮಾಸೂದ್ ತಮ್ಮ ಕೈಬಿಡುವುದಿಲ್ಲ ಎಂಬ ಭರವಸೆಯೇ ಅವರಿಗೆ ರಕ್ಷಾ ಕವಚವಾಗಿತ್ತು. ಮಾಸೂದ್ ಬಹಳ ಸಜ್ಜನ ವ್ಯಕ್ತಿ. ಪರೋಪಕಾರಿ. ಘಿಯಾಸ್‌ನ ಸ್ಥಿತಿಗಾಗಿ ಬಹಳವಾಗಿ ಮರುಗಿದ. ಹೇಗಾದರೂ ಮಾಡಿ ಅಕ್ಬರ್ ಬಾದಶಾಹರ ಕೃಪಾದೃಷ್ಟಿಗೆ ಘಿಯಾಸ್‌ನನ್ನು ತರಬೇಕೆಂದು ಪ್ರಯತ್ನಿಸುತ್ತಿದ್ದ. ಕಾಯುತ್ತಿದ್ದ. ಹೀಗಿದ್ದರೂ ತನ್ನ ಗೆಳೆಯನೊಬ್ಬ ಅಕ್ಬರನ ಆಸ್ಥಾನಿಕನಾಗಿದ್ದಾನೆ. ಅವನ ಮೂಲಕ ಆಸ್ಥಾನ ಪ್ರವೇಶಕ್ಕೆ ಅಕ್ಬರ್ ದರ್ಶನಕ್ಕೆ ಅವಕಾಶ ಗಳಿಸಿಕೊಳ್ಳಬೇಕು. ಆಗಲೇ ಜೊತೆಯಲ್ಲಿ ಘಿಯಾಸ್‌ನನ್ನೂ ಕರೆದೊಯ್ದು ಬಾದಶಾಹರ ಪರಿಚಯಮಾಡಿಸಿಬಿಟ್ಟರೆ ಮುಂದಿನ ದಾರಿ ತಾನೇ ತೆರೆದುಕೊಳ್ಳುತ್ತದೆ ಎಂದೆಲ್ಲಾ ಲೆಕ್ಕಾಚಾರ ಯೋಚಿಸಿದ.

ಘಿಯಾಸ್ ಬೇಗ್ ಕುಟುಂಬ ಲಾಹೋರ್‌ನಲ್ಲಿ ನೆಲೆಸಿದ್ದ ಪರ್ಷಿಯನ್ ಗೆಳೆಯನ

ಮನೆಯಲ್ಲಿ ಆಶ್ರಯ ಪಡೆಯಿತು. ಸಾಮಾನ್ಯವಾಗಿ ನವರೋಜ್ (ಹೊಸ ವರ್ಷ) ಸಂಭ್ರಮಾಚರಣೆಗೆ ಅಕ್ಬರ್ ಬಾದಶಾಹರ ಕಡೆಯಿಂದ ಆಪ್ತರಿಗೆ ಸಂಬಂಧಿಗಳಿಗೆ ಆಸ್ಥಾನಿಕರಿಗೆ ಆಹ್ವಾನವನ್ನು ತಪ್ಪದೆ ಕಳಿಸಲಾಗುತ್ತದೆ. ಘಿಯಾಸ್‌ನ ಅದೃಷ್ಟದ ಕ್ಷಣಗಳು ಅವನಿಗಾಗಿ ಕಾದಿವೆಯೋ ಎಂಬಂತೆ, ಮಲ್ಲಿಕ್ ಮಾಸೂದ್‌ಗೂ ಆಹ್ವಾನ ಬಂದದ್ದಲ್ಲದೆ ಆತನೂ ಬಾದಶಾಹರನ್ನು ಕಾಣುವ ಉತ್ಸಾಹದಲ್ಲಿದ್ದ. ತಾನು ಬಾದಶಾಹರಿಗೆ ಗೌರವ ಸಲ್ಲಿಸಲು ಹೋಗುವ ಸಮಯದಲ್ಲಿ ಘಿಯಾಸ್‌ನನ್ನೂ ಜೊತೆಗೆ ಕರೆದೊಯ್ದ. ಘಿಯಾಸ್‌ನಂತಹ ಯೋಗ್ಯ ವ್ಯಕ್ತಿಯನ್ನು ಬಾದಶಾಹರು ಖಂಡಿತವಾಗಿಯೂ ಪುರಸ್ಕರಿಸುತ್ತಾರೆ ಎನ್ನುವ ಭರವಸೆ ಮಿರ್ಜಾ ಮಲ್ಲಿಕ್‌ಗೆ ಇತ್ತು. ಘಿಯಾಸ್‌ನಲ್ಲಿಯೂ ಬಾದಶಾಹರನ್ನು ಕಾಣುವ ತವಕ ಕ್ಷಣ ಕ್ಷಣಕ್ಕೂ ಹೆಚ್ಚುತ್ತಿತ್ತು. ಆದರೆ ಮರುದಿನ ನೇರವಾಗಿ ಅಕ್ಬರ್‌ಗೆ ಮುಖಾಮುಖಿಯಾಗಿ ನಿಂತಾಗ ಸ್ವಲ್ಪ ಭಯವಾದಂತಾಯಿತು.

ಮಿರ್ಜಾ ಮಲ್ಲಿಕ್ ಮತ್ತು ಘಿಯಾಸ್ ಬೇಗ್ ಸಂಪ್ರದಾಯದಂತೆ ಒಟ್ಟಿಗೆ ಬಲಗೈಯನ್ನು ಹಣೆ ಮೇಲೆ ಇರಿಸಿ, ತಲೆ ಸೊಂಟ ಬಗ್ಗಿಸಿ ತಸ್ಲೀಮ್ ಮಾಡಿದರು. ಎಷ್ಟೋ ದಿನಗಳ ನಂತರ ಮಲ್ಲಿಕ್ ಕಾಣಿಸಿದ್ದು ಅಕ್ಬರ್‌ಗೆ ತುಂಬಾನೇ ಖುಷಿಯಾಯಿತು. "ಮಿರ್ಜಾ ಮಲ್ಲಿಕ್ ಮತ್ತೆ ನಿಮ್ಮನ್ನು ಕಾಣುತ್ತಿರುವುದು ನನಗೆ ಸಂತೋಷವೆನಿಸಿದೆ. ಪ್ರಯಾಣ ಹೇಗಿತ್ತು? ಹೊಸ ವಿಷಯಗಳೇನಾದರೂ ಇವೆಯೇನು?"

"ಜಹಾಂಪನಾಹ್ ನಮಗಾದರೂ ಹೊಸ ವಿಷಯಗಳೇನಿರುತ್ತವೆ. ಪ್ರಪಂಚವೆಲ್ಲ ಸುತ್ತಿ ತಮಗೆ ಇಷ್ಟವಾದ ವಸ್ತುಗಳನ್ನು ತಂದುಕೊಡುವುದರಲ್ಲಿಯೇ ನಮ್ಮ ಧನ್ಯತೆಯಿರುತ್ತದೆ. ಈಗ ಸದ್ಯಕ್ಕೆ ಈ ಸಣ್ಣ ನಜರಾನಾವನ್ನು ಒಪ್ಪಿಸಿಕೊಳ್ಳಬೇಕು." ಎಂದು ಮಲ್ಲಿಕ್ ತಂದಿದ್ದ ಒಳ್ಳೇ ತಳಿ ಕುದುರೆಗಳನ್ನು, ರೇಶಿಮೆ ವಸ್ತ್ರಗಳನ್ನು, ರತ್ನಗಂಬಳಿಗಳನ್ನು ಮತ್ತು ಬಗೆಬಗೆಯ ಒಣ ಹಣ್ಣುಗಳನ್ನು ತಟ್ಟೆಗಳಲ್ಲಿ ತುಂಬಿ ಅಕ್ಬರ್‌ಗೆ ಗೌರವಪೂರ್ವಕವಾಗಿ ಒಪ್ಪಿಸಿದ.

"ಇದೇನಿದು! ಎಷ್ಟೋ ವರ್ಷಗಳ ನಂತರ ದೂರದಿಂದ ತಂದು ಒಪ್ಪಿಸುತ್ತಿರುವುದು ಇಷ್ಟೆಯೇ" ಎಂದು ನಗುತ್ತಾ ಅಕ್ಬರ್ ಪ್ರಶ್ನಿಸಿದ.

"ಹುಜೂರ್ ಇದಿಷ್ಟೇ ಅಲ್ಲ. ಈಗ ನಿಮಗೆ ಒಪ್ಪಿಸಲಿರುವ ನಜರಾನಾ ಸಾಮಾನ್ಯದ್ದಲ್ಲ. ನಿಮಗೆ ಊಹಿಸಲೂ ಸಾಧ್ಯವಿಲ್ಲ. ನೀವು ಅಪ್ಪಣೆ ಕೊಡಿಸುವುದಾದರೆ ನಮ್ಮ ಗೆಳೆಯ ಘಿಯಾಸ್ ಬೇಗ್ ಅವರನ್ನು ನಿಮಗೆ ಪರಿಚಯ ಮಾಡಿಸಬೇಕೆಂದಿದ್ದೇನೆ" ಎಂದು ಘಿಯಾಸ್ ಬೇಗ್‌ನನ್ನು ಮುಂದೆ ತಂದು ಮತ್ತೊಮ್ಮೆ ತಸ್ಲೀಮ್ ಮಾಡಲು ಸನ್ನೆಯಿಂದ ಹೇಳಿದ. ಘಿಯಾಸ್‌ಗೆ ಸಂತೋಷ, ಭಯ! ಅಕ್ಬರ್ ಅದನ್ನು ಗಮನಿಸಿ,

"ಮುಂದೆ ಬನ್ನಿ ಘಿಯಾಸ್ ಬೇಗ್. ಸಂಕೋಚ ಬೇಡ, ಮಿರ್ಜಾ ಮಾಸೂದ್ ನಿಮ್ಮ ಬಗ್ಗೆ ಹೇಳುವ ಮಾತಿನಿಂದಲೇ ನೀವೇನೆಂಬುದನ್ನು ಊಹಿಸಬಲ್ಲೆ ಹೇಳಿ. ಎಲ್ಲಿಂದ ಬಂದಿರಿ. ನಿಮ್ಮ ತಂದೆ ಯಾರು? ನಿಸ್ಸಂಕೋಚವಾಗಿ ಹೇಳಿ."

ಘಿಯಾಸ್ ಬೇಗ್, ತೊದಲುತ್ತಾ ಬೆವರುತ್ತಾ ತನ್ನ ವಂಶದ ಕುಟುಂಬದ ವಿವರಗಳನ್ನು ತಿಳಿಸಿದ. ಅಕ್ಬರ್‌ನ ಪ್ರತಿಕ್ರಿಯೆ ಹೇಗಿರುತ್ತದೆಯೋ ಎಂದು ಹಿಂಜರಿಕೆಯಿಂದಲೇ ಕಾದು ನಿಂತ.

"ಬಹಳ ಸಂತೋಷ ಘಿಯಾಸ್ ಬೇಗ್. ನಿಮ್ಮ ಪೂರ್ವಿಕರ ಬಗ್ಗೆ ಬಹಳವಾಗಿ

ಪ್ರಶಂಸೆಯನ್ನು ಕೇಳಿದ್ದೀನಿ. ನಿಮ್ಮವರು ನನ್ನ ತಾತನ ಕಾಲದಿಂದಲೂ ಮೊಘಲ್ ಸಾಮ್ರಾಜ್ಯಕ್ಕೆ ತುಂಬಾ ಸೇವೆ ಸಲ್ಲಿಸಿದ್ದಾರೆ ಎಂಬುದನ್ನೂ ಕೇಳಿ ಬಲ್ಲೆ. ಅಂತಹ ವಂಶದಲ್ಲಿ ಹುಟ್ಟಿ ಬಂದ ನಿಮ್ಮಂಥವರ ಪರಿಚಯ ನಮಗೆ ಸಂತೋಷದ ವಿಷಯವಾಗಿದೆ. ಮಿರ್ಜಾ ಮಲ್ಲಿಕ್ ನಿಮ್ಮಂಥವರ ಪರಿಚಯ ಮಾಡಿಸಿ ತುಂಬಾ ಉಪಕಾರ ಮಾಡಿದ್ದಾರೆ. ಆಗಾಗ ಬಂದು ಭೇಟಿಯಾಗುತ್ತಿರಿ. ಈಗ ನಮ್ಮ ನವರೋಜ್‌ನ ಔತಣವನ್ನು ಸ್ವೀಕರಿಸಿ ಹೋಗಿ" ಎಂದು ಹೇಳಿದ್ದೇ, ಮಿರ್ಜಾ ಮಲ್ಲಿಕ್, ಘಿಯಾಸ್ ಬೇಗ್ ಅಲ್ಲಿಂದ ಗೌರವ ಸಲ್ಲಿಸುತ್ತಲೇ ನಿರ್ಗಮಿಸಿದರು.

ಮೊದಲ ಭೇಟಿಯಲ್ಲಿಯೇ ಘಿಯಾಸ್ ಅಕ್ಬರ್‌ನ ವ್ಯಕ್ತಿತ್ವ, ಸೌಜನ್ಯ ಜನರನ್ನು ನಡೆಸಿಕೊಳ್ಳುವ ರೀತಿಯಿಂದ ಅತ್ಯಂತ ಪ್ರಭಾವಿತನಾದ. (ದೇವರೇ) ಅಲ್ಲಾಹ್! ನಿನ್ನ ಅನುಗ್ರಹದಿಂದ ಬಾದಶಾಹರ ಸೇವೆ ಮಾಡುವಂತಾದರೆ, ಎಂದೆಂದಿಗೂ ಶುಕ್ರಗುಜಾರ್ ಆಗಿ ಇರುತ್ತೇನೆ ಎಂದು ಮನಸ್ಸಿನಲ್ಲಿ ಹಲವು ಬಾರಿ ಹೇಳಿಕೊಂಡ.

ಮರುದಿನ ಘಿಯಾಸ್ ಬೇಗ್ ಒಬ್ಬನೇ ಬಾದಶಾಹರನ್ನು ಸಂಪರ್ಕಿಸಲು ಹೋದ. ಅಕ್ಬರ್ ಹಿಂದಿನ ದಿನದಂತೆಯೇ ತುಂಬಾ ಪ್ರೀತಿಯಿಂದ ನಡೆಸಿಕೊಂಡ.

"ಘಿಯಾಸ್ ಅವರೇ, ನಮ್ಮ ಸ್ನೇಹ ಮೆಚ್ಚುಗೆಯ ಸಂಕೇತವಾಗಿ ನಿಮಗೊಂದು ಉಡುಗೊರೆ ನೀಡಲಿದ್ದೇವೆ. ನಿಮ್ಮನ್ನು ನೋಡುತ್ತಲೆ ನಿಮ್ಮ ಶಕ್ತಿ ಸಾಮರ್ಥ್ಯಗಳನ್ನು, ನಿಯತ್ತು, ನಿಷ್ಠೆಗಳನ್ನು ಗ್ರಹಿಸಿದೆ. ಮೊಘಲ್ ಸಾಮ್ರಾಜ್ಯಕ್ಕೆ ನಿಮ್ಮ ಸೇವೆ ಬೇಕಾಗಿದೆ. ಇಂದಿನಿಂದ ನಿಮ್ಮನ್ನು 300 ಕುದುರೆಗಳ ಮನ್‌ಸಬ್‌ದಾರನಾಗಿಯೂ ಮುಖ್ಯ ಆಸ್ಥಾನಿಕರಾಗಿಯೂ ನೇಮಿಸುತ್ತಿದ್ದೇವೆ. ನಿಮ್ಮ ವಾಸಕ್ಕೆ ಬೇಕಾದ ಎಲ್ಲ ವ್ಯವಸ್ಥೆಯನ್ನೂ ಮಾಡಿಕೊಡುತ್ತೇವೆ. ಬಹುಶಃ ನಮ್ಮ ರೀತಿ ನೀತಿ ಕಾನೂನು ಆಡಳಿತ ವ್ಯವಸ್ಥೆ ನಿಮ್ಮ ಪರ್ಷಿಯಾಗಿಂತ ಬೇರೆಯಾದ್ದರಿಂದ ಮೊದಲಿಗೆ ತೊಂದರೆ ಎನಿಸಬಹುದು."

"ಜಹಾಂಪನಾಹ್ ಅದೇನೂ ದೊಡ್ಡ ವಿಷಯವಲ್ಲ. ನಿಮ್ಮಂಥವರ ಮಾರ್ಗದರ್ಶನ, ಅನುಗ್ರಹ ನಮ್ಮ ಮೇಲಿದ್ದಲ್ಲಿ ಯಾವುದೂ ತೊಂದರೆ ಎನಿಸುವುದಿಲ್ಲ. ಅಲ್ಲಾಹ್‌ನ ಸಾಕ್ಷಿಯಾಗಿ ಹೇಳುತ್ತೇನೆ. ಕೊನೆ ಉಸಿರಿರುವವರೆಗೂ ನಾನು ನನ್ನ ಮಕ್ಕಳು ಮೊಘಲ್ ಸಾಮ್ರಾಜ್ಯಕ್ಕೆ ನಿಷ್ಠೆಯಿಂದ ನಡೆದುಕೊಳ್ಳುತ್ತೇವೆ ಎಂಬ ಭರವಸೆಯನ್ನು ನೀಡುತ್ತೇನೆ."

"ಬಹಳ ಸಂತೋಷ. ಇದನ್ನೇ ನಾವು ಎಲ್ಲ ಪ್ರಜೆಗಳಿಂದ, ಅಧಿಕಾರಿಗಳಿಂದ ನಿರೀಕ್ಷಿಸುವುದು" ಎಂದು ಮತ್ತೊಮ್ಮೆ ಕೊಟ್ಟ ಜವಾಬ್ದಾರಿಯನ್ನು ನಿರ್ವಹಿಸುವಂತೆ ಹೇಳಿ, ಅಭಿನಂದಿಸಿ ಕಳಿಸಿಕೊಟ್ಟ.

ಅಕ್ಬರ್ ತನ್ನ ಮಾತಿನಂತೆ ಘಿಯಾಸ್ ಬೇಗ್‌ಗೆ ಎರಡು ಅರಮನೆಗಳಂಥ ಮನೆಗಳನ್ನು, ಆಗ್ರಾದಲ್ಲೊಂದು ಮತ್ತು ಫತೇಪುರ್ ಸಿಕ್ರಿಯಲ್ಲೊಂದು ಕಟ್ಟಿಸಿಕೊಳ್ಳಲು ಬೇಕಾದ ಹಣ, ಸಾಮಗ್ರಿ ಮತ್ತು ಇನ್ನಿತರೆ ಅಗತ್ಯಗಳನ್ನು ಒದಗಿಸಿಕೊಟ್ಟ.

* * *

ಘಿಯಾಸ್‌ನ ಅದೃಷ್ಟ ಗರಿಗೆದರಿತು. ಅಲ್ಲಾಹ್‌ನ ಕರುಣೆಯ ಮಳೆ ಅವನ ಮೇಲೆ ಧಾರಾಕಾರವಾಗಿ ಸುರಿಯಿತು. ನಿರ್ಗತಿಕನಾಗಿ ಯಾವುದೇ ಭವಿಷ್ಯದ ಕಲ್ಪನೆಯಿಲ್ಲದೆ ಭಾರತಕ್ಕೆ ಬಂದ. ಜೀವನೋಪಾಯದ ಚಿಂತೆಯ ಬಂಡೆಗಲ್ಲಿನಡಿಯಲ್ಲಿ ಕುಸಿದು

ಹೋಗುತ್ತಿದ್ದವನಿಗೆ ಅನಿರೀಕ್ಷಿತವಾಗಿ ಊಹೆಗೂ ಮೀರಿದ ಸಿರಿವಂತಿಕೆಯ ಹೆಬ್ಬಾಗಿಲೇ ತೆರೆದುಕೊಂಡಿತು.

ಎಂತಹ ವೈಭವೋಪೇತ ಅರಮನೆಯ ವಾಸ! ಕೈಗೆ ಕಾಲಿಗೆ ಆಳು, ಒಳಾಂಗಣ ಹೊರಾಂಗಣಗಳ ಅಲಂಕಾರವೇ ಸಾಕು, ದಿಗ್ಭ್ರಾಂತಗೊಳಿಸುವ ತೆರನಾಗಿತ್ತು. ಕನ್ನಡಿಯಂತೆ ಹೊಳೆಯುತ್ತಿದ್ದ ನೆಲದ ಮೇಲೆ ಅತ್ಯಂತ ಬೆಲೆಯುಳ್ಳ ರತ್ನಗಂಬಳಿಗಳು ಹಾಸಲ್ಪಟ್ಟಿದ್ದವು. ಹಾಲಿನಂತೆ ಬೆಳ್ಳಗೆ ಹೊಳೆಯುತ್ತಿದ್ದ ಗೋಡೆಗಳು ಅದ್ಭುತವಾದ ವರ್ಣ ಚಿತ್ರಗಳು ಹಿತ್ತಾಳೆ ಚೌಕಟ್ಟುಗಳೊಂದಿಗೆ ಅಲಂಕೃತವಾಗಿದ್ದವು. ತೇಗ, ಚಂದನಗಳಿಂದ ಮಾಡಿದ ಮೇಜುಗಳು, ಆರಾಮ ಕುರ್ಚಿಗಳು, ಮಂಚಗಳು ಎಲ್ಲೆಲ್ಲೂ ಕಾಣುತ್ತಿದ್ದವು. ಮೇಜುಗಳ ಮೇಲೆ ಚಿನ್ನ ಬೆಳ್ಳಿ ಪಿಂಗಾಣಿಯ ಕಲಾಕೃತಿಗಳು. ಯಾವೊಂದು ಮೂಲೆಯೂ ಅಲಂಕೃತಗೊಳ್ಳದೆ ಖಾಲಿ ಇರಲಿಲ್ಲ. ಹಸಿದು ಕಂಗಾಲಾಗಿ ಅನ್ನದೊಂದು ಅಗುಳಿಗೂ ಬಾಯಿ ಬಿಡುತ್ತಿದ್ದ ಮಕ್ಕಳೀಗ ಗರಿಷ್ಠ ಶ್ರೀಮಂತಿಕೆಯ ಔನ್ನತ್ಯದಲ್ಲಿ, ಸುಖದ ಸುಪ್ಪತ್ತಿಗೆಯಲ್ಲಿ ಬದುಕುವಂತಾಯಿತು.

ಘಿಯಾಸ್ ವಂಶ ಸಾಮಾನ್ಯದ್ದಲ್ಲ. ಬುದ್ಧಿಶಕ್ತಿ, ಸಾಮರ್ಥ್ಯ, ಅಧಿಕಾರ, ಶ್ರೀಮಂತಿಕೆ ಸಜ್ಜನಿಕೆ, ಔದಾರ್ಯತೆ, ನಡೆ ನುಡಿಗಳು ಯಾರಿಗೂ ಸರಿಗಟ್ಟಲು ಆಗದಂತಿತ್ತು. ದುರದೃಷ್ಟದಿಂದ ರಾಜಕೀಯ ಪರಿಸ್ಥಿತಿಯಿಂದ ಹತಾಶ ಸ್ಥಿತಿ ತಲುಪಿದ್ದ. ಘಿಯಾಸ್‌ಗೆ ಇದೆಲ್ಲವೂ ತನಗೆ ಸಾಧ್ಯವಾದದ್ದಾದರೂ ಹೇಗೆ ಎಂದು ಯೋಚಿಸಿದಾಗ ಥಟ್ಟನೆ ಅವನ ಮನಸ್ಸಿಗೆ ಬಂದದ್ದು ಮಗಳು ಮೆಹರುನ್ನೀಸಾ! ಹೌದು, ನನ್ನ ಮಗಳು ಸಾಮಾನ್ಯಳಲ್ಲ ಅದೃಷ್ಟವನ್ನು ಬೆನ್ನಿಗಿಟ್ಟುಕೊಂಡು ಭೂಮಿಗೆ ಬಂದವಳು. ಮಾಸೂದರ ಮಾತು ಕಿವಿಗಳಲ್ಲಿ ಅನುರಣಿಸಿತು. "ಮಿರ್ಜಾ ಘಿಯಾಸ್, ನಿನ್ನ ಈ ಮಗಳು ಅದೃಷ್ಟ ಜಾತಕಳು. ಹಾವಿನ ಹೆಡೆಯ ರಕ್ಷಣೆ ಪಡೆದದ್ದರಲ್ಲಿ ಖಂಡಿತವಾಗಿಯೂ ಅಲ್ಲಾಹ್‌ನ ಕೈವಾಡವಿದೆ. ಚಿಂತಿಸದಿರು. ಇವಳಿಂದಾಗಿ ನಿನ್ನ ಭವಿಷ್ಯ ಬಾನೆತ್ತರಕ್ಕೇರುತ್ತದೆ. ಅವಳಿಗೆ ರಾಜಯೋಗವು ಬರುವ ಸಾಧ್ಯತೆಯಿದೆ" ಎಂದಿದ್ದನ್ನು ಮರೆಯುವುದಾದರೂ ಹೇಗೆ ಎಂದುಕೊಂಡಿದ್ದ.

ನಾಲ್ಕೂ ಜನ ಮಕ್ಕಳಿಗೆ ತುಂಬಾ ಒಳ್ಳೆಯ ಶಿಕ್ಷಣದ ವ್ಯವಸ್ಥೆ ಮಾಡಿದ. ಅರೇಬಿಕ್, ಪರ್ಷಿಯನ್, ಉರ್ದು ಇತ್ಯಾದಿ ಭಾಷೆಗಳನ್ನು, ಖುರಾನನ್ನು, ಹಿಂದೂ ಧರ್ಮಶಾಸ್ತ್ರ ಪುರಾಣಗಳನ್ನು ಕಲೆ, ಸಂಸ್ಕೃತಿ, ಸಂಗೀತ ಸಂಬಂಧಿ ಶಿಕ್ಷಣವನ್ನೂ ಕೊಡಿಸಿದ. ಆದರೆ ಎಲ್ಲಾ ಮಕ್ಕಳಿಗಿಂತ ಮೆಹರುನ್ನೀಸಾ ತೀರಾ ಭಿನ್ನವಾಗಿದ್ದಳು. ಚುರುಕು ಬುದ್ಧಿ, ತೀಕ್ಷ್ಣ ದೃಷ್ಟಿ, ವಿಷಯ ಗ್ರಹಿಕೆಯ ಸೂಕ್ಷ್ಮತೆಗಳು ಬೆರಗು ಹುಟ್ಟಿಸುವಂತಿದ್ದವು. ಮೌಲ್ವಿಗಳಾಗಲೀ ಪಂಡಿತರಾಗಲೀ ಹೇಳಿಕೊಡುತ್ತಿದ್ದ ಪಾಠಗಳನ್ನು ಶ್ರದ್ಧೆಯಿಂದ ಕೇಳಿಸಿಕೊಳ್ಳುತ್ತಿದ್ದು, ಹೇಳಿದ್ದನ್ನೆಲ್ಲಾ ಕಣ್ಣು ಮುಚ್ಚಿಕೊಂಡು ಸ್ವೀಕರಿಸುತ್ತಿರಲಿಲ್ಲ. ಅವುಗಳಲ್ಲಿನ ವಿಷಯಗಳು ಅತಾರ್ಕಿಕವೆನಿಸಿದಾಗ ಪ್ರಶ್ನಿಸಿ, ಅನುಮಾನ ಪರಿಹಾರ ಮಾಡಿಕೊಳ್ಳುತ್ತಿದ್ದಳಲ್ಲದೆ ತನಗೆ ಸರಿ ಎನಿಸಿದ್ದನ್ನು ಮಾತ್ರವೇ ಒಪ್ಪಿಕೊಳ್ಳುತ್ತಿದ್ದಳು.

ತನ್ನ ಕಣ್ಣ ಮುಂದಿನ ವೈಭವಕ್ಕೆ ಮುಗ್ಧ ಸಹಜ ಅಚ್ಚರಿಯಿಂದ ಬೆರಗಾಗುತ್ತಿದ್ದಳು. ಪ್ರತಿಯೊಂದು ವಸ್ತುವೂ ಬೆರಗನ್ನು ಹುಟ್ಟಿಸುತ್ತಿತ್ತು. ಪ್ರತಿಯೊಂದನ್ನೂ ತಿಳಿದುಕೊಳ್ಳುವ ಉತ್ಸಾಹ, ಕುತೂಹಲ, ಮುಸ್ಲಿಂ ಹೆಣ್ಣು ಮಕ್ಕಳಲ್ಲಿ ಸಾಮಾನ್ಯವಾಗಿ ಕಾಣದ ದಿಟ್ಟತನ,

ಸಾಂಪ್ರದಾಯಿಕ, ಮಡಿವಂತಿಕೆಯ ಅಲೋಚನೆಗಳನ್ನು ಪ್ರಶ್ನಿಸುವ ರೀತಿ, ಘಿಯಾಸ್‌ಗೆ ಮಗಳ ಬಗ್ಗೆ ಹೆಮ್ಮೆ ಎನಿಸುವಂತೆ ಕಾಣಿಸಿಕೊಂಡರೆ ಅಸ್ಮತ್‌ಗೆ ತಲೆನೋವಾಗುತ್ತಿತ್ತು. ಪ್ರತಿ ಹಂತದಲ್ಲಿಯೂ ಮಕ್ಕಳಿಗೆ ಶಿಸ್ತಿನ ಪಾಠ ಹೇಳಿಕೊಡುತ್ತಿದ್ದಳು. ಆದರೆ ಬೇರೆ ಮಕ್ಕಳು ವಿನಯ ವಿಧೇಯತೆಗಳಿಂದ ಒಪ್ಪಿಕೊಂಡರೂ ನೀಸಾ (ಮೆಹರುನ್ನೀಸಾ) ಸಾಮಾನ್ಯವಾಗಿ ಒಪ್ಪಿಕೊಳ್ಳುತ್ತಿರಲಿಲ್ಲ. ತನಗೆ ಸರಿ ಎನಿಸಿದರೆ ಮಾತ್ರ ಅಸ್ಮತ್ ಹೇಳಿದ್ದನ್ನು ಕೇಳಿಸಿಕೊಳ್ಳುತ್ತಿದ್ದಳು. ಅನ್ಯಥಾ ಸುತರಾಂ ಅವಳನ್ನು ಒಪ್ಪಿಸುವುದು ಸಾಧ್ಯವಿರಲಿಲ್ಲ.

ಅವಳ ಬಾಲ್ಯದ ಮುಗ್ಧ ನೋಟಕ್ಕೆ ಎಲ್ಲವೂ ಬೆರಗನ್ನು ಹುಟ್ಟಿಸುತ್ತಿದ್ದವು. ಬಾದಶಾಹರ ಅರಮನೆ ವೈಭವ. ಅರಮನೆ ಒಳಗಿನ ಹೆಂಗಸರು, ಅವರ ಕೆಲಸ ಕಾರ್ಯಗಳು ಊಟೋಪಚಾರಗಳು, ದಿನಗಳನ್ನು ಹೇಗೆ ಕಳೆಯುತ್ತಾರೆ, ಯಾರ್‍ಯಾರು ಇರುತ್ತಾರೆ, ಹೀಗೆ ಏನೆಲ್ಲಾ ಅನುಮಾನಗಳು ಅವಳನ್ನು ಕಾಡುತ್ತಿದ್ದವು. ಅವುಗಳನ್ನು ಪರಿಹರಿಸಿಕೊಳ್ಳಬೇಕೆಂಬ ಕುತೂಹಲ ಅವಳ ನೆಮ್ಮದಿಯನ್ನು ಕೆಡಿಸಿತ್ತು. ಅರಮನೆ ಪ್ರವೇಶ ಹೇಗೆ ಸಾಧ್ಯ, ಯಾರನ್ನು ಕೇಳಬೇಕೆಂದು ಚಿಂತಿಸುತ್ತಿದ್ದಳು. ಯಾವುದಾದರೂ ಒಳ್ಳೇ ಅವಕಾಶ ಸಿಕ್ಕರೆ ಖುದ್ದಾಗಿ ತಾನೇ ಎಲ್ಲವನ್ನೂ ಅನ್ವೇಷಿಸಬಹುದೆಂದುಕೊಂಡು, ಅವಕಾಶದ ನಿರೀಕ್ಷೆಯಲ್ಲಿ ಮೌನ ತಳೆದಳು.

ಒಂದು ದಿನ ಅಸ್ಮತ್ ಎಲ್ಲರಿಗೂ ಊಟ ಬಡಿಸುತ್ತಿದ್ದಳು. ಘಿಯಾಸ್ ಮತ್ತು ಮಕ್ಕಳು ಎಲ್ಲರೂ ಒಟ್ಟಿಗೆ ಕುಳಿತಿದ್ದರು. ನೀಸಾ, ತಂದೆಯನ್ನೇ ಗಮನಿಸುತ್ತಿದ್ದಳು. ಘಿಯಾಸ್‌ನ ಮುಖದಲ್ಲಿ ಸಂತೋಷ ಚಿಮ್ಮುತ್ತಿತ್ತು. ಅಸ್ಮತ್‌ಗೆ ಗಂಡ ಯಾವುದೋ ಖುಷಿಯಲ್ಲಿ ಇದ್ದಾನೆ ಎನಿಸಿ,

"ಘಿಯಾಸ್ ದರಬಾರಿನಲ್ಲಿ ಇವತ್ತೇನಾದರೂ ವಿಶೇಷವಿತ್ತಾ?" ಎಂದು ಕೇಳಿದಳು.

ಘಿಯಾಸ್, ಅವಳತ್ತ ಮುಖ ಮಾಡಿ "ಅಸ್ಮತ್ ನಾನು ಹೇಳುವ ವಿಷಯ ಕೇಳಿದರೆ ನೀನು ಕುಣಿದು ಕುಪ್ಪಳಿಸುತ್ತೀಯ!"

"ಮೊದಲು ಹೇಳಿ ನಂತರ ನಾನು ಏನು ಮಾಡುತ್ತೀನಿ ಅನ್ನುವುದು ನಿಮಗೇ ತಿಳಿಯುತ್ತೆ."

"ಅಸ್ಮತ್, ಶಹಜಾದಾ ಸಲೀಂರ ವಿವಾಹಕ್ಕೆ ಬರಲು ಅಕ್ಬರ್ ಬಾದಶಾಹರಿಂದ ವಿಶೇಷ ಆಹ್ವಾನ ಬಂದಿದೆ. ಇದು ನಿಜವಾಗಿಯೂ ಬಹಳ ಗೌರವದ ಸಂಗತಿ."

"ಏನು ಮದುವೆಗೆ ಆಹ್ವಾನವೇ?" ಅಚ್ಚರಿಯಿಂದ ಕೇಳಿದಳು.

ಅವಕಾಶಕ್ಕಾಗಿ ಎದುರು ನೋಡುತ್ತಿದ್ದ ನೀಸಾ ಥಟ್ಟನೆ

"ಅಬ್ಬೂ, ಹಾಗಾದರೆ ನಾವೆಲ್ಲರೂ ಹೋಗಬೇಕಲ್ಲವೇ?"

"ನೀಸಾ ಮೊದಲು ಊಟ ಮಾಡು. ಇಷ್ಟೊಂದು ಆತುರ ಬೇಡ. ಯಾರು ಹೋಗಬೇಕು ಅನ್ನುವುದನ್ನು ನಿನ್ನ ಅಬ್ಬು ತೀರ್ಮಾನಿಸುತ್ತಾರೆ."

"ಅಮ್ಮೀ, ನಾನಂತೂ ಖಂಡಿತ ಬರುತ್ತೇನೆ. ಶಹಜಾದೆಯನ್ನೂ ನಾನು ನೋಡಲೇ ಬೇಕು. ಅವರ ಬೇಗಂಳನ್ನೂ ನೋಡಬೇಕು. ಅವರು ತುಂಬಾ ಚೆನ್ನಾಗಿರುತ್ತಾರೆ. ಸುಂದರವಾಗಿರುತ್ತಾರೆ ಎಂದೆಲ್ಲ ಕೇಳಿದ್ದೇನೆ. ಅಬ್ಬೂ ನೀವು ಹೇಳಿ ನನ್ನನ್ನು ಜೊತೆಗೇ ಕರೆದುಕೊಂಡು ಹೋಗುತ್ತೀರಿ ತಾನೇ?"

"ಬೇಟಾ ಮೊದಲು ಊಟ ಮಾಡು. ಇನ್ನೂ ಒಂದೆರಡು ದಿನ ಇದೆ ಮದುವೆಗೆ. ನಾವೂ ಕೂಡ ಎಲ್ಲ ಸಿದ್ಧತೆ ಮಾಡಿಕೊಳ್ಳಬೇಕಲ್ಲವೇ? ನೀನು ತುಂಟತನ ಮಾಡದೆ ಜಾಣೆಯಂತೆ ನಡೆದುಕೊಂಡರೆ, ನಿನ್ನ ಪರವಾಗಿ ಅಮ್ಮಿಗೆ ಹೇಳುತ್ತೇನೆ."

ಅಪ್ಪನ ಮಾತು ಅವಳಲ್ಲಿ ಭರವಸೆ ಮೂಡಿಸಿತು. ಸುಮ್ಮನಾದಳು. ಅವಳಿಗೆ ಬಹಳ ಹೊತ್ತು ಸುಮ್ಮನಿರುವುದು ಸಾಧ್ಯವೇ ಆಗುತ್ತಿರಲಿಲ್ಲ.

"ಅಬ್ಬೂ, ನಿಮ್ಮನ್ನೊಂದು ಪ್ರಶ್ನೆ ಕೇಳಲೇ?" ಎಂದಳು.

ಹೂಂ! ಅದೇನು ಕೇಳಬೇಕೋ ಬೇಗ ಕೇಳಿಬಿಡು. ಅಮ್ಮೀ ಬೈಯುತ್ತಾಳೆ."

"ಅಬ್ಬೂ, ಷರೀಫು (ಮಹಮ್ಮದ್ ಷರೀಫ್) ಹಸನ್ (ಅಬುಲ್ ಹಸನ್) ಇವರಿಬ್ಬರೂ ಯಾವಾಗಲೂ ನನ್ನನ್ನು ಛೇಡಿಸುತ್ತಲೇ ಇರುತ್ತಾರೆ. ಅವರ ಜೊತೆ ಆಟಕ್ಕೆ ನನ್ನನ್ನು ಸೇರಿಸಿಕೊಳ್ಳುವುದೇ ಇಲ್ಲ. ಯಾವಾಗಲೂ ನೀನು ಲಡಕಿ, ಜನಾನಿ ನಾವು ಮರ್ದಾನಿ. ನಮ್ಮ ಜೊತೆ ಆಟಕ್ಕೆ ಬರಬಾರದು. ಮನೇಲಿ ಅಮ್ಮೂಗೆ ಅಡಿಗೆ ಮಾಡೋದರಲ್ಲಿ ಸಹಾಯ ಮಾಡು ಅಂತಾರೆ. ಎಷ್ಟೇ ಕೇಳಿಕೊಂಡರೂ ಆಟಕ್ಕೆ ಸೇರಿಸಿಕೊಳ್ಳೋದಿಲ್ಲ. ಅಬ್ಬೂ, ಹೇಳಿ ಅಬ್ಬೂ ನಾವ್ಯಾಕೆ ಅವರ ಜೊತೆ ಆಡಬಾರದು?"

ಅವಳ ಈ ಪ್ರಶ್ನೆಗೆ ಘಿಯಾಸ್ ಉತ್ತರ ಹೇಳಲಿಲ್ಲ. ಸುಮ್ಮನೆ ನಕ್ಕ. ಗಂಡನ ಪ್ರತಿಕ್ರಿಯೆ ಅಸ್ಮತ್‌ಗೆ ಸಿಟ್ಟು ಬರಿಸಿತು.

"ಅಲ್ಲ ಘಿಯಾಸ್ ಅವಳ ಪ್ರಶ್ನೆಗೆ ಸರಿಯಾದ ಉತ್ತರ ಹೇಳಿ. ಹೆಣ್ಣು ಮಕ್ಕಳು ಹೇಗೆ ನಡೆದುಕೊಳ್ಳಬೇಕೂಂತ ಬುದ್ಧಿ ಹೇಳೋದು ಬಿಟ್ಟು, ಉತ್ತೇಜನ ಕೊಡೋ ಹಾಗೆ ನಡೆದುಕೊಳ್ಳುತ್ತಿದ್ದೀರಿ. ಅವಳ ಮಾತು, ಒಂದು ಸಣ್ಣನಗೆ ಸಾಕು. ಕರಗಿ ಹೋಗುತ್ತೀರಿ. ದಿನಾ ಏನಾದರೂ ಒಂದು ಮಾತು ಇದ್ದೇ ಇರುತ್ತದೆ. ಮಾಡಬೇಡ ಅಂದದ್ದನ್ನು ಮಾಡುತ್ತಾಳೆ. ಮರ ಹತ್ತೋದು, ಮರಕೋತಿ ಆಟ ಆಡೋದು, ಚಿಲ್ಲಿ, ದಾಂಡು ಆಡೋದು, ಬಿಲ್ಲು ಬಾಣ ಹಿಡಿಯೋದು, ಎತ್ತರದಿಂದ ಜಿಗಿಯುವುದು, ಕುದುರೆ ಮರಿ ಬೆನ್ನು ಹತ್ತಿ ಓಡಿಸೋದು. ಏನಿದೆಲ್ಲ? ಇವೆಲ್ಲ ಹೆಣ್ಣು ಮಕ್ಕಳು ಆಡುವ ಆಟಗಳೇನು? ಮನೆ ಒಳಗೆ ಕಟ್ಟಿ ಹಾಕಿದರೂ ಹೇಗೋ ತಪ್ಪಿಸಿಕೊಂಡು ಬಿಡುತ್ತಾಳೆ. ಅವಳು ಹೆಣ್ಣಾಗಿ ಹುಟ್ಟೋದಕ್ಕಿಂತ ಗಂಡು ಮಗುವಾಗಿದ್ದರೆ ಚೆನ್ನಾಗಿತ್ತು. ನೀವಂತೂ ಅವಳನ್ನು ತಲೆ ಮೇಲೆ ಕೂಡಿಸಿಕೊಂಡಿದ್ದೀರಿ. ಸ್ವಲ್ಪವಾದರೂ ಬುದ್ಧಿ ಹೇಳಬಾರದೇನು?" ಎಂದು ನಿಲ್ಲದ ಜಲಪಾತದಂತೆ ಮಾತುಗಳು ಧುಮ್ಮಿಕ್ಕಿದವು.

"ಅಸ್ಮತ್ ಸಿಟ್ಟಾಗುವುದರಿಂದ ಪ್ರಯೋಜನವಿಲ್ಲ. ಮೃದುವಾಗಿ ಅವಳಿಗೆ ಅವಳ ಅಕ್ಕಂದಿರ ಹಾಗೆ ಹೆಣ್ಣು ಮಕ್ಕಳ ಜೊತೆ ಆಡುವುದಕ್ಕೆ ಹೇಳು. ಗಂಡು ಮಕ್ಕಳು ಸುಮ್ಮನೆ ಇರೋದಿಲ್ಲ. ಹೆಣ್ಣು ಮಕ್ಕಳನ್ನು ಕಂಡರೆ ಛೇಡಿಸುವ ಪ್ರವೃತ್ತಿ ಅವರಿಗೆ ಸ್ವಭಾವದಿಂದ ಬಂದಿರೋದು."

"ಸರಿ ಆಯ್ತು ಬಿಡಿ. ನಿಮ್ಮ ರಾಜಕೀಯ ಕೆಲಸಗಳಲ್ಲಿ ಇದನ್ನೆಲ್ಲಾ ಗಮನಿಸೋದಕ್ಕೆ ಸಮಯ ಎಲ್ಲಿರುತ್ತೆ. ಬೇಗ ಊಟ ಮುಗಿಸಿ ಎದ್ದು ಹೋಗಿ. ನನಗಿನ್ನೂ ಮಾಡಬೇಕಾದ ಕೆಲಸ ಬೇಕಾದಷ್ಟಿದೆ." ಎಂದು ಹೇಳುತ್ತಾ ಅಡುಗೆ ಮನೆ ಕಡೆ ಹೆಜ್ಜೆ ಹಾಕಿದಳು.

ಘಿಯಾಸ್ ಏನನ್ನೋ ಬರೆಯುತ್ತಿದ್ದವನು, ಊಟಕ್ಕೆಂದು ಎದ್ದು ಬಂದಿದ್ದವನು

ಬರೆಯುವುದನ್ನು ಮುಂದುವರೆಸಲು ಬಂದು ಕುಳಿತ. ಅವನು ಬರೆದ ಅಕ್ಷರಗಳ ಕೆಳಗೆ ನಕಲು ಮಾಡಿದ ಅಕ್ಷರಗಳು ಕಾಣಿಸಿದವು. ಸಿಟ್ಟಿನಿಂದ ಕಿರುಚಿದ. "ಯಾರದು, ನನ್ನ ಅಕ್ಷರಗಳ ಜೊತೆ ಹುಡುಗಾಟ ಮಾಡಿದ್ದು" ಎಂದು ಅಬ್ಬರಿಸಿ, ಅಲ್ಲಿಯೇ ಕುಳಿತಿದ್ದ ಸಲೀಹ, ಷರೀಫು, ಅಸಫ್‌ರ ಕಡೆ ನೋಡಿ 'ನೀವೇನಾ ಮಾಡಿದ್ದು?' ಎಂದು ಪ್ರಶ್ನಿಸುವಂತೆ ನೋಡಿದ. ಪಾಪದ ಮಕ್ಕಳು ಹೆದರಿಕೆಯಿಂದ ನಾವಲ್ಲ ಎಂದು ತಲೆಯಾಡಿಸಿದರು.

"ನೋಡು ಅಸ್ಮತ್, ಇದರಿಂದ ನಾನೇನೂ ನಿಜವಾಗಿ ಸಿಟ್ಟಾಗಿಲ್ಲ. ಆದರೆ ನನಗೆ ಆಶ್ಚರ್ಯ ದಿಗ್ಭ್ರಮೆಯಾಗ್ತಿದೆ. ಯಾರಿರಬಹುದು ಎಂದು ಯೋಚನೆ ಮಾಡ್ತಿದ್ದೇನೆ."

"ನಾನಂತೂ ಅಲ್ಲವೇ ಅಲ್ಲ. ನನ್ನ ಮನೆ ಕೆಲಸಾನೇ ನನಗೆ ಸಾಕು ಸಾಕೆನಿಸುತ್ತೆ. ಇನ್ನು ಇದು ಬೇರೆ ಮಾಡೋಕೆ ಪುರಸೊತ್ತೆಲ್ಲಿ? ನಾನೇನೂ ಮಾಡಲಿಲ್ಲ" ಎಂದು ಮುಗುಳು ನಗುತ್ತಾ ಹೇಳಿದಳು. ಅವಳಿಗೆ ಒಳಗೊಳಗೇ ಇದೆಲ್ಲಾ 'ನೀಸಾಳದೇ ಕೆಲಸ ಇರಬೇಕು' ಎನ್ನುವ ಅನುಮಾನ ಬಂದಿತ್ತು. ಆದರೆ ಬಾಯಿಬಿಟ್ಟು ಹೇಳಲಿಲ್ಲ.

ಅಷ್ಟರಲ್ಲಿ ಸಣ್ಣ ಧ್ವನಿಯಲ್ಲಿ "ಮಾಫ್ ಮಾಡಿ ಅಬ್ಬೂಜಾನ್, ನಾನೇ ನೀವು ಬರೆದ ಹಾಗೆ, ನನಗೂ ಬರೆಯಲು ಬರುವುದೇನೋ ಎಂದು ಪರೀಕ್ಷಿಸುತ್ತಿದ್ದೆ, ಪ್ರಯತ್ನಿಸುತ್ತಿದ್ದೆ. ನಿಮ್ಮ ಕಾಗದ ಹಾಳು ಮಾಡಿದೆ. ತಪ್ಪಾಯಿತು. ಏನು ಶಿಕ್ಷೆಯನ್ನು ಬೇಕಾದರೂ ಕೊಡಿ" ಎಂದು ಮುಖ ಚಿಕ್ಕದು ಮಾಡಿಕೊಂಡು ಹೇಳಿದಳು.

ಘಿಯಾಸ್ ತನಗಾದ ಸಂತೋಷವನ್ನು ಹತ್ತಿಕ್ಕಿಕೊಳ್ಳದೆ ನೀಸಾಳನ್ನು ಬರಸೆಳೆದು ಬಿಗಿದಪ್ಪಿಕೊಂಡ. "ನನಗೆ ಸಿಟ್ಟಿಲ್ಲ ಬೇಟಾ. ತುಂಬಾ ಗರ್ವ ಎನಿಸುತ್ತೆ. ಪರ್ಷಿಯನ್ ಲಿಪಿಯನ್ನು ಅಷ್ಟು ಸುಲಭವಾಗಿ ಕಲಿಯುವುದು ಸಾಧ್ಯವಿಲ್ಲ. ದೊಡ್ಡದೊಡ್ಡವರೇ ಕಲಿಯಲು ಬಹಳ ಸಮಯ ತಗೋತಾರೆ. ಅಂಥಾದ್ದರಲ್ಲಿ ಮೊದಲ ಪ್ರಯತ್ನದಲ್ಲಿಯೇ ಇಷ್ಟು ಸುಂದರವಾಗಿ ನಕಲು ಮಾಡಿದ್ದೀ! ನಿನಗೆ ಪರ್ಷಿಯನ್ ಲಿಪಿ ಕಲಿಯಬೇಕೆಂದಿದ್ದರೆ, ಕಲಿಸುತ್ತೇನೆ. ಆಗ ಸ್ವತಃ ನೀನೇ ಪರ್ಷಿಯನ್ ಸಾಹಿತ್ಯವನ್ನು ಓದಿಕೊಳ್ಳಬಹುದು."

"ಅಬ್ಬೂ ಹಾಗಾದರೆ ಯಾವಾಗಿನಿಂದ ಕಲಿಸುತ್ತೀರಿ ಹೇಳಿ ಅಬ್ಬೂ" ಎಂದು ಘಿಯಾಸ್‌ನ ಕಾಬಾ (ಉದ್ದನೆಯ ಕೋಟು)ವನ್ನು ಹಿಡಿದೆಳೆದಳು. ಅವಳ ಮೊಗದಲ್ಲಿ ಎಲ್ಲಿಲ್ಲದ ಸಂತೋಷ ಉಕ್ಕಿ ಬಂತು.

ಮಾರನೇ ದಿನದಿಂದಲೇ ಘಿಯಾಸ್ ತನ್ನ ಗಂಡು ಮಕ್ಕಳ ಜೊತೆಯಲ್ಲಿಯೇ ನೀಸಾಗೂ ಎಲ್ಲ ಭಾಷೆಗಳನ್ನೂ ವಿಷಯಗಳನ್ನೂ ಬೋಧಿಸುವಂತೆ ಆದೇಶಿಸಿದ.

ನೀಸಾಳ ಕಲಿಕೆ, ದಿನದಿನಕ್ಕೆ ಘಿಯಾಸ್ ದಂಪತಿಗೆ, ಅಕ್ಕಪಕ್ಕದ ಜನರಿಗೆ ದಿಗ್ಭ್ರಮೆ ಹುಟ್ಟಿಸುತ್ತಿತ್ತು. ಹಾಗೆಯೇ ಅವಳ ಧೈರ್ಯವೂ ಕಡಿಮೆಯಿರಲಿಲ್ಲ. ಘಿಯಾಸ್ ಬೇಗ್ ಮನೆಗೆ ಹೋಗುವ ದಾರಿಯಲ್ಲಿ ದೊಡ್ಡ ದೊಡ್ಡ ಆಲದ ಮರಗಳು ಬೆಳೆದಿದ್ದವು. ಮಕ್ಕಳಿಗೆ ಹಬ್ಬವೋ ಹಬ್ಬ. ಅವುಗಳಿಗೆ ಉಯ್ಯಾಲೆಗಳನ್ನು ಕಟ್ಟಿ, ಇಲ್ಲವೇ ಇಳಿಬಿದ್ದ ಬೇರುಗಳನ್ನೇ ಹಿಡಿದುಕೊಂಡು ಒಬ್ಬರನ್ನು ಮೀರಿಸುವಂತೆ ಒಬ್ಬರು ಪಂದ್ಯ ಕಟ್ಟಿ ತೂಗುತ್ತಿದ್ದರು. ನೀಸಾ ಯಾರು ಎಷ್ಟೇ ಪ್ರಯತ್ನ ಪಟ್ಟರೂ ತನ್ನ ಗೆಲುವನ್ನು ಬಿಟ್ಟುಕೊಡುತ್ತಿರಲಿಲ್ಲ. ಮನೆಯ ನಿರ್ಬಂಧಗಳನ್ನು ಗಾಳಿಗೆ ತೂರಿಬಿಟ್ಟು ನೀಸಾ ಹಯಾ,

ಸಲೀಹಾ ಎಲ್ಲರೂ ಹೊರಗೆ ಬಂದು ಉಯ್ಯಾಲೆ ಆಡುತ್ತಿದ್ದರು. ಇದೇ ಸಮಯಕ್ಕಾಗಿ ಕಾಯುತ್ತಿದ್ದ ಅಬುಲ್‌ಹಸನ್ ಅಥವಾ ಷರೀಫ್ ಭಯದಿಂದ ತತ್ತರಿಸಿ ಕಿರುಚಿಕೊಳ್ಳುವಂತೆ ಜೋರಾಗಿ ಹುಡುಗಿಯರನ್ನು ತೂಗುತ್ತಿದ್ದರು. ಹುಡುಗರು ಅವರ ಹೇಡಿತನದ ಮಜಾ ಅನುಭವಿಸುತ್ತಿದ್ದರು. ಆದರೆ ನೀಸಾ ಅವರ ಹುಟ್ಟಡಗಿಸಲು ಮುಂದಾಗುತ್ತಿದ್ದಳು. ಅವಳ ಧೈರ್ಯ ಸಾಹಸಗಳಿಗೆ ಮೆಚ್ಚುಗೆಯಿದ್ದರೂ ಹೆಣ್ಣು ಮಕ್ಕಳಲ್ಲಿ ಇಂಥಾದ್ದನ್ನೆಲ್ಲಾ ನಿರೀಕ್ಷಿಸುತ್ತಿರಲಿಲ್ಲ. ಬಜಾರಿ, ಗಯ್ಯಾಳಿ, ಗಂಡುಗೂಳಿ ಇತ್ಯಾದಿ ವಿಶೇಷಗಳನ್ನು ಹಚ್ಚುತ್ತಿದ್ದರು.

ಒಂಬತ್ತು ವರ್ಷದ ನೀಸಾ ತನ್ನ ವಯಸ್ಸಿಗೆ ಮೀರಿದ ರೀತಿಯಲ್ಲಿ ಯೋಚಿಸುತ್ತಿದ್ದಳು. ತನ್ನ ಯೋಚನೆಗಳಿಗಿಂತ ಭಿನ್ನವಾದ ರೀತಿಯಲ್ಲಿ ಜರುಗುತ್ತಿದ್ದ ಸಂಗತಿಗಳ ಬಗ್ಗೆ ತುಂಬಾ ತಲೆ ಕೆಡಿಸಿಕೊಳ್ಳುತ್ತಿದ್ದಳು. ಅವಳ ಮನಸ್ಸಿನಲ್ಲಿ ಎಷ್ಟೆಲ್ಲಾ ಪ್ರಶ್ನೆಗಳು ಎದ್ದರೂ, ಸಮಾಧಾನ ನೀಡುವವರು ಇರಲಿಲ್ಲ.

ಇತ್ತೀಚೆಗೆ ಅವಳ ಗಮನಕ್ಕೆ ಬಂದಿದ್ದ ಎರಡು ಘಟನೆಗಳು ಅವಳಲ್ಲಿ ಹೆಣ್ಣು ಮಕ್ಕಳ ಬಗ್ಗೆ ಭಯ ಹುಟ್ಟಿಸಿದವು. ಅವರಿಗೆ ಪರಿಚಿತನಾಗಿದ್ದ ಶ್ರೀಮಂತ ವ್ಯಕ್ತಿ ಇಬ್ರಾಹಿಂಖಾನ್ ತನ್ನ ಹೆಂಡತಿಗೆ ವಿನಾಕಾರಣ ತಲಾಖ್ ಹೇಳಿಬಿಟ್ಟ. ಅವಳ ಬದುಕು ತೂಗುಯ್ಯಾಲೆಯಾಯಿತು. ಅಣ್ಣನ ಆಶ್ರಯದಲ್ಲಿ ಹಂಗಿನ ಬದುಕನ್ನು ಬದುಕಬೇಕಾಯಿತು. ಹಾಗೆಯೇ ತಂದೆಯ ಸಹೋದ್ಯೋಗಿಯಾಗಿದ್ದ ಹಿಂದೂ ವ್ಯಕ್ತಿಯೊಬ್ಬನ ಹೆಂಡತಿ ಕಲ್ಯಾಣಿ. ಗಂಡ ತೀರಿಕೊಂಡಾಗ, ಸತಿ ಹೋಗುತ್ತೇನೆಂದು ಹಠ ಹಿಡಿದಳು. ಆದರೆ ರಾಜಾದೇಶದಿಂದ, ಅದನ್ನು ತಡೆಯಲಾಯಿತು. ರಾಜ ಬೊಕ್ಕಸದಿಂದ ಅವಳ ಜೀವನೋಪಾಯಕ್ಕೆ ಒಂದಷ್ಟು ಭೂಮಿ ಮತ್ತು ಆರ್ಥಿಕ ಸಹಾಯವನ್ನು (ನಿಯಮಿತವಾಗಿ) ಮಂಜೂರು ಮಾಡಲಾಗಿತ್ತು.

ನೀಸಾಳ ತಲೆಯಲ್ಲಿ ಪುಂಖಾನುಪುಂಖ ಪ್ರಶ್ನೆಗಳಿದ್ದವು. ಹೆಂಗಸರಿಗೇ ಏಕೆ, ಕಟ್ಟು ಪಾಡುಗಳು? ಅಮ್ಮೀಜಾನ್‌ಳನ್ನು ಕೇಳಲೇಬೇಕು. ಅಮ್ಮಿಗೆ ಖಂಡಿತವಾಗಿಯೂ ತಿಳಿದಿರುತ್ತದೆ ಎಂದು ಯೋಚಿಸಿ, ಅಮ್ಮನ ಬಿಡುವಿನ ಸಮಯ ನೋಡಿಕೊಂಡು, ಅಲ್ಲಿಗೆ ಪ್ರವೇಶಿಸಿದಳು.

ಅಸ್ಮತ್ ಹೋಲಿಗೆ ಕೆಲಸದಲ್ಲಿ ತನ್ಮಯಳಾಗಿದ್ದಳು. ನೀಸಾ ಹಿಂದಿನಿಂದ ಬಂದು ಗಟ್ಟಿಯಾಗಿ ಅಪ್ಪಿಕೊಂಡಳು. ಅಸ್ಮತ್‌ಗೆ ಉಸಿರುಕಟ್ಟಿದ ಹಾಗಾಯಿತು.

"ನೀಸಾ, ನೀಸಾ ಬಿಡು ನನ್ನ. ಪ್ರಾಣ ಹೋಗುತ್ತಿದೆ. ನೀನು ಮುದ್ದು ಮಾಡುವುದು ಸಾಕು."

"ಅಮ್ಮೀ ನಾನು ಕೇಳುವ ಪ್ರಶ್ನೆಗಳಿಗೆ ನೀನು ಉತ್ತರ ಕೊಡಬೇಕು. ಇಲ್ಲದಿದ್ದರೆ ನಾನು ಇಲ್ಲಿಂದ ಹೋಗುವುದಿಲ್ಲ."

"ನೀಸಾ, ನೀಸಾ ಇತ್ತೀಚೆಗೆ ನಿನ್ನ ತುಂಟಾಟ, ಕಾಟ ಅತಿಯಾಯಿತು. ಎಲ್ಲ ಹೆಣ್ಣು ಮಕ್ಕಳ ಹಾಗೆ ಗಂಭೀರವಾಗಿ ಮನೆಯಲ್ಲಿದ್ದುಕೊಂಡು ನನ್ನ ಜೊತೆ ಕೆಲಸದಲ್ಲಿ ಸಹಾಯ ಮಾಡಬಾರದೇ?"

"ಅಮ್ಮೀಜಾನ್ ನೀನೂ ಕೂಡಾ ಹೆಣ್ಣು ಮಕ್ಕಳೆಂದರೆ ಯಾಕೆ ಹೀಗೆ ಮಾತಾಡ್ತೀ?

ಅಮ್ಮೀಜಾನ್, ಇಬ್ರಾಹಿಂ ಚಾಚಾ ಹೆಂಡತಿಯನ್ನು ತಲಾಖ್ ಕೊಟ್ಟು ದೂರ ಮಾಡಿದ. ಪಾಪ! ಫರೀದಾ ಚಾಚಿ ಅಣ್ಣ ಅತ್ತಿಗೆಯರ ಜೊತೆ ಅವರಿಂದ ಬೈಸಿಕೊಳ್ಳುತ್ತಾ ಅಳುತ್ತಾ ಬದುಕುತ್ತಿದ್ದಾಳೆ. ಅವಳಿಗೆ ಎಂಬ್ರಾಯಿಡರಿ ಹೊಲಿಗೆ ತುಂಬಾ ಚೆನ್ನಾಗಿ ಬರುತ್ತೆ. ಅದರಿಂದ ಸಂಪಾದನೆ ಮಾಡಿಕೊಂಡು ತಾನೇ ಬದುಕಬಹುದಲ್ಲ? ಹಾಗೇ ನಿನ್ನ ಸಹೇಲಿ ಕಲ್ಯಾಣಿ ಸಿಹಿ ತಿಂಡಿಗಳನ್ನು ಉಪ್ಪಿನಕಾಯಿಗಳನ್ನು ಚೆನ್ನಾಗಿ ತಯಾರಿಸುತ್ತಾಳೆ. ಅದನ್ನೇ ಮಾರಿಕೊಂಡು ಜೀವನ ನಡೆಸಬಹುದಲ್ಲ!"

"ನೀಸಾ, ಇದು ದೊಡ್ಡವರ ವಿಷಯ. ಅವೆಲ್ಲಾ ನಿನಗೆ ಅರ್ಥ ಆಗೋಲ್ಲ. ಸಮಾಜ, ಅಂತಸ್ತು, ಅನ್ನೋದು ಇರುತ್ತೆ. ಶ್ರೀಮಂತರ ಹೆಂಡತಿಯರು ಕೆಲಸ ಮಾಡುವುದಾಗಲೀ, ವ್ಯಾಪಾರ ಮಾಡುವುದಾಗಲೀ, ಮರ್ಯಾದೆ ಅಲ್ಲ. ಪ್ರತಿಯೊಂದು ವಿಷಯಕ್ಕೂ ಅದರದೇ ಆದ ಕಾರಣಗಳು ಇರುತ್ತವೆ. ಇದೆಲ್ಲಾ ಬಿಟ್ಟು, ಗಂಭೀರವಾಗಿ ಇರುವುದನ್ನು ಕಲಿ. ನಾಳೆ ನೀನು ದೊಡ್ಡವಳಾದ ಮೇಲೆ ಮದುವೆ ಆಗಿ ಬೇರೆ ಮನೆ ಸೇರಬೇಕಾದವಳು. ನನ್ನ ಹತ್ತಿರ ಕೇಳಿದ ಹಾಗೆ ಕಂಡಕಂಡವರ ಬಳಿ ಇಂಥಾ ಪ್ರಶ್ನೆಗಳನ್ನು ಹುಚ್ಚುಚ್ಚಾಗಿ ಕೇಳೋಕೆ ಹೋಗಬೇಡ. ಇದರಿಂದ ನಿನ್ನ ಮರ್ಯಾದೆ, ನನ್ನ ಮರ್ಯಾದೆ ಹೋಗುತ್ತೆ."

ಅಸ್ಮತ್ ಹೇಳಿದ್ದು ಅವಳ ತಲೆಗೆ ಎಷ್ಟು ಹೋಯಿತೋ ಗೊತ್ತಿಲ್ಲ. ಆದರೆ ನೀಸಾಳ ಪ್ರಶ್ನೆಗಳು ಅಸ್ಮತ್‌ಳನ್ನು ಚಿಂತೆಗೆ ಗುರಿಮಾಡಿದವು. ಈಗೇನೋ ಸಣ್ಣವಳು, ಬುದ್ಧಿ ಇಲ್ಲದವಳೆಂದು ಅವಳು ಹೇಳುವುದನ್ನು ನಿರ್ಲಕ್ಷಿಸಬಹುದು. ಆದರೆ ಮುಂದೆ ಮದುವೆಯಾಗಿ ಹೋದಾಗ ನೋಡು ನೋಡಿದ್ದನ್ನೆಲ್ಲಾ ಪ್ರಶ್ನಿಸೋದು, ಎದುರುತ್ತರಿಸುವುದು, ಒಪ್ಪದ್ದಕ್ಕೆ ಪ್ರತಿಭಟಿಸುವುದು, ಪ್ರತಿಯೊಂದರಲ್ಲಿಯೂ ಉದ್ಧಟತನ ತೋರುವುದು ಇವೆಲ್ಲ ಅವಳ ಭವಿಷ್ಯಕ್ಕೆ ತೊಂದರೆಯಾಗಬಹುದು ಎಂದು ಚಿಂತೆಗೆ ಈಡಾದಳು. ಆದರೆ ಅತಿಯಾದ ಬುದ್ಧಿವಂತಿಕೆ, ಸಾಹಸ, ಪ್ರತಿಯೊಂದನ್ನೂ ಕಲಿಯಬೇಕೆಂಬ ತಹತಹಿಕೆ ಎದೆಗಾರಿಕೆ, ಬಿಲ್ಲು ವಿದ್ಯಾ ಕುಶಲತೆಗಳು ನೆನಪಾದಾಗ ಚಿಂತೆಯೆಲ್ಲಾ ಮರೆಯಾಗಿ, ಹೆಮ್ಮೆಯಿಂದ ಎದೆ ಉಬ್ಬುತ್ತಿತ್ತು.

ನೀಸಾಳ ಬಗ್ಗೆ ಘಿಯಾಸ್ ಬೇಗ್‌ನ ವಿಚಾರಗಳೇ ಬೇರೆ. ಅವಳ ಸ್ವತಂತ್ರ ವಿಚಾರಗಳು, ಹೆಣ್ಣು ಗಂಡುಗಳ ನಡುವೆ ತಾರತಮ್ಯವೇಕೆಂಬ ಆಲೋಚನೆಗಳು, ಆ ವಯಸ್ಸಿನ ಬಹಳ ಮಹತ್ವದ ವಿಚಾರಗಳೆನಿಸಿದ್ದವು. ಬಿಲ್ಲು ವಿದ್ಯೆ ಅಭ್ಯಾಸ ಮಾಡುವಾಗ ಅವಳ ಗುರಿಗಾರಿಕೆ ಕಂಡು ದಿಗ್ಭ್ರಾಂತನಾದದ್ದೂ ಉಂಟು. ಅವನ ಮನಸ್ಸಿನಾಳದಲ್ಲಿ ತನ್ನ ಮಗಳು ಎಲ್ಲ ಹೆಣ್ಣು ಮಕ್ಕಳಂತಲ್ಲ. ಬಹಳ ದೊಡ್ಡ ಉದ್ದೇಶ ಸಾಧನೆಗಾಗಿಯೇ ಹುಟ್ಟಿದ್ದಾಳೆ ಎನ್ನುವ ಭಾವನೆ ಬೇರೂರುತ್ತಿತ್ತು. ಆದ್ದರಿಂದಲೇ ನೀಸಾಗೆ ಅಬ್ಬಾಜಾನ್ ಎಂದರೆ ಪ್ರಾಣ. ತನ್ನ ಕೆಲಸಗಳಿಗೆ ಅಬ್ಬುವಿನಿಂದ ಶಹಬಾಷ್‌ಗಿರಿ ತಪ್ಪದೆ ಸಿಗುವುದೆಂಬ ಭರವಸೆಯೇ ತನ್ನನ್ನು ತನ್ನಂತೆ ಮುಂದುವರಿಸಿಕೊಳ್ಳಲು ಪ್ರಚೋದನೆ ದೊರೆಯುತ್ತಿತ್ತು.

ಅಸ್ಮತ್ ಸಾಧ್ಯವಾದಷ್ಟು ನೀಸಾಳನ್ನು ಹದ್ದುಬಸ್ತಿನಲ್ಲಿ ಇಡಲು ಪ್ರಯತ್ನಿಸುತ್ತಿದ್ದಳು. ತೀರಾ ತೀರಾ ಸ್ವಾತಂತ್ರ್ಯ ಕೊಡುವುದಕ್ಕೆ ಅವಳ ಮನಸ್ಸು ಒಪ್ಪುತ್ತಿರಲಿಲ್ಲ. ಗಂಡನನ್ನು ಕೂಡಾ, ಅವಳಿಗೆ ಹೆಚ್ಚು ಸಲಿಗೆ ಕೊಡಬೇಡವೆಂದು ನಿಯಂತ್ರಿಸುತ್ತಿದ್ದಳು.

ಸಲೀಂನ ಮದುವೆಯ ದಿನ ಬಂದೇ ಬಿಟ್ಟಿತ್ತು. ಎಲ್ಲರೂ ಮದುವೆ ಸಮಾರಂಭಕ್ಕೆ

ಹೋಗಲು ಸಿದ್ಧರಾಗುತ್ತಿದ್ದರು. ನೀಸಾಗಂತೂ ಎಲ್ಲಿಲ್ಲದ ಸಂಭ್ರಮ. ಅರಮನೆಯ ಅಲಂಕಾರ ಹೇಗೆ? ಮದುಮಕ್ಕಳು ಹೇಗಿರಬಹುದು? ಮದುವೆ ಹೆಣ್ಣು ತನಗಿಂತ ಸುಂದರಿಯಾಗಿರಬಹುದೇ? ಎಂಥ ಒಡವೆ ಹಾಕಿಕೊಂಡಿರಬಹುದು? ಹೀಗೇ ಪ್ರಶ್ನೆಗಳನ್ನು ಕೇಳಿಕೊಳ್ಳುತ್ತಲೇ ಹೊಸ ಘಾಗರಾವನ್ನು ಮೈಮೇಲೆ ಇರಿಸಿಕೊಂಡು ಅತ್ತ ಇತ್ತ ತಿರುಗುತ್ತ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಳ್ಳುತ್ತಾ ಸಂಭ್ರಮಿಸುತ್ತಿದ್ದಳು.

ಅಸ್ಮತ್ ಥಟ್ಟನೆ ಪ್ರವೇಶಿಸಿ "ನೀಸಾ ಏನು ಮಾಡುತ್ತಿದ್ದೀ" ಎಂದು ಕೇಳಿದ್ದೇ ತನ್ನ ಕೈಲಿದ್ದ ಘಾಗರಾ ತೋರಿಸಿ "ಅಮ್ಮೀ ಜಾನ್ ಇದು ನನಗೆ ಚೆನ್ನಾಗಿ ಒಪ್ಪುತ್ತೆ ಅಲ್ವಾ?"

"ಈಗ ನೀನೆಲ್ಲಿಗೆ ಹೋಗಬೇಕೂಂತಿದ್ದೀಯ?"

"ಅಮ್ಮೀ ಜಾನ್ ಶಹಜಾದೆ ಮದುವೆಗೆ ಹೋಗಬೇಕಲ್ಲ!"

"ಹೋಗಬೇಕು ಸರಿ. ಆದರೆ ನಾವು ಮಾತ್ರ" ಎಂದಾಗ ನೀಸಾಳಿಗೆ ಸಿಟ್ಟು ತಡೆದುಕೊಳ್ಳಲು ಸಾಧ್ಯವಾಗಲಿಲ್ಲ.

"ನಾನ್ಯಾಕೆ ಬರಬಾರದು?"

"ನಿನ್ನನ್ನು ಕರೆದುಕೊಂಡು ಹೋದರೆ ನಿನ್ನ ಮಂಗ ಚೇಷ್ಟೆಗಳಿಂದ ನಾವು ಮರ್ಯಾದೆ ಕಳೆದುಕೊಳ್ಳಬೇಕಾಗುತ್ತೆ. ನಿಂತ ಕಡೆ ನಿಲ್ಲೊಲ್ಲ. ಗುಂಪಿನಲ್ಲಿ ಎಲ್ಲೆಂದರೆ ಅಲ್ಲಿ ಜಾರಿಕೊಂಡು ಬಿಡುತ್ತಿ."

"ಇಲ್ಲ ಅಮ್ಮಿ. ನೀನು ಹೇಳಿದಂತೆ ಕೇಳುತ್ತೇನೆ. ನಿನ್ನನ್ನು ಬಿಟ್ಟು ಎಲ್ಲಿಗೂ ಹೋಗೊಲ್ಲ" ಎಂದು ಹೇಳುತ್ತಿರುವಾಗಲೇ ಘಿಯಾಸ್ ಬೇಗ್ ಪ್ರವೇಶಿಸಿದ.

"ಇನ್ನೂ ನೀವು ಹೊರಟಿಲ್ಲವೇ?"

"ಇದೋ ಇನ್ನೇನು ಹೊರಡುವುದರಲ್ಲಿದ್ದೇವೆ."

"ಅಬ್ಬೂ ನಾನೂ ಮದುವೆಗೆ ಹೋಗಬೇಕು. ಅಮ್ಮೀಜಾನ್ ನನ್ನನ್ನು ಬೇಡವೆನ್ನುತ್ತಿದ್ದಾರೆ" ಎಂದು ಮುಖ ಸಣ್ಣದು ಮಾಡಿಕೊಂಡು ಹೇಳಿದಳು.

ಬೇಗ್ ಅಸ್ಮತ್‌ಳ ಕಡೆ ಪ್ರಶ್ನಾರ್ಥಕವಾಗಿ ನೋಡಿದ. ನೀಸಾಳ ಕಡೆಯೂ ನೋಡಿದ. ಇಬ್ಬರನ್ನೂ ಅರ್ಥಮಾಡಿಕೊಂಡ. "ಅಸ್ಮತ್, ಹೋಗಲಿ ಕರೆದುಕೊಂಡು ಹೋಗು."

"ಅರಮನೆ ಮದುವೆ ನೋಡುವ ಆಸೆ. ಮಗುವಲ್ಲವೇ!"

"ಸರಿ, ಸರಿ ನೀವು ಅವಳನ್ನು ತಲೆ ಮೇಲೆ ಕೂರಿಸಿಕೊಳ್ಳುತ್ತಿದ್ದೀರಿ. ಅವಳು ಹೇಳಿದ್ದಕ್ಕೆಲ್ಲಾ ತಲೆಯಾಡಿಸುವುದು ಮಾತ್ರವೇ ನಿಮಗೆ ತಿಳಿದಿದೆ. ಇನ್ನೇನು ನೀವು ಆದೇಶ ಕೊಟ್ಟ ಮೇಲೆ ಮುಗಿಯಿತಲ್ಲ! ನೀವು ಹುಡುಗರನ್ನು ಕರೆದುಕೊಂಡು ಹೋಗಿ, ನಾನು ಸಲೀಹಾ, ನೀಸಾ ಹಯಾರನ್ನು ಕರೆದೊಯ್ಯುತ್ತೇನೆ" ಎಂದಳು.

ನೀಸಾ ಹಗುರಾದಳು. ಚೆನ್ನಾಗಿ ತನ್ನನ್ನು ಅಲಂಕರಿಸಿಕೊಂಡಳು. ಹೊರಡುವ ಮೊದಲು ಮತ್ತೊಮ್ಮೆ ಕನ್ನಡಿಯಲ್ಲಿ ಮುಖ ನೋಡಿಕೊಂಡಳು. ಗರ್ವದ ನಗೆ ನಕ್ಕಳು.

ವಿಪರೀತವಾದ ಜನಸಂದಣಿ, ಮದುವೆ ವೀಕ್ಷಿಸಲು ಹೆಂಗಸರಿಗೆ ಮತ್ತು ಗಂಡಸರಿಗೆ ಪ್ರತ್ಯೇಕವಾದ ವ್ಯವಸ್ಥೆ. ನೀಸಾ ಹೆಂಗಸರಿದ್ದ ಕಡೆಯಿಂದ ಮದುವೆ ವೀಕ್ಷಿಸಬೇಕಿತ್ತು. ಆದರೆ ನೋಡುವುದಕ್ಕೆ ಆಗದೆ ಜನಾನಾದ ಹೆಂಗಸರ ಬೆನ್ನು ಮಾತ್ರವೇ ಕಾಣುತ್ತಿತ್ತು.

ಆ ಹೆಂಗಸರು ಮದುವೆ ವೀಕ್ಷಿಸುತ್ತಾ ಸಂಭ್ರಮದ ಉದ್ಗಾರಗಳನ್ನು ಹೊಮ್ಮಿಸುತ್ತಿದ್ದುದನ್ನು ಕೇಳಿದಾಗಂತೂ ಸಿಟ್ಟು ಹತಾಶೆಗಳು ಅವಳನ್ನು ಮತ್ತಷ್ಟು ಬೇಸರಕ್ಕೆ ದೂಡಿತು. ಆದರೆ ಅಷ್ಟು ಬೇಗ ಅವಳು ಸೋಲನ್ನು ಒಪ್ಪಿಕೊಳ್ಳುವವಳಲ್ಲ. ಅಸ್ಮತ್ ಮತ್ತು ಸಲೀಹಾ ಜೊತೆಗೆ ಇದ್ದರು. ಆದರೂ ಅವಳ ಕಡೆ ಗಮನವೇ ಇರಲಿಲ್ಲ. ತಾನೇ ಹೆಂಗಸರ ಗುಂಪನ್ನು ಸೀಳಿಕೊಂಡು ಮುಂದೆ ಮುಂದೆ ಹೋಗಲು ಪ್ರಯತ್ನಿಸಿದಳು. "ಈ ಗಂಡಸರು ಮಾತ್ರ ಸಭಾ ಮಂಟಪದಲ್ಲಿ ಹೆಣ್ಣು ಗಂಡುಗಳಿಗೆ ತೀರಾ ಹತ್ತಿರದಲ್ಲಿದ್ದು ನೋಡಬಹುದು. ನಾವು ಹೆಂಗಸರಾಗಿದ್ದಕ್ಕೆ ಪರದೆ ಒಳಗಿಂದ ನೋಡಬೇಕು. ಏನು ಕಾಣುತ್ತೆ ಮಣ್ಣು!" ಎಂದು ಸಿಟ್ಟಿನಿಂದ ಅವಡುಗಚ್ಚಿಕೊಂಡಳು.

ಹೇಗಾದರೂ ಬೇರೆ ದಾರಿಗಳನ್ನು ಹುಡುಕಿಕೊಳ್ಳಬೇಕೆಂದು ಮೆಲ್ಲನೆ ಅಲ್ಲಿಂದ ಜಾರಿ, ಎತ್ತೆತ್ತಲೋ ದಾರಿ ಹುಡುಕಲು ಪ್ರಯತ್ನಿಸುತ್ತಿರುವಾಗಲೇ ದಾರಿ ತಪ್ಪಿಬಿಟ್ಟಿದ್ದಳು. ಎಷ್ಟೊಂದು ಭವ್ಯವಾದ ಕೊಠಡಿಗಳು, ಒಳಗಿನ ಅಲಂಕರಣವನ್ನು ಕಣ್ಣರಳಿಸಿ ನೋಡುತ್ತಾ ಅಡ್ಡಾಡುತ್ತಿದ್ದಳು. ಹೆಂಗಸರ ಪ್ರವೇಶವನ್ನೂ ಎಚ್ಚರಿಕೆಯಿಂದ ಗಮನಿಸಲಾಗಿತ್ತು. ಪರೀಕ್ಷಿಸದೆ ಒಳಗೆ ಬಿಡುತ್ತಿರಲಿಲ್ಲ. ಘಿಯಾಸ್ ಕುಟುಂಬದ ಹೆಂಗಸರಿಗೆ ಸುಲಭವಾಗಿ ಪ್ರವೇಶಕ್ಕೆ ಅನುಮತಿ ಸಿಕ್ಕಿತ್ತು. ಆದರೆ ನೀಸಾಳಿಗೆ ಸಮಸ್ಯೆಯಾದದ್ದು, ಜನಾನಾದ ಹೆಂಗಸರು ಮುಂದೆ ಅಡ್ಡಗೋಡೆ ಹಾಗೆ ನಿಂತಿದ್ದರಿಂದ ಕೆಳಗೆ ನಡೆಯುತ್ತಿದ್ದ ಚಟುವಟಿಕೆಗಳು ಕಾಣಿಸುತ್ತಿರಲಿಲ್ಲ. ಜಿಗಿಜಿಗಿದು ಪ್ರಯತ್ನಿಸಿದರೂ ಸಾಧ್ಯವಾಗದ್ದಕ್ಕೆ ಸರಿಯಾದ ಜಾಗವನ್ನು ಹುಡುಕಲು ಹೊರಟಿದ್ದಳು. ಇದ್ದಕ್ಕಿದ್ದಂತೆ ಅಡ್ಡಾಡುತ್ತಿದ್ದಾಗ ಜನಾನಾದ ಕಾವಲು ಕಾಯುತ್ತಿದ್ದವನು ಅವಳನ್ನು ತಡೆದು ಪ್ರಶ್ನಿಸುವಷ್ಟರಲ್ಲಿ ಮೆಲ್ಲನೆ ಅಲ್ಲಿಂದ ನುಸುಳಿಕೊಂಡು ಅವನತ್ತ ನೋಡಿದಳು. ದಿವಾನ್-ಇ-ಆಮ್‌ನತ್ತ ನೋಡಿದಳು. ಅಲಂಕೃತನಾಗಿ ಠೀವಿಯಿಂದ ಕುಳಿತಿದ್ದ ಬಾದಶಹಾನನ್ನು ನೋಡಿ, ಅಬ್ಬಾ! ಎಂದು ಉದ್ಗರಿಸಿದಳು. ಅವನ ಪಕ್ಕದಲ್ಲಿಯೇ ವಿಶೇಷವಾದ ಭರ್ಜರಿಯಾದ ಉಡುಪಿನಲ್ಲಿ ಕುಳಿತಿದ್ದ ಮದುಮಗ ಸಲೀಂನನ್ನು ರೆಪ್ಪೆ ಮಿಟುಕಿಸದೆ ನೋಡಿದಳು. ಎಷ್ಟು ಸುಂದರವಾಗಿದ್ದಾನೆ. ಅವನ ಉಡುಪನ್ನು ನೋಡಿದರೆ ಸಾಕು. ಮುತ್ತು, ರತ್ನ, ಹವಳ, ಚಿನ್ನ, ಬೆಳ್ಳಿ ಜರಿಯಿಂದ ಆಕರ್ಷಕವಾದ ಕಸೂತಿ ಮಾಡಿದ ಕಾಬಾ, ಪೇಟ! ಅವನ ಮುಖಕ್ಕೆ ಇನ್ನಷ್ಟು ಕಳೆ ತಂದಿತ್ತು. ಕೈಹಿಡಿಯಲಿದ್ದ ಮದುಮಗಳು ಮನ್‌ಬಾಯಿಯೂ ಸುಂದರವಾಗಿಯೇ ಇದ್ದಳು. ಆದರೆ ಒಳಗೆ, ತಾನೇ ಅವಳಿಗಿಂತ ಸುಂದರಳಾಗಿದ್ದೇನಲ್ಲವೇ! ಎಂದುಕೊಂಡಳು. ಪರಸ್ಪರರ ನಡುವೆ ನಿಕಾಹ್ ಶಾಸ್ತ್ರವನ್ನು ಕಾಜಿ ಮಾಡಿ ಮುಗಿಸಿದ. ಮದುಮಗ, ಮದುಮಗಳು ಮದುವೆಗೆ ಕಬೂಲ್ ಹೇಳಬೇಕಿತ್ತು. ಸಲೀಂ ನಿಸ್ಸಂಕೋಚವಾಗಿ ಹೇಳಿ ಮುಗಿಸಿದ. ಮನ್‌ಬಾಯಿ ಪ್ರತಿಕ್ರಿಯೆ ಹೇಗೆ ತೋರುತ್ತಾಳೆಂದು ಕುತೂಹಲದಿಂದ ಕಾಯುತ್ತಿದ್ದಳು. ಅಷ್ಟರಲ್ಲಿ ಯಾರೋ ಅವಳನ್ನು ಹಿಂದಕ್ಕೆಳೆದರು. ಗಾಬರಿಯಿಂದ ಹಿಂತಿರುಗಿ ನೋಡಿದಳು. ಒಬ್ಬಾಕೆ ಸಿಟ್ಟಿನಿಂದ ನೋಡುತ್ತಾ "ಯಾರು ನೀನು. ಇಲ್ಲೇಕೆ ನಿಂತಿದ್ದಿ?" ಎಂದು ಗದ್ದರಿಸಿ ಕೇಳಿದಳು. ನೀಸಾಗೆ ಎಲ್ಲಿಲ್ಲದ ಸಿಟ್ಟು ಬಂತು "ನೋಡುವುದಿಲ್ಲವೇ? ನಾನೇನು ಮಾಡುತ್ತಿದ್ದೇನೆಂದು ಕಾಣಿಸುವುದಿಲ್ಲ?" ಎಂದು

ದಿಟ್ಟತನದಿಂದ ಉತ್ತರಿಸಿದಳು. "ಏ ಲಡಕೀ, ಎಷ್ಟು ನಿನ್ನ ಧೈರ್ಯ? ನನಗೇ ಎದುರುತ್ತರ ಕೊಡುತ್ತೀಯ? ನಿನಗೆ" ನಿನಗೆ ಎಂದು ಹಲ್ಲು ಕಚ್ಚಿ ಕಡಿಯುತ್ತ ಛಳಾರನೆ ಮೆಹರುನ್ನೀಸಾಳ ಕೆನ್ನೆಗೆ ಬಾರಿಸಿದಳು. ಅವಳಿಗೆ ಅಳು ಬಂತು. ಆದರೂ ಧೈರ್ಯ ತಂದುಕೊಂಡು "ನಾನು ಲಡಕೀ ಅಲ್ಲ. ನನ್ನ ಹೆಸರು ಮೆಹರುನ್ನೀಸಾ, ದಿವಾನ್ ಘಿಯಾಸುದ್ದೀನಳ ಬೇಟಿ. ಇಲ್ಲಿ ನಿಂತುಕೊಂಡು ನೋಡಿದರೆ ನಿನ್ನ ಗಂಟೇನು ಹೋಗುತ್ತದೆ? ಅಮ್ಮೀಜಾನ್ ಜೊತೆ ನಿಕಾಹ್ ವೀಕ್ಷಿಸಲು ಬಂದಿದ್ದೇನೆ" ಎಂದು ಉತ್ತರಿಸಿದಳಾದರೂ ಆ ಹೆಂಗಸಿನ ದೌರ್ಜನ್ಯ ಅವಳಿಗೆ ಅವಮಾನಕರವೆನಿಸಿತು. ಇದ್ದಕ್ಕಿದ್ದಂತೆ ಒಂಟಿತನ ಆವರಿಸಿತು. ನಿಕಾಹ್ ನೋಡಲು ಇಷ್ಟೆಲ್ಲ ಅವಮಾನ ಎದುರಿಸಬೇಕಿದೆಯೇ? ಬಾದಶಾಹರ ಮನೆ ಮದುವೆ ಎಂದರೆ ಇಷ್ಟೆಲ್ಲ ಬಂದೋಬಸ್ತೇ? ಅವರೆಷ್ಟೇ ತಡೆಯಲಿ ನಾನು ನುಗ್ಗಿಕೊಂಡು ನೋಡಿಯೇ ನೋಡುತ್ತೇನೆ ಎಂದು ಅಲ್ಲಿಂದ ಜಾರಿಕೊಂಡು ಕಿರುದಾರಿಗಳನ್ನು ಹುಡುಕತೊಡಗಿದ್ದಳು.

ಜನಾನಾದವರಿಗೆಂದೇ ಬಹಳ ವಿಶಾಲವಾದ ಅರಮನೆ, ನೂರಾರು ಪ್ರತ್ಯೇಕ ಪ್ರತ್ಯೇಕ ವಾಸದ ಕೊಠಡಿಗಳು, ಅದ್ಭುತವಾಗಿ ಅಲಂಕೃತಗೊಂಡಿದ್ದವು. ಬೆರಗಿನ ಕಣ್ಣುಗಳಿಂದ ನೋಡುತ್ತಾ ತಾನೂ ಇಂತಹ ಜಾಗಗಳಲ್ಲಿ ವಾಸ ಮಾಡುವ ಅವಕಾಶ ಸಿಗಬಾರದೇ ಎಂದು ಪುಟ್ಟ ಹೃದಯದಲ್ಲಿ ಕನಸುಗಳನ್ನು ಹೆಣೆಯುತ್ತಿದ್ದಳು. ಕನಸುಗಳಲ್ಲಿದ್ದವಳಿಗೆ ಎಲ್ಲಿ ಎತ್ತ ಹೋಗಬೇಕೆನ್ನುವುದು ತಿಳಿಯದೆ, ಚಕ್ರಬಂಧದಂತಹ ಆ ಜಾಗದಲ್ಲಿ, ಅಲೆದಲೆದು ಕಡೆಗೊಂದು ದೊಡ್ಡ ಕೊಠಡಿಯ ಮುಂದೆ ಬಂದು ನಿಂತಳು. ಪರದೆಗಳೊಳಗಿಂದ ಯಾರೋ ಒಬ್ಬ ವ್ಯಕ್ತಿ ಕುಳಿತಿರುವುದನ್ನು ನೋಡಿದಳು. ಆದರೆ ಅಸ್ಪಷ್ಟವಾಗಿದ್ದ ಚಹರೆಯನ್ನು ಸ್ಪಷ್ಟವಾಗಿ ನೋಡಬೇಕೆಂದು ಪಾರದರ್ಶಕವಾಗಿದ್ದ ಪರದೆಯನ್ನು ಮೆಲ್ಲಗೆ ಸರಿಸಿದಳು. ಇನ್ನೇನು ಮುಖ ಕಾಣುವುದೊಂದೇ ಬಾಕಿಯಿತ್ತು. ಜನಾನಾದ ಸುಂದರ ಯುವತಿಯೊಬ್ಬಳು ಗಕ್ಕನೆ ಪ್ರತ್ಯಕ್ಷವಾಗಿ ನೀಸಾಳ ಭುಜದ ಮೇಲೆ ಕೈ ಹಾಕಿದಳು. ನೀಸಾ ಗಾಬರಿಯಿಂದ ತಿರುಗಿದಳು. "ಏಯ್ ಇಲ್ಲಿ ಏನು ಮಾಡುತ್ತಿದ್ದೀ? ಈ ಕೊಠಡಿ ಯಾರದೆಂದು ಗೊತ್ತೇನು?" ಎಂದು ಗದ್ದರಿಸಿ ಕೇಳಿದಳು.

"ಇಲ್ಲ ಗೊತ್ತಿಲ್ಲ. ದಾರಿ ತಪ್ಪಿ ಬಂದು ಬಿಟ್ಟಿದ್ದೇನೆ" ಎಂದು ಭಯದ ದನಿಯಲ್ಲಿ ಉತ್ತರಿಸಿದಳು.

"ನೀನು ಯಾರು? ಇಲ್ಲಿಯವರೆಗೆ ಬರುವುದಕ್ಕೆ ಪರವಾನಗಿ ಕೊಟ್ಟವರು ಯಾರು? ಇಷ್ಟಕ್ಕೂ ಗುರುತು ಪರಿಚಯವಿಲ್ಲದ ನೀನು ಇಲ್ಲಿ ತನಕ ಬರುವುದಕ್ಕೆ ಕಾರಣವೇನು?"

"ನಾನು, ನಾನು ದಿವಾನ್ ಘಿಯಾಸ್ ಬೇಗ್‌ರ ಮಗಳು. ಶಹಜಾದ ಸಲೀಂರ ನಿಕಾಹ್ ನೋಡಲು ಮನೆಯವರೆಲ್ಲಾ ಬಂದಿದ್ದೀವಿ. ನಿಕಾಹ್ ನೋಡಲು ಆಗದ್ದಕ್ಕೆ ಬೇರೆ ಎಲ್ಲಿಂದ ಆದರೂ ನೋಡಲು ಆಗಬಹುದೇನೋ ಎಂದು ಜಾಗ ಹುಡುಕುತ್ತಾ ಅಮ್ಮಿಯ ಕೈ ಬಿಡಿಸಿಕೊಂಡು ಬಂದುಬಿಟ್ಟೆ" ಎಂದು ಹೇಳುತ್ತಿರುವಷ್ಟರಲ್ಲಿಯೇ "ನೀಸಾ ನೀನು ಎಲ್ಲಿದ್ದೀಯಾ ಬೇಟಿ?" ಎಂದು ಕೂಗುತ್ತಾ ಅಸ್ಮತ್ ಮತ್ತು ಸಲೀಹಾ ಬಂದೇ ಬಿಟ್ಟರು.

ನೀಸಾಳನ್ನು ಗದ್ದರಿಸುತ್ತಿದ್ದಾಕೆಯನ್ನು ನೋಡಿಯೇ ಏನೋ ಆಗಿದೆ ಎಂದು ಭಾವಿಸಿದಳು.

"ನೀಸಾ ಬೇಟಿ ನೀನು ಯಾಕೆ ಇಲ್ಲಿಗೆ ಬಂದೆ? ಇಂಥ ಕಡೆಯೆಲ್ಲ ಓಡಾಡಬಾರದು. ಮಾಫಿ ಕೇಳು" ಎಂದು ಹೇಳಿ, ಆ ಹೆಂಗಸಿನ ಕಡೆ ತಿರುಗಿ "ಅವಳ ತಪ್ಪನ್ನು ಮಾಫ್ ಮಾಡಿ. ಚಿಕ್ಕವಳು ಗೊತ್ತಿಲ್ಲದೆ ಶರಾರತ್ ಮಾಡಿರಬಹುದು" ಎಂದು ಅಂಗಲಾಚಿದಳು. ಈ ಮೂವರು ಮಾತಾಡುತ್ತಿದ್ದುದನ್ನು ಕೇಳಿಸಿಕೊಂಡು, ಅಲ್ಲಿ ಕುಳಿತಿದ್ದಾಕೆ ಇವರನ್ನು ಬರುವಂತೆ ಸನ್ನೆ ಮಾಡಿ ಕರೆದಳು.

ಭಯದಿಂದಲೇ ಮೂರೂ ಜನ ಮತ್ತು ಆ ಹೆಂಗಸು ಒಳಗೆ ಹೋಗುತ್ತಿದ್ದಂತೆ ಆ ಯುವ ಹೆಂಗಸು ಬಗ್ಗಿ "ಅಲೇಕುಮ್ ಸಲಾಂ ಪಾದಶಾಹ್ ಬೇಗಂ" ಎಂದು ಗೌರವ ಸಲ್ಲಿಸಿದಳು.

"ಈ ಹುಡುಗಿ ಇಲ್ಲೆಲ್ಲಾ ಅನುಮಾನಾಸ್ಪದವಾಗಿ ಓಡಾಡುತ್ತಿದ್ದುದರಿಂದ ನಾನು ಸ್ವಲ್ಪ ಗಡುಸಾದೆ ಮತ್ತೇನೂ ಅಲ್ಲ."

"ಇರಲಿ ಮಕ್ಕಳ ಜೊತೆ ವರ್ತಿಸುವ ರೀತಿ ಇದಲ್ಲ."

"ಮಾಫಿಯಿರಲಿ ಪಾದಶಾಹ್ ಬೇಗಂ" ಎಂದು ಹೇಳಿ ಹಿಂದು ಹಿಂದಕ್ಕೆ ಹೆಜ್ಜೆ ಹಾಕುತ್ತಾ ನಿರ್ಗಮಿಸಿದಳು.

ತಾಯಿ ಮಕ್ಕಳು ರುಖೈಯ್ಯಾ ಸುಲ್ತಾನ್ ಬೇಗಂರನ್ನು ಗಮನಿಸುತ್ತಿದ್ದರು. ಅವಳ ಮಾತು ಮೃದುವಾಗಿತ್ತು. ರುಖೈಯ್ಯಾ ಅಕ್ಬರನ ಅತ್ಯಂತ ಪ್ರೀತಿಯ ಬೇಗಂ. ಎಲ್ಲಕ್ಕೂ ಅವಳನ್ನೇ ಆಶ್ರಯಿಸುತ್ತಿದ್ದ. ರಾಜಕೀಯ ವಿಚಾರಗಳನ್ನು ಚರ್ಚಿಸುತ್ತಿದ್ದ. ರೂಪದಲ್ಲಿ ಸೌಂದರ್ಯವತಿಯೇನೂ ಅಲ್ಲ. ಆಕೆಯನ್ನು ಅಕ್ಬರ್, ಕಾರಣಾಂತರಗಳಿಂದ ಅಂದರೆ ರುಖೈಯ್ಯಾ ಬೇಗಂನ ಮೊದಲ ಗಂಡ ತೀರಿಕೊಂಡಿದ್ದರಿಂದ, ನಿಕಾಹ್ ಮಾಡಿಕೊಂಡಿದ್ದ. ಪ್ರಮುಖವಾಗಿ ಮೂವತ್ತಾರು ಮಂದಿ ರಾಣಿಯರಿದ್ದರೂ, ರುಖೈಯ್ಯಾ ಸುಲ್ತಾನಾ ಬೇಗಂ ಅಕ್ಬರ್‌ನ ಮೆಚ್ಚಿನ ರಾಣಿ ಮತ್ತು ಪಾದಶಾಹ್ ಬೇಗಂ. (ಪಟ್ಟದ ರಾಣಿ) ಆಗಿದ್ದಳು. ಆದ್ದರಿಂದಲೇ ಸಮಸ್ತ ಜನಾನಾದ ಹೆಂಗಸರ ಜವಾಬ್ದಾರಿ ಅವಳದಾಗಿತ್ತು. ಜನಾನಾದ ಹೆಂಗಸರೆಲ್ಲರೂ ರುಖೈಯ್ಯಾ ಬೇಗಂರ ಆದೇಶದಂತೆ ನಡೆದುಕೊಳ್ಳಬೇಕಿತ್ತು. ಅವಳ ಮಾತಿಗೇ ಬೆಲೆ.

ರುಖೈಯ್ಯಾ ಅಸ್ಮತ್‌ರ ಜೊತೆಗೆ ನಿಂತಿದ್ದ ಇಬ್ಬರು ಮಕ್ಕಳಲ್ಲಿ ನೀಸಾಳ ಕಡೆ ಸನ್ನೆ ಮಾಡಿ ಬಳಿಗೆ ಕರೆದಳು. ನೀಸಾ ಸಂಕೋಚ ಮತ್ತು ಭಯದಿಂದ ಅಸ್ಮತ್‌ಳ ಕಡೆ ನೋಡುತ್ತಲೇ ರುಖೈಯ್ಯಾ ಬಳಿಗೆ ಸಾರಿದಳು. ರುಖೈಯ್ಯಾ ನೀಸಾಳ ತಲೆ ನೇವರಿಸುತ್ತಾ ಪ್ರೀತಿಯಿಂದ "ನಿನಗೆ ಶಾದಿ ನೋಡೋಕೆ ತುಂಬಾ ಇಷ್ಟಾನಾ?" ಎಂದು ಕೇಳಿದಳು.

"ಹೌದು ಪಾದಶಾಹ್ ಬೇಗಂ. ನನಗೆ ಶಾದೀನ ಹತ್ತಿರದಿಂದ ನೋಡಬೇಕು. ಮದುವೆ ಆಗುತ್ತಿರುವ ಗಂಡು ಹೆಣ್ಣು ಇಬ್ಬರನ್ನೂ ನೋಡುವ ಆಸೆ."

ನಿನಗೆ ಶಹಜಾದಾ ಸಲೀಂನನ್ನು ನೋಡಬೇಕಿತ್ತೇನು?

"ಹೌದು."

"ಯಾಕೆ?"

"ಶಹಜಾದಾ ತುಂಬ ಸುಂದರವಾಗಿದ್ದಾರೆ. ನನ್ನ ಅಣ್ಣಂದಿರಿಗಿಂತ ತುಂಬತುಂಬಾನೇ ಚೆನ್ನಾಗಿದ್ದಾರೆ."

ರುಖೈಯ್ಯಾಗೆ ಸ್ವಲ್ಪ ತಮಾಶೆ ಮಾಡಬೇಕೆನಿಸಿತು. ಜನಾನಾದ ಹೆಂಗಸರ ಗುಂಪಿನ ಕಡೆಗೆ ತಿರುಗಿ

"ನೋಡಿದಿರಾ ಈ ಹುಡುಗಿಗೆ ಸಲೀಂ ತುಂಬಾ ಚೆನ್ನಾಗಿದ್ದಾನಂತೆ! ನಾವು ಸಲೀಂರನ್ನು ಹುಷಾರಾಗಿ ಕಾಯಬೇಕು" ಎನ್ನುತ್ತಿದ್ದಂತೆ ಎಲ್ಲರೂ ನಕ್ಕರು. "ಅಬ್ಬಬ್ಬಾ ಘಾಟಿ ಹುಡುಗಿಯಂತೆ ಕಾಣುತ್ತಾಳೆ. ಎಂದಾದರೂ ಸಲೀಂನನ್ನು ಹಾರಿಸಿಕೊಂಡು ಹೋದರೂ ಹೋಗಬಹುದು" ಎಂದು ಮಾತಾಡಿಕೊಳ್ಳುತ್ತಾ ನಗುತ್ತಿದ್ದರು. ಅಸ್ಮತ್ ಹಾಗೂ ಮಕ್ಕಳಿಗೆ ಈ ಮಾತುಗಳಿಂದ ತೀರಾ ಸಂಕೋಚವೆನಿಸಿತು.

"ಪಾದಶಾಹ್ ಬೇಗಂ ಈ ತಲೆಹರಟೆ ಹುಡುಗಿಯ ಹುಚ್ಚು ಮಾತುಗಳನ್ನು ನೀವು ಗಂಭೀರವಾಗಿ ತೆಗೆದುಕೊಳ್ಳಬೇಡಿ."

"ತಲೆಹರಟೆ ಅಲ್ಲ ಗಡಸು ಹುಡುಗಿ, ನೋಡಿದರೆ ತುಂಬಾ ಒಳ್ಳೆ ಭವಿಷ್ಯ ಇದೆ ಅನಿಸುತ್ತೆ. ತುಂಬಾ ಜಾಣೆ, ನನಗೆ ಯಾಕೋ ಈ ಮಗು ತುಂಬಾ ಇಷ್ಟವಾಗುತ್ತೆ. ಅಂದಹಾಗೆ ತಮ್ಮ ಪರಿಚಯ ಆಗಲಿಲ್ಲ" ಎಂದಳು.

"ಪಾದಶಾಹ್ ಬೇಗಂ, ನಾನು ಬಾದಶಾಹರ ದಿವಾನರಾದ ಘಿಯಾಸ್ ಬೇಗ್‌ರ ಬೇಗಂ ಅಸ್ಮತ್ ಬೇಗ್. ಇವರಿಬ್ಬರೂ ನನ್ನ ಮಕ್ಕಳು. ಹಾಗೆಯೇ ಶಹಜಾದೆ ಸಲೀಂರ ಜೊತೆಗಾರರಾದ ಅಬುಲ್‌ಹಸನ್, ಮಹಮ್ಮದ್ ಷರೀಫ್‌ರೂ ನನ್ನ ಮಕ್ಕಳೇ."

"ಓ ನಮ್ಮ ದಿವಾನರ ಪರಿವಾರದವರು! ಬಹಳ ಸಂತೋಷವಾಯಿತು. ನಿಮ್ಮವರ ಬಗ್ಗೆ ಅಕ್ಬರ್ ಬಾದಶಾಹರು ಬಹಳವಾಗಿ ಮೆಚ್ಚಿಗೆಯ ಮಾತಾಡಿದ್ದಾರೆ. ನೀವು ಪರ್ಷಿಯಾದ ಕಡೆಯವರೆಂದೂ ಕೇಳಿದ್ದೇನೆ. ನಮಗೆ ಪರ್ಷಿಯಾದ ಊಟ, ತಿಂಡಿಗಳೆಂದರೆ ಬಹಳ ಇಷ್ಟ. ನೀವು ಯಾವಾಗಲಾದರೂ ಬಂದಾಗ ನಮ್ಮ ಜನಾನಾದ ಹೆಂಗಸರಿಗೆ ಪರ್ಷಿಯಾದ ಅಡುಗೆಯನ್ನು ಕಲಿಸಿಕೊಡಿ."

"ನಿಮ್ಮ ಮೆಹರ್‌ಬಾನಿ. ಇದೇನೂ ದೊಡ್ಡ ವಿಷಯವಲ್ಲ."

"ಹಾಗೆಯೇ ನಿಮ್ಮ ಈ ತುಂಟ ಹುಡುಗಿ ನಮಗೆ ಬಹಳ ಇಷ್ಟ. ನಾನು ಹೇಳಿದಾಗೆಲ್ಲ, ನಿಮ್ಮವಳನ್ನು ಕಳಿಸಿಕೊಡಿ. ನಮಗೆ ಮಕ್ಕಳೆಂದರೆ ಬಹಳ ಇಷ್ಟ. ಅವರ ಜೊತೆ ಕಾಲ ಕಳೆಯೋದೆಂದರೆ ಏನೋ ಒಂದು ಥರ ಖುಷಿ."

"ಖಂಡಿತ ಕಳಿಸಿಕೊಡುತ್ತೇನೆ. ನಮಗೆ ನಿಮ್ಮ ಆದೇಶ ಗೌರವದ ಸಂಗತಿ" ಖುದಾ ಹಾಫಿಜ್ ಎಂದು ಕುರ್ನಿಷ್ ಮಾಡಿ ಮೂವರೂ ಅಲ್ಲಿಂದ ಹೊರಟರು.

ಮದುವೆಯ ಸಂಭ್ರಮಾಚರಣೆ ಔತಣಕೂಟಗಳು ಸುಮಾರು ಒಂದು ವಾರಕ್ಕೂ ಹೆಚ್ಚು ದಿನಗಳು ಮುಂದುವರೆದವು.

ಬಾದಶಾಹರ ಮನೆ ಮದುವೆ! ಅಮೂಲ್ಯವಾದ ಉಡುಗೊರೆಗಳು, ರಾಶಿರಾಶಿಯಾಗಿ ಬಂದು ಬಿದ್ದಿದ್ದವು. ನೂರಾರು ಮಂದಿ ರಾಜಪೂತ ಬೀಗರುಗಳು ಬಂದಿದ್ದರು. ರಾಜಕೀಯ ಉದ್ದೇಶಕ್ಕಾಗಿ ಸಾಮ್ರಾಜ್ಯ ವಿಸ್ತರಣೆಯ ಸಾನುಕೂಲಕ್ಕಾಗಿ ರಾಜಪೂತರೊಂದಿಗೆ ಅಕ್ಬರ್ ವಿವಾಹ ಸಂಬಂಧಗಳನ್ನು ಬೆಳೆಸಿದ್ದ. ತಾನೂ ರಾಜಪೂತ ವಂಶದ ಹೆಣ್ಣುಗಳನ್ನು ಮದುವೆಯಾಗಿದ್ದುದೇ ಅಲ್ಲದೆ ಮಗ ಸಲೀಂಗೂ ಈ ಮದುವೆ ರಾಜಪೂತ ಮನೆತನದೊಂದಿಗೆ ಏರ್ಪಡಿಸಿದ್ದ. ಸಲೀಂನೊಂದಿಗೆ ಈಗ ಮದುವೆ

ಆಗುತ್ತಿದ್ದುದು ಅಂಬರ್‌ನ ರಾಜಾ ಭಗವಾನ್ ದಾಸನ ಮಗಳು ಮಾನ್ ಜೊತೆ.

ಮದುವೆ ಮುಗಿಸಿಕೊಂಡು ಅಸ್ಮತ್ ಕುಟುಂಬ ಮನೆಗೆ ಹಿಂತಿರುಗಿದರು. ಆದರೆ ಅದ್ದೂರಿ ಮದುವೆಯ ವೈಭವ, ಸಂಭ್ರಮ, ಜನಸಂದಣಿ, ರಾಶಿ ರಾಶಿ ಉಡುಗೊರೆಗಳು, ಅದೂ ಬೆಲೆ ಕಟ್ಟಲು ಆಗದಿರುವಂತಹವು. ಮನೆಯವರೆಲ್ಲರೂ ಅದನ್ನು ಅವರವರದೇ ರೀತಿಯಲ್ಲಿ ಅನುಭವಿಸುತ್ತಾ ಪ್ರಶ್ನಿಸಿಕೊಳ್ಳುತ್ತಾ ದಿನಗಳನ್ನು ಕಳೆಯುತ್ತಿದ್ದರು. ಅವರೆಲ್ಲರಿಗಿಂತ ನೀಸಾಳ ಆಲೋಚನೆಗಳು, ಪ್ರಶ್ನೆಗಳು, ಮುಗ್ಧವೂ ವಿಚಿತ್ರವೂ ಆಗಿದ್ದವು. ತನ್ನ ಪ್ರಶ್ನೆಗಳಿಗೆ ಉತ್ತರ ಕೊಡುವವರೆಂದರೆ ಅಮ್ಮೀ ಅಥವಾ ಅಬ್ಬೂ. ಸಮಯ ಸಿಕ್ಕಾಗ ಕೇಳಲೇ ಬೇಕು ಎಂದುಕೊಂಡಳು.

ಒಂದು ದಿನ ಪಾಠಗಳನ್ನು ಉರುಹಚ್ಚುತ್ತಾ ಕೂತಾಗ, ಅಸ್ಮತ್ ಅವಳು ಕುಳಿತಿದ್ದ ಕಡೆಯಿಂದ ಹಾದು ಹೋದಳು. ಪುಸ್ತಕ ಕೈಲಿದ್ದರೂ ಅವಳ ಕಣ್ಣು ಕಿವಿ ಎಲ್ಲವನ್ನೂ ಗಮನಿಸುತ್ತಿದ್ದವು. ಅಮ್ಮನ ಸದ್ದಾದದ್ದೇ, ಕುಳಿತಲ್ಲಿಂದಲೇ "ಅಮ್ಮೀಜಾನ್" ಎಂದು ಕೂಗಿದಳು. ನೀಸಾಳ ಧ್ವನಿ ಕೇಳಿ ಗಕ್ಕನೆ ನಿಂತ ಅಸ್ಮತ್ "ನೀಸಾ ಓದುವುದರ ಕಡೆ ಗಮನ ಕೊಡದೆ ಏನು ಮಾಡುತ್ತಿದ್ದೀ? ಪಂಡಿತ್‌ಜೀ ನಾಳೆ ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳದಿದ್ದರೆ ಏಟು ತಿನ್ನುವುದು ಖಂಡಿತ."

"ಅಮ್ಮೀ ಜಾನ್, ಅವರ ಪ್ರಶ್ನೆಗಳಿಗೆ ನಾನು ಉತ್ತರ ಹೇಳುವುದಕ್ಕೆ ಮೊದಲು ನನ್ನ ಪ್ರಶ್ನೆಗಳಿಗೆ ಉತ್ತರ ಹೇಳು."

"ಏನು? ಕೇಳು ಯಾವಾಗಲೂ ನಿನ್ನ ತಲೆಹರಟೆ ಪ್ರಶ್ನೆಗಳು ಇದ್ದೇ ಇರುತ್ತವೆ."

"ಅಮ್ಮೀ ಜಾನ್, ಶಾಹಜಾದರನ್ನು ಮದುವೆಯಾದರೆ ಎಷ್ಟು ಚೆಂದ ಇರುತ್ತಲ್ಲ, ಅವರನ್ನು ಮದುವೆಯಾಗಲು ನಾವೂ ಶಾಹಜಾದಿಯರಾಗಿ ಇರಲೇ ಬೇಕೇನು?"

ಅವಳ ಈ ಪ್ರಶ್ನೆ ಅಸ್ಮತ್‌ಳನ್ನು ಬೆರಗುಗೊಳಿಸಿತು. ಹತ್ತು ತುಂಬಿಲ್ಲದ ಈ ಹುಡುಗಿ ಆಗಲೇ ವಯಸ್ಸಿಗೆ ಮೀರಿದ ಈ ಪ್ರಶ್ನೆಗಳನ್ನೆಲ್ಲ ಕೇಳುತ್ತಿದ್ದಾಳಲ್ಲ! ಇವಳಿಗೆ ಏನಾಗಿದೆ? ಆಗಲೇ ಮದುವೆ ಹುಚ್ಚನ್ನು ತಲೆಗೇರಿಸಿಕೊಂಡಿದ್ದಾಳೆ ಎಂದುಕೊಳ್ಳುತ್ತಾ ಸುಮ್ಮನಾದಳು.

"ಅಮ್ಮೀ ಉತ್ತರ ಹೇಳು ಯಾಕೆ ಸುಮ್ಮನಿದ್ದೀಯ?"

"ನೀಸಾ ಇಂಥ ಪ್ರಶ್ನೆಗಳೆಲ್ಲ ಈಗ ಬೇಡ. ಓದಿನ ಕಡೆ ಲಕ್ಷ್ಯ ಕೊಡು. ದೊಡ್ಡವಳಾದ ಮೇಲೆ, ನಾನೇ ನಿನಗೆ ಎಲ್ಲ ವಿವರಿಸಿ ಹೇಳುತ್ತೇನೆ." ಅಂದ ಹಾಗೆ ನೀಸಾ, ಹೇಳುವುದನ್ನು ಮರೆತಿದ್ದೆ. ಪಾದಶಾಹ್ ಬೇಗಂ ನಿನ್ನನ್ನು ಅವರ ಬಳಿಗೆ ಕಳಿಸಿಕೊಡುವಂತೆ ಹೇಳಿದ್ದಾರೆ."

"ಏನು ಪಾದಶಾಹ್ ಬೇಗಂರನ್ನು ನಾನು ಭೇಟಿ ಮಾಡಲು ಹೋಗಬೇಕೆ?" ಅಚ್ಚರಿಯಿಂದ ಕಣ್ಣರಳಿಸಿ ಕೇಳಿದಳು.

"ಹೌದು ಅಬುಲ್ ಹಸನ್ ಅವರ ಜೊತೆ ಕಳಿಸಿಕೊಡುತ್ತೇನೆ. ಹಾಗೆಯೇ ನಮ್ಮ ಪರ್ಷಿಯಾದ ಸಿಹಿ ತಿನಿಸನ್ನು ನಾನು ಮಾಡಿಕೊಡುತ್ತೇನೆ. ಪಾದಶಾಹ್ ಬೇಗಂರಿಗೆ ಅದು ತುಂಬ ಪಸಂದ್ ಅಂತೆ. ನೀನು ತೆಗೆದುಕೊಂಡು ಹೋಗಿ ನನ್ನ ಕಡೆಯಿಂದ ಕೊಟ್ಟದ್ದೆಂದು ಹೇಳಿಕೊಡು" ಎಂದಳು.

"ಅಮ್ಮೀ ಅಮ್ಮೀ ನನಗೆಷ್ಟು ಸಂತೋಷವಾಗುತ್ತಿದೆ. ಪಾದಶಾಹ್ ಬೇಗಂ ಎಷ್ಟು ಒಳ್ಳೆಯವರಲ್ಲವೇ?"

"ಹೌದೌದು ನೀನು ಬಹಳ ವರ್ಷಗಳಿಂದ ಕಂಡಿದ್ದೀಯ ಅಲ್ಲವೇ?" ಎಂದು ಹೇಳುತ್ತಾ ಮಗಳ ಮುಗ್ಧ ಪ್ರಶ್ನೆಗಳಿಗೆ ಮುಸಿಮುಸಿ ನಕ್ಕಳು.

ಅಸ್ಮತ್ ಬಾನು ಮತ್ತು ರುಖೈಯ್ಯಾರ ನಡುವೆ ಆಪ್ತವಾದ ಸ್ನೇಹ ಸಲುಗೆಗಳು ಬೆಳೆದವು. ಪರಸ್ಪರ ಭೇಟಿಯಾಗುತ್ತಿದ್ದರು. ರುಖೈಯ್ಯಾ ಪಾದಶಾಹ್ ಬೇಗಂ ಆದರೂ ದೊಡ್ಡಸ್ಥಿಕೆ ತೋರಿಸಿಕೊಳ್ಳದೆ ಅಸ್ಮತ್‌ಳ ಮನೆಗೂ ಭೇಟಿ ಕೊಡುತ್ತಿದ್ದಳು. ನೀಸಾಳನ್ನು ಕಂಡರಂತೂ ಅದೇಕೋ ತುಂಬಾ ಆಕರ್ಷಿತಳಾಗಿದ್ದಳು. ಕಣ್ಣು ಕುಕ್ಕುವ ಸೌಂದರ್ಯ, ಮೋಡಿ ಮಾಡುವ ನಗೆ, ಜೊತೆಗೆ ಅವಳ ಚಾಣಾಕ್ಷತನಗಳು ಸೂಜಿಗಲ್ಲಿನಂತೆ ಯಾರನ್ನಾದರೂ ಸೆಳೆಯುತ್ತಿದ್ದವು. ರುಖೈಯ್ಯಾಳ ಮತ್ತು ಅಸ್ಮತ್‌ಳ ನಡುವಿನ ಸ್ನೇಹ, ಸಲುಗೆಗಳು ಜನಾನಾದ ಹೆಂಗಸರಲ್ಲಿ ಒಂದು ರೀತಿ ಅಸೂಯೆ ಮೂಡಿಸಿತ್ತು. ಸೂಕ್ಷ್ಮಮತಿಯಾದ ಅಸ್ಮತ್‌ಗೆ ಇದರ ಸುಳಿವು ಸಿಕ್ಕಿದ್ದು, ಜನಾನಾದ ಎಲ್ಲ ಹೆಂಗಸರನ್ನೂ ತನ್ನ ನಡವಳಿಕೆ, ಪ್ರೀತಿ, ವಿಶ್ವಾಸಗಳಿಂದ ಗೆಲ್ಲುವುದಕ್ಕೆ ಪ್ರಯತ್ನಿಸುತ್ತಿದ್ದಳು.

ನೀಸಾ ಅಮ್ಮನ ಜೊತೆಗೆ ಹಲವು ಬಾರಿ ಇಲ್ಲವೆ ಪ್ರತಿ ಬಾರಿಯೂ ಜನಾನಾಕ್ಕೆ ಹೋಗುತ್ತಿದ್ದಳು. ಅವರೆಲ್ಲರ ನಡವಳಿಕೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದಳು. ರುಖೈಯ್ಯಾಗಂತೂ ಅಸ್ಮತ್‌ಗಿಂತ ನೀಸಾ ಬಹಳ ಹತ್ತಿರವಾದಳು. ಅವಳನ್ನು ಬಿಟ್ಟಿರಲು ಸಾಧ್ಯವೇ ಇಲ್ಲವೆನ್ನುವಷ್ಟು ಹಚ್ಚಿಕೊಂಡಳು. ಕಡೆಗೆ ನೀಸಾಳನ್ನು ತನ್ನ ಬಳಿಯಲ್ಲೇ ಇರಿಸಿಕೊಳ್ಳಲು ಅಸ್ಮತ್‌ಳನ್ನು ಒಪ್ಪಿಸಿದಳು.

ವಯಸ್ಸಿಗೆ ಬರುತ್ತಿದ್ದ ನೀಸಾ, ಜನಾನಾದ ಹೆಂಗಸರಲ್ಲಿ ಅಸೂಯೆಗೆ ಕಾರಣಳಾದಳು. ಕಣ್ಣು ಕುಕ್ಕುವ ಚೆಲುವು ಯಾರನ್ನಾದರೂ ಆಕರ್ಷಿಸಬಲ್ಲುದೆಂಬ ಯೋಚನೆ, ಭೀತಿಗೂ ಕಾರಣವಾಯಿತು. ಎಲ್ಲರಿಗಿಂತ ಹೆಚ್ಚಾಗಿ ತಲ್ಲಣಕ್ಕೆ ಒಳಗಾಗಿದ್ದು ಸಲೀಂನ ಹೆಂಡತಿ ಜಗತ್‌ಗೋಸಿನಿ. ಸಲೀಂನ ರಾಣಿಯರಲ್ಲಿ, ಇದ್ದುದರಲ್ಲಿ ಹೆಚ್ಚಾಗಿ ಪ್ರೀತಿಸುತ್ತಿದ್ದದ್ದು ಜಗತ್‌ಳನ್ನು. ಅವಳಿಗೆ ತಾನೇ ಅತ್ಯಂತ ಸೌಂದರ್ಯವತಿಯೆಂಬ ಗರ್ವ ಬೇರೆ ಇತ್ತು. ಅಂಥಾದ್ದರಲ್ಲಿ, ಮೊದಲೇ ಸ್ತ್ರೀಲೋಲುಪನಾದ, ಸೌಂದರ್ಯಾರಾಧಕನಾದ ಸಲೀಂ ಕಣ್ಣಿಗೆ ನೀಸಾಳಂಥವಳು ಬಿದ್ದರೆ, ತಮ್ಮ ಕಥೆ ಮುಗಿಯುವುದೆಂಬ ಭೀತಿ ಕಾಡಿತ್ತು.

ಹಾಗಾಗಿ ಸಲೀಂನ ಕಣ್ಣಿಗೆ ಬೀಳದಂತೆ ಎಚ್ಚರ ವಹಿಸಿದ್ದಳು. ತನ್ನ ಆಪ್ತ ಸೇವಕ ಹೋಷಿಯಾರ್‌ನನ್ನು ಗೂಢಚಾರಿಕೆಗೆ ಹಚ್ಚಿದ್ದಳು.

* * *

ಒಂದು ದಿನ ಅವಳು ಊಹಿಸಿದ್ದ ಭಯ ನಿಜವಾಗುವಂತೆ ಕಾಣಿಸಿತು. ಸಾಮಾನ್ಯವಾಗಿ ರುಖೈಯ್ಯಾಳನ್ನು ಭೇಟಿಯಾಗಲು ಬರುತ್ತಿದ್ದವಳಿಗೆ, ದೂರದಲ್ಲಿ ಯಾರೋ ಗಂಡಸು ಬರುತ್ತಿದ್ದಂತೆನಿಸಿತು. ಯಾರೆಂದು ತಿಳಿಯುವ ಕುತೂಹಲಕ್ಕಾಗಿ ಒಂದು ಮರದ ಹಿಂದೆ ಅವಿತು ನಿಂತಳು. ಬರುತ್ತಿದ್ದಂತಹ ವ್ಯಕ್ತಿ, ತಾನಿದ್ದ ದಿಕ್ಕಿಗೆ ವಿರುದ್ಧವಾಗಿ ನಡೆದು ಹೋಗಿ ಒಂದು ಕಟ್ಟೆಯ ಮೇಲೆ ಕುಳಿತ. ಕೂಡಲೇ ಎಲ್ಲೆಲ್ಲಿಂದಲೋ ಪಾರಿವಾಳಗಳು ಪ್ರತ್ಯಕ್ಷವಾಗಿ ಆತನನ್ನು ಸುತ್ತುವರಿದವು. ಗಮನವಿಟ್ಟು ನೋಡಿದಳು. ಮದುವೆಯ ಸಮಯದಲ್ಲಿ ನೋಡಿದ್ದ ಮುಖ. ನೆನಪಿಗೆ ಬಂತು. ಅವನು ಬೇರೆ ಯಾರೂ ಅಲ್ಲ, ಶಹಜಾದಾ (ರಾಜಕುಮಾರ) ಎನ್ನುವುದು ಖಾತ್ರಿಯಾಯಿತು.

ಆಹ್ ಸಲೀಂ! ಎಂದು ತನ್ನೊಳಗೇ ಹೇಳಿಕೊಂಡು ಖುಷಿ ಪಟ್ಟಳು. ಎಂಥ ಸುಂದರ ಪುರುಷ. ಅವನ ಬೇಗಂಗಳು ಎಷ್ಟು ಅದೃಷ್ಟವಂತರು ಎಂದು ಹೇಳಿಕೊಳ್ಳುವಷ್ಟರಲ್ಲಿ ಹೋಷಿಯಾರನ ಹದ್ದುಗಣ್ಣಿಗೆ ಬಿದ್ದಳು. "ಏಯ್ ಯಾರು ನೀನು? ಸ್ವಲ್ಪವೂ ಜ್ಞಾನ ಇಲ್ಲವೆ? ಇದು ಮರ್ದಾನಾರು ಓಡಾಡುವ ಜಾಗ. ಇಲ್ಲೆಲ್ಲ ಹೆಂಗಸರು ಬರಬಾರದೆಂಬುದು ತಿಳಿದಿಲ್ಲವೇನು? ಸಲೀಂ ಕಣ್ಣಿಗೆ ಬೀಳುವುದಕ್ಕೆ ಮೊದಲೇ ಇಲ್ಲಿಂದ ಹೊರಡು. ಇಲ್ಲವಾದಲ್ಲಿ ಏನಾಗುತ್ತೆ ಗೊತ್ತೇನು? ಛಡಿಯೇಟುಗಳು ಬೀಳುತ್ತೆ. ಹೆಂಗಸರು ಇಲ್ಲೆಲ್ಲಾ ಓಡಾಡುವುದನ್ನು ಸಲೀಂ ಇಷ್ಟಪಡುವುದಿಲ್ಲ. ಇಷ್ಟಕ್ಕೂ ಯಾರು ನೀನು? ಯಾಕಿಲ್ಲಿಗೆ ಬಂದೆ?"

ಗಟ್ಟಿಗಿತ್ತಿ ನೀಸಾ ಹೆದರಲಿಲ್ಲ. "ನಾನು ಯಾರೆಂದು ಹೇಳುವುದಕ್ಕೆ ಮೊದಲು ನೀನು ಯಾರು ಅಂತ ಹೇಳು."

"ನಾನು ಹೋಷಿಯಾರ್ ಖಾನ್. ಜಗತ್ ಬೇಗಂನ ಖಾಸಾ ಮನುಷ್ಯ."

"ಓ ಹಾಗೇನು? ಹಾಗಾದರೆ ಕೇಳು ನಾನು ಮಿರ್ಜಾ ಘಿಯಾಸ್‌ರ ಪ್ರೀತಿಯ ಮಗಳು. ಪಾದಶಾಹ್ ಬೇಗಂರ ಬಹಳ ಬಹಳ ಹತ್ತಿರದ ಹೆಣ್ಣು. ನಾನೂ ನಿನ್ನ ಬಗ್ಗೆ ರುಖೈಯ್ಯಾ ಬೇಗಂಗೆ ಹೇಳುತ್ತೇನೆ" ಎಂದಳು.

ಇವರಿಬ್ಬರ ನಡುವೆ ಮಾತಿನ ಘರ್ಷಣೆ ನಡೆಯುತ್ತಿದ್ದಾಗಲೇ ಸಲೀಂ ತನ್ನ ಬಳಿ ಇದ್ದ ಧಾನ್ಯಗಳನ್ನೆಲ್ಲಾ ಪಾರಿವಾಳಗಳತ್ತ ಎಸೆದು ಒಂದೆರಡು ಹೆಜ್ಜೆ ಹಾಕುವಷ್ಟರಲ್ಲಿ, ಇವರು ಎದುರಾದರು. ದಂಗು ಬಡಿದವನಂತೆ ನಿಂತು ಬಿಟ್ಟ. ಸೂರ್ಯನ ಪ್ರಖರ ಬೆಳಕಿಗೆ ಕಣ್ಣು ಮುಚ್ಚುವಂತೆ ಒಮ್ಮೆ ಕಣ್ಣು ಮುಚ್ಚಿ ಸಾವಧಾನವಾಗಿ ಕಣ್ಣು ಬಿಟ್ಟ. ಎದುರಿಗೆ ಇಬ್ಬರಲ್ಲಿ ಒಬ್ಬರು ತನಗೆ ತಿಳಿದಿದ್ದ ಹೋಷಿಯಾರ್ ಖಾನ್. ಮತ್ತೊಬ್ಬರು ಪ್ರಾಯದ ಹುಡುಗಿ! ಅವನಿಗೆ ಆಶ್ಚರ್ಯವಾಯಿತು. ನಿಷಿದ್ಧವಾದ ಮರ್ದಾನಾ ಪ್ರದೇಶದಲ್ಲಿ ಈ ಹುಡುಗಿ ಏನು ಮಾಡಲು ಬಂದಿದ್ದಾಳೆ! ಹೋಷಿಯಾರ್‌ನ ಕಡೆ ತಿರುಗಿ,

"ಹೋಷಿಯಾರ್ ಏನಿದೆಲ್ಲ? ಯಾರೀಕೆ? ಇಲ್ಲಿಗೆ ಏನು ಮಾಡಲು ಬಂದಿದ್ದಾಳೆ? ಈ ಪ್ರದೇಶದಲ್ಲಿ ಹೆಂಗಸರಿಗೆ ಪ್ರವೇಶವಿಲ್ಲವೆಂದು ನೀನು ಹೇಳಿಲ್ಲವೇ?"

"ಹೇಳಿದೆ. ಜಹಾಂಪನಾಹ್. ಹಠಮಾರಿ ಹುಡುಗಿಯಂತೆ ಕಾಣುತ್ತಾಳೆ. ಯಾರೆಂದು ಕೇಳಿದರೂ ಸರಿಯಾಗಿ ಉತ್ತರ ಕೊಡುವುದಿಲ್ಲ. ಹೋಗೆಂದು ಹೇಳುತ್ತಿದ್ದರೂ ಇನ್ನೂ ನಿಂತೇ ಇದ್ದಾಳೆ."

ಸಲೀಂ ಒಂದು ಕ್ಷಣ ನೀಸಾಳತ್ತ ಕಣ್ಣು ಹಾಯಿಸಿದ. ಅಲ್ಲಿಂದ ಕಣ್ಣು ಕೀಳಲು ಸಾಧ್ಯವೇ ಆಗಲಿಲ್ಲ. ಅಬ್ಬ ಇಂತಹ ಸೌಂದರ್ಯ ಇಡೀ ಮೊಘಲ್ ಸ್ತ್ರೀ ಜಗತ್ತಿನಲ್ಲಿಯೇ ಸಾಧ್ಯವಿಲ್ಲ. ಅವಳ ಸೌಂದರ್ಯವೀಕ್ಷಣೆಯಲ್ಲಿ ಮೈ ಮರೆತಿದ್ದ ಸಲೀಂಗೆ ಹೋಷಿಯಾರ್‌ನ ಉಪಸ್ಥಿತಿ ಗಮನಕ್ಕೆ ಬಂದಿರಲಿಲ್ಲ. ಎಚ್ಚೆತ್ತುಕೊಂಡ ನಂತರ ಅವನತ್ತ ತಿರುಗಿ,

"ಹೋಷಿಯಾರ್ ನೀನು ಹೋಗು. ನಾನು ಅವಳನ್ನು ವಿಚಾರಿಸಿ ಯಾರೆಂದು ತಿಳಿದುಕೊಳ್ಳುತ್ತೇನೆ."

ಹೋಷಿಯಾರ್‌ಗೆ ಅರ್ಥವಾಯಿತು. ಕುರಿ ಹಳ್ಳಕ್ಕೆ ಬೀಳುತ್ತಿದೆ ಎಂದುಕೊಂಡ.

ಸಲೀಂನಷ್ಟೇ ನೀಸಾ ಕೂಡಾ ಅವನ ಸೌಂದರ್ಯ ಚೆಲುವುಗಳನ್ನು ಇಷ್ಟು

ಹತ್ತಿರದಿಂದ ನೋಡಿ ಬೆರಗಾಗಿದ್ದಳು. ಮದುವೆ ಮಂಟಪದಲ್ಲಿ ಸದ್ದುಗದ್ದಲ ಸಂಭ್ರಮಗಳ ನಡುವೆ ಪೇಟಾ ಕಾಬಾಗಳಿಂದ ಆಚ್ಛಾದಿತ ದೇಹ. ಮುಖ ಸರಿಯಾಗಿ ಕಾಣಲಾಗಿರಲಿಲ್ಲ. ಈಗ ನೇರವಾಗಿ ನೋಡುವ ಅದೃಷ್ಟ ತನ್ನದಾಗಿದೆ ಎನ್ನುವ ಯೋಚನೆಯಲ್ಲಿ ನಿಶ್ಚಲವಾಗಿ ನಿಂತುಬಿಟ್ಟಿದ್ದಳು.

ಸಲೀಂನೇ ಮಾತಿಗೆ ಮೊದಲಾದ. "ಯಾರು ನೀನು ಹೆಣ್ಣೆ? ನಿನ್ನನ್ನು ಈ ಮೊದಲು ಕೆಲ ವರ್ಷಗಳ ಹಿಂದೆ ನೋಡಿದಂತಹ ನೆನಪು. ನೀನೇನಾದರೂ ಬಿಲ್ವಿದ್ಯೆಯ ಸ್ಪರ್ಧೆಯಲ್ಲಿ ನವರೋಜ್ ದಿನ ಭಾಗವಹಿಸಿದ್ದೆಯೇನು?"

"ಹೌದು ಹುಜೂರ್."

ಸಲೀಂಗೆ ಆ ದಿನದ ಘಟನೆ ನೆನಪಾಯಿತು. ಆಗ ನೀಸಾ ಇನ್ನೂ ಪ್ರಾಯಕ್ಕೆ ಬಂದಿರಲಿಲ್ಲ. ನವರೋಜ್ ಹಬ್ಬದ ಪ್ರಯುಕ್ತ ಹುಡುಗರಿಗೆ ಆ ಬಿಲ್ವಿದ್ಯೆಯ ಸ್ಪರ್ಧೆಯನ್ನು ದೊಡ್ಡ ಬಯಲಲ್ಲಿ ಆಯೋಜಿಸಲಾಗಿತ್ತು. ಸುಮಾರು ದೂರದಲ್ಲಿ ಒಂದು ಮನುಷ್ಯಾಕಾರದ ಬೊಂಬೆಯನ್ನು ನಿಲ್ಲಿಸಿ ಅದರ ತಲೆ ಮೇಲೆ ಕೃತಕ ಹಕ್ಕಿಯೊಂದನ್ನು ಇರಿಸಲಾಗಿತ್ತು. ಆ ಹಕ್ಕಿಯನ್ನು ಸಮಾನ ಭಾಗಗಳಲ್ಲಿ ಬಾಣದಿಂದ ಭೇದಿಸಬೇಕಿತ್ತು. ಹುಡುಗರೆಲ್ಲರೂ ಉತ್ಸಾಹದಿಂದ ಬೀಗುತ್ತಾ ತಾವೇ ಗೆಲ್ಲುವುದೆಂಬ ಗರ್ವದಿಂದ ಹೆಜ್ಜೆ ಹಾಕುತ್ತಾ ಬಂದು ಗುರಿ ಮುಟ್ಟುವಂತೆ ಬಾಣ ಹೊಡೆದರಾದರೂ ಎಲ್ಲರೂ ಕಡೆಗೆ ಸೋತರು. ಬಿಲ್ಲು ವಿದ್ಯೆ ಕಲಿಸಿದ ಗುರುಗಳಿಗೆ ಬಹಳ ನಿರಾಶೆ ಆಯಿತು. ಅದೇ ಸಮಯದಲ್ಲಿ ಹುಡುಗಿಯರ ಗುಂಪಿನಿಂದ ಒಂದು ಧ್ವನಿ ಹೊರಟಿತು: "ನಾನು ಗೆದ್ದರೆ ನನಗೆ ಬಹುಮಾನ ಕೊಡುತ್ತೀರಾ?" ಎಂದದ್ದನ್ನು. ಎಲ್ಲರೂ ಕೇಳಿಸಿಕೊಂಡು ಮತ್ತು ಕೇಳಿ ಬಂದ ದಿಕ್ಕಿಗೆ ಹೊರಳಿ ನೋಡಿದರು. ಒಂದು ಹುಡುಗಿ! ಹುಡುಗಿಯರಿಗೆ ಆ ಸ್ಪರ್ಧೆಯಲ್ಲಿ ಪ್ರವೇಶವಿರಲಿಲ್ಲ. ಆಯೋಜಕರಿಗೆ ಏನು ಹೇಳಬೇಕೆಂದು ತಿಳಿಯಲಿಲ್ಲ.

ನೆರೆದಿದ್ದ ಜನಕ್ಕೆ ಒಂದು ರೀತಿ ಮುಜುಗರವೆನಿಸಿತ್ತು. ಹುಡುಗಿಯೊಬ್ಬಳು ಗಂಡಸರ ವಿದ್ಯೆಗೆ ಸವಾಲೊಡ್ಡುವುದೇ? ಎಂಥ ಉದ್ಧಟತನ! ಯಾವ ಹೆಣ್ಣು ಮಗಳೂ ಇಲ್ಲಿವರೆಗೆ ಇಂತಹ ಸಾಹಸ ಮಾಡಿರಲಿಲ್ಲ. ಅವಕಾಶ ಕೊಡಬಾರದೆಂಬುದು ಅಲ್ಲಿ ಸೇರಿದ್ದ ಜನರ ಅಭಿಪ್ರಾಯ. ಆದರೆ ಕೆಲವರು ಅವಕಾಶ ಕೊಡಲಿ ಎಂದು ಕೂಗು ಹಾಕುತ್ತಿದ್ದರು. ಸ್ವಲ್ಪ ಹೊತ್ತು ಸಾಕಷ್ಟು ಗೊಂದಲ, ಗಲಿಬಿಲಿಯ ವಾತಾವರಣ ಸೃಷ್ಟಿಯಾಯಿತು.

ತನ್ನ ಆಪ್ತ ಗೆಳೆಯ ಖುತುಬುದ್ದೀನ್‌ನನ್ನು ಯಾಕೆ ಗದ್ದಲವಾಗುತ್ತಿದೆ ಎನ್ನುವುದನ್ನು ತಿಳಿದು ಬರಲು ಕಳಿಸಿದ. ಕೂಡಲೇ ಖುಬು ಬಿಲ್ಲುವಿದ್ಯಾ ಗುರುವಿನ ಬಳಿ ಬಂದು ವಿಚಾರವೇನೆಂದು ತಿಳಿದು ಮತ್ತೆ ಸಲೀಂಗೆ ವಿವರಿಸಿದ. ಇದನ್ನೆಲ್ಲ ಕೇಳಿದ ಸಲೀಂ ಎಲ್ಲರಂತೆ ಹುಡುಗಿ ಭಾಗವಹಿಸಿದ್ದಕ್ಕೆ ಸಿಟ್ಟಾಗುವುದಕ್ಕೆ ಬದಲಾಗಿ, ಆ ಹುಡುಗಿಯ ನಿಪುಣತನವನ್ನು ಮೆಚ್ಚಿಕೊಂಡು ಭಾಗವಹಿಸಲು ಅನುಮತಿ ನೀಡಿದ್ದೇ ಅಲ್ಲದೆ, ಗೆದ್ದರೆ ನಿಗದಿ ಮಾಡಿದ ಬಹುಮಾನಕ್ಕೆ ಎರಡು ಪಟ್ಟು ಹೆಚ್ಚಿನ ಬಹುಮಾನ ಕೊಡುವುದಾಗಿ ಘೋಷಿಸಿದ.

ನೀಸಾಗೆ ಅನುಮತಿ ಸಿಕ್ಕಿತು. ಎಲ್ಲರ ಎದುರಿಗೆ ಬಂದು ನಿಂತು ಸರಿಯಾಗಿ ಗುರಿಯಿಟ್ಟು ಹೊಡೆದು ಕೃತಕ ಹಕ್ಕಿಯನ್ನು ಒಂದೇ ಬಾಣಕ್ಕೆ ಎರಡು ಭಾಗಗಳಾಗಿ ಸೀಳಿದಳು. ಅಲ್ಲಿ ನೆರೆದಿದ್ದ ಬಹು ದೊಡ್ಡ ಪ್ರೇಕ್ಷಕ ಸಮುದಾಯ ಹರ್ಷೋದ್ಗಾರಗಳನ್ನು

ಮಾಡಿದರು. ಸಲೀಂ ಅಂತೂ ನಿಬ್ಬೆರಗಾಗಿ ನಿಂತುಬಿಟ್ಟ. ಮಾತಿನಂತೆ ಅವಳಿಗೆ ಬಹುಮಾನವನ್ನೂ ಕೊಟ್ಟ. ಆದರೆ ಹುಡುಗಿಯಾಗಿ ಹೀಗೆ ಸಾರ್ವಜನಿಕವಾಗಿ ಕಾಣಿಸಿಕೊಂಡದ್ದು ಮುಸ್ಲಿಂ ಸಂಪ್ರದಾಯದವರಲ್ಲಿ, ಸಮಾಜದಲ್ಲಿ ಒಂದು ಬಗೆಯ ಅಸಮಾಧಾನಕ್ಕೆ ಕಾರಣವಾಯಿತು. ಆದರೆ ಹುಡುಗರನ್ನು ಸೋಲಿಸಿ, ಹುಡುಗಿಯಾಗಿದ್ದೂ ಸ್ಪರ್ಧೆಯಲ್ಲಿ ಗೆದ್ದದ್ದು ಬಹುದೊಡ್ಡ ಸುದ್ದಿಯಾಯಿತು.

ಮಿರ್ಜಾ ಘಿಯಾಸ್ ಬೇಗ್ ತೆಹರಾನಿಯ ಮಗಳಂತೆ! ವಿಷಯ ಎಲ್ಲೆಲ್ಲೂ ಪ್ರಚಾರವಾಯಿತು. ಸ್ವತಃ ಅಕ್ಬರ್ ಬಾದಶಾಹರ ಕಿವಿಗೂ ಮುಟ್ಟಿತು.

ಈ ಎಲ್ಲಾ ಸಂಗತಿಗಳು ಸಲೀಂಗೆ ಮತ್ತೊಮ್ಮೆ ಕಣ್ಣ ಮುಂದೆ ಘಟಿಸಿದಂತಾಯಿತು. ತುಂಬಾ ಸಂತೋಷವಾಯಿತು. ಆ ದಿನದ ಆ ಹುಡುಗಿ ಇವತ್ತು ತನ್ನ ಕಣ್ಣ ಮುಂದೆ ಸೌಂದರ್ಯದ ಪುತ್ಥಳಿಯಂತೆ ನಿಂತಿದ್ದಾಳೆ. 'ಯಾ ಅಲ್ಲಾಹ್ ಏನಿದು ನಿನ್ನ ಕರಿಷ್ಮಾ!" ಎಂದು ತನ್ನಲ್ಲೇ ಉದ್ಗರಿಸಿಕೊಂಡ. ಎಷ್ಟು ಹೊತ್ತು ಇಬ್ಬರೂ ನಿಂತಿದ್ದರೋ ಪ್ರಜ್ಞೆಯೇ ಇರಲಿಲ್ಲ.

ಹೆಣ್ಣು ಮಗಳು ಗಂಡು ಹುಡುಗರ ಜೊತೆ ಸ್ಪರ್ಧೆಯಲ್ಲಿ ಗೆದ್ದು ಪಾರಿತೋಷಕ ಪಡೆದದ್ದು ಜನಜನಿತವಾಗಿತ್ತು. ದರಬಾರಿಗಳಿಗೆ, ಆಸ್ಥಾನಾಧಿಕಾರಿಗಳಿಗೆ, ವರಿಷ್ಠರಿಗೆ, ಶ್ರೀಮಂತರಿಗೆ, ಸಂಬಂಧಿಕರಿಗೆ, ಜನಾನಾದ ಹೊರ ಮತ್ತು ಒಳಗಿನ ಹೆಂಗಸರಿಗೆ ಈ ಸುದ್ದಿ ತಲುಪಿದ್ದೇ ಭಿನ್ನ ಭಿನ್ನ ಪ್ರತಿಕ್ರಿಯೆಗಳಿಗೆ ದಾರಿಯಾಗಿತ್ತು. ಮೆಚ್ಚುವವರು ಹಲವಾರು ಮಂದಿಯಿದ್ದರೆ ಕರುಬಿದವರು, ಅಸೂಯೆ ಪಟ್ಟವರು, ಧೈರ್ಯ ಪ್ರವೃತ್ತಿಯಿಂದ ಕಂಗೆಟ್ಟು ಟೀಕಿಸಿದವರು ಕೆಲವರಿದ್ದರು.

ಸ್ವತಃ ಅಕ್ಬರ್ ಬಾದಶಹಾರಂತೂ ಕೇಳಿ ತಿಳಿದು ಆ ಹುಡುಗಿ ಯಾರೆಂದು ತಿಳಿದ ಮೇಲಂತೂ ಬಹಳವಾಗಿ ಮೆಚ್ಚಿಕೊಂಡಿದ್ದ. ಬಾದಶಾಹರ ಸೇವೆಯಲ್ಲಿಯೇ ಇದ್ದ ಘಿಯಾಸ್ ಬೇಗ್‌ನ ಮಗಳೆಂದ ಮೇಲೆ ಮತ್ತೂ ಉಬ್ಬಿಹೋಗಿದ್ದ. ತನ್ನ ಪ್ರೀತಿಯ ಬೇಗಂ ರುಖೈಯ್ಯಾಳಿಂದ ಆಗಾಗ ನೀಸಾಳ ಗುಣಗಾನವನ್ನು ಕೇಳಿದ್ದ. ಸಲೀಂ ಕೂಡಾ ಅವಳ ಆಗಿನ ಖ್ಯಾತಿಯನ್ನು ಕೇಳಿದ್ದನಾದರೂ ಅವಳನ್ನು ಆ ಪ್ರಸಂಗದ ನಂತರ ನೋಡಿಯೇ ಇರಲಿಲ್ಲ. ಅಂಥಾದ್ದರಲ್ಲಿ ಈಗ ನೇರವಾಗಿ ತನ್ನ ಎದುರೇ ನಿಂತಿದ್ದಾಳೆ! ಹೇಗೆ ಮಾತಾಡಿಸ ಬೇಕೆಂಬುದು ಏನು ಮಾತಾಡಬೇಕೆಂಬುದು ತಿಳಿಯದೆ ದಿಕ್ಕು ದಿಕ್ಕು ನೋಡುತ್ತಿದ್ದ.

ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತಲೇ ಆಲೋಚಿಸುತ್ತಲೇ ನಿಂತಿದ್ದರು. ಎಷ್ಟು ಹೊತ್ತು ತಾನೇ ಹೀಗೆ ನಿಲ್ಲಲು ಸಾಧ್ಯ? ಅಲ್ಲದೆ ಹೋಷಿಯಾರ್ ಏನಾದರೂ ಇಲ್ಲಸಲ್ಲದ್ದನ್ನು ಹೇಳಿದರೆ ಜಗತ್ ಬೇಗಂಳಿಂದ ದೊಡ್ಡ ಅಪಾಯವೇ ಕಾದಿರುತ್ತದೆ. ಅದಕ್ಕಾಗಿ ಇನಿದಾದ ದನಿಯಲ್ಲಿ.

"ಹುಜೂರ್ ಕ್ಷಮಿಸಿ ಗೊತ್ತಿಲ್ಲದೆ ಇಲ್ಲಿಗೆ ಬಂದುಬಿಟ್ಟೆ. ತನ್ನ ತಪ್ಪಿಗೆ ಕ್ಷಮೆ ಕೋರುತ್ತೇನೆ" ಎಂದು ಹೇಳಿ ಹೊರಡಲು ಹೆಜ್ಜೆ ಹಾಕಿದಳು.

"ನಿಲ್ಲು ಹುಡುಗಿ. ನೀನೇ ಅಲ್ಲವೆ ಬಹುಮಾನ ಗೆದ್ದದ್ದು. ದಿವಾನ್ ಘಿಯಾಸ್ ಬೇಗ್‌ರ ಮಗಳು ಎಂದು ತಿಳಿದು ಸಂತೋಷವಾಯಿತು. ಆಗಾಗ ಜನಾನಾಗೆ ಬರುತ್ತಿರುತ್ತೀಯೇನು?"

"ಹೌದು ಹುಜೂರ್, ಪಾದಶಾಹ್ ಬೇಗಂ ರುಖೈಯ್ಯಾ ಅವರ ಸೇವೆಯಲ್ಲಿ

ಇರುತ್ತೇನೆ. ಈಗ ದಯವಿಟ್ಟು ಹೋಗಲು ಅನುಮತಿ ಕೊಡಿ" ಎಂದು ಹೇಳುತ್ತಾ ನಿಲ್ಲದೆ ಸರಸರನೆ ಹೊರಟುಹೋದಳು.

* * *

ಮಿರ್ಜಾ ಘಿಯಾಸ್ ಬೇಗ್‌ನ ಅದೃಷ್ಟವೋ, ನೀಸಾಳ ಅದೃಷ್ಟವೋ ಅಥವಾ ಅವನ ಪ್ರತಿಭೆ, ಬುದ್ಧಿವಂತಿಕೆ, ಚಾಣಾಕ್ಷತನ, ರಾಜನೀತಿಜ್ಞತೆ, ಕಾರ್ಯನಿಷ್ಠೆಗಳೋ ಹಂತಹಂತವಾಗಿ ಅವನನ್ನು ಮೇಲಕ್ಕೇರಿಸಿತ್ತು. ಅಕ್ಬರನ ಅತ್ಯಂತ ವಿಶ್ವಾಸಪಾತ್ರ ಅಧಿಕಾರಿಯಾದ. ಪ್ರಾರಂಭದಲ್ಲಿ ಕೇವಲ 300 ಕುದುರೆಗಳ ಮನಸಬದಾರನಾಗಿದ್ದವನು ಮುಂದೆ 1000 ಮತ್ತು 3000 ಕುದುರೆಗಳ ಮನಸಬದಾರನಾಗಿ ನಂತರ ದಿವಾನ್ ಪದವಿಗೇರಿದ.

ಪ್ರತಿಯೊಂದು ನಿರ್ಧಾರಗಳಲ್ಲಿ ಸೈನಿಕ ಕಾರ್ಯಾಚರಣೆಗಳಲ್ಲಿ ಮಾತ್ರವಲ್ಲದೆ ಅಕ್ಬರನ ಅತ್ಯಂತ ಪ್ರಿಯವಾದ ಬೇಟೆಯಾಟದಲ್ಲಿ ಮಿರ್ಜಾ ಘಿಯಾಸ್ ಅಕ್ಬರನ ಜೊತೆಯಾಗಿರುತ್ತಿದ್ದ. ಇವರಿಬ್ಬರ ಸ್ನೇಹ ನೋಡಿದವರಲ್ಲಿ ಬೆರಗು ಹುಟ್ಟಿಸುತ್ತಿತ್ತು. ಘಿಯಾಸ್ ಇಲ್ಲದೆ ಅಕ್ಬರನನ್ನು ಒಂಟಿಯಾಗಿ ಕಾಣುವುದೇ ಸಾಧ್ಯವಿರಲಿಲ್ಲ.

ಘಿಯಾಸ್ ಮಾತ್ರವೇ ಅಲ್ಲ ಅವನ ಕುಟುಂಬವೂ ರಾಜ ಕುಟುಂಬದ ಜೊತೆಗೆ ಆತ್ಮೀಯವಾಗಿ ಬೆರೆತು ಹೋಗಿತ್ತು. ಜನಾನಾದಲ್ಲಂತೂ ಅಸ್ಮತ್ ತೀರಾ ಪರಿಚಿತಳು. ಅಡುಗೆ ಮನೆ ಉಸ್ತುವಾರಿ ಅವಳದೇ ಆಗಿತ್ತು. ನೀಸಾಳಂತೂ ರುಖೈಯ್ಯಾ ಬಾನು ಬೇಗಂರ ಅಂತರಂಗ ಸಖಿ. ಶಿಷ್ಯೆ ಎಲ್ಲವೂ ಆಗಿದ್ದಳು. ರುಖೈಯ್ಯಾ ಬೇಗಂ ಜನಾನಾದ ರಾಣಿಯಾಗಿದ್ದಳು. ಅವಳ ಆದೇಶವಿಲ್ಲದೆ ಜನಾನಾದಲ್ಲಿ ಏನೂ ನಡೆಯಲು ಸಾಧ್ಯವಿರುತ್ತಿರಲಿಲ್ಲ.

ಬೇಟೆಗೆಂದು ಜೊತೆಗೆ ಹೋದಾಗ ಮಿರ್ಜಾ ಘಿಯಾಸ್ ಬೇಗ್ ಅಕ್ಬರನಿಗೆ ರೋಚಕ ಕಥೆಗಳನ್ನು ಹೇಳುತ್ತಿದ್ದ. ಅವನು ಹೇಳುವ ಕಥೆಗಳನ್ನು, ವಿವರಿಸುವ ಪ್ರಸಂಗಗಳನ್ನು ಕೇಳುವುದಕ್ಕೆಂದೇ ಅಕ್ಬರ್ ತುಡಿಯುತ್ತಿದ್ದ.

ಘಿಯಾಸ್‌ನ ವ್ಯಕ್ತಿತ್ವ, ಪ್ರಾಮಾಣಿಕತೆ, ಕಾರ್ಯದಕ್ಷತೆಗಳಿಂದಲೇ ದಿವಾನ್ ಪದವಿಗೆ, ಪ್ರಾಂತಾಧಿಪತಿ ಪದವಿಗೆ ಏರಲು ಸಾಧ್ಯವಾಯಿತು. ಅವನ ಏಳ್ಗೆ ಅಕ್ಬರನ ಆಸ್ಥಾನಿಕರನೇಕರಲ್ಲಿ ಏಕಕಾಲಕ್ಕೆ ಗೌರವವನ್ನೂ ಹುಟ್ಟಿಸಿತ್ತು. ಅಸೂಯೆಯನ್ನೂ ಹುಟ್ಟಿಸಿತ್ತು.

ಅಕ್ಬರನ ಪ್ರೀತಿ ಸ್ನೇಹ ಗೌರವಗಳು ಘಿಯಾಸ್ ಬೇಗ್‌ಗೆ ಮಾತ್ರವೇ ಸೀಮಿತವಾಗಿರಲಿಲ್ಲ. ಅವನ ಮಕ್ಕಳಾದ ಅಬುಲ್ ಹಸನ್ ಮತ್ತು ಮಹಮ್ಮದ್ ಷರೀಫರಿಗೂ ಅಕ್ಬರ್ ಮತ್ತು ಸಲೀಂನ ಸೇವೆಯಲ್ಲಿ ಇರುವ ಅವಕಾಶ ಕಲ್ಪಿಸಲಾಗಿತ್ತಲ್ಲದೆ ಅಬುಲ್ ಹಸನ್ ಸಲೀಂನ ಆಪ್ತ ಗೆಳೆಯನೂ ಒಡನಾಡಿಯೂ ಆಗಿದ್ದು ಹೆಚ್ಚಿನ ಸಲುಗೆಯನ್ನು ಹೊಂದಿದ್ದ.

ಅನೇಕ ಸಲ ಘಿಯಾಸ್‌ಗೆ ತನ್ನ ಬದುಕಿನ ತಿರುವುಗಳ ಬಗ್ಗೆ ತುಂಬ ಗಂಭೀರವಾಗಿ ಯೋಚಿಸುವಂತಾಗಿತ್ತು. ತನ್ನ ಆಲೋಚನೆಗಳನ್ನು ಹೆಂಡತಿ ಅಸ್ಮತ್‌ಳೊಂದಿಗೆ ಹಂಚಿಕೊಳ್ಳಬೇಕೆನಿಸಿ, ಒಂದು ದಿನ ಮಧ್ಯಾಹ್ನ ಊಟ ಮುಗಿಸಿ ಬಿಡುವಿನ ಸಮಯದಲ್ಲಿ ಅಸ್ಮತ್‌ಳನ್ನು ಕರೆದ.

"ಅಸ್ಮತ್, ನಿನ್ನ ಕೆಲಸ ಮುಗಿಸಿದ್ದರೆ ಬಂದು ಒಂದು ಅರ್ಧ ಗಂಟೆ ನನ್ನ ಜೊತೆ ಕುಳಿತು ಒಂದೆರಡು ಮಾತಾಡಲು ಪುರುಸೊತ್ತಿಲ್ಲವೇ?"

ಅಡುಗೆ ಮನೆಯೊಳಗಿಂದಲೇ

"ಇದೇನಿದು ಯಾವಾಗಲೂ ಕೆಲಸ ಕೆಲಸ ಎಂದು ಓಡುತ್ತಿದ್ದವರು ಇಷ್ಟೊಂದು ನಿರುಮ್ಮಳವಾಗಿ ಕುಳಿತಿರುವುದೇ ಅಲ್ಲದೆ, ಹೆಂಡತಿಯನ್ನೂ ಜೊತೆ ಕೂರಲು ಕರೆಯುತ್ತಿದ್ದೀರಿ. ಯಾ ಅಲ್ಲಾಹ್! ಇದೇನು ಕಾಲ ಬಂತು!"

"ನೋಡು ನಿನ್ನನ್ನು, ನನ್ನ ವಿಮರ್ಶೆ ಮಾಡಲು ಕರೆದು ಕೂರಿಸುತ್ತಿಲ್ಲ. ನಮ್ಮ ಜೀವನದ ಘಟನೆಗಳನ್ನು ಮೆಲುಕು ಹಾಕುವಾಗ ನೀನೂ ಜೊತೆಗಿದ್ದರೆ ಚೆನ್ನಾಗಿರುತ್ತದೆ ಎಂದು ಕರೆಯುತ್ತಿದ್ದೇನೆ. ಹೋಗಲಿ ಬಿಡು. ಬರುವಂತಿದ್ದರೆ ಬಾ, ಇಲ್ಲವಾದರೆ ನಿನ್ನ ಕೆಲಸ ನೀನು ನೋಡಿಕೋ."

"ಅಬ್ಬಬ್ಬ! ಅದೇನು ಸಿಟ್ಟು! ನಿಮಗೇ ಅಲ್ಲಾರೀ, ನನಗೂ ಎಷ್ಟೋ ಸಲ ದೇವರ ಇರಾದೆ ಏನಿದೆ ಎನ್ನುವುದನ್ನು ತಿಳಿಯಲು ಆಗುತ್ತಿಲ್ಲವಲ್ಲ ಎಂದು ಯೋಚಿಸಿದ್ದೇನೆ. ಎಲ್ಲಿಯೋ ದೂರದ ಪರ್ಷಿಯಾದಿಂದ ನಿರಾಶ್ರಿತರಾಗಿ ಉಣಲು, ಉಡಲು ಕೂಡಾ ಕಾಸಿಲ್ಲದೆ ಅಲೆಯುತ್ತಾ ನಮ್ಮ ಭವಿಷ್ಯದ ಚಿಂತೆಯಲ್ಲಿ, ಮೂರೂ ಮಕ್ಕಳನ್ನು ಮತ್ತು ಹೊಟ್ಟೆಯಲ್ಲಿ ಒಂದು ಮಗುವನ್ನು ಇರಿಸಿಕೊಂಡು ಬಂದೆವಲ್ಲ? ಯಾವ ಧೈರ್ಯದಿಂದ? ಎಲ್ಲಕ್ಕಿಂತ ಹೆಚ್ಚಿನ ವಿಚಿತ್ರವೆಂದರೆ ಹೆತ್ತ ಮಗುವನ್ನೇ ಹಾಲೂಡಿಸಲು ಗತಿಯಿಲ್ಲವೆಂದು ಅನಾಥವಾಗಿ ತೊರೆದು ಹೊರಟಿದ್ದೆವಲ್ಲ! ಬೇಡದ ಮಗು ಮತ್ತೆ ಬಂದು ಸೇರಿದ್ದು, ಮಲ್ಲಿಕ್ ಮಾಸೂದರಂತಹ ದೇವತಾ ಮನುಷ್ಯ ದೊರೆತದ್ದು, ನಮ್ಮ ಮತ್ತು ಮಗುವಿನ ಬದುಕಿಗೆ ನೆರವಾಗಿ ನಿಂತದ್ದು, ಆ ಮಗುವಿನ ಭವಿಷ್ಯವನ್ನು ಮಾಸೂದರ ಜೊತೆಗಿನ ಜ್ಯೋತಿಷಿಗಳು ಎಷ್ಟು ಭರವಸೆಯಿಂದ ಹೇಳಿದ್ದು ನೋಡಿದರೆ ಅಲ್ಲಾಹ್‌ನ ಬಹು ದೊಡ್ಡ ಹುನ್ನಾರವಿದೆ ಎನಿಸುತ್ತದೆ" ಎಂದು ಒಂದು ದೀರ್ಘ ನಿಟ್ಟುಸಿರು ಬಿಟ್ಟಳು.

"ಅಸ್ಮತ್ ಬೇಗಂ ಬಾದಶಾಹ್ ಅಕ್ಬರ್ ನಮ್ಮ ಪಾಲಿನ ದೇವರು. ಅಲ್ಲಾಹ್‌ನ ಪ್ರೇರಣೆಯಿಂದಲೇ, ಈಗಿರುವ ಸ್ಥಿತಿ ತಲುಪಿದ್ದೇವೆ. ನಮ್ಮ ನೀಸಾ ನಿಜವಾಗಿಯೂ ಅದೃಷ್ಟ ದೇವತೆ. ಅವಳ ಭವಿಷ್ಯ ಬಹಳ ಉಜ್ವಲವಾಗಿದೆ ಎಂದೇ ಎಲ್ಲರೂ ಹೇಳುತ್ತಿದ್ದಾರೆ. ನಾವೂ ಯಾವುದಾದರೂ ರಾಜವಂಶಕ್ಕೆ ಸೇರಿದ್ದರೆ ಬಾದಶಾಹರು ನಮ್ಮ ಸಂಬಂಧ ಬೆಳೆಸುತ್ತಿದ್ದರು. ಆದರೆ ನಾವು ಅವರ ಸೇವಕರು, ಆಜ್ಞಾಪಾಲಕರು."

"ಆದರೇನಂತೆ! ಪಾದಶಾಹ್ ಬೇಗಂಗಂತೂ ನಮ್ಮ ನೀಸಾ ಎಂದರೆ ಪ್ರಾಣ. ಒಂದೆರಡು ದಿನ ನೋಡದಿದ್ದರೆ ಚಡಪಡಿಸಿಬಿಡುತ್ತಾರೆ."

ಬಾದಶಾಹರೂ ಅಷ್ಟೇ! ಸ್ವಂತ ಸೋದರನಿಗಿಂತ ಹೆಚ್ಚಾಗಿಯೇ ನನ್ನನ್ನು ನಡೆಸಿಕೊಂಡಿದ್ದಾರೆ. ಇಲ್ಲಿಯವರೆಗೆ ಯಾರಿಗೂ ದಕ್ಕದ ಜವಾಬ್ದಾರಿಗಳನ್ನು ನನ್ನ ಹೆಗಲಿಗಿರಿಸಿ, ನನ್ನ ಮೇಲೆ ಭರವಸೆ ತೋರಿದ್ದಾರೆ. ನಿನಗೂ ಗೊತ್ತಿದೆ. ಕಾಬೂಲಿನಲ್ಲಿನ ಅರಾಜಕತೆ, ಅಲ್ಲಿನ ಅಧಿಕಾರಿಗಳ ಉದ್ಧಟತನ, ಅವ್ಯವಸ್ಥೆ, ಹಣಕಾಸಿನ ಸಮಸ್ಯೆ, ಇತ್ಯಾದಿಗಳು ಕಾಣಿಸಿಕೊಂಡಾಗ, ನನ್ನನ್ನು ದಿವಾನ್ ಪದವಿಗೇರಿಸಿ ಅಲ್ಲಿಗೆ ಕಳಿಸಿಕೊಟ್ಟದ್ದು ನನ್ನ ಸಾಮರ್ಥ್ಯದ ಮೇಲಿನ ಭರವಸೆ ಮತ್ತು ಆದಷ್ಟೂ ನಮ್ಮ ಕುಟುಂಬ, ರಾಜ

ಪರಿವಾರಕ್ಕಿಂತ ಯಾವುದೇ ರೀತಿಯಲ್ಲಿ ಕಡಿಮೆ ಇರಬಾರದೆನ್ನುವ ಉದ್ದೇಶ. ಬಾದಶಾಹರ ನಿರೀಕ್ಷೆಗಳನ್ನು ನಾನು ಹುಸಿ ಮಾಡಬಾರದು ಎಂದು ನಂಬಿದವನು."

ನಿಜವಾಗಿಯೂ ಘಿಯಾಸ್ ತನ್ನ ಮಾತಿನಂತೆ ಕಾಬೂಲ್ ತಲುಪಿದ್ದೇ ಅಲ್ಲಿನ ಕೆಲಸ ಕಾರ್ಯಗಳಿಗೆ ಕೈ ಹಚ್ಚಿದ್ದ. ಬೆಳಗಿನಿಂದ ತಡರಾತ್ರಿಯವರೆಗೆ ಬೊಕ್ಕಸದ ಲೆಕ್ಕ ಪತ್ರಗಳನ್ನು ಪರಿಶೀಲಿಸುವುದು, ತಾಳೆ ಮಾಡಿ ನೋಡುವುದು, ಅಸಂಬದ್ಧವೆಂದು ತೋರಿದ ಕೂಡಲೇ ಕ್ರಮ ಕೈಗೊಂಡು ಸಂಬಂಧಪಟ್ಟವರನ್ನು ಕರೆದು ಪ್ರಶ್ನಿಸಿ, ಸರಿಪಡಿಸುವುದು, ಮತ್ತೆಂದೂ ಈ ರೀತಿಯ ತಪ್ಪು ಲೆಕ್ಕಗಳಿಗೆ ಅವಕಾಶ ಕೊಡಬಾರದೆಂದು ತಾಕೀತು ಮಾಡುವುದು. ಇತ್ಯಾದಿ ಎಷ್ಟೋ ಕೆಲಸಗಳ ನಡುವೆ ಮಕ್ಕಳ ವಿಚಾರದಲ್ಲಿ ನಿರ್ಲಕ್ಷ್ಯ ತೋರಲಿಲ್ಲ. ಅವರ ವಿದ್ಯಾಭ್ಯಾಸ, ಶಿಸ್ತು, ನಿಯಮ ಪಾಲನೆಗಳ ಜೊತೆಗೆ ಅವರವರ ಆಸಕ್ತಿಗಳನ್ನು ಗುರುತಿಸಿ, ಅವುಗಳ ಅಭ್ಯಾಸಕ್ಕೆ ಕಲಿಕೆಗೆ ಪ್ರೋತ್ಸಾಹ ನೀಡುತ್ತಿದ್ದ. ಪರ್ಷಿಯಾದಿಂದ ಎಲ್ಲವನ್ನೂ ಕಳೆದುಕೊಂಡು ಭಿಕಾರಿಯಾಗಿ ಬಂದರೂ ತನ್ನಲ್ಲಿದ್ದ ಬಹುದೊಡ್ಡ ಪುಸ್ತಕ ಭಂಡಾರವನ್ನು ಮಾತ್ರ ಹೊತ್ತು ತಂದಿದ್ದ. ಆದರೆ ತನ್ನೆಲ್ಲ ಮಕ್ಕಳಲ್ಲಿ ನೀಸಾಳದು ವಿಭಿನ್ನವಾದ ವ್ಯಕ್ತಿತ್ವ. ಪ್ರತಿಯೊಂದು ವಿಚಾರದಲ್ಲಿಯೂ ಎಲ್ಲಿಲ್ಲದ ಉತ್ಸುಕತೆ ತೋರಿಸುತ್ತಿದ್ದಳು. ಎಲ್ಲ ಮಕ್ಕಳು ಮಲಗಿದರೂ, ನೀಸಾ ಅಪ್ಪನ ಬರವಿಗೆ ಕಾದಿದ್ದು ಬಂದ ಕೂಡಲೇ "ಅಬ್ಬೂ, ಯಾಕಿಷ್ಟು ತಡ ಮಾಡಿದಿರಿ? ಇವತ್ತು ಏನೇನು ಕೆಲಸ ಮಾಡಿದಿರಿ? ಬೊಕ್ಕಸ ಎಂದರೇನು? ಅದು ಹೇಗಿರುತ್ತೆ? ನೀವೇನು ಮಾಡಿದಿರಿ? ಎಂದೆಲ್ಲ ಕೇಳಿದಾಗ ಘಿಯಾಸ್ ಸಿಟ್ಟಾಗದೆ, ಮನಸ್ಸಿನಲ್ಲಿಯೇ ಹೆಮ್ಮೆಪಡುತ್ತಾ ಅವಳಿಗೆ ಪಾಠ ಹೇಳುವಂತೆ ಎಲ್ಲವನ್ನೂ ವಿವರಿಸುತ್ತಿದ್ದ. ಗುಮಾಸ್ತರುಗಳು ಏನೆಲ್ಲಾ ತಪ್ಪು ಮಾಡಿದ್ದರು, ಅವುಗಳನ್ನು ಹೇಗೆ ಸರಿಪಡಿಸಿದೆ. ಹಣದ ವ್ಯವಹಾರ ಬಹಳ ಸಂಕಷ್ಟದ್ದು ಎನ್ನುವುದೆಲ್ಲವನ್ನೂ ವಿವರಿಸಿ ತಿಳಿಸಿದ್ದ."

ನೀಸಾಳಿಗಂತೂ ಕಲಿಯುವುದೆಂದರೆ ಪ್ರಾಣ. ಕಾಬೂಲಿನಲ್ಲಿ ಇರುವಾಗಲೇ ಹಿಂದೂ ಮಹಾಕಾವ್ಯಗಳನ್ನು, ಸಂಸ್ಕೃತ ಭಾಷೆಯನ್ನೂ ಕಲಿತಿದ್ದಳು. ಪರ್ಷಿಯನ್ ಕವಿಗಳಾದ ರುಡಾಲಿ, ಅಮೀರ್ ಖುಸ್ರೋ, ಫಿರ್‌ದೌಸಿ ಇರಾಖಿ, ಹಾತಿಷ್, ಹಾಫೀಜ್, ಉಮರ್ ಖಯ್ಯಾಮ್, ಮೌಲಾನಾ ರೂಮಿ ಮುಂತಾದವರ ಕಾವ್ಯವನ್ನು ಓದಿಕೊಳ್ಳುವಷ್ಟು ಸಮರ್ಥಳಾಗಿದ್ದಳು. ಅವಳದು ವಿಚಿತ್ರ ಸ್ವಭಾವ, ಸಾಮರ್ಥ್ಯ. ಕಲಿಯುವುದರಲ್ಲಿ, ಮಾಡಬೇಕೆಂಬ ಕೆಲಸಗಳನ್ನು ಮಾಡುವುದರಲ್ಲಿ ಹಠ ಹಿಡಿದು ಸಾಧಿಸುತ್ತಿದ್ದಳು. ಮಗಳ ಪ್ರತಿಭೆ, ಸಾಧನೆ ಘಿಯಾಸ್‌ಗೆ ಹೆಮ್ಮೆಯ ವಿಷಯವಾದರೆ, ಅಸ್ಮತ್‌ಳಿಗೆ ಆತಂಕ. ಮುಸ್ಲಿಂ ಸಮುದಾಯದಲ್ಲಿ ಹೆಣ್ಣು ಮಕ್ಕಳಿಗೆ ಹೆಚ್ಚು ಕಲಿಸುವುದು, ಅವರಿಗೆ ಸ್ವಾತಂತ್ರ್ಯ ಕೊಡುವುದು, ಬುರ್ಖಾ ಇಲ್ಲದೆ ಓಡಾಡುವುದು, ಗಂಡಸರ ಜೊತೆ ಮಾತಾಡುವುದು ಇತ್ಯಾದಿಗಳು ನಿಷಿದ್ಧವಾಗಿದ್ದವು. ಈಗಾಗಲೇ ಬಂಧುಗಳಲ್ಲಿ ನೀಸಾ ಬಜಾರಿ ಹೆಂಗಸಿನ ಹಾಗೆ ಎನ್ನುವ ಅಭಿಪ್ರಾಯ ಚಲಾವಣೆಯಲ್ಲಿತ್ತು. ಇಂಥ ಹುಡುಗಿ ನಾಳೆ ಮದುವೆ ಆದರೆ ಸಂಸಾರದ ಪಾಡೇನು? ಅದಕ್ಕಿಂತ ಹೆಚ್ಚಾಗಿ ಯಾರು ತಾನೇ ಈ ದಿಟ್ಟ ಹುಡುಗಿಯನ್ನು ತಂದುಕೊಳ್ಳಲು ಮುಂದೆ ಬರುತ್ತಾರೆ ಎನ್ನುವುದು ಅಸ್ಮತ್‌ಳ ಚಿಂತೆಗೆ ಕಾರಣವಾಗಿತ್ತು. ಹಾಗೆಂದು ನೀಸಾ ಮನೆ ಅಚ್ಚುಕಟ್ಟುತನ, ಅಲಂಕಾರ, ಅಡಿಗೆಗಳ ಬಗ್ಗೆ

ತಿಳಿಯದವಳೇನಾಗಿರಲಿಲ್ಲ. "ಅವಳ ಸಂಪೂರ್ಣ ಭರವಸೆ ನಿಮ್ಮ ಮೇಲಿದೆ ನಿಜ. ಆದರೆ ನೀವು ಬರೀ ಈ ರಾಜಕಾರ್ಯಗಳಲ್ಲಿಯೇ ಮುಳುಗಿಬಿಟ್ಟರೆ, ನಿಮ್ಮೆದುರಿಗೆ ಸಯಾನಿಯಾಗಿ (ಪ್ರಾಯದವಳಾಗಿ) ಓಡಾಡುತ್ತಿರುವುದು ಗಮನಕ್ಕೆ ಬರುತ್ತಿಲ್ಲವೇನು? ಇದೇ ವಯಸ್ಸಿನ ಅವಳ ಗೆಳತಿಯರಿಗೆ ಮದುವೆಯಾಗಿ ಕೆಲವರಿಗಂತೂ ಮಕ್ಕಳೂ ಆಗಿದ್ದಾರೆ."

"ನಿನ್ನ ಚಿಂತೆ ನನಗೆ ಅರ್ಥವಾಗುತ್ತದೆ. ನನ್ನ ಹುಡುಗಿಗೆ ರಾಜಕುಮಾರನಂಥ ಹುಡುಗ ಸಿಗಬೇಕು. ಅವಳ ರೂಪ ನೋಡಲು ಕಣ್ಣೆರಡೂ ಸಾಲದು. ಈ ವಯಸ್ಸಂತೂ ಅವಳ ರೂಪಕ್ಕೆ ಮೆರಗುಕೊಟ್ಟಿದೆ."

"ಬರೀ ರೂಪವೊಂದಿದ್ದರೆ ಸಾಲುವುದಿಲ್ಲ. ಮನೆ, ಗಂಡ, ಮಕ್ಕಳ ನಿರ್ವಹಣೆಯನ್ನೂ ಕಲಿತಿರಬೇಕಲ್ಲ."

"ಕಲಿತಿರಬೇಕು ನಿಜ, ನೀನೇ ಅವಳ ಗುರುವಾಗಿ ಪಾಠ ಹೇಳಿರಬೇಕಲ್ಲ! ಯಾಕೆ ನನ್ನ ನೀಸಾಗೆ ಮನೆ ನೋಡಿಕೊಳ್ಳಲು, ಅಡಿಗೆ ಮಾಡಲು ಬರುವುದಿಲ್ಲವೇನು?"

"ಬರುವುದಿಲ್ಲ ಅಂತ ಹೇಳೋಲ್ಲ. ನಾನು ಹೇಳಿಕೊಟ್ಟ ಅಡಿಗೆಗಳನ್ನೆಲ್ಲಾ ತುಂಬ ಚೆನ್ನಾಗಿಯೇ ಮಾಡಿ ತೋರಿಸಿದ್ದಾಳೆ. ಅಷ್ಟೇ ಅಲ್ಲ, ಅವಳ ಕಸೂತಿ ಕಲೆ, ಚಿತ್ರಕಲೆ, ಕಾವ್ಯ ಬರೆಯುವಲ್ಲಿಯ ಚಮತ್ಕಾರಗಳು ನನಗೂ ಹೆಮ್ಮೆ ಎನಿಸುತ್ತವೆ."

"ಹಾಗಿದ್ದ ಮೇಲೆ ನಿನಗೆ ಯಾಕೆ ಭಯ?"

"ನನಗೆ ಭಯ ಇರುವುದು ಅವುಗಳಲ್ಲಿ ಅಲ್ಲ. ಅವಳು ಕೇಳುವ ಪ್ರಶ್ನೆಗಳು ನನ್ನನ್ನು ತತ್ತರಗೊಳಿಸುತ್ತವೆ. ಹೆಂಗಸರಿಗೆ ಸ್ವಾತಂತ್ರ್ಯ ಯಾಕಿಲ್ಲ. ಅವರನ್ನು ಯಾಕೆ ಓದೋಕೆ ಬಿಡೋಲ್ಲ, ಗಂಡ ಸತ್ತು ಹೋದರೆ ಮತ್ತೆ ಯಾಕೆ ಮದುವೆ ಆಗೋಲ್ಲ. ವಿಧವೆಯರು ಯಾಕೆ ಹಂಗಿನ ಬದುಕು ಬದುಕಬೇಕು? ಅವರನ್ನು ಯಾಕೆ ಕೆಲಸಕ್ಕೆ ಕಳಿಸಿ, ಸ್ವಂತ ಸಂಪಾದನೆಯಿಂದ ಆತ್ಮಗೌರವದಿಂದ ಬದುಕಲು ಬಿಡುವುದಿಲ್ಲ. ಪ್ರಪಂಚದಲ್ಲಿ ಕಲಿಯಬೇಕಾದ್ದೆಲ್ಲ ಗಂಡಸರ ಗುತ್ತಿಗೆಯಾಗಬೇಕೆ? ಹೆಂಗಸರು ಇಂತಹ ಅವಕಾಶಗಳಿಂದ ವಂಚಿತರಾಗಲು ಕಾರಣ ಏನು?" ಹೀಗೆ ನೂರೆಂಟು ಪ್ರಶ್ನೆಗಳನ್ನು ಕೇಳಿ ನನ್ನನ್ನು ಗಾಬರಿಗೊಳಿಸುತ್ತಾಳೆ. ನೋಡಿ ಆದಷ್ಟು ಬೇಗ ಅವಳಿಗೊಂದು ಸರಿಯಾದ ವರನನ್ನು ಹುಡುಕಿ ಮದುವೆ ಮಾಡಿಬಿಡಿ. ನಾಳೆ, ನಾನು ಮದುವೆಯೇ ಆಗೋಲ್ಲ. ಸ್ವತಂತ್ರವಾಗಿ ನನ್ನಿಷ್ಟದಂತೆ ಬದುಕುತ್ತೇನೆಂದು ಹಠ ಮಾಡಿದರೆ ಏನು ಮಾಡುತ್ತೀರಿ? ಸಮಾಜದಲ್ಲಿ ಬಂಧುಗಳ ಎದುರಲ್ಲಿ ನಾವು ಹೇಗೆ ತಾನೆ ತಲೆಯೆತ್ತಿಕೊಂಡು ತಿರುಗುವುದಕ್ಕೆ ಸಾಧ್ಯವಾಗುತ್ತದೆ? ಇತ್ತೀಚೆಗೆ, ಮಾತೆತ್ತಿದರೆ ಅರಮನೆ ಕಡೆ ಓಡುತ್ತಾಳೆ. ಸಾಲದ್ದಕ್ಕೆ ಪಾದಶಾಹ್ ಬೇಗಂ ಕೂಡಾ ಅವಳಿಗೆ ಅತಿಯಾದ ಸಲುಗೆ ಕೊಟ್ಟು ತಲೆ ಮೇಲೆ ಕೂರಿಸಿಕೊಂಡಿದ್ದಾರೆ."

"ಅಸ್ಮತ್ ನಿನ್ನದು ಅದೆಂತಹ ಹುಚ್ಚು. ನಮ್ಮ ಹುಡುಗಿ ರಾಜಪರಿವಾರದವರ ಜೊತೆ ಅಷ್ಟೊಂದು ಸಲುಗೆ ಸ್ನೇಹ ಬೆಳೆಸಿಕೊಂಡಿದ್ದಾಳೆಂದರೆ, ಅದಕ್ಕೆ ನೀನು ಸಂತೋಷ ಪಡಬೇಕು. ಪಾದಶಾಹ್ ಬೇಗಂರೆ ಅವಳಿಗೆ ಸರಿಯಾದ ಹುಡುಗನನ್ನು ಹುಡುಕಿಕೊಡುತ್ತಾರೆ. ಅದಕ್ಕೆ ನಾವು ತಲೆ ಕೆಡಿಸಿಕೊಳ್ಳುವ ಅಗತ್ಯವಿಲ್ಲ."

"ಏನೋ ನೀವು ಇಷ್ಟು ನಿರಾಳವಾಗಿರುವುದನ್ನು ನೋಡಿದರೆ, ಭಯವೂ ಆಗುತ್ತದೆ. ಸಮಾಧಾನವೂ ಆಗುತ್ತದೆ."

ಅಸ್ಮತ್‌ಳ ಭಯಕ್ಕೆ ಕಾರಣವೂ ಇತ್ತು. ಇತ್ತೀಚೆಗೆ ಅವಳು ತನ್ನ ಸೌಂದರ್ಯದ ಬಗ್ಗೆ ಕಾಳಜಿ ವಹಿಸುತ್ತಿದ್ದಳು. ಸಹಜವಾಗಿಯೇ ಅನುಪಮ ಸುಂದರಿಯಾಗಿದ್ದರೂ, ಸೌಂದರ್ಯ ವರ್ಧಕಗಳನ್ನು ಅತಿ ಹೆಚ್ಚಾಗಿ ಬಳಸುತ್ತಿದ್ದಳು. ಉಡುಗೆ ತೊಡುಗೆಗಳ ಆಯ್ಕೆಯಲ್ಲಿ ಅವಳನ್ನು ಮೀರಿಸಲು ಯಾರಿಗೂ ಸಾಧ್ಯವಿರಲಿಲ್ಲ. ದಿನಕ್ಕೆ ಹತ್ತು ಸಲ ಕನ್ನಡಿ ಮುಂದೆ ವಿವಿಧ ಭಂಗಿಗಳಲ್ಲಿ ನಿಂತು ತನಗೆ ತಾನೇ ಹಿಗ್ಗುತ್ತಿದ್ದಳು. ಅವಳು ಈಗಾಗಲೇ ತನ್ನ ಕನಸಿನ ರಾಜಕುಮಾರನನ್ನು ರೂಪಿಸಿಕೊಂಡಿದ್ದಳು. ಆ ರಾಜಕುಮಾರ ಬೇರೆ ಯಾರೂ ಅಲ್ಲದೆ, ಮೊದಲ ಬಾರಿಗೆ ಭೇಟಿಯಾಗಿದ್ದ ಶಹಜಾದಾ ಸಲೀಮನೇ ಆಗಿದ್ದ. ಮದುವೆ ಆಗುವುದಾದರೆ ಅವನನ್ನೇ ಎಂದು ನಿರ್ಧರಿಸಿಬಿಟ್ಟಿದ್ದಳು.

ಸಲೀಂ ಕೂಡಾ ಈಗೀಗ ಪಾದಶಾಹ ಬೇಗಂ ರುಖೈಯ್ಯಾ ಅವರನ್ನು ಕಾಣಲು ಜನಾನಾಗೆ ಭೇಟಿ ಕೊಡುತ್ತಿದ್ದ. ವಾಸ್ತವವಾಗಿ ರುಖೈಯ್ಯಾ ಬೇಗಂರ ಮೇಲಿನ ಪ್ರೀತಿಗಿಂತ ಅಲ್ಲಿ ನೀಸಾ ಭೇಟಿಯಾಗುತ್ತಾಳೆ ಎನ್ನುವ ಭರವಸೆಯಿಂದ!

ರುಖೈಯ್ಯಾ ಬಾನು ಬೇಗಂ ಸಲೀಂನ ಹೆತ್ತ ತಾಯಿ ಅಲ್ಲದಿದ್ದರೂ ಸಲೀಂನ ಬಗ್ಗೆ ಅತಿಯಾದ ವಾತ್ಸಲ್ಯ. ಸಲುಗೆ, ಅಕ್ಬರ್‌ನ ಗದ್ದುಗೆಯನ್ನು ಮುಂದೆ ಏರುವವನು ಅವನೇ ಆಗಬೇಕೆಂಬುದು, ಅಕ್ಬರ್ ಮತ್ತು ರುಖೈಯ್ಯಾ ಇಬ್ಬರದೂ ಆಸೆಯಾಗಿತ್ತು. ಅಕ್ಬರನ ಉಳಿದ ಮಕ್ಕಳಾದ ದಾನಿಯಾಲ್, ಮುರಾದರು ಯಾವುದೇ ರೀತಿಯಲ್ಲಿ ಯೋಗ್ಯರಾಗಿರಲಿಲ್ಲ. ಸದಾಕಾಲ ಹೆಂಡ, ಹೆಣ್ಣುಗಳ ವಿಲಾಸದಲ್ಲಿ ಮೆರೆಯುತ್ತಿದ್ದರು. ಹಾಗೆ ನೋಡಿದರೆ ಸಲೀಂ ಕೂಡಾ ಅಂತಹ ಸಾಚಾ ವ್ಯಕ್ತಿಯೇನೂ ಆಗಿರಲಿಲ್ಲ. ಅವನೂ ಕೂಡಾ ಹೆಂಡ, ಹೆಣ್ಣುಗಳ ಮಧ್ಯೆ ಮುಳುಗಿ ಹೋಗುತ್ತಿದ್ದ. ಅವನ ಸುತ್ತ ಸುಂದರ ಅಲಂಕೃತ ಹೆಣ್ಣುಗಳು ಘಾಟು ಪರಿಮಳವನ್ನು ಹೊಮ್ಮಿಸುತ್ತ, ತಮ್ಮ ಹಾವ, ಭಾವ ಭಂಗಿಗಳಿಂದ ನಿಂತು ರತಿ ವಿಲಾಸದ ಹೊಗರನ್ನು ಚಿಮ್ಮಿಸುತ್ತಿದ್ದರು. ಒಂದೊಂದು ಬಟ್ಟಲು ಮದ್ಯ ಸೇವನೆಯಿಂದ ಕ್ಷಣಕ್ಷಣಕ್ಕೂ ಮತ್ತೇರಿಸಿಕೊಂಡು ಕೈಗೆ ಸಿಕ್ಕಿದ ಹೆಣ್ಣುಗಳನ್ನೆಲ್ಲಾ ಸೆಳೆದಪ್ಪಿ ಮುತ್ತಿಟ್ಟು ಗೋಳಾಡಿಸಿ ಬಿಡುತ್ತಿದ್ದ. ಇಂತಹ ಸಂದರ್ಭಗಳಲ್ಲಿ ಅವನ ಪ್ರೀತಿಯ ಹೆಂಡತಿಯಾಗಿದ್ದ ಮಾನ್‌ಬಾಯಿ, ಜಗತ್‌ಗೋಸಿನಿಯರು ಅವನನ್ನು ಎಷ್ಟೇ ಪುಸಲಾಯಿಸಿ ಸಮಾಧಾನಿಸಿದರೂ ದೂರ ತಳ್ಳಿಬಿಡುತ್ತಿದ್ದ. ಆದರೆ ಅವನಲ್ಲಿ ಶೌರ್ಯ, ಸಾಹಸ ವಿವೇಕಗಳು ಇದ್ದು, ಅವನೊಬ್ಬ ಮಾತ್ರವೇ ಸಾಮ್ರಾಜ್ಯದ ಒಡೆತನಕ್ಕೆ, ಸಿಂಹಾಸನದ ಅಧಿಕಾರಕ್ಕೆ ಅರ್ಹನಾಗಿರಬಲ್ಲನೆಂಬುದು ಅಕ್ಬರ್‌ನ ಬಲವಾದ ನಂಬಿಕೆಯಾಗಿತ್ತು. ಏನಿದ್ದರೂ ಅವನಿಗೆ ಸರಿದಾರಿ ತೋರುವಂತಹವರು ಯಾರಾದರೂ ಒಬ್ಬರ ಅವಶ್ಯಕತೆ ಇತ್ತು. ಅಕ್ಬರನೇ ಒಮ್ಮೆ ಅವಕಾಶ ಸಿಕ್ಕಾಗ ಅವನನ್ನು ವಿಶ್ವಾಸಕ್ಕೆ ತೆಗೆದುಕೊಂಡು, ತನ್ನ ಮನದಾಳದ ಆತಂಕಗಳನ್ನು, ಭರವಸೆಗಳನ್ನು ಹೇಳಿಕೊಂಡಿದ್ದ. ಅಕ್ಬರ್ ಸಲೀಂನನ್ನು ಪ್ರೀತಿಯಿಂದ 'ಶೇಕುಬಾಬಾ' ಎಂದು ಸಂಬೋಧಿಸಿ ಐವತ್ತು ವರ್ಷಕ್ಕೂ ಮಿಗಿಲಾಗಿ ತಾನು ರಾಜ್ಯಭಾರ ಮಾಡಿದ ರೀತಿಯನ್ನು ವಿವರಿಸಿ, ಅದರಂತೆ ಅವನೂ ಆಗಬೇಕೆಂದು ಕೇಳಿಕೊಂಡಿದ್ದ. ಆದರೆ ಸಲೀಂ ಅಕ್ಬರ್‌ನ ಮಾತುಗಳನ್ನು ಗಂಭೀರವಾಗಿ ತೆಗೆದುಕೊಳ್ಳದೆ, ಏನೋ ನೆಪ ಹೇಳಿ ಅಲ್ಲಿಂದ ಏಳಲು ಪ್ರಯತ್ನಿಸಿದ. ಆದರೆ ಆ ದಿನ ಅಕ್ಬರ್ ತನ್ನ ಅಳಲನ್ನು ಅವನಲ್ಲಿ ಹೇಳಿಕೊಳ್ಳದೆ ಬಿಡಬಾರದೆಂದು

ನಿರ್ಧರಿಸಿಯೇ ಬಂದ ಹಾಗಿದ್ದ. ಆತ್ಮೀಯತೆಯಿಂದ, ಗದ್ಗದ ಕಂಠದಿಂದ, ಅಸಹಾಯಕ ದನಿಯಿಂದ "ಶೇಕು, ನಿನಗೆ ಬೇಸರ ತರಿಸುವ ಉದ್ದೇಶ ನನ್ನದಲ್ಲ. ಇನ್ನು ಮುಂದೆ ನೀನೇ ಈ ಮುಘಲ್ ಸಾಮ್ರಾಜ್ಯದ ಉತ್ತರಾಧಿಕಾರವನ್ನು ವಹಿಸಿಕೊಳ್ಳಬೇಕು. ನಿನ್ನ ತಾತ, ಮುತ್ತಾತಂದಿರು ಎಲ್ಲಿಂದಲೋ ಬಂದು ಕಷ್ಟಪಟ್ಟು ತಮ್ಮ ಶೌರ್ಯ ಸಾಮರ್ಥ್ಯಗಳಿಂದ ಇಷ್ಟು ದೊಡ್ಡ ಸಾಮ್ರಾಜ್ಯವನ್ನು ಕಟ್ಟಿ ಹೆಸರು ಮಾಡಿದರು. ದುರದೃಷ್ಟವೆಂಬಂತೆ ನನ್ನ ತಂದೆ ಬಾದಶಾಹ ಹುಮಾಯೂನ್‌ರ ಆಕಸ್ಮಿಕ ನಿಧನದಿಂದ ಕೇವಲ ಹದಿಮೂರು ವರ್ಷದವನಾಗಿದ್ದಾಗಲೇ ಸಾಮ್ರಾಜ್ಯದ ಹೊರೆಯನ್ನು ಹೆಗಲಿಗೇರಿಸಿಕೊಂಡು ನಿರಂತರ ಸೇನಾ ಕಾರ್ಯಾಚರಣೆಯಲ್ಲಿಯೇ ಬದುಕನ್ನು ಕಳೆದು, ನನ್ನವರು ಕಟ್ಟಿದ ಸಾಮ್ರಾಜ್ಯವನ್ನು ವಿಸ್ತರಿಸಿ, ಪ್ರಜೆಗಳ ಕಣ್ಣಲ್ಲಿ ಮಹಾ ಸಾಮ್ರಾಟನಾಗಿ ಅಬುಲ್–ಫತ್‌ಜಲಾಲ್–ಉದ್ ದಿನ್ ಮುಹಮ್ಮದ್ ಅಕ್ಬರ್ ಎಂದು ಕರೆಸಿಕೊಂಡೆ. ನನ್ನ ಮಕ್ಕಳಲ್ಲಿ ಯಾರಾದರೊಬ್ಬರು ಈ ಮಹಾನ್ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗಬೇಕೆಂದುಕೊಂಡೆ. ಆದರೆ ನನ್ನ ಬಯಕೆ ಬಯಕೆಯಾಗಿಯೇ ಉಳಿಯುವುದೇನೋ! ನಿನ್ನ ಇಬ್ಬರು ತಮ್ಮಂದಿರೂ ಮದ್ಯವ್ಯಸನಿಗಳು. ಅವರಲ್ಲಿ ಭರವಸೆ ಸಾಧ್ಯವಿಲ್ಲ. ನೀನೊಬ್ಬನೇ ನನ್ನ ಕನಸು, ಭರವಸೆ. ಆದರೆ ನೀನೂ ಅವರಂತಾದರೆ ನಾನೇನು ಮಾಡಬೇಕು. ಸಾಮ್ರಾಜ್ಯಗಳನ್ನು ಕನಸುಗಳಿಂದ ಕಟ್ಟಲು ಆಗುವುದಿಲ್ಲ ಮಗು. ನಾನೆಷ್ಟು ಹರಕೆ ಹೊತ್ತು, ಶೇಕ್ ಸಲೀಂ ಚಿಶ್ತಿಬಾಬಾರ ಅನುಗ್ರಹದಿಂದ ನಿನ್ನನ್ನು ಪಡೆದೆ. ಆದರೆ ಅವರು ಒಂದು ಎಚ್ಚರಿಕೆಯನ್ನು ಕೊಟ್ಟಿದ್ದರು. ಹುಟ್ಟಿದ ಮಕ್ಕಳಿಂದ ನಿನ್ನ ಸಾಮ್ರಾಜ್ಯ ಎಷ್ಟರಮಟ್ಟಿಗೆ ಮುಂದುವರೆಯುತ್ತದೆ, ಎಷ್ಟರ ಮಟ್ಟಿಗೆ ನಿಮ್ಮ ಸುಖ ಸಂತೋಷಗಳಿಗೆ ಕಾರಣರಾಗುತ್ತಾರೆ ಅನ್ನುವುದನ್ನು ಹೇಳಲಾಗುವುದಿಲ್ಲ ಎಂದಿದ್ದರು. ಅವರ ಮಾತನ್ನು ಹುಸಿ ಮಾಡುವುದಕ್ಕಾದರೂ ನೀನು ನಿನ್ನ ಚಟಗಳನ್ನು ಬಿಟ್ಟು ಸಾಮ್ರಾಜ್ಯ ನಿರ್ಮಾಣದ ವಿಷಯದಲ್ಲಿ ಆಸಕ್ತಿ ಮೂಡಿಸಿಕೋ. ನನಗೋ ವಯಸ್ಸಾಯಿತು. ಇನ್ನೂ ಎಷ್ಟು ದಿನ ಈ ಹೊಣೆ ಹೊರಲಿ ಶೇಕು?" ಎಂದು ಅಂತರಾಳದ ನೋವನ್ನು ಹೊರಚೆಲ್ಲಿದ್ದ. ಆದರೆ ಸಲೀಂ ಇದನ್ನು ಎಷ್ಟು ಗಂಭೀರವಾಗಿ ತೆಗೆದುಕೊಂಡನೋ ಹೇಳಲಾಗುವುದಿಲ್ಲ.

* * *

ಈಗ ನೋಡಿದರೆ, ಖುತುಬುದ್ದೀನ್ ಖಾನ್ ಕೋಕಾ ಮಹಮ್ಮದ್‌ಖಾನ್, ಮುಹಮ್ಮದ್ ಷರೀಫ್‌ರ ಗೆಳೆತನದಲ್ಲಿ ಇನ್ನಷ್ಟು ಹದಗೆಡುತ್ತಿದ್ದಾನೆ. ಸಾಮ್ರಾಜ್ಯದ ಆಕಾಂಕ್ಷೆಯೇನೋ ಪ್ರಬಲವಾಗಿದೆ. ಆದಷ್ಟು ಬೇಗ ಸಿಂಹಾಸನವನ್ನು ಹಿಡಿಯಬೇಕೆಂಬ ದುರಾಸೆಯಲ್ಲಿ ಒಮ್ಮೊಮ್ಮೆ ತಂದೆಯ ಸಾವನ್ನು ಹಾರೈಸುತ್ತಿದ್ದ. ಒಮ್ಮೆ ಅಕ್ಬರನ ಹುಟ್ಟು ಹಬ್ಬದ ದಿನ, ಗೆಳೆಯರ ಜೊತೆ ಮಸಲತ್ತು ಮಾಡಿ ಅಕ್ಬರ್‌ಗೆ ವಿಷ ತಿನ್ನಿಸಿ, ತೀರಾ ಅನಾರೋಗ್ಯಕ್ಕೆ ಗುರಿಯಾಗುವಂತೆ ಮಾಡಿದರೂ, ಯಾರಿಗೂ ಸುಳಿವು ಹತ್ತಲಿಲ್ಲ. 'ವಿಷ' ಕೊಟ್ಟ ವೈದ್ಯನನ್ನು, ವಿಷಯ ತಿಳಿದವರನ್ನು ಕ್ರೂರವಾಗಿ ಕೊಲೆ ಮಾಡಿಸಿದ್ದ. ಇಂತಹ ಪಿತೃದ್ರೋಹಿಯ ವಿಚಾರ ಅಕ್ಬರನಿಗೆ ಸುಳಿವೂ ಹತ್ತಲಿಲ್ಲ.

ಸಲೀಂನ ಮಹತ್ವಾಕಾಂಕ್ಷೆಗಳು, ಆದಷ್ಟು ಬೇಗ ಅಕ್ಬರ್‌ನನ್ನು ಸಿಂಹಾಸನದಿಂದ

ತೊಲಗಿಸಲು ಮಾಡಿದ ಹುನ್ನಾರಗಳು, ಅಬುಲ್ ಫಜಲ್ ಬಲ್ಲವನಾಗಿದ್ದರಿಂದ, ಅವನನ್ನೂ ಒಂದು ರಾಜಕೀಯ ಸೈನ್ಯಾಚರಣೆಯ ಸಂದರ್ಭದಲ್ಲಿ ಕೊಲೆ ಮಾಡಿಸಿದ. ಸಲೀಂನ ಮಗ ಖುಸ್ರೋಗೂ ಸಿಂಹಾಸನದ ಮಹತ್ವಾಕಾಂಕ್ಷೆ. ಅಪ್ಪನ ವಿರುದ್ಧವಾಗಿಯೇ, ಸೋದರ ಮಾವ ಮಾನ್‌ಸಿಂಗ್ ಮತ್ತು ಹೆಣ್ಣು ಕೊಟ್ಟ ಮಾವ ಮಿರ್ಜಾ ಅಜೀಜ್ ಕೋಕಾರ ಸಹಾಯದಿಂದ, ತಿರುಗಿಬಿದ್ದ, ಮೊದಲಿನಿಂದಲೂ ಖುಸ್ರೋಗೆ ತಂದೆಯ ಬಗ್ಗೆ ಅಷ್ಟೊಂದು ಪ್ರೀತಿಯಿರಲಿಲ್ಲ. ತನ್ನ ತಾಯಿ ಮಾನ್‌ಬಾಯಿ(ಶಾಹ್‌ಬೇಗಂ) ಯನ್ನು ಸಲೀಂ ಸರಿಯಾಗಿ ನಡೆಸಿಕೊಳ್ಳುತ್ತಿಲ್ಲವೆಂಬ ಭಾವನೆ. ಮಾನ್‌ಬಾಯಿಯೂ ಕೂಡಾ ತನ್ನ ನೋವನ್ನು ಮಗನೊಂದಿಗೆ ಅವಕಾಶ ಸಿಕ್ಕಾಗಲೆಲ್ಲ ಹಂಚಿಕೊಂಡಿದ್ದಳು. ಅದೂ ಕೂಡಾ ಖುಸ್ರೋ ಮನಸ್ಸಿನಲ್ಲಿ ಕಾಡುತ್ತಲೇ ಇತ್ತು. ಈ ಕಾರಣಕ್ಕಾಗಿಯೂ ತಂದೆಯನ್ನು ಸೋಲಿಸಿ, ಮೊಘಲ್ ಸಿಂಹಾಸನವನ್ನು ಆಕ್ರಮಿಸಿಕೊಳ್ಳಬೇಕೆಂದು ಪ್ರಯತ್ನಿಸಿದ. ಆದರೆ ಸಲೀಂ ವಯಸ್ಸಿನಲ್ಲಿ, ಬುದ್ಧಿಯಲ್ಲಿ, ಪರಾಕ್ರಮದಲ್ಲಿ ಮತ್ತು ಅವನ ರಾಜನೀತಿ ತಂತ್ರಜ್ಞಾನದಲ್ಲಿ ಮುಂದಿದ್ದ. ಹೆಂಡತಿಗೆ, ಮಗನಿಗೆ ಬುದ್ಧಿ ಹೇಳುವಂತೆಯೂ ತಿಳಿಸಿದ್ದ. ಆದರೆ ಮಾನ್‌ಬಾಯಿಗೆ, ತಂದೆ ಮಗನ ನಡುವೆ ಸೌಹಾರ್ದತೆ ಹುಟ್ಟು ಹಾಕಲು ಸಾಧ್ಯವಾಗಲಿಲ್ಲ. ಇದರಿಂದಾಗಿ ಆತ್ಮಹತ್ಯೆಗೆ ಒಳಗಾದಳು.

ಸಲೀಂನ ಬಗ್ಗೆ ಅಕ್ಬರ್‌ನ ಬೇಸರ ಎಷ್ಟೇ ಇದ್ದರೂ, ತನ್ನ ಉತ್ತರಾಧಿಕಾರಿ ಅವನೇ ಆಗಬೇಕೆಂಬುದೇ ಇಚ್ಛೆಯಾಗಿತ್ತು.

ಸಲೀಂನ ಮದುವೆಗಳೂ ರಾಜಕೀಯ ಕಾರಣಗಳಿಂದ ಆದವುಗಳೇ ಹೊರತು, ತನ್ನಿಚ್ಛೆಯಂತೆ, ತಾನು ಮೆಚ್ಚಿದವರ ಜೊತೆ ಮದುವೆಯಾದದ್ದಲ್ಲ. ಮೊದಲ ಬಾರಿಗೆ ನೀಸಾಳ ಸೆಳೆತಕ್ಕೆ ಒಳಗಾಗಿದ್ದ. ಹೇಗಾದರೂ ಅವಳನ್ನು ಮದುವೆಯಾಗಲೇಬೇಕೆಂದು ನಿರ್ಧರಿಸಿದ. ಆದರೆ ತನ್ನ ನಿರ್ಧಾರಗಳಿಗೆ ಅಸ್ತು ಸಿಗಬಹುದಾದ ಸಾಧ್ಯತೆಗಳ ಬಗ್ಗೆ ಸಂದೇಹವಿದ್ದೇ ಇತ್ತು. ಅಪ್ಪ ಖಂಡಿತ ಒಪ್ಪುವುದಿಲ್ಲವೆನ್ನುವುದು ತಿಳಿದಿತ್ತು. ಏನಾದರೂ ಪಾದಶಾಹ ಬೇಗಂ ರುಖೈಯ್ಯಾ, ಮಧ್ಯೆ ಪ್ರವೇಶಿಸಿ ಶಿಫಾರಸ್ಸು ಮಾಡಿದರೆ ಸಾಧ್ಯವಾಗಬಹುದೇನೋ ಎನ್ನುವ ದೂರದ ಆಸೆಯೊಂದಿತ್ತು. ಅದೊಂದು ಪ್ರಯತ್ನಕ್ಕೆ ಮುಂದಾಗುತ್ತಿದ್ದ.

ಘಿಯಾಸ್ ಮತ್ತು ಅಸ್ಮತ್ ದಂಪತಿಗಳಿಗೆ ಇದು ತಿಳಿದಿರಲಿಲ್ಲ. ನೀಸಾಳ ಮದುವೆಯ ಕನಸುಗಳಲ್ಲಿ ಮುಳುಗಿರುತ್ತಿದ್ದರು. ಘಿಯಾಸ್ ಬೇಗ್‌ಅಂತೂ ತನ್ನ ಮಗಳಿಗೆ ಅತ್ಯಂತ ಸುಂದರ, ಯೋಗ್ಯ ಯುವಕನೇ ಸಿಗುತ್ತಾನೆ ಎನ್ನುವ ಭರವಸೆಯಲ್ಲಿದ್ದ. ಆದರೆ ಈ ಭರವಸೆಗೆ ವಿರುದ್ಧವಾದ ಚಟುವಟಿಕೆಗಳು ಮುಂದುವರೆಯುತ್ತಿದ್ದವು.

ನೀಸಾಳ ಬಗ್ಗೆ ಇಲ್ಲ ಸಲ್ಲದ ವದಂತಿಗಳು ದೊಡ್ಡದಾಗಿ ಸುದ್ದಿ ಮಾಡುತ್ತಿದ್ದವು. ಜಗತ್‌ಗೋಸಿನಿ ನೇಮಿಸಿದ್ದ ಹೋಷಿಯಾರ್ ಖಾನನಿಂದ ನೀಸಾ ಮತ್ತು ಸಲೀಂರ ಬಗ್ಗೆ ವಿಷಯಗಳು ತಿಳಿಯುತ್ತಿದ್ದವು. ಜನಾನಾದ ಹೆಂಗಸರಿಗೆ ಒಬ್ಬರಿಂದ ಒಬ್ಬರಿಗೆ ಈ ಪ್ರಣಯ ಕತೆ ರಟ್ಟಾಗಿ ಹೋಗಿತ್ತು. ಜಗತ್‌ಗೆ ಇನ್ನು ಸುಮ್ಮನಿದ್ದರೆ, ವಿಷಯ ಕೈಮೀರಿ ಹೋಗುತ್ತದೆ ಎನಿಸಿ ಪರಿಹಾರಕ್ಕೆ ಯೋಚಿಸುತ್ತಿದ್ದಳು.

ನೀಸಾಳ ಪೂರ್ವ ವೃತ್ತಾಂತಗಳ ಬೆನ್ನೇರಿ ಅಸ್ಮತ್ ಮತ್ತು ಘಿಯಾಸ್ ಬೇಗ್‌ರ

ಬಂಧುಗಳು-ರಕ್ತ ಸಂಬಂಧಿಗಳು ಎಲ್ಲರಿಗೂ ನೀಸಾಳ ಹುಟ್ಟಿನ ಬಗ್ಗೆ ಹೇಳಿ ಕೇಳಿ ತಿಳಿದವರಾಗಿದ್ದರು. ಅವಳ ಸುತ್ತ ಬೆಳೆದ ಕತೆಯ ಚರ್ಚೆಯಾಗತೊಡಗಿತು. ಪರ್ಷಿಯಾದಿಂದ ಪ್ರಯಾಣ ಹೊರಟದ್ದು, ಮರಳುಗಾಡಿನ ಮೂಲಕ ಹಾದು ಬರುವಾಗ ಅನುಭವಿಸಿದ ಕಷ್ಟಗಳು, ಘಿಯಾಸ್‌ನ ಬಸುರಿ ಹೆಂಡತಿ ಪಟ್ಟ ಪಾಡು, ಕಷ್ಟ ಪರಿಸ್ಥಿತಿಯಲ್ಲಿ ಹುಟ್ಟಿದ ಮಗು. ಆ ಮಗುವಿನ ಬಗ್ಗೆ ಅವರ ಜೊತೆಗಿದ್ದ ಕ್ಯಾರಾವಾನಿಗೆ(ವ್ಯಾಪಾರಿ) ಮಲ್ಲಿಕ್ ಮಾಸೂದ್ ಸ್ನೇಹಿತರು ನುಡಿದ ಭವಿಷ್ಯ, ಹಾವಿನ ಹೆಡೆಯ ರಕ್ಷಣೆಯಲ್ಲಿದ್ದ ಮಗು-ಅಂತೂ ಇಂತೂ ಹಿಂದೂಸ್ತಾನ ತಲುಪಿದ್ದು, ಅಕ್ಬರ್ ಬಾದಶಾಹರ ಆಶ್ರಯ ಪಡೆದು, ನೋಡನೋಡುತ್ತಿದ್ದಂತೆ ಆ ಕುಟುಂಬದ ಅದೃಷ್ಟ ಪರಾಕಾಷ್ಠೆ ತಲುಪಿದ್ದು ಇದೆಲ್ಲ ಕೇಳಿದವರಿಗೆ ಹುಟ್ಟಿದ ಮಗು ನೀಸಾಳ ಅದೃಷ್ಟವೆ ಕಾರಣವಾಗಿರುವುದರಿಂದ, ಅವಳ ಮದುವೆಯೂ ಶಹಜಾದಾ ಸಲೀಂನೊಂದಿಗೆ ಆದರೆ ಅಚ್ಚರಿಯೇನಲ್ಲ ಎಂದುಕೊಳ್ಳುತ್ತಿದ್ದರು. ಕೆಲವರು ಬೆರಗಿನಿಂದ ಹೇಳಿಕೊಂಡು ಸಂಭ್ರಮಿಸುತ್ತಿದ್ದರೆ, ಮತ್ತೆ ಕೆಲವು ವಲಯಗಳಲ್ಲಿ ಏಳಿಗೆಯನ್ನು ಸಹಿಸದವರು ಮೆಹರುನ್ನೀಸಾಳ ಬಗ್ಗೆ, ಅವಳ ಮತ್ತು ಸಲೀಂನ ನಡುವೆ ಇದ್ದ ರಹಸ್ಯ ಪ್ರೇಮಸಂಬಂಧಗಳ ಬಗ್ಗೆ ಒಡಕು ಮಾತುಗಳನ್ನು ಆಡಲು ತೊಡಗಿದ್ದರು.

ಹೀಗೆ ಅಲ್ಲಲ್ಲಿ ಕೇಳಿಬರುತ್ತಿದ್ದ ಅವರಿಬ್ಬರ ನಡುವಿನ ಪ್ರೀತಿಯ ವಿಷಯ, ಹೊರಗಿನಿಂದ ಅರಮನೆಯನ್ನೂ ಪ್ರವೇಶಿಸಿತು. ಗಣ್ಯವ್ಯಕ್ತಿಗಳ, ಅಧಿಕಾರಿಗಳ, ಸಭಾಸದರ ಕಿವಿಗಳನ್ನೂ ತಲುಪಿತು. ಇಷ್ಟಾದ ಮೇಲೆ ಅಕ್ಬರ್ ಬಾದಶಾಹರ ಕಿವಿ ಮುಟ್ಟುವುದಕ್ಕೆ ಹೆಚ್ಚು ಕಾಲ ಹಿಡಿಸಲಿಲ್ಲ. ಬಾದಶಾಹ್ ಅಕ್ಬರ್‌ಗೆ ಇದರ ಸತ್ಯಾಸತ್ಯತೆ ತಿಳಿಯದ ಹೊರತು ಯಾವುದೇ ಕ್ರಮ ಕೈಗೊಳ್ಳುವುದು ಸರಿಯಲ್ಲವೆನಿಸಿತು. ತನ್ನ ಸಾಮ್ರಾಜ್ಯದ ಭಾವೀ ಚಕ್ರವರ್ತಿಯನ್ನು ಸೆಳೆದುಕೊಳ್ಳುವಷ್ಟು ಸುಂದರ ಹುಡುಗಿ ಯಾರೆಂಬುದನ್ನು ತಿಳಿದುಕೊಳ್ಳಬೇಕೆಂದು ನಿರ್ಧರಿಸಿದ.

* * *

## ಮೆಹರುನ್ನೀಸಾಳ ಸುತ್ತ

ಅಕ್ಬರ್ ಬಾದಶಾಹ್ ಅಂದುಕೊಂಡಂತೆ, ತನ್ನ ಮಗ ಸಲೀಂನನ್ನು ಆಕರ್ಷಿಸಿದ ಹುಡುಗಿ ಮೆಹರುನ್ನೀಸಾಳ ಬಗ್ಗೆ ವಿಷಯಗಳನ್ನು ತನ್ನ ಪ್ರೀತಿಯ ಬೇಗಂ ರುಖೈಯ್ಯಾ ಸುಲ್ತಾನಳಿಂದ, ತನ್ನ ಆಸ್ಥಾನಿಕರಿಂದ, ಅಧಿಕಾರಿಗಳಿಂದ, ತನ್ನ ಪರಿವಾರದವರಿಂದ, ಜನಾನಾದ ಹೆಂಗಸರಿಂದ, ಮಾತ್ರವೆ ಅಲ್ಲದೆ ಸೊಸೆ ಜಗತ್‌ಗೋಸಿನಿಯಿಂದ ಮತ್ತು ಇತರರಿಂದ ಸಂಗ್ರಹಿಸಿದ.

ಜಗತ್‌ಗೋಸಿನಿ ಸ್ವತಃ ಬಾದಶಾಹರನ್ನು ಭೇಟಿಯಾಗಿ ಶಹಜಾದಾ ಸಲೀಂನಿಂದ ತನಗಾಗುತ್ತಿರುವ ಅನ್ಯಾಯವನ್ನು ಹೇಳಿಕೊಂಡಳು. ಇತ್ತೀಚೆಗೆ ಶಹಜಾದಾ ಸಲೀಂರ ನಡವಳಿಕೆ ಸರಿಯಾಗಿಲ್ಲವೆಂದೂ, ತನ್ನನ್ನು ಕಾಣಲು ಬರುತ್ತಿಲ್ಲವೆಂದೂ ಮೂರು ಹೊತ್ತೂ ಮದ್ಯ ಸೇವನೆಯಲ್ಲಿ ಮುಳುಗಿ, ಎಚ್ಚರ ತಪ್ಪಿ ಬೀಳುತ್ತಿದ್ದುದೂ, ಬಿದ್ದಾಗ, ಅರೆಮರೆಪಿನಲ್ಲಿ, ನೀಸಾ ನೀಸಾ ಎಂದು ಬಡಬಡಿಸುವುದನ್ನು ವಿವರಿಸಿದಳು. ಮಗನನ್ನು

ಕರೆದು ಬುದ್ಧಿ ಹೇಳಬೇಕೆಂದು ಪ್ರಾರ್ಥಿಸಿಕೊಂಡಳು. ಇದರ ಜೊತೆಗೆ ಪಾದಶಾಹ್ ಬೇಗಂ ರುಖೈಯ್ಯಾ ಸುಲ್ತಾನರ ಕುಮ್ಮಕ್ಕು ಇರಬಹುದೆಂದೂ ಸೂಚಿಸಿದಳು. ನೀಸಾ ಮತ್ತು ರುಖೈಯ್ಯಾ ಬೇಗಂರ ನಡುವಿನ ಆತ್ಮೀಯ ನಂಟಿನ ಬಗ್ಗೆ ಬಣ್ಣಗಟ್ಟಿ ವಿವರಿಸಿದಳು.

ಇದೆಲ್ಲಾ ಕೇಳಿದ ಮೇಲೆ, ಅಕ್ಬರ್‌ಗೆ ವಿಷಯದ ಗಂಭೀರತೆ ಅರ್ಥವಾಯಿತು. ಆದರೆ ಅವನ ಎದುರು ಧರ್ಮ ಸಂಕಟವೊಂದು ಉದ್ಭವಿಸಿತು. ಆ ಹುಡುಗಿ ಬೇರೆ ಯಾರೂ ಆಗಿರದೆ, ಬಿಲ್ವಿದ್ಯೆಯ ಸ್ಪರ್ಧೆಯಲ್ಲಿ ಗಂಡು ಹುಡುಗರನ್ನು ಹಿಂದಿಕ್ಕಿ, ಬಹುಮಾನ ಪಡೆದಿದ್ದಳು. ತನ್ನ ಆತ್ಮೀಯನೂ, ಅತ್ಯಂತ ಘನತೆವೆತ್ತ, ಬುದ್ಧಿವಂತ, ಕಾರ್ಯದಕ್ಷ, ನಂಬಿಕಸ್ತ ಅಧಿಕಾರಿ, ದಿವಾನ್ ಮಿರ್ಜಾ ಘಿಯಾಸ್ ಬೇಗ್ ತೆಹರಾನಿಯೆ ಆ ಹುಡುಗಿಯ ತಂದೆಯಾಗಿದ್ದ. ಅಲ್ಲದೆ ಎಲ್ಲರಿಂದ ವಿಚಾರಿಸಿದ ಮೇಲೆ ತಿಳಿದದ್ದು, ಆ ಹುಡುಗಿಯ ಅನುಪಮ ಸೌಂದರ್ಯ. ಅದ್ಭುತ ಕೌಶಲ್ಯ, ವಿದ್ವತ್ ಪ್ರತಿಭೆ, ಪಾಂಡಿತ್ಯ, ಕಲೆಗಾರಿಕೆ, ಸೃಜನಶೀಲತೆ, ಧೈರ್ಯ ಸಾಹಸಗಳು ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಅವಳಲ್ಲಿನ ಸಂಸ್ಕಾರ, ನೀತಿ, ನಿಯಮ ನಿಷ್ಠೆ, ಅಪಾರವಾದ ಕರುಣೆ, ಔದಾರ್ಯಗಳು! ಇಷ್ಟೆಲ್ಲ ಗುಣಗಳಿಂದ ಕೂಡಿದ ಹುಡುಗಿಯನ್ನು ಪ್ರೀತಿಸಿದ್ದರಲ್ಲಿ ಸಲೀಂನ ತಪ್ಪೇನಿಲ್ಲ. ಆದರೆ ಈ ಹುಡುಗಿಯ ಅಂತಸ್ತು, ರಾಜಕೀಯ ಪ್ರಯೋಜನಗಳನ್ನು ನೋಡಿಕೊಳ್ಳಬೇಡವೇ?...... ಇಂತಹ ಸನ್ನಿವೇಶದಲ್ಲಿ ಬಹಳ ಜಾಗರೂಕತೆಯಿಂದ ವರ್ತಿಸಬೇಕು. ಸೊಸೆ ಜಗತ್‌ಗೋಸಿನಿ, ದೂರು ಹೊತ್ತು ನನ್ನಲ್ಲಿ ಬಂದು ನ್ಯಾಯ ಕೇಳುತ್ತಿದ್ದಾಳೆ. ಅವಳಿಗೆ ನಾನೇನು ಉತ್ತರ ಕೊಡಲಿ? ಈ ಸಂದಿಗ್ಧದಿಂದ ಪಾರಾಗುವುದಾದರೂ ಹೇಗೆ? ಒಮ್ಮೆ ಬೇಗಂ ರುಖೈಯ್ಯಾಳನ್ನು ಭೇಟಿಯಾಗಿ ಚರ್ಚಿಸಬೇಕು ಎಂದು ತೀರ್ಮಾನಿಸಿದ.

ಮರುದಿವಸ ರುಖೈಯ್ಯಾ ಬೇಗಂನ ವಿಶ್ರಾಂತಿ ಕೋಣೆಗೆ ತಾನು ಬರುತ್ತಿರುವುದಾಗಿ ಸಂದೇಶ ಕಳಿಸಿದ. ರುಖೈಯ್ಯಾ ಬೇಗಂಗೆ ಇದರಿಂದ ಎಲ್ಲಿಲ್ಲದ ಆಶ್ಚರ್ಯ! ಬಾದಶಾಹರು ಯಾವಾಗಲೂ ತನ್ನನ್ನು ಮರೆತು ಹೋಗುವಷ್ಟು ಮಟ್ಟಿಗೆ ರಾಜಕೀಯ ಕೆಲಸಗಳಲ್ಲಿ ತೊಡಗಿರುತ್ತಾರೆ. ಅಂಥಾದ್ದರಲ್ಲಿ ತನ್ನನ್ನು ಕಾಣಲು ಮೊದಲಿಗೆ ಸಂದೇಶ ಕಳಿಸಿ ಬರುತ್ತಿದ್ದಾರೆಂದರೆ ಗಂಭೀರವಾದ ವಿಷಯವೇನೋ ಇರಬೇಕು ಎಂದುಕೊಂಡಳು.

ಬರಲಿರುವ ಬಾದಶಾಹರಿಗೆ ಬೇಕಾಗುವ ಹುಕ್ಕಾ ವ್ಯವಸ್ಥೆ ಮಾಡಿದಳು. ರತ್ನಗಂಬಳಿ ಹಾಸಿದ್ದ ಆ ಕೋಣೆಯ ಒಂದು ಪಾರ್ಶ್ವದಲ್ಲಿ, ಮೆತ್ತನೆಯ ಹಾಸುಗಳಿಂದ ಕೂಡಿದ್ದ ಸೋಫಾ, ಅದರ ಎದುರಿಗೆ ವಿಶಾಲವಾದ ಮಂಚ. ಅದರ ಮುಂದುಗಡೆ ದುಂಡನೆಯ ಮೇಜು ಸುಂದರವಾದ ನಕ್ಷೆಗಳಿಂದ ಕೂಡಿತ್ತು. ಅದರ ಮಧ್ಯದಲ್ಲಿ ದೊಡ್ಡ ಹರಿವಾಣ. ಅದರಲ್ಲಿ ಹಲವು ಬಗೆಯ ಒಣ ಹಣ್ಣುಗಳಿಂದ ತುಂಬಿದ್ದ ಬೆಳ್ಳಿ ಬಟ್ಟಲುಗಳಿದ್ದವು. ರುಖೈಯ್ಯಾ ಕುತೂಹಲದಿಂದ ಬಾದಶಾಹರ ನಿರೀಕ್ಷೆಯಲ್ಲಿ ಕಾದುಕುಳಿತಳು. ಅಷ್ಟರಲ್ಲಿ ಬಾದಶಾಹರು ಬರುತ್ತಿರುವುದರ ಘೋಷಣೆಯಾಯಿತು. ಬಾದಶಾಹ್ ಅಕ್ಬರ್, ಪರದೆಯನ್ನು ಸರಿಸಿ ಒಳ ಪ್ರವೇಶ ಮಾಡಿದ. ಥಟ್ಟನೆ ಎದ್ದ ರುಖೈಯ್ಯಾ, ಬಂದು "ಜಹಾಂಪನಾಹ್, ಜಲಾಲುದ್ದೀನ್ ಬಾದಶಾಹ್ ಅಕ್ಬರ್ ಅವರಿಗೆ ತಮ್ಮ ಪ್ರೀತಿಯ ಬೇಗಂ ರುಖೈಯ್ಯಾಳ ಸ್ವಾಗತ, ಸುಸ್ವಾಗತ" ಎಂದು ಹೇಳಿ ಕರೆದೊಯ್ದು ಮಂಚದ

ಮೇಲೆ ಕೂರಿಸಿದಳು. ಅಕ್ಬರ್ ಅವಳತ್ತ ನೋಡಿ ಮುಗುಳ್ನಗೆ ನಕ್ಕ. ಅಲ್ಲಿದ್ದ ದಾಸಿಯರು ರುಖೈಯ್ಯಾಳು ಹೋಗಲು ಸನ್ನೆ ಮಾಡಿದ ಮೇಲೆ, ಅಲ್ಲಿಂದ ಗೌರವ ಸೂಚಿಸಿ ಹೊರಟು ಹೋದರು.

"ಬಾದಶಾಹರು ನಮ್ಮ ಮೇಲೆ ಕರುಣೆ ತೋರಿ, ಈ ದಿನ ಬರುವುದಕ್ಕೆ ಮನಸ್ಸು ಮಾಡಿದ್ದೀರೀ ಎಂದರೆ ಏನೋ ತುರ್ತು ವಿಷಯ ಇದೆ ಎಂದುಕೊಳ್ಳಬಹುದಲ್ಲವೇ?"

"ಬೇಗಂ ನಾನೀಗ ಬಂದದ್ದು ನಿಮ್ಮೊಂದಿಗೆ ಒಂದು ಮುಖ್ಯ ವಿಚಾರವನ್ನು ಚರ್ಚಿಸಬೇಕೆಂದು. ನಾನೀಗ ದೊಡ್ಡ ಸಂದಿಗ್ಧದಲ್ಲಿ ಸಿಲುಕಿಕೊಂಡಿದ್ದೇನೆ. ನಮ್ಮ ಶಹಜಾದಾ ಸಲೀಂ, ಏನಾದರೂ ಒಂದು ಸಮಸ್ಯೆಯನ್ನು ನಮಗೆ ತಂದಿಡುತ್ತಾನೆ."

"ನಮ್ಮ ಸಲೀಂ ನಿಮಗೆ ಅದೆಂಥ ಸಮಸ್ಯೆ ತಂದಿಟ್ಟಿದ್ದಾನೆ? .......ರಾಜಕೀಯ ಸಮಸ್ಯೆಯಾದಲ್ಲಿ, ನಮಗೂ ಅದಕ್ಕೂ ಸಂಬಂಧವಿಲ್ಲ. ರಾಜನೀತಿಯನ್ನು ನಾವೇನೂ ಅಷ್ಟಾಗಿ ಬಲ್ಲವರಲ್ಲ."

"ಅದ್ಯಾವುದೂ ಅಲ್ಲ. ಇದು ಕೌಟುಂಬಿಕ ಸಮಸ್ಯೆ. ಇರುವ ಹೆಂಡಂದಿರು ಸಾಲದೆಂಬಂತೆ, ಈಗ ಮತ್ತೊಂದು ಹೆಣ್ಣಿನ ಖಯಾಲಿಗೆ ಬಿದ್ದು, ಅವಳ ಹಿಂದೆ ಹಿಂದೆ ತಿರುಗುತ್ತಾ. ಎಲ್ಲ ಕೆಲಸಗಳನ್ನು ಮರೆತು, ಮದ್ಯ ವ್ಯಸನಿಯಾಗಿ, ಕೆಲವೊಮ್ಮೆ ಅಸಭ್ಯವಾಗಿ ವರ್ತಿಸುತ್ತಿದ್ದಾನೆ ಎಂದು ಜನ ಮಾತಾಡಿಕೊಳ್ಳುತ್ತಿದ್ದಾರೆ. ನಿಮಗೂ ಈ ವಿಚಾರ ತಿಳಿದಿರಬೇಕೆಂದು ನಮ್ಮ ಭಾವನೆ."

"ಓ ಅದಾ ವಿಷಯ! ಹೆಣ್ಣುಗಳ ಖಯಾಲಿಗೆ ಬೀಳುವುದು ಅಂತಹ ದೊಡ್ಡ ಅಪರಾಧವೇನಲ್ಲ."

"ಅಪರಾಧವೆಂದು ನಾವು ಹೇಳಲಿಲ್ಲವಲ್ಲ. ಬರೀ ಪ್ರೇಮಿಗಳಾಗಿ ಉಳಿಯುವುದರಲ್ಲಿ ನನ್ನ ಅಭ್ಯಂತರವಿಲ್ಲ. ಆದರೆ ಇದು ಮದುವೆ ವಿಷಯದ ತನಕ ಬಂದರೇನೇ ಸಮಸ್ಯೆ. ಅದೂ ನಮಗೆ ತೀರಾ ತೀರಾ ಆಪ್ತರಾದ, ಹಿತಚಿಂತಕರಾದ ಮಿರ್ಜಾ ಘಿಯಾಸ್ ಬೇಗ್‌ರ ಮಗಳ ಜೊತೆ ಸಂಬಂಧವಿರುವುದು ನಮಗಿಂತ ನಿಮಗೇ ಚೆನ್ನಾಗಿ ತಿಳಿದಿರುತ್ತದೆ. ಜನಾನಾದ ಹೆಂಗಸರಿಗೇ ಇಂಥ ವಿಷಯಗಳೆಲ್ಲ ಬಹಳ ಬೇಗ ತಿಳಿದುಬಿಟ್ಟಿರುತ್ತವೆ. ಆ ಹುಡುಗಿ ನಿಮಗೆ ತುಂಬಾ ಖಾಸಾ ಎನ್ನುವುದು ನಮಗೆ ತಿಳಿದುಬಂತು."

"ಹೌದು ಬಹಳ ಒಳ್ಳೆಯ ಹುಡುಗಿ. ಅನುಪಮ ಸೌಂದರ್ಯ. ಅತ್ಯಂತ ಜಾಣೆ. ಅವಳ ಸಹವಾಸದಲ್ಲಿ ನಮಗೆ ತುಂಬಾ ಸಂತೋಷವೆನಿಸುತ್ತದೆ. ನನ್ನ ಕಾಲಕ್ಷೇಪಕ್ಕೆ ಅಂತರಂಗವನ್ನು ಹಂಚಿಕೊಳ್ಳಲಿಕ್ಕೆ ಒಳ್ಳೆಯ ಸಂಗಾತಿ."

"ಇದೆಲ್ಲವೂ ಸರಿಯೇ. ಈಗ ನಮ್ಮ ಸಲೀಂ ಆಕೆಯೊಂದಿಗೆ ತುಂಬ ಮುಂದುವರೆದಿದ್ದಾನೆಂಬುದು ನಮ್ಮ ಸೊಸೆ ಜಗತ್‌ಗೋಸಿನಿಯಿಂದ ತಿಳಿದು ಬಂತು. ಪೂರ್ತಿಯಾಗಿ ತನ್ನನ್ನು ನಿರ್ಲಕ್ಷಿಸಿದ್ದಾನೆ ಎನ್ನುವುದು ಆಕೆಯ ದೂರು. ಮುಂದೆ, ಸಲೀಂ ನನ್ನ ಬಳಿ ಬಂದು ವಿವಾಹವಾಗುತ್ತೇನೆಂದು ಹಠ ಹಿಡಿದರೆ ಏನು ಮಾಡುವುದು. ಮೊದಲಿಗೇ ನಮ್ಮ ಮೇಲೆ ಅವನಿಗೆ ಸಿಟ್ಟು, ಬುದ್ಧಿವಾದ ಹೇಳಿದರೆ ಸಿಡಿಮಿಡಿಗೊಳ್ಳುತ್ತಾನೆ. ಇದಕ್ಕೆ ನಾನೇನು ಮಾಡಬೇಕು? ನೀವೇನಾದರೂ ಈ ವಿಷಯದ ಬಗ್ಗೆ ತಿಳಿದು ಯೋಚಿಸಿದ್ದರೆ ದಯವಿಟ್ಟು ತಿಳಿಸಿ."

"ಅಯ್ಯೋ ಇದರಿಂದ ತಲೆ ಕೆಡಿಸಿಕೊಳ್ಳುತ್ತೀರಿ ಏಕೆ? ಸಲೀಂ ಆ ಹುಡುಗಿಯನ್ನು ನೋಡಲೆಂದೇ ಪದೇ ಪದೇ ಯಾವ ಯಾವುದೋ ನೆಪದಲ್ಲಿ ಬರುತ್ತಿದ್ದ. ಒಮ್ಮೆ ಮದುವೆ ವಿಷಯವೂ ಬಂತು. ಅವರಿಬ್ಬರ ಮದುವೆಗೆ ನಿಮ್ಮನ್ನು ಒಪ್ಪಿಸುವಂತೆ ಬಹಳವಾಗಿ ಕೇಳಿಕೊಂಡ. ಆದರೆ ನಾನು ಸಾರಾಸಗಟಾಗಿ, ನೀವು ಈ ಸಂಬಂಧಕ್ಕೆ ಎಂದಿಗೂ ಒಪ್ಪಿಕೊಳ್ಳುವುದಿಲ್ಲವೆಂದು ತಿಳಿಸಿ ಬುದ್ಧಿ ಹೇಳಿದೆ. ಅವನಿಗೆ ಬೇಸರವಾಗಿ ಹೊರಟು ಹೋದ. ಬಹುಶಃ ಮತ್ತೆ ನಿಮ್ಮ ಬಳಿಗೆ ಖುದ್ದಾಗಿ ಬಂದು ಮದುವೆಗೆ ಒಪ್ಪಿಗೆ ಕೊಡಬೇಕೆಂದು ಹಠ ಹಿಡಿದರೂ ಹಿಡಿಯಬಹುದು."

"ನಮಗೆ ತುಂಬಾ ಭಯವಾಗುತ್ತಿದೆ. ನಮ್ಮ ಸಾಮ್ರಾಜ್ಯದ ಭವಿಷ್ಯದ ಬಗ್ಗೆ ಚಿಂತೆಯಾಗಿದೆ. ನನ್ನ ಮೂವರು ಮಕ್ಕಳಲ್ಲಿ ಅವನೊಬ್ಬನೇ ಭರವಸೆ. ಅವನು ರಾಜ್ಯವನ್ನು ಆಳಲು ಸಮರ್ಥನೂ ಕೂಡಾ! ಆದರೆ ಅವನ ಸಹವಾಸ. ದುಶ್ಚಟಗಳು ಅವನನ್ನು ಹಾಳು ಮಾಡುತ್ತಿವೆ."

"ಅವನು ಹೀಗಾಗಲು ನೀವೇ ಕಾರಣ. ಶೀಕು, ಶೀಕು ಅಂತ ಅವನನ್ನು ಅತಿಯಾಗಿ ಮುದ್ದಿಸಿ ಬೆಳೆಸಿದಿರಿ."

"ನಮ್ಮನ್ನೇಕೆ ದೂರುತ್ತೀರಿ ಬೇಗಂ. ನೀವು ಹೆತ್ತ ಮಗನಲ್ಲದಿದ್ದರೂ, ನಿಜವಾದ ತಾಯಿಗಿಂತ ನೀವೇ ಹೆಚ್ಚಾಗಿ ಬೆಳೆಸಿದ್ದಲ್ಲವೇ? ಅವನನ್ನು ತಿದ್ದಿ ತೀಡಿ, ಸರಿಯಾದ ದಾರಿಯಲ್ಲಿ ಹೋಗಲು ಬುದ್ಧಿ ಹೇಳಬಹುದಿತ್ತಲ್ಲ?"

"ವಯಸ್ಸಿಗೆ ಬಂದ ಮೇಲೆ ಮಕ್ಕಳು ಎಲ್ಲಿ ಕೇಳಿಸಿಕೊಳ್ಳುತ್ತಾರೆ?" ಅಕ್ಬರ್‌ಗೆ ಹಿಂದಿನ ನೆನಪುಗಳು ಮರುಕಳಿಸಿದವು. ಎಷ್ಟೋ ವರ್ಷಗಳ ಪ್ರಾರ್ಥನೆ, ಸಂತ ಶೀಕು ಬಾಬಾರ ಆಶೀರ್ವಾದಗಳಿಂದ ಹುಟ್ಟಿದ ಗಂಡು ಮಗು ಸಲೀಂ, ರುಖೈಯ್ಯಾಳಿಗೆ ಮಕ್ಕಳಿಲ್ಲದಿದ್ದ ಕಾರಣ ಅವಳ ಮಡಿಲಲ್ಲೇ ಬೆಳೆದಿದ್ದ. ಆದರೆ ಅವನು ಬೆಳೆಯುತ್ತಿದ್ದಂತೆ ಅವರ ನಿರೀಕ್ಷೆಗಳೆಲ್ಲ ಹುಸಿಯಾದವು. ಯಾವಾಗಲೂ ಸ್ನೇಹಿತರು. ಸಂಗೀತ, ಮದ್ಯ, ಹೆಣ್ಣುಗಳಿಂದ ಸುತ್ತುವರಿದು ಇರುತ್ತಿದ್ದ. ತನ್ನ ಬಲವಂತಕ್ಕೆ, ರಾಜಕೀಯ ಉದ್ದೇಶಗಳಿಗಾಗಿ ರಾಜಪೂತ ಸಾಮಂತರ ಹೆಣ್ಣು ಮಕ್ಕಳನ್ನು ತಂದು ಮದುವೆ ಮಾಡಿಸಿದ. ಬಹಳ ರೂಪವತಿಯರಾದ ಮಾನ್‌ಬಾಯಿ, ಜಗತ್‌ಗೋಸಿನಿಯವರ ಜೊತೆ, ಮೆಹರುನ್ನೀಸಾ ಅವನ ಬದುಕಿನಲ್ಲಿ ಪ್ರವೇಶಿಸುವವರೆಗೂ ಸಂಬಂಧಗಳು ಸರಿಯಾಗಿಯೇ ಇದ್ದವು. ಬಹುಶಃ ಇದರಲ್ಲಿ ತಂದೆ ತಾಯಿಗಳಾದ ತಮ್ಮ ಪಾತ್ರವೇ ಕಾರಣವಾಗಿರಬೇಕು. ಸರಿಯಾದ ರೀತಿಯಲ್ಲಿ ಬೆಳೆಸಲಿಲ್ಲವೆಂಬ ಅಪರಾಧಿ ಪ್ರಜ್ಞೆ ಅಕ್ಬರನಲ್ಲಿ ಜಾಗೃತವಾಯಿತು.

ಕನಸಿನಿಂದ ಎಚ್ಚೆತ್ತವನಂತೆ, ಅಕ್ಬರ್,

"ಬೇಗಂ ಇದಕ್ಕೆಲ್ಲ ಒಂದೇ ಒಂದು ದಾರಿ ನನಗೆ ಕಾಣುತ್ತಿದೆ."

"ಏನದು?"

"ಈ ಹುಡುಗಿ ಕುರಿತು ಮಿರ್ಜಾ ಘಿಯಾಸ್ ಬೇಗ್‌ರ ಜೊತೆ ಏನನ್ನೂ ಹೇಳಲಾರೆ. ತುಂಬಾ ಮರ್ಯಾದಸ್ತ ಜನ. ವಿಷಯ ತಿಳಿದರೆ ನೊಂದುಕೊಂಡಾರು. ಏನಾದರೂ ಅನಾಹುತ ಆಗುವುದಕ್ಕೆ ಮೊದಲೇ ಆ ಹುಡುಗಿಗೆ ನಾವೇ ಒಂದು ಒಳ್ಳೆಯ ಸಂಬಂಧ ನೋಡಿ ಮದುವೆ ಮಾಡಿಸಿ ಬಿಟ್ಟರೆ ಮುಂದೆ ಸಮಸ್ಯೆಯೇ ಇರುವುದಿಲ್ಲ ಏನಂತೀರಾ?"

"ಉಪಾಯವೇನೋ ಒಳ್ಳೆಯದೇ? ಮಿರ್ಜಾಬೇಗರು ಈಗ ಲಾಹೋರಿನಲ್ಲಿ ಇಲ್ಲವಲ್ಲ."

"ಇಲ್ಲದಿದ್ದರೇನು? ನನಗೆ ಅವರಿಂದ ತುಂಬಾ ಕೆಲಸಗಳು ಆಗಬೇಕಿರುವುದರಿಂದ, ಬರ ಹೇಳಿದ್ದೇನೆ. ಒಂದೆರಡು ದಿನಗಳಲ್ಲಿ ಬಂದು ಬಿಡುತ್ತಾರೆ."

"ಅವರು ಬರುವುದಕ್ಕೂ ನಮ್ಮ ಸಮಸ್ಯೆಗೂ ಸಂಬಂಧವೇನು ಜಹಾಂಪನಾಹ್?"

"ಇದೆ. ಯಾವುದೇ ಅನುಮಾನಗಳಿಗೆ ದಾರಿ ಮಾಡದೆ ನಾನೇ ಒಂದು ಒಳ್ಳೆಯ ಸಂಬಂಧ ನೋಡಿ ಮದುವೆ ಮಾಡಿಸಿಬಿಟ್ಟರೆ, ಮುಂದೆ ನಾವು ಸಮಸ್ಯೆಗಳಿಗೆ ತಲೆ ಕೆಡಿಸಿಕೊಳ್ಳಬೇಕಾದ್ದಿಲ್ಲ."

"ಹೌದು, ನೀವು ಹೇಳುವುದೂ ಸರಿಯೇ. ಅಸ್ಮತ್ ಬೇಗಂ ಇಲ್ಲಿಗೆ ಬಂದಾಗಲೆಲ್ಲ, ಬೆಳೆದ ಹುಡುಗಿ ನೀಸಾಳ ಬಗ್ಗೆ ಆತಂಕ ವ್ಯಕ್ತಪಡಿಸುತ್ತಲೇ ಇರುತ್ತಾಳೆ. ಯಾವುದಾದರೂ ಒಳ್ಳೆ ಸಂಬಂಧ ಬಂದರೆ, ಬಾದಶಾಹರ ಅಪ್ಪಣೆ ಪಡೆದು ನಿಕಾಹ್ ಮುಗಿಸಿ ಬಿಟ್ಟರೆ ಒಂದು ನೆಮ್ಮದಿ ಸಿಗುತ್ತದೆ. ನಿಮ್ಮ ದಯೆಯಿಂದ ಖತೀಜಾ, ಸಲೀಹಾರ ನಿಕಾಹ್ ಅಂತೂ ಸುಲಭವಾಗಿ ನಡೆದು ಹೋಯಿತು ಎಂದು ಹೇಳುತ್ತಿದ್ದಳು."

"ಹೇಗಾದರೂ ಬೇಗಂ ನೀವು ಮೆಹರುನ್ನೀಸಾ ಬಗ್ಗೆ ಒಂದು ಕಣ್ಣು ಇರಿಸಿರಬೇಕು."

"ಆಗಬಹುದು. ನೀಸಾ ಲಾಹೋರಿಗೆ ಬಂದ ಕೂಡಲೇ ನನ್ನನ್ನು ಕಾಣದೆ ಇರುವುದಿಲ್ಲ. ನೀವು ಸಲೀಮನಲ್ಲಿ ಸಿಟ್ಟು ತೋರಿಸಿಕೊಳ್ಳಬೇಡಿ. ಅವನಾಗಿ ಪ್ರಸ್ತಾಪ ಮಾಡಿದಾಗ ನೋಡಿಕೊಳ್ಳೋಣ."

ಅಕ್ಬರ್ ಬಾದಶಾಹರ ಆಣತಿಯಂತೆ ಮಿರ್ಜಾ ಘಿಯಾಸ್ ಬೇಗ್ ಕೂಡಲೇ ಕಾಬೂಲಿನಿಂದ, ಸಕುಟುಂಬ ಪರಿವಾರ ಸಹಿತ ಲಾಹೋರಿಗೆ ಬಂದು ಸೇರಿದ. ಅವನ ಇಬ್ಬರು ಮಕ್ಕಳು ಮುಹಮದ್ ಮತ್ತು ಅಸಫರು ಲಾಹೋರಿನಲ್ಲಿಯೇ ಸಲೀಂನ ಸೇವೆಯಲ್ಲಿ ಉಳಿದಿದ್ದರು.

ದಾರಿಯುದ್ದಕ್ಕೂ ಇಷ್ಟೊಂದು ಆತುರದಲ್ಲಿ ತನ್ನನ್ನು ಹಿಂತಿರುಗಿ ಬರುವಂತೆ ಆದೇಶಿಸಿದ್ದು ಯಾಕೆಂಬುದು ಮಿರ್ಜಾ ಘಿಯಾಸ್‌ಗೆ ತಿಳಿಯಲಿಲ್ಲ. ಏನು ರಾಜ ಕಾರ್ಯವಿರಬಹುದೆಂದು ಆಲೋಚಿಸುತ್ತಿದ್ದ.

ಮರುದಿವಸವೇ ಬಾದಶಾಹರಿಗೆ ಗೌರವ ಸಲ್ಲಿಸಬೇಕೆಂದು ದರಬಾರಿಗೆ ಬಂದು, ಕೋರ್ನಿಶ್ ಹೇಳಿ, ತಲೆಯೆತ್ತಿ ಬಾದಶಾಹ್ ಅಕ್ಬರ್‌ನನ್ನು ದಿಟ್ಟಿಸಿದ . ಯಾಕೋ ಮುಖ ಬಾಡಿತ್ತು. ಕೂದಲೂ ಬೆಳ್ಳಗಾಗಿತ್ತು. ತುಂಬಾ ತೆಳ್ಳಗೆ ಕೂಡಾ ಆಗಿದ್ದ. ಬಾದಶಾಹರು ಈ ಸ್ಥಿತಿ ತಲುಪಲು ಅವರನ್ನು ಕೊರೆಯುತ್ತಿರುವ ಚಿಂತೆಯಾದರೂ ಏನಿರಬಹುದು ಎಂದು ಯೋಚಿಸತೊಡಗಿದ. ಅಕ್ಬರನೇ ಮಾತಿಗೆ ಮುಂದಾದ.

"ಮಿರ್ಜಾ, ನೀವು ನಮ್ಮ ಸಾಮ್ರಾಜ್ಯಕ್ಕೆ ಸಲ್ಲಿಸುತ್ತಿರುವ ಸೇವೆ, ನಿಮ್ಮ ದಕ್ಷ ನಿರ್ವಹಣಾ ಸಾಮರ್ಥ್ಯಗಳಿಗೆ ಸರಿತೂಗುವುದೇನನ್ನೂ ನಿಮಗೆ ಕೊಡಲು ಸಾಧ್ಯವಿಲ್ಲ. ಹಾಗಂತ ಕೊಡದೆ ಇರುವುದೂ ನ್ಯಾಯವಲ್ಲ."

"ಹುಜೂರ್ ಬಡವನಾಗಿ, ಭಿಕಾರಿಯಾಗಿ ಬಂದವನಿಗೆ ಹಿಂದು ಮುಂದು ಆಲೋಚಿಸದೆಯೇ ಆಶ್ರಯ ಕೊಟ್ಟಿರಿ. ಒಳ್ಳೆಯ ಅಧಿಕಾರ, ಬದುಕು ಕೊಟ್ಟಿರಿ.

ಸಮಾಜದಲ್ಲಿ ಪ್ರತಿಷ್ಠೆ ಗೌರವಗಳು ಲಭಿಸುವಂತೆ ಮಾಡಿದಿರಿ. ನನಗೇ ಅಲ್ಲದೆ ನನ್ನ ಮಕ್ಕಳನ್ನೂ ಉದ್ಧಾರ ಮಾಡಿದಿರಿ. ಇದಕ್ಕಿಂತ ಇನ್ನೇನು ಬೇಕು ಹುಜೂರ್. ನೀವು ಕಾಲಲ್ಲಿ ತೋರಿದ್ದನ್ನು ನಾನು ತಲೆಮೇಲೆ ಇಟ್ಟುಕೊಂಡು ಆದೇಶ ಪಾಲಿಸುತ್ತೇನೆ."

"ಛೆ! ಛೆ! ನೀವು ಅಷ್ಟೆಲ್ಲ ಅಂದುಕೊಳ್ಳುವುದು ಸರಿಯಲ್ಲ. ನಾನು ಕೊಟ್ಟದ್ದೆಂದು ಭಾವಿಸಬೇಡಿ. ನಿಮ್ಮ ಶ್ರಮ, ನಿಷ್ಠೆ, ದಕ್ಷತೆಗಳು ನಿಮಗೆ ಇದೆಲ್ಲವನ್ನು ಸಂಪಾದಿಸಿದವು.... ಇರಲಿ. ಕಾಬೂಲಿನಲ್ಲಿನ ವ್ಯವಸ್ಥೆ ಸುಧಾರಿಸಿತು ಎಂದು ತಿಳಿದು ನನಗೆ ತುಂಬ ಸಂತೋಷವಾಯಿತು. ಅದಕ್ಕಾಗಿ ನಾನು ನಿಮ್ಮನ್ನು ಅಭಿನಂದಿಸಿ ಪುರಸ್ಕರಿಸಲೇಬೇಕು" ಎಂದು ಬಳಿಯಲ್ಲಿ ನಿಂತಿದ್ದ ಸೇವಕರಿಗೆ ಸನ್ನೆ ಮಾಡಿದ್ದೇ, ಚಿನ್ನದ ಹರಿವಾಣದಲ್ಲಿ ಅಮೂಲ್ಯವಾದ, ಚಿನ್ನದ ಕುಸುರಿ ಕೆಲಸಮಾಡಿದ್ದ ನಿಲುವಂಗಿ ಮತ್ತು ರತ್ನ ಖಚಿತವಾದ ಖಡ್ಗವನ್ನು ಉಡುಗೊರೆಯಾಗಿ ನೀಡಿದ. ಘಿಯಾಸ್‌ನ ಕಣ್ಣುಗಳು ಹನಿಸಿದವು.

ಜನಾನಾದ ಮಂದಿ, ತನ್ನ ಪ್ರಿಯ ಬೇಗಂ ರುಖೈಯ್ಯಾಳೂ ಸೇರಿದಂತೆ, ಈ ಕಾರ್ಯಕ್ರಮವನ್ನು ಜನಾನಾದ ಹೆಂಗಸರು ಉಪ್ಪರಿಗೆಯ ಮೊಗಸಾಲೆಯ ಅಮೃತ ಶಿಲೆಯ ಜಾಲಂದ್ರಗಳಿಂದ ವೀಕ್ಷಿಸುತ್ತಿದ್ದರು. ಉಪ್ಪರಿಗೆಯಿಂದಲೇ ರುಖೈಯ್ಯಾ ಬೇಗಂ, "ಹುಜೂರ್ ಮಿರ್ಜಾ ಘಿಯಾಸ್ ಅವರಿಗೆ, ಅಸ್ಮತ್ ಮತ್ತು ನೀಸಾಳನ್ನು, ಬಂದು ನನ್ನನ್ನು ಕಾಣುವಂತೆ, ತಿಳಿಸಲು ಹೇಳಿ" ಎಂದಳು.

ಅಕ್ಬರ್ ಹಾಗೆಯೇ ಆಗಲೆಂದು, ಸಮ್ಮತಿ ಸೂಚಿಸಿದ. ಮರುದಿನ, ರುಖೈಯ್ಯಾ ಬೇಗಂ, ಜನಾನಾದ ಒಂದಿಬ್ಬರು ಹೆಂಗಸರ ಜೊತೆ ಪಗಡೆಯಾಟದಲ್ಲಿ ಮುಳುಗಿದ್ದಳು. ಒಳಗೆ ಪ್ರವೇಶಿಸುತ್ತಿದ್ದಂತೆ, ನೀಸಾ ಕೆಮ್ಮಿ ಗಮನ ಸೆಳೆಯಲು ಪ್ರಯತ್ನಿಸಿದಳು. ಬೇಗಂ ನೀಸಾಳ ಕೆಮ್ಮನ್ನು ಕೂಡಲೇ ಗಮನಿಸಿದಳು ತಲೆಯೆತ್ತಿ ನೋಡಿ.

"ಓ ನೀಸಾ! ಬಾ... ಬಾ! ಯಾವಾಗ ಬಂದೆ? ನಿನ್ನನ್ನು ನೋಡದಿದ್ದರೆ, ನಿನ್ನ ಜೊತೆ ಮಾತಾಡದಿದ್ದರೆ ನನಗೆ ಹೊತ್ತು ಹೋಗುವುದೇ ಕಷ್ಟವಾಗುತ್ತದೆ. ಸದ್ಯ ಬಂದುಬಿಟ್ಟೆಯಲ್ಲ! ಎಲ್ಲಿ ಅಲ್ಲಿಯೇ ಶಾಶ್ವತವಾಗಿ ಇದ್ದು ಬಿಡುತ್ತೀಯೋ ಎಂದು ಭಾವಿಸಿದ್ದೆ. ಹತ್ತಿರಾ ಬಾ. ನೀನೂ ಒಂದು ಆಟ ಆಡುವಿಯಂತೆ."

"ಇಲ್ಲ ಪಾದಶಾಹ್ ಬೇಗಂ, ನೀವು ಬರಲು ಆದೇಶಿಸಿದ್ದಿರಂತೆ. ನನಗೂ ನಿಮ್ಮನ್ನು ನೋಡಬೇಕೆಂದು ಮನಸ್ಸು ತುಡಿಯುತ್ತಿತ್ತು." "ಹೇಗಿದೆ ಕಾಬೂಲ್? ಎಲ್ಲ ಸೌಕರ್ಯವಾಗಿತ್ತಾ? ಹಾಂ ಸೌಕರ್ಯವಾಗಿತ್ತೆಂಬುದು ನಿನ್ನ ಮುಖ ನೋಡಿದರೇನೆ ಗೊತ್ತಾಗುತ್ತೆ. ಎಷ್ಟು ಮುದ್ದಾಗಿ ಕಾಣಿಸುತ್ತಿರುವೆ ನೀಸಾ. ನಾವೇ ನಿನ್ನ ಸೌಂದರ್ಯಕ್ಕೆ ಮರುಳಾದರೆ ಇನ್ನು ಗಂಡಸರು ಸೆಳೆತಕ್ಕೆ ಒಳಗಾಗುವುದರಲ್ಲಿ ಆಶ್ಚರ್ಯವಿಲ್ಲ. ಮದುವೆ ವಯಸ್ಸಿಗೂ ಬಂದು ಬಿಟ್ಟಿದ್ದೀಯ. ಒಳ್ಳೆಯ ಸುಂದರ ಪುರುಷನೇ ಬರುತ್ತಾನೆ. ಮಹಾರಾಣಿಯಂತೆ, ಹೊತ್ತೊಯ್ದು ನೋಡಿಕೊಳ್ಳುತ್ತಾನೆ. ಮದುವೆಯಾಗಿ ಹೋದ ಮೇಲೆ ನಮ್ಮನ್ನು ಮರೆಯುವುದಿಲ್ಲ ತಾನೆ?" ಎಂದು ಹೇಳಿ ನಕ್ಕಳು. ಮರುಕ್ಷಣವೇ "ನೀಸಾ ನಾಳೆ ಮತ್ತೆ ಬಿಡುವಾಗಿ ನನ್ನನ್ನು ಬಂದು ಕಾಣು" ಎಂದಳು.

ಮತ್ತೆ ರುಖೈಯ್ಯಾ ಬೇಗಂರನ್ನು ಕಾಣಲು ಹೋದಾಗ, ಆಕೆಯ ಒಂದಿಬ್ಬರು ಪರಿಚಾರಕರು ಕೈಯಲ್ಲಿ ಲೆಕ್ಕದ, ವ್ಯವಹಾರದ ಪುಸ್ತಕಗಳನ್ನು ತಂದು ಒಂದೊಂದು ಹಾಳೆ

ತಿರುವಿ ತೋರಿಸುತ್ತಾ ಏನೇನೋ ವಿವರಿಸುತ್ತಿದ್ದರು. ಮೆಹರುನ್ನೀಸಾ "ಸಲಾಮ್ ಅಲೇಕುಂ ಪಾದಶಾಹ್ ಬೇಗಂ" ಎಂದು ಸಲಾಮು ಹೇಳಿದಾಗ, ರುಖೈಯ್ಯಾ ತಲೆಯೆತ್ತಿ ನೋಡಿ, ಬಾ ನೀಸಾ ನೀನೂ ನನ್ನ ಜೊತೆ ಕುಳಿತು ಲೆಕ್ಕಪತ್ರಗಳನ್ನು ಗಮನಿಸು, ನನ್ನದೂ ಒಂದು ದೊಡ್ಡ ವ್ಯಾಪಾರ ವ್ಯವಹಾರವಿದೆ. ಎಲ್ಲಕ್ಕೂ ಗಂಡಸರನ್ನು ನಂಬಿಕೊಳ್ಳುವುದು ಸರಿಯಲ್ಲ. ನಾವೂ ಆಸಕ್ತಿವಹಿಸಿ ನಮ್ಮ ವ್ಯವಹಾರಗಳ ಬಗ್ಗೆ ನಿಗಾ ಇಡಬೇಕು. ಹಣದ ವ್ಯವಹಾರ, ಪ್ರೀತಿಯ ವ್ಯವಹಾರದಲ್ಲಿ ಗಂಡಸರನ್ನು ಪೂರ್ತಿಯಾಗಿ ನಂಬಬಾರದು. ನೀನು ಸಹ ನನ್ನ ವ್ಯವಹಾರವನ್ನು ಸ್ವಲ್ಪ ಗಮನಿಸುತ್ತಿರು. ಎಂದಿಗಾದರೂ ನಿನಗೂ ಪ್ರಯೋಜನವಾಗಬಹುದು."

ಸ್ವಲ್ಪ ಹೊತ್ತು ಇಬ್ಬರೂ ವರಾಂಡದಲ್ಲಿ ಕುಳಿತರು. ಲೋಕಾಭಿರಾಮವಾಗಿ ಮಾತಾಡುತ್ತಿದ್ದರು. ಒಂದೆರಡು ನಿಮಿಷಗಳ ನಂತರ ರುಖೈಯ್ಯಾ,

"ನೀಸಾ ನಾನೇನಾದರೂ ಬುದ್ಧಿವಾದ ಹೇಳಿದರೆ ನೀನು ತಪ್ಪಾಗಿ ಭಾವಿಸಬಾರದು. ವಯಸ್ಸಿಗೆ ಬಂದ ಹುಡುಗಿ ನೀನು. ಜನರ ಕಣ್ಣು, ಬಾಯಿ ನಿನ್ನತ್ತಲೇ ಇರುತ್ತದೆ. ಜಾಗರೂಕತೆಯಿಂದ ವರ್ತಿಸಬೇಕು. ಆದಷ್ಟು ಬೇಗ ಒಂದು ಮದುವೆಯಾಗಿ ಬಿಟ್ಟರೆ, ಎಲ್ಲರ ಬಾಯಿಗೆ ಬೀಗ ಬೀಳುತ್ತದೆ. ಬಾದಶಾಹರೂ ನಿನ್ನ ಮದುವೆಯ ಬಗ್ಗೆ ತುಂಬಾ ಯೋಚಿಸುತ್ತಿದ್ದಾರೆ. ನಿಮ್ಮ ತಂದೆಯ ಬಗ್ಗೆ ಅವರಿಗೆ ಅಪಾರವಾದ ಪ್ರೀತಿಯಿದೆ. ಅದಕ್ಕೆಂದೇ ತಾವೇ ಸ್ವತಃ ಹುಡುಗನನ್ನು ಹುಡುಕುತ್ತಿದ್ದಾರೆ. ತಮ್ಮ ಅಧಿಕಾರಿಗಳಿಗೆಲ್ಲಾ ಒಳ್ಳೆ ಸಂಬಂಧ ನೋಡಲು ಹೇಳಿದ್ದಾರೆ."

"ನನ್ನ ಮದುವೆ ವಿಚಾರದಲ್ಲಿ ನೀವಿಷ್ಟು ಆಸಕ್ತಿವಹಿಸುತ್ತಿರುವುದಕ್ಕೆ ನಾನು ಎಹಸಾನ್ ಮಂದಳಾಗಿದ್ದೇನೆ. ನನಗೆ ಒಪ್ಪಿಗೆಯಾಗುವ ಸುಲ್ತಾನನನ್ನು ನಾನೇ ಹುಡುಕಿಕೊಳ್ಳಬಲ್ಲೆ" ಎಂದು ವಿನಯದಿಂದಲೇ ಹೇಳಿದಳು. ಆದರೆ ರುಖೈಯ್ಯಾಳ ಮಾತುಗಳ ಹಿಂದೆ ಏನಿರಬಹುದೆಂದು ಯೋಚಿಸತೊಡಗಿದಳು. ಎಂದೂ ಇಲ್ಲದ ಮದುವೆ ವಿಷಯದ ಬಗ್ಗೆ ಈಗೇಕೆ ಚಿಂತೆ? ಎಂದುಕೊಳ್ಳುತ್ತಿರುವಷ್ಟರಲ್ಲಿ "ದಾದಿಮಾ" ಎಂದು ಕರೆಯುತ್ತಾ, ಒಬ್ಬ ಸಣ್ಣ ಹುಡುಗ ಓಡಿ ಬಂದು ರುಖೈಯ್ಯಾಳ ಕೊರಳಿಗೆ ತೆಕ್ಕೆ ಹಾಕಿಕೊಂಡ. ನೀಸಾ ಅಚ್ಚರಿಯಿಂದ, ಈ ಮಗು ಯಾರದು, ಇಲ್ಲಿಗೇಕೆ ಬಂತು, ಎಂದು ತಿಳಿದುಕೊಳ್ಳಲು.

"ಪಾದಶಾಹ್ ಬೇಗಂ...." ವಾಕ್ಯ ಮುಗಿಯುವ ಮೊದಲೇ "ನನಗೆ ಗೊತ್ತು ನೀನು ಈ ಪ್ರಶ್ನೆ ಕೇಳುತ್ತಿ ಎಂದು ನಾನು ಮೊದಲೇ ಊಹಿಸಿದ್ದೆ. ಈ ಹುಡುಗ ನನ್ನ ಅಚ್ಚು ಮೆಚ್ಚಿನ ಮೊಮ್ಮಗ, ಸಲೀಂ ಮತ್ತು ಜಗತ್‌ಗೋಸಿನಿಯರ ಮಗ. ನನಗೆ ಅವನ ಮೇಲೆ ಅಪಾರ ಪ್ರೀತಿ. ನನಗೆ ಹೊತ್ತು ಕಳೆಯಲು ಕಷ್ಟವಾಗುತ್ತದೆಂದು, ನಾನೇ ಬಾದಶಾಹರಿಂದ ಇವನನ್ನು ನನ್ನ ಬಳಿಯೇ ಇರಿಸಿಕೊಳ್ಳಲು ಅಪ್ಪಣೆ ಪಡೆದೆ. ಜಗತ್‌ಗೋಸಿನಿಗೆ ಇಷ್ಟವಿಲ್ಲದಿದ್ದರೂ, ಜನಾನಾದ ಯಜಮಾನಿಯಾದ ನನ್ನ ಬೇಡಿಕೆಯನ್ನು ತಳ್ಳಿಹಾಕಲು ಅವರಿಂದ ಸಾಧ್ಯವಾಗಲಿಲ್ಲ. ವಾರದಲ್ಲಿ ಒಂದೆರಡು ಬಾರಿ ಮಾತ್ರ ಅವನಿಗೆ ಅವರಮ್ಮನನ್ನು ಭೇಟಿ ಮಾಡಲು ಅವಕಾಶವಿದೆಯಾದರೂ ಅವನಿಗೆ ಅಮ್ಮನ ಬಳಿ ಹೋಗಲು ಇಷ್ಟವೇ ಇರುವುದಿಲ್ಲ. ಹೋದರೂ ಒಂದೆರಡು ಗಂಟೆಗಳಲ್ಲಿ ಹಿಂತಿರುಗಿ ಬಂದುಬಿಡುತ್ತಾನೆ."

ಮೆಹರುನ್ನೀಸಾಳಿಗೆ ಇದೆಂಥ ವಿಚಿತ್ರ! ಕ್ರೂರ! ಎನಿಸಿತು. ಆದರೂ ಏನನ್ನೂ ಹೇಳುವ ಹಾಗೆ ಇಲ್ಲ. ಆದರೆ ಆ ಮಗುವಿನ ಮುದ್ದಾದ ಮುಖಕ್ಕೆ ಮಾರು ಹೋದ ನೀಸಾ, "ಶಹಜಾದೆ, ತಮ್ಮ ಹೆಸರೇನು ಕೇಳಬಹುದೇ?" ಎಂದು ಬಹಳ ವಿನಯವನ್ನು ನಟಿಸುತ್ತಾ ಕೇಳಿದಳು.

"ನಾವು ಶಹಜಾದಾ ಸಲೀಂರವರ ಮಕ್ಕಳು. ನೀವು ಯಾರು?" ಎಂದು ಠೀವಿಯಿಂದ ಹೇಳಿದ.

"ನಾವು ಮಿರ್ಜಾ ಘಿಯಾಸ್ ಬೇಗ್‌ರ ಮಗಳು. ಮೆಹರುನ್ನೀಸಾ ಅಂತ ಹೆಸರು." ಎಂದು ಹೇಳುತ್ತಿರುವಲ್ಲಿ ರುಖೈಯ್ಯಾ ಬೇಗಂ ಮುಸಿ ಮುಸಿ ನಗುತ್ತಾ,

"ಖುರ್ರಂ ಬೇಟಾ, ನೀಸಾಳನ್ನು ಹೋಗಲು ಬಿಡು. ನಿನ್ನ ಅಬ್ಬು ಬರುತ್ತೇನೆಂದು ಹೇಳಿಕಳಿಸಿದ್ದಾರೆ. ಮತ್ತೊಮ್ಮೆ ಬಂದಾಗ ನೀಸಾ ಕಾಕಿ ಜೊತೆ ಎಷ್ಟು ಹೊತ್ತು ಬೇಕಾದರೂ ಆಡಿಕೊಳ್ಳುವಂತೆ" ಎಂದು ಹೇಳಿ.

'ನೀಸಾ ನೀನೀಗ ಮನೆಗೆ ಹೋಗು. ಸಲೀಂ, ನಂಜೊತೆ ಏನೋ ಮುಖ್ಯವಾದ ವಿಷಯ ಮಾತಾಡಬೇಕಂತೆ' ಎಂದು ಹೇಳಿದ ಕೂಡಲೇ ನೀಸಾ ರುಖೈಯ್ಯಾಗೆ ಸಲಾಂ ಹೇಳಿ ಹೊರಗೆ ಹೆಜ್ಜೆ ಇಡುವಷ್ಟರಲ್ಲಿ ಸಲೀಂ ಪ್ರವೇಶಿಸಿದ. ಮುಖಕ್ಕೆ ಅವಕುಂಠನ ಎಳೆದುಕೊಂಡಿದ್ದರಿಂದ ಸಲೀಂ ಗಮನಿಸಲಿಲ್ಲವಾದರೂ, ಪಾರದರ್ಶಕವಾದ ಅವಕುಂಠನವಾದ್ದರಿಂದ ಮೆಹರುನ್ನೀಸಾಳಿಗೆ ಸಲೀಂನ ಮುಖ ಸ್ಪಷ್ಟವಾಗಿ ಕಾಣಿಸಿತು.

ನೀಸಾ ಮನೆ ಸೇರಿದ ಕೂಡಲೇ ಯಾರನ್ನೂ ಮಾತನಾಡಿಸದೆ ನೇರವಾಗಿ ಹೋಗಿ ಸುಪ್ಪತ್ತಿಗೆಯ ಮೇಲೆ ಮೈ ಚಾಚಿದಳು. ಅವಳ ತಲೆ ತುಂಬಾ ಗೊಂದಲದ ಪ್ರಶ್ನೆಗಳು ಏಳುತ್ತಿದ್ದವು. ತನಗೆ ಗೊತ್ತಿಲ್ಲದೆ ತನ್ನ ವಿರುದ್ಧ ಪಿತೂರಿಗಳೇನಾದರೂ ನಡೆಯುತ್ತಿವೆಯೇ? ಬಾದಶಾಹರು, ಪಾದಶಾಹ್ ಬೇಗಂರು ನನ್ನ ಮದುವೆಯ ವಿಚಾರದಲ್ಲಿ ಆತುರ ಪಡುತ್ತಿರುವುದೇಕೆ? ಇದೇ ಸಮಯಕ್ಕೆ ತುರ್ತು ಮಾತಾಡಬೇಕೆಂದು ಸಲೀಂ ಬಂದದ್ದಾದರೂ ಏಕೆ? ಈ ಎಲ್ಲ ಘಟನೆಗಳಿಗೆ ಇರುವ ಸಂಬಂಧವಾದರೂ ಏನು? ಪಾದಶಾಹ್ ಬೇಗಂ, ಖುರ್ರಂನನ್ನು ತಾಯಿಯಿಂದ ಕಿತ್ತುಕೊಂಡದ್ದೇಕೆ? ಜಗತ್‌ಗೋಸಿನಿ ಇದಕ್ಕೆ ಸುಮ್ಮನೆ ಒಪ್ಪಿಗೆ ನೀಡಿದಳೇ? ಜಗತ್‌ಗೋಸಿನಿ ಮತ್ತು ಪಾದಶಾಹ್ ಬೇಗಂ ನಡುವಿನ ಸಂಬಂಧ ಹೇಗಿದೆ? ಇಷ್ಟು ಸಲ ಜನಾನಾಗೆ ತಾನು ಭೇಟಿ ಕೊಡುತ್ತಿದ್ದರೂ ಒಮ್ಮೆಯಾದರೂ ಆಕೆ ಜನಾನಾದಲ್ಲಿ, ರುಖೈಯ್ಯಾ ಜೊತೆ ಕಾಣಿಸಿಕೊಂಡದ್ದೇ ಇಲ್ಲ. ಅವರಿಬ್ಬರ ನಡುವೆ ಏನಾದರೂ ಮನಸ್ತಾಪವಿರಬಹುದೇ ಎಂದೆಲ್ಲಾ ಯೋಚಿಸಿದಳು.

ವಾಸ್ತವವಾಗಿ, ಜಗತ್‌ಗೋಸಿನಿ, ಹಲವು ಕನಸುಗಳನ್ನು ಹೊತ್ತು ಮುಘಲ್ ಸಾಮ್ರಾಟನ ಸೊಸೆಯಾಗಿದ್ದಳು. ಜನಾನಾದ ಅಧಿಕಾರ, ಹಿರಿಯ ಮಗನ ಹೆಂಡತಿ, ದೊಡ್ಡ ಸೊಸೆ–ಇವೆಲ್ಲವೂ ತನ್ನದೇ ಆಗುವುದೆಂಬ ಅಪಾರ ನಂಬಿಕೆ. ಅಲ್ಲದೆ ಅವಳ ಸೌಂದರ್ಯವೂ ಸಲೀಂನನ್ನು ಕಟ್ಟಿಹಾಕಿತ್ತು. ಎಷ್ಟರ ಮಟ್ಟಿಗೆ ಸಲೀಂ ತನ್ನನ್ನು ಪ್ರೀತಿಸುತ್ತಿದ್ದಾನೆ ಎಂದು ತಿಳಿದ ಮೇಲಂತೂ, ಎಂದಿಗೂ ತನ್ನ ಕೈಜಾರಿ ಹೋಗುವನೆಂಬ ಭೀತಿ ಕನಸಿನಲ್ಲಿಯೂ ಸಾಧ್ಯವಿರಲಿಲ್ಲ.

ಆದರೆ ಆ ಎಲ್ಲ ನಂಬಿಕೆಗಳೂ ಹುಸಿಯಾದವು. ಪಾದಶಾಹ್ ಬೇಗಂ ರುಖೈಯ್ಯಾ

ತನ್ನ ಎಲ್ಲ ಕನಸುಗಳಿಗೂ ಅಡ್ಡಿಯಾಗಿ ಎದುರಾದಳು. ರುಖೈಯ್ಯಾ ಅಕ್ಬರನ ಸೋದರ ಸಂಬಂಧಿ. ಇಬ್ಬರೂ ಒಟ್ಟಿಗೆ ಬೆಳೆದವರು. ಕಡೆಗೆ ಮದುವೆಯೂ ಆದರು. ಅವರಿಬ್ಬರ ನಡುವೆ ಬಹಳ ಆತ್ಮೀಯವಾದ ನಂಟು. ಅಕ್ಬರ್ ಅನೇಕ ಹೆಣ್ಣುಗಳ ಜೊತೆ ವಿಲಾಸ ಜೀವನ ನಡೆಸಿದರೂ, ರುಖೈಯ್ಯಾಳ ಬಗೆಗಿನ ಪ್ರೀತಿಯಲ್ಲಿ ಎಳ್ಳಷ್ಟೂ ಕುಂದು ಬಂದಿರಲಿಲ್ಲ. ಅವಳ ಜೊತೆ ಸಲೀಮಾ ಸುಲ್ತಾನಾ ಬೇಗಂಳನ್ನೂ ಎರಡನೆ ಹೆಂಡತಿಯಾಗಿ ಮದುವೆಯಾಗಿದ್ದ. ರುಖೈಯ್ಯಾ, ಸಲೀಮಾ ದಾಯಾದಿ ಸೋದರಿಯರು. ಇಬ್ಬರೂ ಜೊತೆಯಾಗಿ ಅನ್ಯೋನ್ಯವಾಗಿಯೇ ಇದ್ದರೇ ಹೊರತು ರುಖೈಯ್ಯಾಳ ಸ್ಥಾನಮಾನಗಳಿಗೆ ಎಂದೂ ಕರುಬಲಿಲ್ಲ. ಸಲೀಮಾ ಜೊತೆ ವಿವಾಹವಾಗಲು ಸ್ವತಃ ತಾನೇ ಮಧ್ಯಸ್ಥಿಕೆ ವಹಿಸಿದ್ದಳು. ಅದರಿಂದಾಗಿ ಸಲೀಮಾ ಸುಲ್ತಾನಾ ರುಖೈಯ್ಯಾಳ, ಜನಾನಾದ ಯಜಮಾನಿಕೆಗೆ ವಿರುದ್ಧ ಎಂದಿಗೂ ದನಿಯೆತ್ತದೆ ಆಪ್ತವಾಗಿದ್ದರು. ಪ್ರತಿಸ್ಪರ್ಧಿಗಳಾಗಲು ಯಾರಿಗೂ ಧೈರ್ಯವಿರಲಿಲ್ಲ. ಹಾಗಾಗಿ ಜಗತ್‌ಗೋಸಿನಿ ಕಾಲು ಸುಟ್ಟುಕೊಂಡ ಬೆಕ್ಕಿನಂತೆ ಚಡಪಡಿಸಿದಳೇ ಹೊರತಾಗಿ ಎದುರು ಬೀಳಲಿಲ್ಲ. ಅದೆಲ್ಲವೂ ತಪ್ಪಿ ಹೋದರೂ ಸಲೀಮನ ಪ್ರೀತಿಯೊಂದು ಧಾರಾಳವಾಗಿ ದೊರೆತದ್ದರಿಂದ ಸುಮ್ಮನಿದ್ದಳು. ಆದರೆ ಈಗ ನಡೆಯುತ್ತಿದ್ದುದೇ ಬೇರೆ. ತನ್ನ ಗುಪ್ತಚರ ಹೋಷಿಯಾರನಿಂದ ಸಲೀಂ ಮತ್ತು ಮೆಹರುನ್ನೀಸಾಳ ಪ್ರಣಯ ಕತೆಗಳನ್ನು ಕೇಳಿದ ಮೇಲೆ ಕೆಂಡಾಮಂಡಲವಾಗಿದ್ದರೂ, ಅಸಹಾಯಕತೆಯಿಂದ ಏನೂ ಮಾಡಲಾರದವಳಾಗಿದ್ದಳು. ಸಲೀಮನನ್ನು ಎಷ್ಟೇ ರೀತಿಯಲ್ಲಿ ಪ್ರಶ್ನಿಸಿದಳೂ, ಕುಡಿತದ ಅಮಲಿನಲ್ಲಿ ತೂರಾಡುತ್ತಾ, ಹುಚ್ಚುಚ್ಚಾಗಿ ನಗುತ್ತಾ, ನೀಸಾಳ ಹೆಸರನ್ನು ಉಚ್ಚರಿಸುತ್ತಾ, ಎದುರುಬರುವ ಜಗತ್‌ಳನ್ನು ಪಕ್ಕಕ್ಕೆ ತಳ್ಳಿಬಿಡುತ್ತಿದ್ದ. ತನ್ನ ಅಸಹಾಯಕತೆ, ಸಂಕಟಗಳನ್ನು ಯಾರ ಬಳಿ ತಾನೆ ಹೇಳಿಕೊಳ್ಳುವುದು? ರುಖೈಯ್ಯಾ ಸುಲ್ತಾನಾಬೇಗಂರಲ್ಲಿ ದೂರು ಹೇಳಿಕೊಳ್ಳುವುದು ಸ್ವಾಭಿಮಾನಕ್ಕೆ ಧಕ್ಕೆ ಬರುವುದೆಂದು ಸುಮ್ಮನಿದ್ದಳು. ಸಮಸ್ಯೆ ಗಂಭೀರ ಸ್ವರೂಪ ಪಡೆಯುತ್ತಿದ್ದುದನ್ನು ಕಂಡಾಗ ಮಾವ ಅಕ್ಬರನಲ್ಲಿ ಅಳಲನ್ನು ಹಂಚಿಕೊಂಡಿದ್ದಳು. ರುಖೈಯ್ಯಾ ಸವತಿಯನ್ನು ಸಹಿಸಿಕೊಂಡಿರಬಹುದು. ಆದರೆ ಅವಳಿಗೆ ಗಂಡನನ್ನು ಹಂಚಿಕೊಳ್ಳುವುದು ಸಾಧ್ಯವೇ ಇರಲಿಲ್ಲ. ಮಾವನೇ ಮಗನಿಗೆ ಬುದ್ಧಿಹೇಳಬೇಕು. ಇಲ್ಲವೇ ಮೆಹರುನ್ನೀಸಾಳ ವರ್ತನೆಯನ್ನು ಅವಳ ತಂದೆ ತಾಯಿಗೆ ತಿಳಿಸಿ ಬುದ್ಧಿ ಹೇಳಿಸಬೇಕು. ಆದರೆ ಅಕ್ಬರ್‌ಗೆ ಅದು ಸರಿ ಬರಲಿಲ್ಲ. ಮುಂದೆ ಆಗಬಹುದಾದ ಅನಾಹುತ ತಪ್ಪಿಸಲು ತೋಚಿದ ದಾರಿಯೆಂದರೆ ತುರ್ತಾಗಿ ಮೆಹರುನ್ನೀಸಾಳ ಮದುವೆ ಮಾಡಿಸುವುದು. ಈ ಯೋಚನೆ ಬರುತ್ತಿದ್ದಂತೆ, ಅಕ್ಬರ್‌ನ ಸೇನಾಧಿಪತಿ ಅಬ್ದುರ್ ರಹೀಮ್, ಖಾನ್–ಇ–ಖಾನನ್, ದಿವಾನ್ –ಇ–ಆಮ್‌ಗೆ ಬಾದಶಾಹರನ್ನು ಕಾಣಲು ಬಯಸುತ್ತಿದ್ದಾರೆಂಬ ಸುದ್ದಿ ಬಂತು.

ಖಾನ್–ಇ–ಖಾನನ್ ಜೊತೆ ಮತ್ತೊಬ್ಬ ವ್ಯಕ್ತಿಯೂ ಪ್ರವೇಶಿಸಿದ. ಸಿಂಹಾಸನದಲ್ಲಿ ಕುಳಿತಿದ್ದ ಅಕ್ಬರ್ ಇಬ್ಬರನ್ನೂ ನೋಡಿದ. ಇಬ್ಬರೂ ಬಾದಶಾಹರಿಗೆ ತಸ್ಲೀಂ ಮಾಡಿದರು. ಸೇನಾಧಿಪತಿ, ತನ್ನ ಜೊತೆಗಿದ್ದ ವ್ಯಕ್ತಿಯನ್ನು ಪರಿಚಯಿಸಿದ.

"ಜಹಾಂಪನಾಹ್, ಇವರು ಅಲಿಖುಲಿ ಇಸ್ತಾಜ್ಲು. ಪರ್ಷಿಯಾದವರು. ಶೌರ್ಯ ಸಾಹಸಗಳ ಬಗ್ಗೆ ನಿಮಗೆ ಈ ಹಿಂದೆಯೂ ತಿಳಿಸಿದ್ದೆ."

"ಹೌದು ಅಬ್ದುರ್ ರಹೀಮ್ ನೆನಪಿದೆ. ನೀವು ಅವರನ್ನು ನಮ್ಮಲ್ಲಿಗೆ ಕರೆತಂದುದು ಬಹಳ ಸಂತೋಷ. ನಮ್ಮ ಸಾಮ್ರಾಜ್ಯದಲ್ಲಿ ಇಂತಹ ಧೀರರೂ ಸಾಹಸಿಗಳೂ ಇರುವುದು ನಮ್ಮ ಗೌರವ."

* * *

ಅಲಿಖುಲಿ ಇಸ್ತಾಜ್ಲು (ಷೇರ್-ಇ-ಆಫ್ಘನ್) ಕೂಡಾ, ಮಿರ್ಜಾ ಘಿಯಾಸ್ ಬೇಗ್‌ನಂತೆ ಪರ್ಷಿಯಾದಲ್ಲಿ, ದೊರೆ ಷಾಹ ಎರಡನೆ ಇಸ್ಮಾಯಿಲ್ ಬಳಿ, ಒಂದು ಸಣ್ಣ ಕೆಲಸ (ಕುದುರೆಲಾಯದ ಮೇಲ್ವಿಚಾರಕನಾಗಿ) ದಲ್ಲಿ ಇದ್ದ. ಆದರೂ ಅವನನ್ನು ಗುರುತಿಸುತ್ತಿದ್ದುದು ಒಬ್ಬ ಸೈನಿಕನಂತೆ. ಅವನ ಪರಾಕ್ರಮ, ಎತ್ತರ, ಗಾತ್ರಗಳು, ನಡೆ ನುಡಿ ಸೈನಿಕನಿಗೆ ಒಪ್ಪುವಂತಹವುಗಳಾಗಿದ್ದವು. ಎರಡನೇ ಶಾಹ್‌ನ ಮರಣಾನಂತರ ಪರ್ಷಿಯಾದಲ್ಲಿ ಉಳಿಯಲು ಇಷ್ಟವಾಗದೆ ಅವನೂ ಹಿಂದೂಸ್ತಾನದತ್ತ ಹೊರಟು ಬಂದ. ಅಕ್ಬರನನ್ನು ಭೇಟಿಯಾಗಿ ಯಾವುದಾದರೂ ಕೆಲಸವನ್ನು ಗಳಿಸಿಕೊಳ್ಳಬಹುದೆಂದು ಆಲೋಚಿಸಿದ. ಅಲಿಖುಲಿಯ ಅದೃಷ್ಟವೆಂಬಂತೆ, ಅಕ್ಬರ್ ಸಿಂಧ್ ಪ್ರಾಂತ್ಯ ಗೆಲ್ಲದ ಹೊರತು ತನ್ನ ಪರಮಾಧಿಕಾರ ಪೂರೈಸದೆಂದು ಭಾವಿಸಿದ್ದ ಕಾರಣ, 1590ರಲ್ಲಿ ದಂಡೆತ್ತಿಹೋಗಿ ಥಟ್ಟಾವನ್ನು ಸೈನಿಕ ಚಟುವಟಿಕೆಗಳ ನೆಲೆಯನ್ನಾಗಿಸಿಕೊಂಡು ಖಾಂದಾಹಾರ್‌ಅನ್ನು ಆಕ್ರಮಿಸಿದ್ದ. ಈ ಕಾರ್ಯಾಚರಣೆಯ ಸಂದರ್ಭದಲ್ಲಿ, ಖಾನ್-ಇ-ಖಾನನ್‌ನನ್ನು (ಅಬ್ದುಲ್ ರಹೀಮ್) ಮುಲ್ತಾನದ ಪ್ರಾಂತಾಧಿಪತಿ ಆಗಿ ನೇಮಿಸಿ, ಮಿರ್ಜಾ ಜಾನಿ ಬೇಗ್‌ನನ್ನು ಸೋಲಿಸಿ ಥಟ್ಟಾವನ್ನು ವಶಪಡಿಸಿಕೊಳ್ಳಲು ಆದೇಶಿಸಿದ ಮತ್ತು ಅಕ್ಬರ್ ಅಲ್ಲಿಂದ ಹೊರಟು ಬಂದ.

ಅದೇ ಸಮಯಕ್ಕೆ ಅಲಿಖುಲಿ ಇಸ್ತಾಜ್ಲು ಮುಲ್ತಾನ್ ತಲುಪಿದ್ದ. ಅಲ್ಲಿನ ಪ್ರಾಂತಾಧಿಪತಿ ಆಗಿ ಅಧಿಕಾರ ವಹಿಸಿಕೊಂಡಿದ್ದ ಖಾನ್-ಇ-ಖಾನನ್‌ನನ್ನು ಭೇಟಿಯಾಗಿ ತಸ್ಲೀಮ್ ಸಲ್ಲಿಸಿ ತನ್ನನ್ನು ಪರಿಚಯಿಸಿಕೊಂಡ. ಖಾನ್-ಇ-ಖಾನನ್ ಅಲಿಖುಲಿಯ ಕಟ್ಟುಮಸ್ತಾದ ದೇಹ, ಎತ್ತರ, ಗಾತ್ರ ಮತ್ತು ಸುಂದರವಾದ, ಆಕರ್ಷಕವಾದ ರೂಪವನ್ನು ನೋಡಿ ಮೋಹಿತನಾದ. ಅವನ ಅಂಗರಚನೆಯೇ ಸಾಹಸಕ್ಕೆ ಹೇಳಿ ಮಾಡಿಸಿದಂತೆ ಇರುವುದನ್ನು ಗಮನಿಸಿ, ಮುಂದೆ ಇವನು ಮುಘಲ್ ಸಾಮ್ರಾಜ್ಯಕ್ಕೆ ಅತ್ಯವಶ್ಯ ವ್ಯಕ್ತಿಯಾಗಿ ಪರಿಣಮಿಸುತ್ತಾನೆ ಎನ್ನುವ ಲೆಕ್ಕಾಚಾರದಲ್ಲಿ, ಕೂಡಲೇ ಅವನನ್ನು ಸೇನಾಪಡೆಗೆ ಸೇರಿಸಿಕೊಂಡ. ಅಲಿಖುಲಿಯ ಶೌರ್ಯ ಪರಾಕ್ರಮಗಳು ಖಾನ್-ಇ-ಖಾನನ್‌ನನ್ನು ದಿಗ್ಭ್ರಾಂತಗೊಳಿಸಿದವು. ಭಯಂಕರವಾದ ಯುದ್ಧ ನಡೆದು, ಅಲಿಯ ಪರಾಕ್ರಮ ಥಟ್ಟಾವನ್ನು 1592ರಲ್ಲಿ ಕೈವಶವಾಗುವಂತೆ ಮಾಡಿತು. ಖಾನ್-ಇ-ಖಾನನ್ ತನ್ನ ಸಂತೋಷವನ್ನು ಹತ್ತಿಕ್ಕಿಕೊಳ್ಳಲಾಗದೆ, ಕೂಡಲೇ ಸಂದೇಶವಾಹಕನನ್ನು, ಇಲ್ಲಿನ ಸಂಗತಿಗಳನ್ನೆಲ್ಲ ಬರೆದು, ಅಕ್ಬರ್ ಬಾದಶಾಹರಿಗೆ ತಲುಪಿಸುವಂತೆ ಹೇಳಿ ಕಳಿಸಿಕೊಟ್ಟ.

ಅದಾದ ಕೆಲದಿನಗಳ ನಂತರ, ಸ್ವತಃ ಖಾನ್-ಇ-ಖಾನನ್ ಅಲಿಯನ್ನು

ಬಾದಶಾಹರಲ್ಲಿಗೆ ಕರೆದು ತಂದು ಪರಿಚಯಿಸಿದ. ಅಕ್ಬರ್ ಎಲ್ಲವನ್ನೂ ಕೇಳಿ ಬಹಳವಾಗಿ ಖುಷಿ ಪಟ್ಟು ಕೂಡಲೇ ಅವನಿಗೆ ಅವನ ಸಾಹಸ, ಗೆಲುವಿಗೆ ಮೆಚ್ಚಿ ಮನ್‌ಸಬ್ ಅನ್ನು ವಹಿಸಿಕೊಟ್ಟ ಮತ್ತು ಮುಕ್ತವಾಗಿ ಅವನ ಪರಾಕ್ರಮವನ್ನು ಹೊಗಳಿದ. ಅಕ್ಬರ್‌ನ ಔದಾರ್ಯ, ಗುಣಗ್ರಾಹಿತ್ವಕ್ಕೆ ಅಲಿಖುಲಿ ಮಾರುಹೋದ. ಒಳಗೊಳಗೇ ತನ್ನ ಅದೃಷ್ಟಕ್ಕಾಗಿ ಹಿಗ್ಗಿದ.

"ಅಲಿಖುಲಿ ಇನ್ನು ಮುಂದೆ ನೀವು ನಮ್ಮ ಸಾಮ್ರಾಜ್ಯದ ರಕ್ಷಾಕವಚವಾಗಬೇಕು. ಇನ್ನು ಮುಂದೆ ನಿಮ್ಮ ಅಧಿಕಾರ ಅಂತಸ್ತುಗಳು ಬೆಳೆಯುವುದರಲ್ಲಿ ಅನುಮಾನವಿಲ್ಲ. ನೀವು ನಿರಂತರವಾಗಿ ನಮ್ಮ ಸಾಮ್ರಾಜ್ಯದ ಜೊತೆಗೆ ಇರುತ್ತೀರೆಂದು ಭಾವಿಸುತ್ತೇನೆ" ಎಂದು ಹೇಳಿದ.

ತನ್ನ ಮಾತು ಮುಗಿದ ಕೂಡಲೇ ಅಕ್ಬರ್ ಯೋಚನೆಗಿಳಿದ. ಮಾತು, ಭರವಸೆಗಳಿಂದ ಯಾರೇ ಆಗಲಿ ಎಷ್ಟು ದಿನ ತಮ್ಮ ಜೊತೆಗೆ ಇರುತ್ತಾರೆ. ಶಾಶ್ವತವಾದ ಒಂದು ಸಂಬಂಧದ ಬೆಸುಗೆ ಬೇಕಲ್ಲವೆ? ಅದು ಸಾಧ್ಯವಾಗಬೇಕಾದರೆ, ಈ ಸುಂದರ ಸಿಪಾಯಿಗೆ, ನಮ್ಮಲ್ಲಿನ ಯಾವುದಾದರೂ ಹುಡುಗಿಯನ್ನು ನೋಡಿ ಮದುವೆ ಮಾಡಿಸಿ ಬಿಟ್ಟರೆ? ಎಂದು ಯೋಚಿಸಿದ. ತನ್ನ ದರಬಾರಿಗಳಲ್ಲಿ, ಅಧಿಕಾರಿ, ಬಂಧುಗಳಲ್ಲಿ ಪ್ರಾಪ್ತ ವಯಸ್ಸಿನ ಹೆಣ್ಣು ಮಗಳೊಬ್ಬಳು ಸಿಗುವಳೇನೋ ಎಂದು ಮತ್ತೊಮ್ಮೆ ತಲೆಕೆಡಿಸಿಕೊಂಡ. ಗಂಡಸಾದ ತನಗೆ ಹೆಣ್ಣು ಮಕ್ಕಳ ವಿಷಯವಾಗಿ ಅಷ್ಟಾಗಿ ತಿಳಿಯುವುದಿಲ್ಲ. ಜನಾನಾದ ಯಜಮಾನಿ ರುಖೈಯ್ಯಾ ಬೇಗಂರನ್ನು ಭೇಟಿಯಾಗಿ ಚರ್ಚಿಸಬೇಕು ಎಂದುಕೊಂಡ.

ಅಲಿಖುಲಿ ಮತ್ತು ಅಕ್ಬರ್ ಭೇಟಿಯ ಸಂದರ್ಭದಲ್ಲಿ ಮಿರ್ಜಾ ಘಿಯಾಸ್ ಕೂಡಾ ಉಪಸ್ಥಿತನಿದ್ದ. ಅವನಿಗೂ ಒಳಗೆ ಅಲಿಖುಲಿ ಅಳಿಯನಾದರೆ ಎಷ್ಟು ಚೆನ್ನ! ವಯಸ್ಸು ಸೌಂದರ್ಯ, ಪರಾಕ್ರಮ ಅಧಿಕಾರ ಎಲ್ಲಕ್ಕಿಂತ ಹೆಚ್ಚಾಗಿ ಬಾದಶಾಹರ ಕೃಪೆ ಇರುವಾಗ, ಇವನಿಗಿಂತ ಒಳ್ಳೆಯ ವರನನ್ನು ಮೆಹರುನ್ನೀಸಾಳಿಗೆ ಹುಡುಕಲು ಸಾಧ್ಯವೇ ಎಂದು ಅವನೂ ಆಲೋಚಿಸುತ್ತಿದ್ದ.

ಬಾದಶಾಹ್, ರುಖೈಯ್ಯಾ ಬೇಗಂರನ್ನು ಕಂಡು ತನ್ನ ಮನಸ್ಸಿನ ವಿಚಾರಗಳನ್ನೂ, ಅಲಿಖುಲಿಯ ವಿಷಯವನ್ನೂ ಹೇಳಿದ. ಅವಳ ಸಲಹೆಯನ್ನು ಕೇಳಿದ. ರುಖೈಯ್ಯಾಗೂ ಇದು ಸಮ್ಮತವೆನಿಸಿತು. ಅಲ್ಲದೆ "ಈ ವಿಚಾರದಲ್ಲಿ ತಡಮಾಡುವುದು ಬೇಡ. ಸಲೀಂ ಅವಳನ್ನು ತುಂಬ ಹಚ್ಚಿಕೊಂಡು ಬಿಟ್ಟಿದ್ದಾನೆ. ಏನಾದರೂ ಅನಾಹುತ ಆಗುವುದಕ್ಕೆ ಮೊದಲೇ ಅಲಿ ಮತ್ತು ನೀಸಾರ ನಿಕಾಹ್ ಮುಗಿಸಿಬಿಡಬೇಕು. ಸಲೀಂ ಕೂಡಾ ಒಂದೆರಡು ದಿನಗಳ ಹಿಂದೆ ಬಂದಿದ್ದ. ಅವರಿಬ್ಬರ ಮದುವೆಗೆ ನಿಮ್ಮ ಅನುಮತಿ ದೊರಕಿಸಿಕೊಡಬೇಕೆಂದು ದುಂಬಾಲು ಬಿದ್ದ. ಆದರೆ ನೀವು ಅದಕ್ಕೆ ಖಂಡಿತ ಒಪ್ಪುವುದಿಲ್ಲವೆಂದು ಹೇಳಿ ಬಿಟ್ಟಿದ್ದೇನೆ. ಆದರೂ ನನಗಿರುವಂತಹ ಭಯ ಇದ್ದೇ ಇದೆ" ಎಂದೂ ಹೇಳಿದಳು. ಆದ್ದರಿಂದ ಅಕ್ಬರ್ ಬಾದಶಾಹ್, ಮಿರ್ಜಾ ಘಿಯಾಸ್‌ಗೆ ದಿವಾನ್- ಇ-ಖಾಸ್‌ಗೆ ಬರಬೇಕೆಂದು ಸಂದೇಶ ಕಳಿಸಿದ. ಮಿರ್ಜಾ ಘಿಯಾಸ್‌ಗೆ ಈ ಆತುರದ ಕರೆ ಏಕೆಂದು ಊಹಿಸಲಾಗದೆ ಸ್ವಲ್ಪ ಆತಂಕಗೊಂಡಿದ್ದ. ಬಂದು ತಸ್ಲೀಮ್ ಮಾಡಿದ ಮೇಲೆ ಅಕ್ಬರ್ ನಗುನಗುತ್ತಲೇ ಆಸೀನನಾಗಲು ಆದೇಶಿಸಿದ. ಘಿಯಾಸ್

ಬೇಗ್ ಕುಳಿತನಾದರೂ, ಮುಳ್ಳಿನ ಮೇಲೆ ಕುಳಿತಂತೆ ಚಡಪಡಿಸಿದ.

"ಮಿರ್ಜಾ ಘಿಯಾಸ್ ಬೇಗ್. ನೀವು ನನ್ನ ಪರಮಾಪ್ತ ಸ್ನೇಹಿತರು. ಗೌರವಾನ್ವಿತ ಅಧಿಕಾರಿಗಳು. ನಿಮ್ಮ ಸೇವೆಗೆ ನಾವು ಬಹಳವಾಗಿ ಸಂತೃಪ್ತರಾಗಿದ್ದೇವೆ. ನೀವು ನಮಗೆ ಅಷ್ಟು ಮಾಡುತ್ತಿರುವಾಗ, ನಾವೂ ನಿಮಗೆ ಏನನ್ನಾದರೂ ಪ್ರತಿಯಾಗಿ ಮಾಡಬೇಕಲ್ಲವೇ?"

"ಹುಜೂರ್ ಹಾಗೆನ್ನಬೇಡಿ, ಮಾಡಿದ್ದಕ್ಕೆ ಪ್ರತಿಯಾಗಿ ಮಾಡಿಸಿಕೊಳ್ಳುವುದು ಧರ್ಮವಲ್ಲ. ಹಾಗಾದಲ್ಲಿ ನಮ್ಮ ಸೇವೆಗೆ ಬೆಲೆ ಕಟ್ಟಿದಂತಾಗುತ್ತದೆ."

"ಛೆ! ಛೆ! ಹಾಗೆನ್ನಬೇಡಿ. ನಾವು ಮಾಡುತ್ತಿರುವುದು ಪ್ರತ್ಯುಪಕಾರವಲ್ಲ. ನಮ್ಮ ನಮ್ಮ ಸಂಬಂಧಗಳನ್ನು ಇನ್ನಷ್ಟು ಗಟ್ಟಿಗೊಳಿಸಿಕೊಳ್ಳುವ ಪ್ರಯತ್ನ. ಅಂದ ಹಾಗೆ, ನಿಮಗೆ ವಯಸ್ಸಿಗೆ ಬಂದ ಮಗಳಿರಬೇಕಲ್ಲವೇ!"

"ಹೌದು ಹುಜೂರ್. ನನ್ನಿಬ್ಬರು ಹಿರಿಯ ಹೆಣ್ಣುಮಕ್ಕಳ ಮದುವೆಯಂತೂ ತಮ್ಮ ಮತ್ತು ಅಲ್ಲಾಹ್‌ನ ಅನುಗ್ರಹದಿಂದ ನಡೆದು ಹೋಯಿತು. ಈಗಿರುವವಳು ಮೆಹರುನ್ನೀಸಾ. ನನ್ನ ಪಾಲಿನ ಅದೃಷ್ಟ ದೇವತೆ! ರೂಪ, ಗುಣ ಪ್ರತಿಭೆ, ಕಲಾವಂತಿಕೆಯಲ್ಲಿ ಅದ್ವಿತೀಯಳು."

"ಹೌದು ನಾವು ಕೇಳಿದ್ದೇವೆ. ಹಾಗೆಯೇ ಸಣ್ಣವಳಿರುವಾಗಲೇ ಬಿಲ್ವಿದ್ಯೆಯಲ್ಲಿ ಹುಡುಗರನ್ನೂ ಹಿಂದಿಕ್ಕಿ, ಸ್ಪರ್ಧೆಯಲ್ಲಿ ಗೆದ್ದ ಧೀರೆ. ಆದ್ದರಿಂದಲೇ ಅವಳ ದಿಟ್ಟತನ, ಸೌಂದರ್ಯಕ್ಕೆ ಸರಿಗಟ್ಟುವ ವ್ಯಕ್ತಿಯೊಬ್ಬರನ್ನು ಅವಳ ಜೀವನ ಸಂಗಾತಿಯಾಗಿರಲು ಹುಡುಕಿದ್ದೇವೆ. ಆ ವ್ಯಕ್ತಿ ಯಾರೆಂಬುದನ್ನು ನೀವೂ ಬಲ್ಲಿರಿ ಮತ್ತು ನೋಡಿಯೂ ಇದ್ದೀರಿ."

"ಹುಜೂರ್, ನೀವು ಹೇಳುವ ರೀತಿಯಿಂದ ನಾನು ಊಹಿಸಿದ್ದು ಸರಿಯೆನ್ನುವುದಾದರೆ, ಆತ ಅಲಿಖುಲಿ ಇಸ್ತಾಜ್ಲುವೇ ಇರಬೇಕು ಎನಿಸುತ್ತದೆ."

"ವಾರೆವ್ಹಾ! ಯಾ ಖುದಾ! ಎಷ್ಟು ಚೆನ್ನಾಗಿ ಊಹಿಸಿದಿರಿ!"

"ನೀವು ಮಾತಾಡುತ್ತಿರುವಾಗಲೇ, ನಾನೂ ನಿಬ್ಬೆರಗಾಗಿ ಅಲಿಖುಲಿಯನ್ನು ಗಮನಿಸುತ್ತಿದ್ದೆ. ನಾನು ಮನಸ್ಸಿನಲ್ಲಿ ಇಂಥಾ ಯುವಕನೇ ನನಗೆ ಅಳಿಯನಾದರೆ ಹೇಗೆ ಎಂದು ಆಲೋಚಿಸುತ್ತಿದ್ದೆ. ನಿಮ್ಮ ಆಯ್ಕೆಯೆಂದ ಮೇಲೆ ಎರಡು ಮಾತಿಲ್ಲ. ಪ್ರಪಂಚವೆಲ್ಲ ಸುತ್ತಿದರೂ ಇಂಥವರನ್ನು ನನ್ನಂಥವನಿಗೆ ತರಲು ಸಾಧ್ಯವಿತ್ತೇ? ಹುಜೂರ್. ನನ್ನ ಕಡೆಯುಸಿರು ಇರುವವರೆಗೆ ಈ ಸಾಮ್ರಾಜ್ಯದ ಸೇವೆಗೆಂದೇ ನನ್ನನ್ನು ಮುಡುಪಾಗಿರಿಸುತ್ತೇನೆ. ಅಸ್ಮತ್‌ಳಿಗೆ ಈ ವಿಷಯ ತಿಳಿದರೆ ಕುಣಿದು ಕುಪ್ಪಳಿಸುತ್ತಾಳೆ."

"ಮಿರ್ಜಾ ನೀವು ಯಾವುದಕ್ಕೂ ಚಿಂತೆ ಮಾಡಬೇಡಿ. ನಾವೇ ಮುಂದು ನಿಂತು ನಿಕಾಹ್ ಕಾರ್ಯಕ್ರಮವನ್ನು ನಿರ್ವಹಿಸುತ್ತೇವೆ. ಅದ್ದೂರಿಯಾಗಿ ಮಾಡೋಣ. ಖರ್ಚಿಗೆ ಕೈ ಹಿಡಿಯುವುದು ಬೇಡ. ಧಾರಾಳವಾಗಿ ರಾಜ ಬೊಕ್ಕಸದಿಂದ ಹಣ ತೆಗೆದುಕೊಳ್ಳಿ."

"ನಿಮ್ಮ ಔದಾರ್ಯಕ್ಕೆ, ಉಪಕಾರಕ್ಕೆ ನಾನು ಕೃತಜ್ಞನಾಗಿರುತ್ತೇನೆ ಹುಜೂರ್." ತಾವು ಅಪ್ಪಣೆ ಕೊಡುವುದಾದರೆ ನನ್ನ ಬೇಗಂಗೆ ಕೂಡಲೇ ವಿಷಯ ತಿಳಿಸಿ ಬರುತ್ತೇನೆ.

"ಹಾಗಾದರೆ ಹೋಗಿ ಬನ್ನಿ" ಎಂದು ಹೇಳಿದ್ದೇ, ಮತ್ತೊಮ್ಮೆ ತಲೆ ಬಗ್ಗಿಸಿ ಖುದಾ ಹಾಫಿಜ್ ಹೇಳಿ ಹೊರಡಲು ಅನುವಾದ.

ದಾರಿಯುದ್ದಕ್ಕೂ ಘಿಯಾಸ್‌ನ ಮನಸ್ಸಿನಲ್ಲಿ ಬಾದಶಾಹ್ ಅಕ್ಬರ್‌ನ ಬಗ್ಗೆ ಅವನ ಔದಾರ್ಯದ ಬಗ್ಗೆ, ಸಂತೋಷ, ಸಂಭ್ರಮಗಳೇ ತುಂಬಿದ್ದವು. ಅವನೆದೆ ಕೃತಜ್ಞತೆಯ ಭಾವದಿಂದ ಭಾರವೆನಿಸಿತ್ತು. ಅಸ್ಮತ್ ಈ ವಿಷಯದಿಂದ ದಂಗಾಗಿ ಹೋದಾಳು. ಅವಳ ಆನಂದಕ್ಕೆ ಎಲ್ಲೆ ಇಲ್ಲದೆ, ತಮ್ಮ ಅದೃಷ್ಟಕ್ಕೆ ಮತ್ತಷ್ಟು ಹಿರಿಹಿರಿ ಹಿಗ್ಗಬಹುದು, ಎಂದೆಲ್ಲ ಯೋಚಿಸುತ್ತಾ ಹೆಜ್ಜೆ ಹಾಕುತ್ತಿದ್ದ.

ಈಗಾಗಲೇ ಸಂಜೆಯಾಗುತ್ತಿತ್ತು. ಪೂರ್ತಿ ಕತ್ತಲಾಗದಿದ್ದರೂ ಅದು ಕವಿಯುವ ಹಾಗಿದ್ದರಿಂದ ದೀಪ ಹಚ್ಚುವ ಸಿದ್ಧತೆಯಲ್ಲಿ ಇದ್ದಳು. ಸೇವಕರು ಆಗಲೇ ಮೋಂಬತ್ತಿಗಳನ್ನು ಹಚ್ಚಿ ಅಲ್ಲಲ್ಲಿ ಇದ್ದ ದೀಪದಾನಿಗಳಲ್ಲಿ ಜೋಡಿಸುತ್ತಿದ್ದರು. ಘಿಯಾಸ್ ಮೆಲ್ಲಗೆ ಹೆಜ್ಜೆ ಹಾಕುತ್ತಾ ಒಳ ಬಂದ. ಬರುತ್ತಿದ್ದಂತೆ ಅಸ್ಮತ್‌ಳನ್ನು ಹೆಸರಿಡಿದು ಕರೆದ. ಗಂಡನೇ ಬಂದಿರಬೇಕೆಂದು ಥಟ್ಟನೆ ಹೊಳೆದದ್ದೇ ತಿರುಗಿ ನೋಡಿದಳು. ಕಣ್ಣು ನೆಟ್ಟು ಏನನ್ನೋ ಗಮನಿಸುತ್ತಿದ್ದಂತೆ ಕಾಣುತ್ತಿತ್ತು. ಅವನ ಮುಖದಲ್ಲಿ ಎಂದಿಗಿಂತ ಹೆಚ್ಚಿನ ಗೆಲುವಿತ್ತು. ಗೆಲುವಿಗೆ ಕಾರಣ ಏನಿರಬಹುದೆಂದು ಊಹಿಸುತ್ತಿದ್ದಾಗಲೇ,

"ಅಸ್ಮತ್ ನಿನಗೊಂದು ಸಿಹಿ ಸುದ್ದಿ"

"ಸಿಹಿ ಸುದ್ದಿ!? ಬಹುಶಃ ನಿಮಗೊಂದು ಬಡ್ತಿ ಸಿಕ್ಕಿರಬೇಕು. ಅಷ್ಟಲ್ಲದೆ ನಮಗೆ ಇನ್ನೇನು ತಾನೇ ಸಿಹಿ ಸುದ್ದಿ ಇದ್ದೀತು!"

"ನಿನಗೆ ಊಹಿಸಲು ಸಾಧ್ಯವೇ ಇರುವುದಿಲ್ಲ. ಅದೇನೆಂದು ನಿನಗೆ ಹೇಳಿದಲ್ಲಿ ನೀನೆಷ್ಟು ಖುಷಿಪಡುತ್ತೀಯ ಗೊತ್ತೇನು?"

"ಅಬ್ಬ! ನಿಮ್ಮ ಬಳಸು ಮಾತುಗಳನ್ನು ಪಕ್ಕಕ್ಕಿರಿಸಿ ಅದೇನೆಂದು ಬೇಗ ಹೇಳಿ"

"ನಮ್ಮ ನೀಸಾಗೆ ಬಾದಶಾಹರು ಒಬ್ಬ ಒಳ್ಳೆ ವರನನ್ನು ಹುಡುಕಿದ್ದಾರೆ. ಹುಡುಗನೂ ಪರ್ಷಿಯಾ ಮೂಲದವನೇ! ಅಲಿಖುಲಿ ಇಸ್ತಾಜ್ಲು ಅವನ ಹೆಸರು. ತುಂಬಾ ಧೈರ್ಯವಂತ, ಯುದ್ಧಗಳಲ್ಲಿ ಅವನಿಗೆ ಎದುರಾಳಿ ಇರುವುದೇ ಸಾಧ್ಯವಿಲ್ಲ. ಬಹಳ ಪರಾಕ್ರಮಿ ಯೋಧ. ತುಂಬ ಸುಂದರವಾಗಿದ್ದಾನೆ. ಥಟ್ಟಾ ಯುದ್ಧದಲ್ಲಿ ಅಪಾರ ಸಾಹಸ ತೋರಿ ಅದನ್ನು ಗೆದ್ದುಕೊಳ್ಳುವಲ್ಲಿ ಅವನ ಪಾತ್ರ ಬಹಳ ದೊಡ್ಡದು. ಖಾನ್-ಇ-ಖಾನನ್ ಅಂತೂ ಅವನನ್ನು ಹೊಗಳುವುದನ್ನು ಕೇಳಬೇಕು. ಬಾದಶಾಹರಂತೂ ಅವನ ಸಾಹಸಕ್ಕೆ ಪೂರ್ತಿಯಾಗಿ ಮರುಳಾಗಿದ್ದಾರೆ. ಅವನಿಗೆ ಬಾದಶಾಹರಿಂದ ದೊರೆತ ಗೌರವ, ಪದವಿಗಳನ್ನು ನೀನು ನೋಡಬೇಕಿತ್ತು. ಅವನ ಗೌರವಾರ್ಥ, ನಮ್ಮ ನೀಸಾಳನ್ನು ಅವನಿಗೆ ಕೊಟ್ಟು ಮದುವೆ ಮಾಡಿಸುವ ಪ್ರಸ್ತಾಪವನ್ನು ನನ್ನ ಮುಂದಿರಿಸಿ, ನನಗೆ ಬಹು ದೊಡ್ಡ ಗೌರವವನ್ನು ತೋರಿದ್ದಾರೆ."

"ಏನು ನೀವು ಮಾತಾಡುತ್ತಿರುವುದು? ನಮ್ಮ ಹುಡುಗಿಯ ಮದುವೆಯ ವಿಚಾರದಲ್ಲಿ! ನಮ್ಮನ್ನು ಕೇಳದೆ, ನಿರ್ಧಾರಕ್ಕೆ ಬರುವುದೇ? ನೀವು ಹೇಳುವುದನ್ನು ನೋಡಿದರೆ ಅವನೊಬ್ಬ ಯೋಧ ಮಾತ್ರ ಆಗಿರಬೇಕು ಎನಿಸುತ್ತದೆ. ಅವನ ಕುಲ, ಗೋತ್ರ ತಂದೆ, ತಾಯಿ, ಮನೆತನ ಏನೂ ತಿಳಿದುಕೊಳ್ಳದೆ, ನಮ್ಮ ಹುಡುಗಿಯನ್ನು ಕಾಣದ ಬಾವಿಯಲ್ಲಿ ದೂಡುವುದೇ? ನಮ್ಮ ಹುಡುಗಿಯ ಸೌಂದರ್ಯ ಜಾಣ್ಮೆ, ಕೌಶಲ್ಯಗಳಿಗೆ ಶಹಜಾದಾರಂತಹವರೇ ಬರುತ್ತಾರೆ. ಅಷ್ಟರಲ್ಲಿ ನಿಮ್ಮದೇನು ಆತುರ?"

"ಇದು ಆತುರದ ಪ್ರಶ್ನೆಯಲ್ಲ, ಬಾದಶಾಹರ ಮಾತಿಗೆ ನಾನು ಆಗುವುದಿಲ್ಲವೆಂದು ನಿರಾಕರಿಸಿ, ಅವರ ವಿರುದ್ಧ ನಿಲ್ಲಲೇ? ಅಗೌರವ ತೋರಿಸಲೇ?"

"ನಾನು ಹಾಗೆಲ್ಲಿ ಹೇಳಿದೆ, ನಮ್ಮ ಮಗಳ ಸುಖ ಮುಖ್ಯವಲ್ಲವೇ?" ಅವಳಿಗೂ ಅವಳ ಆಯ್ಕೆಯ ಸ್ವಾತಂತ್ರ್ಯ ಇರಬೇಕಲ್ಲವೇ? ನಾವು ನೋಡಿದ ಹುಡುಗನನ್ನು ಅವಳೂ ಒಪ್ಪಬೇಕಲ್ಲವೇ?"

"ನೀನು ಹೇಳುವುದು ಸತ್ಯ. ಆದರೆ ಬಾದಶಾಹರು ಏನೇ ಮಾಡಿದರೂ ಯೋಚಿಸಿ ಮಾಡಿರುತ್ತಾರೆ. ಅದರಲ್ಲಿ ನಮ್ಮ ಒಳಿತು ಇದ್ದೇ ಇರುತ್ತದೆ. ಅಲ್ಲದೆ ನಿನಗೂ ಗೊತ್ತು ಬಾದಶಾಹರು, ಯಾವುದೇ ವಿಷಯದಲ್ಲಿ ಒಮ್ಮೆ ನಿರ್ಧಾರ ತೆಗೆದುಕೊಂಡರೆ, ನಾವು ಪ್ರತಿ ಹೇಳುವ ಹಾಗಿಲ್ಲ. ಅವರಿಗಾಗಲಿ, ನಮಗಾಗಲಿ ಬೇಡ ಎನ್ನುವ ಎದೆಗಾರಿಕೆ ಇರುವುದಿಲ್ಲ. ಹಾಗಿರುವಾಗ ನಾನು ಯಾವ ಮುಖ ಹೊತ್ತುಕೊಂಡು, ಇದನ್ನು ನಿರಾಕರಿಸಿ ನಿಲ್ಲಲಿ?" ಎಂದು ಎತ್ತರದ ದನಿಯಲ್ಲಿ ಮಾತನಾಡುತ್ತಿರುವಾಗಲೇ ಮೆಹರುನ್ನೀಸಾ ಪ್ರವೇಶಿಸಿದಳು. ಚರ್ಚೆ ನಡೆದಿದೆ ಎನಿಸಿತು. ಬಂದವಳೇ ಅಪ್ಪನ ಹೆಗಲ ಮೇಲೆ ಕೈಯಿರಿಸಿ,

"ಅಬ್ಬು, ನೀವಿಬ್ಬರೂ ಯಾವುದೊ ಗಂಭೀರ ವಿಷಯದಲ್ಲಿ ಚರ್ಚೆ ಮಾಡುತ್ತಿರುವಂತಿದೆ" ಎಂದಳು. ಅಮ್ಮಿಯ ಮುಖ ನೋಡಿದರೆ, ಅವಳಿಗೆ ಇಷ್ಟವಾಗದ್ದು ಏನೋ ನಡೆದಿದೆ ಎನಿಸಿತು. ಅಪ್ಪನ ಮುಖದಲ್ಲಿ ಮುಗುಳ್ನಗೆ ಇಣುಕಿದರೂ ಅದ್ಯಾಕೋ, ಅವರ ಅಂತರಂಗದಿಂದ ಬಂದದ್ದೆಂದು ಅನಿಸಲಿಲ್ಲ....ಏನಿರಬಹುದು? ತನ್ನನ್ನೇಕೆ ಬರಹೇಳಿ ಕಳಿಸಿದ? ಎಂದೆಲ್ಲ ಯೋಚಿಸುತ್ತಿರುವಾಗ, ಘಿಯಾಸ್,

"ಬೇಟಾ ನಿನಗೊಂದು ಒಳ್ಳೆ ಸುದ್ದಿ ತಂದಿದ್ದೇನೆ. ಕೇಳಿದರೆ ಬಹಳ ಸಂತೋಷ ಪಡುತ್ತೀ!"

"ಕೇಳಿ ಸಂತೋಷ ಪಡುವ ಸುದ್ದಿ ಏನೆಂದು ಹೇಳಿ ಅಬ್ಬು. ನನಗೆ ಮತ್ತು ನನ್ನ ಕುತೂಹಲಕ್ಕೆ ಕಾಯುವಷ್ಟು ತಾಳ್ಮೆ ಇಲ್ಲ."

"ಇನ್ನೇನಿರುತ್ತೆ ಬೇಟಾ ವಯಸ್ಸಿಗೆ ಬಂದಿರುವ ಹೆಣ್ಣು ಮಗಳ ವಿಷಯದಲ್ಲಿ ಏನನ್ನು ತಾನೇ ಯೋಚಿಸುತ್ತೇವೆ. .......ಹೇಳು ನೋಡೋಣ!"

"ಇನ್ನೇನಿರುತ್ತೆ ಅಬ್ಬೂ? ಮಗಳು ಭಾರವಾಗಿ ಬಿಡುತ್ತಾಳೆ. ಯಾವುದಾದರೂ ಹುಡುಗನನ್ನು ನೋಡಿ, ನಮ್ಮನ್ನು ಅವನ ಕುತ್ತಿಗೆಗೆ ತಗಲು ಹಾಕಿ, ನೀವು ಕೈ ತೊಳೆದುಕೊಳ್ಳಲು ಪ್ರಯತ್ನಿಸುತ್ತೀರಿ."

"ಬೇಟಾ ನಮಗೆ ಭಾರವಾಗುತ್ತದೆಂದು ನಿಮ್ಮನ್ನು ಹೊರಗೆ ಕಳಿಸೊಲ್ಲ. ಒಳ್ಳೆಯ ಸಂಬಂಧ ಬಂದಾಗ, ಅತ್ಯಂತ ಸ್ಫುರದ್ರೂಪಿ ಸಾಹಸಿ, ಗುಣವಂತ, ಮರ್ಯಾದಸ್ತನಾಗಿರುವ ಗಂಡು ಬಂದಾಗ, ನಮ್ಮ ಮಕ್ಕಳಿಗೆ ಒಳ್ಳೆ ಭವಿಷ್ಯವೆಂದು ತೋರಿದಾಗ, ಬದುಕು ಹಸನಾಗುತ್ತದೆ ಎನ್ನುವ ನಂಬಿಕೆ ಮೂಡಿದಾಗ, ಕೈಬಿಟ್ಟು ಹೋಗಬಾರದೆಂದು ಪ್ರಯತ್ನಿಸುತ್ತೇವೆ. ಅದು ತಪ್ಪೆನಿಸುತ್ತದೆಯೇ?"

"ಅಬ್ಬು ಇಷ್ಟು ಗಂಭೀರವಾಗಿ ಮಾತನಾಡಬೇಡಿ. ನಾನು ನಿಮ್ಮ ಮಗಳು. ನಿಮ್ಮ ಉದ್ದೇಶ, ಅಸಹಾಯಕತೆಗಳನ್ನು ಅರ್ಥಮಾಡಿಕೊಳ್ಳಬಲ್ಲೆ. ನನಗೆ ಗೊತ್ತು ಅಬ್ಬು, ಎಂದೂ ನೀವು ನಮ್ಮಂತಹ ಹೆಣ್ಣು ಮಕ್ಕಳನ್ನು ಹೊರೆಯೆಂದು ಭಾವಿಸಲಿಲ್ಲ. ನಾವು

ನಿರೀಕ್ಷಿಸಿದ್ದಕ್ಕಿಂತ ಹೆಚ್ಚು ಸ್ವಾತಂತ್ರ್ಯ, ವಿದ್ಯಾಭ್ಯಾಸಗಳಲ್ಲದೆ ನಮ್ಮ ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹಿಸಿದ್ದೀರಿ. ನಮ್ಮನ್ನು ಗುರುತಿಸಿಕೊಳ್ಳಲು ಅವಕಾಶಗಳನ್ನು ಕೊಟ್ಟಿದ್ದೀರಿ."

"ಹೌದು ಬೇಟಾ. ಅದರಲ್ಲಿಯೂ ನನ್ನ ಮಕ್ಕಳಲ್ಲೆಲ್ಲ ನೀನು ತುಂಬಾ ಜಾಣೆ, ಸಾಹಸಿ. ನಿನ್ನ ಪ್ರತಿಭೆ, ಸಾಮರ್ಥ್ಯಗಳನ್ನು ನಾನು ಬಲ್ಲೆ. ಅದಕ್ಕಿಂತ ಹೆಚ್ಚಾಗಿ ನಿನ್ನ ಅದೃಷ್ಟ ರೇಖೆಯಲ್ಲಿ ನನಗೆ ಪೂರ್ಣ ಭರವಸೆಯಿದೆ. ಜಗತ್ತನ್ನೇ ಆಳುವ ಸಾಮರ್ಥ್ಯ ನಿನ್ನಲ್ಲಿದೆ. ನೀನಷ್ಟೇ ಅದೃಷ್ಟವಂತಳಲ್ಲ. ನಿನ್ನನ್ನು ಮಗಳಾಗಿ ಪಡೆದದ್ದು ನಮ್ಮ ಅದೃಷ್ಟ. ನೀನು ಹುಟ್ಟಿದಾಗಲೇ ನಿನ್ನ ಭವಿಷ್ಯ ನಮಗೆ ಅರಿವಾಗತೊಡಗಿತ್ತು. ಮಹಿಳಾಲೋಕದ ಸೂರ್ಯ ಎನ್ನುವುದರಲ್ಲಿ ಯಾವುದೇ ಅನುಮಾನವಿಲ್ಲ. ನೀನು ಏನಾಗಬೇಕೆಂದು ಅಲ್ಲಾಹ್ ನಿರ್ಧರಿಸಿದ್ದಾನೋ ಅದೇ ಆಗುತ್ತದೆ. ನಾವು ಏನಿದ್ದರೂ ನಿಮಿತ್ತ ಮಾತ್ರ" ಘಿಯಾಸ್ ಭಾವುಕತೆಯಿಂದ ಮಾತನಾಡುತ್ತಿದ್ದ. ನೀಸಾ ತದೇಕಚಿತ್ತದಿಂದ ಕೇಳಿಸಿಕೊಳ್ಳುತ್ತಿದ್ದಂತೆ ಕಾಣಿಸುತ್ತಿದ್ದಳಾದರೂ ಅವಳ ಆಲೋಚನೆಗಳು ಬೇರೆ ದಿಕ್ಕಿನಲ್ಲಿ ಇದ್ದವು. ಅವಳು ತನ್ನ ಮಾತಿಗೆ ಏನುತ್ತರ ಕೊಡಬಹುದೆಂದು ಆಲೋಚಿಸುತ್ತಿರಬೇಕೆಂದು ಘಿಯಾಸ್ ಭಾವಿಸಿದ. ಅವನಿಗೆ ಗೊತ್ತು ತನ್ನ ಮಗಳು ಯಾವುದೇ ಆತುರದ ತೀರ್ಮಾನ ತೆಗೆದುಕೊಳ್ಳುವುದಿಲ್ಲ ಎಂದು. ಆದರೂ ಕುತೂಹಲದಿಂದ ಅವಳ ಆಲೋಚನಾಮಗ್ನ ಮುಖದತ್ತ ನೋಡಿದ.

"ಯಾಕೆ ಬೇಟಾ ಇಷ್ಟು ದೀರ್ಘವಾಗಿ ಆಲೋಚಿಸುತ್ತಿದ್ದೀ! ನಿನಗಾಗಿ ನಾನು ಆಯ್ಕೆ ಮಾಡುವ ಹುಡುಗನಲ್ಲಿ ನಿನಗೆ ಭರವಸೆಯಿಲ್ಲವೇ? ನೋಡಿದ ಕೂಡಲೇ ಅವನನ್ನು ಇಷ್ಟಪಡುತ್ತಿ! ಸಭ್ಯ, ಸುಂದರ, ಸಾಹಸಿ, ಬಾದಶಾಹರ ಖಾಸಾವಲಯದಲ್ಲಿ ಇರುವಂತಹವನು ನಿಜವಾಗಿಯೂ ಅವನು ನಿನಗೆ ಸಿಕ್ಕಿರುವುದು ಅದೃಷ್ಟವೆಂದೇ ನನ್ನ ಭಾವನೆ. ಹೇಳು ಬೇಟಾ ಮಾತಾಡು. ನಿನಗೆ ನನ್ನಲ್ಲಿ ಭರವಸೆಯಿರುವುದಾದರೆ, ನಿನ್ನ ಒಪ್ಪಿಗೆ ತಿಳಿಸು. ಎಂದೂ ನಿನಗೆ ಅನ್ಯಾಯವಾಗುವಂತಹ ಕೆಲಸ ಮಾಡುವುದಿಲ್ಲವೆಂದು ನಿನಗೇ ಗೊತ್ತು. ಅದರಲ್ಲಿಯೂ ನಮ್ಮ ಈ ವರ್ತಮಾನದ ಭವ್ಯ ಬದುಕಿಗೆ ನೀನೇ ಕಾರಣ. ನಿನಗೆ ವಿರುದ್ಧವಾದದ್ದೇನನ್ನೂ ಮಾಡುವುದಿಲ್ಲ."

"ಅಬ್ಬೂ, ಇಷ್ಟೊಂದು ಕಾಳಜಿಯಿಂದ ನನ್ನ ಒಳಿತನ್ನು ಕುರಿತೇ ಆಲೋಚಿಸುತ್ತಿರುವ ನಿಮ್ಮನ್ನು ಅನುಮಾನಿಸುವುದಾಗಲೀ, ನನಗೆ ಒಲ್ಲದ್ದನ್ನು ಮಾಡುತ್ತೀರೆಂದಾಗಲೀ ನಾನು ಕನಸುಮನಸಿನಲ್ಲಿಯೂ ಯೋಚಿಸುವುದಿಲ್ಲ."

"ಹಾಗಾದರೆ ನಮ್ಮ ಆಯ್ಕೆಗೆ, ನಮ್ಮ ನಿರ್ಧಾರಕ್ಕೆ ನಿನ್ನ ವಿರೋಧ ಇಲ್ಲವೆಂದು ಭಾವಿಸಲೆ?"

ತಂದೆ ಮಗಳ ನಡುವಿನ ಸಂವಾದವನ್ನು ಕೇಳಿಸಿಕೊಳ್ಳುತ್ತಿದ್ದ ಅಸ್ಮತಳಿಗೆ ಒಳಗೊಳಗೇ ತಲ್ಲಣ, ಆತಂಕಗಳು ಕಾಡುತ್ತಿದ್ದವು. ಮಗಳು ಏನು ಉತ್ತರ ಹೇಳುತ್ತಾಳೋ ಎನ್ನುವ ಕುತೂಹಲ. ಇನ್ನೂ ಅವಳಿಗೆ ಅಲಿಖುಲಿಯ ಪೂರ್ತಿ ವಿವರಗಳು ತಿಳಿದಿಲ್ಲ. ಅವನು ಕೇವಲ ಒಬ್ಬ ವೀರಯೋಧ. ನಮ್ಮಂತೆಯೇ ದೇಶಬಿಟ್ಟು ಬದುಕನ್ನು ಹುಡುಕಿಕೊಂಡು ಬಂದವನು. ಬಾದಶಾಹರ ಅನುಗ್ರಹದಿಂದ ಅವನಿಗೂ ಒಂದು ನೆಲೆ ಕಂಡಿದೆ ಅನ್ನುವುದಷ್ಟೇ ಎಂಬುದು ಗೊತ್ತಾದರೆ ಏನು ಹೇಳುವಳೋ.

ತನಗೇ ಅವನು, ನೀಸಾಳಿಗೆ ಸರಿಜೋಡಿ ಅಲ್ಲವೆನಿಸಿರುವಾಗ ಅವಳು ಅಷ್ಟೊಂದು ವಿದ್ಯಾವಂತೆ, ಬುದ್ಧಿವಂತೆ, ಪ್ರತಿಭೆ ಕೌಶಲ್ಯಗಳ ಸಾಮರ್ಥ್ಯ ಹೊಂದಿರುವವಳು ಹೇಗೆ ತಾನೇ ಒಪ್ಪಿಕೊಂಡಾಳು ಎಂದೆನಿಸಿ, ನೀಸಾಳತ್ತ ದೃಷ್ಟಿ ಹಾಯಿಸಿದಳು. ತಾಯಿಯ ನೋಟವನ್ನು ನೀಸಾ ಗಮನಿಸಿದಳು. ಸಂದಿಗ್ಧದಲ್ಲಿ ಸಿಲುಕಿ ತಡಬಡಿಸುವಂತೆ ಕಾಣಿಸಿದಳು. ಆದರೂ ಅಬ್ಬೂಗೆ ಏನಾದರೂ ಉತ್ತರ ಕೊಡಲೇ ಬೇಕಲ್ಲವೇ?!

"ಅಬ್ಬೂ ನೀವು ನನ್ನ ಒಳಿತನ್ನು ಗಮನದಲ್ಲಿ ಇರಿಸಿಕೊಂಡೇ ನಿರ್ಧಾರ ತೆಗೆದುಕೊಂಡಿರುತ್ತೀರಿ ಎನ್ನುವುದು ನನಗೆ ಗೊತ್ತು. ಆದರೆ..... ಆದರೆ, ನನ್ನನ್ನು ವರಿಸುವವನು ಶಹಜಾದಾ ಸಲೀಂ ಯಾಕಾಗಬಾರದು? ನನ್ನ ಬಗೆಗಿನ ಭವ್ಯ ಭವಿಷ್ಯ ನಿಜವಾಗಬೇಕಾದರೆ, ಸಲೀಂನನ್ನು ಮದುವೆಯಾಗಬೇಕೇ ಹೊರತು ಒಬ್ಬ ಸೈನಿಕ, ಸರದಾರ ಅಂಥವನ್ನಲ್ಲ!"

ಘಿಯಾಸ್‌ಗೆ ಮುಖದ ಮೇಲೆ ಹೊಡೆದಂತಾಯಿತು. ನೀಸಾ ಎಂದೂ ಹೀಗೆ ಉದ್ಧಟಳಾಗಿ ಮಾತಾಡಿದ್ದಿಲ್ಲ. ಆದರೆ ಇದ್ದಕ್ಕಿದ್ದಂತೆ ಅವಳ ತಲೆಯಲ್ಲಿ ಸಲೀಂನ ವಿಚಾರ ಬಂದದ್ದಾದರೂ ಹೇಗೆ? ಎಷ್ಟು ಧೈರ್ಯ! ಶಹಜಾದಾನನ್ನೇ ಮದುವೆಯಾಗುವ ಆಸೆಯನ್ನು ವ್ಯಕ್ತಪಡಿಸುತ್ತಾಳೆ. ಅವನಲ್ಲಿ ಏನೇನೋ ಅನುಮಾನಗಳು ಹುಟ್ಟಿಕೊಂಡವು. ಅವಳು ನಿರೀಕ್ಷಿಸುವ ಹಾಗೆ ಅವಳ ಯೋಗ್ಯತೆಗೆ ಶಹಜಾದಾರಂಥವರೇ ಸಿಗಬೇಕು. ಆದರೆ ತಾವೆಲ್ಲಿ? ಬಾದಶಾಹರೆಲ್ಲಿ? ಯಾವ ಬಾಯಿಂದ ತಮ್ಮಾಸೆಯನ್ನು ಅವರಿಗೆ ತಿಳಿಸುವುದು? ಜೊತೆಗೆ ಬಾದಶಾಹರ ಸಂಬಂಧವನ್ನು ಆಸೆಪಡುವ ಯೋಗ್ಯತೆಯಾಗಲೀ, ಅಧಿಕಾರ ಅಂತಸ್ತುಗಳಾಗಲೀ ತಮ್ಮಗೆಲ್ಲಿವೆ? ಎಂದು ನಿಟ್ಟುಸಿರಿನೊಂದಿಗೆ ಸುಮ್ಮನಾದ. ಆದರೆ ಮಗಳ ಪ್ರಶ್ನೆಗೆ ಉತ್ತರಿಸಲೇ ಬೇಕಲ್ಲವೇ? ಅವಳ ವಿರೋಧ ಉದ್ಧಟವೆನಿಸಿದರೂ, ನ್ಯಾಯಯುತವಾಗಿದೆ. ಆದರೆ ಈ ಮದುವೆ ವಿಚಾರ ಹುಟ್ಟಿಕೊಂಡ ಸಂದರ್ಭಗಳೇ ಬೇರೆ. ಅವಳಿಗೆ ಹೇಗೆ ತಿಳಿಸುವುದು. ಇದು ನಮ್ಮ ನಿರ್ಧಾರವಲ್ಲ. ಬಾದಶಾಹರ ನಿರ್ಧಾರ. ಆದ್ದರಿಂದ ಮಗಳಿಗೆ ನಡೆದದ್ದನ್ನು ಹೇಳಿಬಿಡಬೇಕೆಂದುಕೊಂಡ.

"ಬೇಟಾ ನೀಸಾ. ನಿನ್ನ ವರ ಸಲೀಂನೇ ಏಕಾಗಬಾರದೆಂದು ಪ್ರಶ್ನಿಸಿದ್ದು, ಮೇಲು ನೋಟಕ್ಕೆ ಉದ್ಧಟವೆನಿಸಬಹುದು. ಆದರೆ ಇದು ನಮ್ಮಿಂದ ಆದದ್ದಲ್ಲ. ಬಾದಶಾಹರು, ನಿನ್ನ ಭಾವಿ ಪತಿಯ ವಿಚಾರದಲ್ಲಿ ತುಂಬಾ ಮೆಚ್ಚಿಗೆ ಸಂತೋಷಗಳನ್ನು ಇರಿಸಿಕೊಂಡಿರುವವರು. ಅಲಿಖುಲಿಯ ಧೈರ್ಯ, ಸಾಹಸ, ಥಟ್ಟಾದ ಮೇಲೆ ವಿಜಯವನ್ನು ಸಾಧಿಸಿಕೊಟ್ಟುದಕ್ಕೆ, ಕೃತಜ್ಞತಾ ಪೂರ್ವಕವಾಗಿ ಅಮೂಲ್ಯವಾದ ಆಭರಣ, ಖಡ್ಗ ಮತ್ತು ವಸ್ತ್ರಗಳ ಜೊತೆಗೆ ಬುರ್ದವಾನದ ರಾಜ್ಯಪಾಲನನ್ನಾಗಿ ಅಧಿಕಾರವನ್ನೂ ನೀಡಿ ಗೌರವಿಸಿದರು. ಅಲ್ಲದೆ, ತನ್ನ ಮತ್ತು ಅಲಿಖುಲಿಯ ಬಗೆಗಿನ ಗೌರವದ ಪ್ರತೀಕವಾಗಿ ಎರಡೂ ಕುಟುಂಬಗಳ ನಡುವೆ ಸಂಬಂಧವನ್ನು ಬಯಸಿ, ನನ್ನ ಮಗಳಾದ ನಿನ್ನನ್ನು ಅನುಪಮ ರತ್ನವೆಂದು ಭಾವಿಸಿ ಉಡುಗೊರೆಯಾಗಿ ಕೊಡುವ ಆಸೆಯನ್ನು ವ್ಯಕ್ತಪಡಿಸಿದರು. ನನ್ನನ್ನು ಇದಕ್ಕೆ ಒಪ್ಪಿಗೆ ನೀಡಲು ಕೇಳಿಕೊಂಡರು. ಹೀಗಿರುವಾಗ ಮತ್ತು ನನ್ನನ್ನು ಎಲ್ಲಿದ್ದವನನ್ನು ಇಷ್ಟು ಎತ್ತರಕ್ಕೇರಲು, ಅದ್ಭುತವಾದ, ಐಷಾರಾಮಿಯಾದ ಬದುಕನ್ನು ಕಟ್ಟಿಕೊಟ್ಟ ಬಾದಶಾಹರ ಇಚ್ಛೆ, ನಿರ್ಧಾರಗಳನ್ನು ಹೇಗೆ

ತಾನೇ ನಿರಾಕರಿಸಲಿ? ಹೇಳು ಮಗಳೆ ನಿನ್ನಾಸೆಯನ್ನು ಪೂರೈಸಲು ಬಾದಶಾಹರ ಅಭಿಪ್ರಾಯ, ಆಸೆ, ನಿರ್ಧಾರಗಳಿಗೆ ಅನಾದರ ತೋರಲೆ?"

ನೀಸಾ, ಘಿಯಾಸ್‌ನ ಮಾತುಗಳಲ್ಲಿನ ವೇದನೆ, ಸಂದಿಗ್ಧ, ಅಸಹಾಯಕತೆಗಳನ್ನು ಗಮನಿಸಿದಳು. ಅವಳಿಗೂ ಗೊತ್ತು. ತಾವೆಷ್ಟೇ ದೊಡ್ಡ ಅಧಿಕಾರ, ಶ್ರೀಮಂತಿಕೆಗಳಲ್ಲಿದ್ದರೂ ಅದು ಬಾದಶಾಹರ ಕೃಪಾ ಕಟಾಕ್ಷದಿಂದ ಮಾತ್ರವೇ. ಅವರ ಮನಸ್ಸಿಗೆ ನೋವಾದರೆ, ಮಾತನ್ನು ಅವಲಕ್ಷಿಸಿದರೆ ತಮಗೆ ಬದುಕೆನ್ನುವುದೇ ಇರುವುದಿಲ್ಲ. ಅನುಗ್ರಹ, ಆಗ್ರಹವಾಗಿ ಬಿಡುತ್ತದೆ.

"ಅಬ್ಬೂ, ನಾನು ತಪ್ಪು ಮಾಡಿದೆ. ನಿಮಗೆ ಎದುರುತ್ತರ ಕೊಟ್ಟೆ. ನಿಮ್ಮೆದೆಯ ಪದಕವೆಂದು ಭಾವಿಸಿ ಎಲ್ಲರಿಗಿಂತ ಹೆಚ್ಚಾಗಿ ಪ್ರೀತಿಸಿದಿರಿ. ಅತ್ಯುತ್ತಮ ಶಿಕ್ಷಣ, ಸಂಸ್ಕಾರಗಳನ್ನು ನೀಡಿದಿರಿ. ನನ್ನ ಪ್ರತಿಭೆಯನ್ನು ನೇವರಿಸಿ ಬೆಳೆಸಿದಿರಿ. ಬಯಸಿದ್ದೆಲ್ಲವನ್ನೂ ಕೊಟ್ಟಿರಿ, ಹೆಣ್ಣು ಮಗುವೆಂದು ಕಡಿವಾಣ ಹಾಕಿ ಕೂರಿಸಲಿಲ್ಲ. ಸಮಾಜವನ್ನೂ ಲೆಕ್ಕಿಸದೆ ಪೂರ್ಣ ಸ್ವಾತಂತ್ರ್ಯ ಕೊಟ್ಟಿರಿ. ಗಂಡು ಕಲೆಗಳನ್ನೆಲ್ಲ ಕಲಿಯಲು ಅವಕಾಶ ಕೊಟ್ಟಿರಿ– ನಿಮ್ಮಿಂದ ನನಗೆ ಅನ್ಯಾಯವೆಂದು ನಾನು ಹೇಗೆ ತಾನೇ ಹೇಳಲಿ?.....ಈ ವಿವಾಹ ಸಂಬಂಧ ನಿಮಗೆ ಒಪ್ಪಿಗೆಯಾದಲ್ಲಿ ನನಗೂ ಒಪ್ಪಿಗೆಯೇ, ಅಲ್ಲಾಹ್‌ನ ನಿರ್ಧಾರಗಳ ಮುಂದೆ ನಾವೆಷ್ಟರವರು ಅಬ್ಬೂ? ನನ್ನ ಹಣೆಯಲ್ಲಿ ಬರೆದಿದ್ದಂತೆ ಆಗಲಿ" ಎಂದು ಮೌನವಾದಳು.

"ಬೇಟಾ. ಮನಃಪೂರ್ತಿಯಾಗಿ ನಿನ್ನ ಒಪ್ಪಿಗೆಯಿದೆಯೇ? ಒಂದಿಷ್ಟೂ ಸಮಾಧಾನವಿಲ್ಲವೆಂದೆನಿಸಿದರೆ, ಬಾದಶಾಹರ ಕೋಪವನ್ನೂ ಎದುರಿಸಲು ನಾನು ಸಿದ್ಧ. ಅದಕ್ಕೆ ಮೊದಲೊಮ್ಮೆ ನಿನ್ನ ಭಾವೀ ಗಂಡನನ್ನು ನೋಡು. ಖಂಡಿತವಾಗಿಯೂ ನೀನು ಇಷ್ಟಪಡುತ್ತೀಯ."

"ನಿಮ್ಮ ಸಂತೋಷವೇ ನನ್ನ ಸಂತೋಷ. ನಾನು ನೋಡುವುದೇನಿದೆ? ಎಲ್ಲವೂ ನಿರ್ಧಾರವಾಗಿದೆಯಲ್ಲ. ಮುಂದೆ ಅವನ ಜೊತೆಯೇ ಬಾಳಬೇಕಿರುವಾಗ, ಮೊದಲೇ ಅವನನ್ನು ನೋಡಿ ತಿಳಿದುಕೊಳ್ಳಬೇಕಾದ ಅಗತ್ಯವಿಲ್ಲ. ಅವನ ಸಾಂಗತ್ಯ ಒಡನಾಟಗಳೇ ಅವನನ್ನು ಪರಿಚಯಿಸುತ್ತವೆ."

"ನಾಳೆ ನಮ್ಮ ಭಾವೀ ಅಳಿಯನನ್ನು ದಾವತ್‌ಗೆ ಆಹ್ವಾನಿಸಬೇಕೆಂದಿದ್ದೇನೆ. ನೀವಿಬ್ಬರೂ ಪರಸ್ಪರ ಪರಿಚಯ ಮಾಡಿಕೊಳ್ಳಿ, ನಿಮ್ಮ ಅನುಮಾನಗಳನ್ನು ಪರಿಹರಿಸಿಕೊಳ್ಳಿ. ಒಂದಿಷ್ಟು ಮಂದಿ ನೆಂಟರಿಷ್ಟರನ್ನೂ ಆಹ್ವಾನಿಸಲಿದ್ದೇವೆ. ಅದೇ ದಿನ ಮದುವೆಯ ನಿಶ್ಚಿತಾರ್ಥವನ್ನೂ ಮುಗಿಸಿಬಿಡೋಣ."

ತಂದೆ ಮಗಳ ಮಧ್ಯೆ ತಾನೇಕೆ ಎಂದು ಅಸ್ಮತ್ ಬೇಗಂ ಆಗಲೇ ಅಡಿಗೆ ಮನೆ ಸೇರಿ ಬಿಟ್ಟಿದ್ದಳು.

ಎಷ್ಟೇ ಪ್ರಯತ್ನಿಸಿದರೂ ನೀಸಾಗೆ ನಿದ್ದೆ ಹತ್ತಲಿಲ್ಲ. ಮಲ್ಲಿಗೆ ಬಿಳುಪಿನ ಮೆತ್ತನೆಯ ಹಾಸಿಗೆ ಮೇಲೆ ಹೊರಳಾಡುತ್ತಿದ್ದಳು. ಅಸಂಬದ್ಧ ಆಲೋಚನೆಗಳು. ತಾನೊಂದು ಬಗೆದರೆ ದೈವವೊಂದು ಬಗೆಯುತ್ತಿರುವಂತೆನಿಸಿತು. ಸಲೀಂ ತನ್ನನ್ನು ಅಷ್ಟು ಗಾಢವಾಗಿ ಪ್ರೀತಿಸುತ್ತಿರುವಾಗ, ಬಾದಶಾಹರಿಗೆ ತಮ್ಮ ಪ್ರೀತಿಯನ್ನು ತಿಳಿಸಿ ಆದಷ್ಟು ಬೇಗ ನಿಕಾಹ್

ಮಾಡಿಕೊಳ್ಳಬಹುದಾಗಿತ್ತಲ್ಲವೇ? ಯಾಕೆ ಮಾಡಲಿಲ್ಲ? ಬಾದಶಾಹ ಮತ್ತು ಪಾದಶಾಹ್ ಬೇಗಂ ಇಬ್ಬರಿಗೂ ಬಹಳ ಮುದ್ದಿನ ಮಗನಲ್ಲವೇ? ಅವರು ಖಂಡಿತ ಇಲ್ಲವೆಂದು ಹೇಳುತ್ತಿರಲಿಲ್ಲ. ಆದರೆ ಹಾಗೆ ಮಾಡದೆ ತಡಮಾಡಿದ್ದಕ್ಕೆ ನನ್ನಿಷ್ಟದ ವಿರುದ್ಧ, ಯಾರೆಂದು ತಿಳಿಯದ, ಕಾಣದ ಯುವಕನೊಂದಿಗೆ ವಿವಾಹವಾಗಬೇಕಾದ ಸಂದರ್ಭ ಬಂದು ಕೂತಿದೆ. ಇದೆಲ್ಲ ನೋಡಿದರೆ ನನ್ನ ಬಗ್ಗೆ ಸಲೀಂಗೆ ನಿಜವಾದ ಪ್ರೀತಿ ಇದೆ ಅನ್ನುವ ವಿಷಯದಲ್ಲಿಯೇ ಅನುಮಾನ ಬರುತ್ತದೆ. ಚಕ್ರವರ್ತಿಗಳಿಗೆ, ಚಕ್ರವರ್ತಿ ಮಕ್ಕಳಿಗೆ, ಇಟ್ಟುಕೊಂಡವರೂ ಕಟ್ಟಿಕೊಂಡವರೂ ನೂರಾರು ಸಂಖ್ಯೆಯಲ್ಲಿ ಇರುತ್ತಾರೆಂದು ಕೇಳಿದ್ದೇನೆ. ಸಲೀಂಗೂ ಹಾಗೆಯೇ ಎಷ್ಟೋ ಮಂದಿ ಇರಬೇಕು. ನಾಳೆ ಆ ನೂರಾರು ಮಂದಿ ಹೆಂಡಿರಲ್ಲಿ ನಾನೂ ಒಬ್ಬಳಾಗಿ ಉಳಿದುಬಿಟ್ಟರೆ ಗತಿಯೇನು? ನನ್ನಿಂದ ಬೇಸರಗೊಂಡು ತೊರೆದು ಬಿಟ್ಟರೆ? ಹೀಗೆ ಏನೇನೋ ಅನಿಷ್ಟ ಆಲೋಚನೆಗಳು. ಮುಳ್ಳಿನ ಮೇಲೆ ಮಲಗಿದಂತೆ ಹೊರಳಾಡುತ್ತಿದ್ದಳು.

ಇದೇ ರೀತಿಯಲ್ಲಿ ಅಸ್ಮತಳಿಗೂ ನಿದ್ದೆ ಬಂದಿರಲಿಲ್ಲ. ಅವಳ ಆಲೋಚನೆ ಮಗಳು ನೀಸಾ ಮದುವೆ ವಿಚಾರವನ್ನು ಮನಸ್ಸಿಗೆ ಹಚ್ಚಿಕೊಂಡು ಏನು ಮಾಡಿಕೊಳ್ಳುತ್ತಾಳೊ ಎಂಬುದಾಗಿತ್ತು. ಘಿಯಾಸ್ ಎದುರಲ್ಲಿ ಮಗಳಿಗೆ ಏನನ್ನೂ ಹೇಳದವಳಾಗಿದ್ದಳು. ಆದ್ದರಿಂದ ಈ ನೀರವ ರಾತ್ರಿಯಲ್ಲಿ, ಮಗಳ ಬಳಿಗೆ ಹೋಗಿ ಸಮಾಧಾನಗೊಳಿಸಬೇಕೆನಿಸಿತು. ಘಿಯಾಸ್‌ಗೇ ಗೊತ್ತಿಲ್ಲದ ಕೆಲವು ವಿಷಯಗಳು ಅವಳ ಕಿವಿಗೆ ಬಿದ್ದಿದ್ದವು. ಆದರೆ ಅವು ನಿಜವೋ ಸುಳ್ಳೋ ಹೇಳಲಾರದವಳಾಗಿದ್ದಳು. ಈಗ ನೀಸಾ ಬಳಿ ಹೋಗಿ ಮಾತಾಡಿಸಿ ಇದರ ಸತ್ಯಾಸತ್ಯತೆಯನ್ನು ತಿಳಿಯಬೇಕೆಂದು ಕೊಂಡಳು. ಕೂಡಲೇ ಎದ್ದು ಪಕ್ಕದ ಮೇಜಿನ ಮೇಲೆ ಇರಿಸಿದ್ದ ಹೂಜಿಯಿಂದ ನೀರನ್ನು ಬಗ್ಗಿಸಿಕೊಂಡು ಕುಡಿದು ನೀಸಾ ಮಲಗಿದ್ದ ಕೋಣೆಯ ಬಳಿ ನಡೆದು, ಮುಚ್ಚಿದ್ದ ಬಾಗಿಲನ್ನು ಮೆಲ್ಲನೆ ತೆರೆದಳು. ಎಷ್ಟೇ ಜಾಗರೂಕತೆಯಿಂದ ಇದ್ದರೂ ಬಾಗಿಲು ಕಿರುಗುಟ್ಟುವ ಸದ್ದು ಕೇಳಿಸಿತು. ಎಚ್ಚರವಾಗಿಯೇ ಇದ್ದ ನೀಸಾ ಹಾಸಿಗೆ ಮೇಲಿಂದಲೇ ಯಾರದು ಎನ್ನುತ್ತ ಎದ್ದು ಕುಳಿತಳು. ಕೋಣೆಯಲ್ಲಿ ಉರಿಯುತ್ತಿದ್ದ ಮೋಂಬತ್ತಿಗಳ ಮಂದ ಬೆಳಕಿನಲ್ಲಿ ತಾಯಿಯನ್ನು ಗುರುತಿಸಿದಳು. ದಿಗ್ಭ್ರಾಂತಳಾದಳು. ಇಷ್ಟು ಹೊತ್ತಿನಲ್ಲಿ ಇಲ್ಲಿಗೆ ಬರಲು ಕೆಲಸವಾದರೂ ಏನಿತ್ತು ಎಂದು ಯೋಚಿಸಿ ದಡ್ಡನೆ ಎದ್ದು ಬಂದು, ಅಚ್ಚರಿಯಿಂದ "ಅಮ್ಮೀಜಾನ್ ಹೊತ್ತಲ್ಲದ ಹೊತ್ತಲ್ಲಿ ನೀನ್ಯಾಕೆ ಬಂದೆ?"

"ಬೇಟಾ ನಿನ್ನ ಮನಸ್ಸಿನಲ್ಲಿ ದುಗುಡದ ಬೆಂಕಿ ಹೊತ್ತಿ ಉರಿಯುವಾಗ, ನಾನು ಹೇಗೆ ತಾನೇ ನೆಮ್ಮದಿಯಿಂದ ನಿದ್ದೆ ಮಾಡಲಿ? ನಿನ್ನ ಅಬ್ಬುವಿನ ನಿರ್ಧಾರ ನಿನಗೆ ಬೇಸರ ತಂದಿದೆ. ಆದರೆ ಅವರೂ ಅಸಹಾಯಕರು. ಇದ್ದಕಿದ್ದಂತೆ ದಿಢೀರನೆ ನಮ್ಮ ಮಗಳಿಗೆ ಒಬ್ಬ ಯೋಗ್ಯ ವರನನ್ನು ಸೂಚಿಸಿ ಮದುವೆಗೆ ಸಿಫಾರಿಶ್ ಮಾಡಿದಾಗ, ನಾವು ನಿರಾಕರಿಸಲು ಹೇಗೆ ಸಾಧ್ಯ? ಅದೂ ಅಲ್ಲದೆ, ಬಾದಶಾಹರ ಅಪ್ಪಣೆಯಿಲ್ಲದೆ ನಾವು ಅಧಿಕಾರಿಗಳು ಕೂಡಾ ಮದುವೆ ಮಾಡುವ ಹಾಗಿಲ್ಲೆನ್ನುವುದು ನಿನಗೂ ಗೊತ್ತೇ ಇದೆ. ಹೀಗಿರುವಾಗ ನೀನು ಬಯಸುವ ವರನನ್ನು ಮದುವೆಯಾಗುತ್ತೇನೆಂದು ಹೇಳುವ ಧೈರ್ಯ ನಿನಗಾಗಲೀ ನಮಗಾಗಲೀ ಎಲ್ಲಿದೆ? ಬೇಟಾ ನೀನು ಶಹಜಾದಾ ಸಲೀಂನನ್ನು

ನಿಜವಾಗಿಯೂ ಪ್ರೀತಿಸುತ್ತಿದ್ದೀಯ? ನಿಮ್ಮಿಬ್ಬರ ಪ್ರೀತಿಯ ವಿಚಾರ ಜನಾನಾದಲ್ಲಿ ಗುಟ್ಟುಗುಟ್ಟಾಗಿ ಚರ್ಚೆ, ಟೀಕೆಗಳು ನಡೆಯುತ್ತಿವೆ. ಇಲ್ಲ ಸಲ್ಲದ ವದಂತಿಗಳು ಹರಿದಾಡುತ್ತಿವೆ. ಇದರಲ್ಲಿ ನಿನ್ನನ್ನೇ ಅಪರಾಧಿ ಸ್ಥಾನದಲ್ಲಿ ನಿಲ್ಲಿಸಲಾಗಿದೆ. ಭಾವಿ ಬಾದಶಾಹರನ್ನು ಬುಟ್ಟಿಗೆ ಹಾಕಿಕೊಂಡು, ಗದ್ದುಗೆಯ ಅಧಿಕಾರ ಪಡೆಯುವ ಹುನ್ನಾರವಾಗಿ ಮಗಳನ್ನು ಮುಂದೆ ಬಿಟ್ಟಿದ್ದಾರೆ ಎಂದೆಲ್ಲ ಮಾತಾಡುತ್ತಿದ್ದಾರೆ. ಇದೆಲ್ಲವನ್ನೂ ನಾನು ಕೇಳಿಸಿಕೊಂಡಿದ್ದೇನೆ. ಆದರೆ ಸತ್ಯ ಏನೂಂತ ಗೊತ್ತಿಲ್ಲದೆ, ಜನರನ್ನು ಎದುರು ಹಾಕಿಕೊಳ್ಳುವುದು ಬೇಡಾಂತ ಸುಮ್ಮನಾದೆ. ಜೊತೆಗೆ ನನ್ನ ಮಗಳು ಎಂದೂ ದಾರಿ ತಪ್ಪುವುದಿಲ್ಲ ಎನ್ನುವ ಭರವಸೆಯೂ ನನಗಿದೆ. ನಿನ್ನ ತಂದೆಗೆ ನಾನು ಕೇಳಿಸಿಕೊಂಡಿದ್ದನ್ನೂ ತಿಳಿಸಲಿಲ್ಲ. ಆದರೆ ಈ ಸಂಬಂಧದಿಂದ ನನಗೂ ಸಮಾಧಾನವಿಲ್ಲ. ನೀನು ಹುಟ್ಟಿದಾಗಲೇ ಭವಿಷ್ಯಕಾರರು ನೀನು ಚಕ್ರವರ್ತಿನಿ ಆಗುತ್ತೀಯೆಂದು ಹೇಳಿದ್ದರು. ನಿನ್ನ ಹುಟ್ಟಿನ ಕಥೆಯನ್ನು ಅಬ್ಬು ನಿನಗೆ ಹೇಳಿರಬೇಕು. ಎಷ್ಟು ಕಷ್ಟಪಟ್ಟು ಹುಟ್ಟೂರು ನೆಲಸಿದ ಊರುಬಿಟ್ಟು ಎಂತಹ ಕಠಿಣ ಪರಿಸ್ಥಿತಿಗಳಲ್ಲಿ ದೂರದ ಪರ್ಷಿಯಾ ಬಿಟ್ಟು ಕಾಣದ ಹಿಂದೂಸ್ತಾನದ ಕಡೆ ಇದ್ದುದೆಲ್ಲವನ್ನೂ ಕಳೆದುಕೊಂಡು ಕ್ಷಣ ಕ್ಷಣವೂ ಅಪಾಯದ ಚಿಂತೆಯಲ್ಲಿ, ಭಯ, ಆತಂಕಗಳಲ್ಲಿ ನಾಲ್ಕು ಮಕ್ಕಳನ್ನು ಜೊತೆಗಿರಿಸಿಕೊಂಡು ನಿನ್ನನ್ನು ಬಸಿರಲ್ಲಿಟ್ಟುಕೊಂಡು ಬಂದೆವು. ದಾರಿಯಲ್ಲಿಯೆ ಹೆರಿಗೆ! ನೀನು ಹುಟ್ಟಿದೆ. ಆದರೆ ಉಣಿಸಲು ಹಾಲಿಲ್ಲ. ತಿನಿಸಲು ತಿಂಡಿಯಿಲ್ಲ. ಈಗಾಗಲೇ ನಾಲ್ಕು ಮಕ್ಕಳ ಹೊಟ್ಟೆ ತುಂಬುವುದೇ ಕಷ್ಟವಾಗಿತ್ತು. ಈ ಪರಿಸ್ಥಿತಿಯಲ್ಲಿ ಮನುಷ್ಯತ್ವ ಹಾಗೂ ಕರುಳ ಸಂಬಂಧಗಳನ್ನು ಹಿಚುಕಿಕೊಂಡು, ನಿನ್ನ ಅಬ್ಬು ನಿನ್ನನ್ನು, ನನ್ನಿಂದ ಕಸಿದುಕೊಂಡು, ಎಲ್ಲೋ ದೂರದಲ್ಲಿ ಅಲ್ಲಾಹ್‌ನ ಸುಪರ್ದಿಯಲ್ಲಿ, ಮನಸ್ಸಿಲ್ಲದ ಮನಸ್ಸಿನಿಂದ ತೊರೆದು ಬಂದ... ನೀಸಾ ನೀನು ಅದೃಷ್ಟವಂತೆ. ನಮ್ಮ ಸಹ ಪ್ರಯಾಣಿಕರಾಗಿ ಬಂದ ಮಲ್ಲಿಕ್ ಮಾಸೂದರ ಕೃಪಾದೃಷ್ಟಿಗೆ ಬಿದ್ದೆ. ಹಾವಿನ ಹೆಡೆಯ ನೆರಳಲ್ಲಿ ಸೂರ್ಯ ತೇಜದೊಂದಿಗೆ ನಗುತ್ತಾ ಕೈಕಾಲು ಆಡಿಸುತ್ತಿದ್ದ ನಿನ್ನನ್ನು ಕಂಡು ದಿಗ್ಭ್ರಾಂತರಾದರು. ನಿನಗೆ ಹೊದಿಸಿದ ಶಾಲು, ಅಬ್ಬುವಿನದೆಂದೂ, ನೀನು ಅವರ ಮಗುವೆಂದೂ ತಿಳಿದು, ಪೋಷಣೆಯ ಹೊಣೆ ಹೊತ್ತು ನಮಗೆ ಹಿಂತಿರುಗಿಸಿದ. ಬುದ್ಧಿವಾದ ಹೇಳಿದ. ನಿನ್ನ ಜಾತಕವನ್ನೂ ಹೇಳಿ ಬಿಟ್ಟ. ನಿನಗೆ ಬಾದಶಾಹ್‌ಬೇಗಂ ಆಗುವ ಸುಯೋಗವಿದೆಯೆಂದು ಆತನ ಜೊತೆಗಾರನಾಗಿದ್ದ ಭವಿಷ್ಯಕಾರ ಹೇಳಿದ. ಆ ಭವಿಷ್ಯದಲ್ಲಿ ನಾನು ಅಪಾರವಾಗಿ ನಂಬಿಕೆ ಇರಿಸಿಕೊಂಡಿದ್ದೆ. ನಾವು ಬಾದಶಾಹರ ಆಶ್ರಯದಲ್ಲಿ ಇಷ್ಟೊಂದು ಸಿರಿಸಂಪತ್ತು ಅಧಿಕಾರದ ಮಾಲಿಕರಾಗಿದ್ದೇವೆ. ಎಲ್ಲವೂ ನಿಜವಾಗುತ್ತಿದೆ. ಆದರೆ ಇದೊಂದು ಹೀಗೆ ಎಡವಟ್ಟಾಗಿದೆ. ಆದರೂ ನೀಸಾ, ನನ್ನ ಮಾತು ಕೇಳು. ನಾವು ಸಾಮ್ರಾಜ್ಯಶಾಹಿ ಆದೇಶಗಳನ್ನು ತಿರಸ್ಕರಿಸುವ ಹಾಗಿಲ್ಲ. ನಾವಿಬ್ಬರೂ ಅಸಹಾಯಕರಾಗಿದ್ದೇವೆ. ಇಷ್ಟರಿಂದಲೇ ನೀನು ಹತಾಶಳಾಗಬೇಕಿಲ್ಲ. ಅಲ್ಲಾಹ್ ನಮ್ಮ ಕೈಬಿಡುವುದಿಲ್ಲ. ಪರಿಸ್ಥಿತಿಗಳು ಹೇಗೆಂದು ನಾವು ಸಾಮಾನ್ಯ ಮನುಷ್ಯರು ಹೇಳಲು ಸಾಧ್ಯವೇ? ಖಂಡಿತ ನೀನು ಎಂದೋ ಒಮ್ಮೆ ಮುಘಲ್ ಗದ್ದುಗೆಯನ್ನು ಅಲಂಕರಿಸುತ್ತೀಯ. ನನ್ನ ಅಂತರಾತ್ಮ ಹೇಳುತ್ತಿದೆ. ಇಲ್ಲದ್ದನ್ನು

ತಲೆಗೆ ಹಚ್ಚಿಕೊಂಡು ಕೊರಗಬೇಡ. ಬಂದದ್ದನ್ನು ಅವನ ಕರುಣೆಯೆಂದು ಸ್ವೀಕರಿಸಿ ಸಂತೋಷದಿಂದ ಇರು" ಎಂದು ಬಹಳ ಭಾವುಕತೆಯಿಂದ ನುಡಿದು, ಅವಳನ್ನು ಎದೆಗೆ ಅಪ್ಪಿಕೊಂಡು ಸಮಾಧಾನಪಡಿಸಿದಳು. ಅಮ್ಮನ ಎದೆಯ ಬಿಸುಪಿನ ಸೋಂಕು ಅವಳಿಗೆ ಹಾಯೆನಿಸಿತು. ಒಂದು ಸಂದರ್ಭದಲ್ಲಿ ಅವಳ ಅಪ್ಪನೂ ಇದೇ ಕತೆಯನ್ನು ಹೇಳಿ, ತಮ್ಮೆಲ್ಲ ಭಾಗ್ಯಕ್ಕೆ ಅವಳೇ ಕಾರಣ ಎಂದು ಕೊಂಡಾಡಿದ್ದ.

"ಅಮ್ಮೀ, ನೀನೂ ಅಬ್ಬೂ ನನ್ನೆರಡು ಕಣ್ಣುಗಳು. ಎಂದೂ ನೀವು ನನ್ನ ಆಸೆಗಳನ್ನು, ಬಯಕೆಗಳನ್ನು ನಿರಾಕರಿಸಿಲ್ಲ. ನನ್ನ ಹುಡುಗಾಟ, ತುಂಟತನಗಳನ್ನು ಸಹಿಸಿಕೊಂಡಿದ್ದೀರಿ. ಕಲಿಯಬೇಕೆಂದದ್ದನ್ನು ಕಲಿಸಿದ್ದೀರಿ. ಸಮಾಜದ ಟೀಕೆಗಳನ್ನು ಲೆಕ್ಕಿಸದೆ, ಹೆಣ್ಣು ಮಗುವೆಂದು ನಿರ್ಲಕ್ಷಿಸದೆ, ಗಂಡು ಮಗುವಿನಂತೆ ಬೆಳೆಸಿದ್ದೀರಿ. ಸ್ವಾತಂತ್ರ್ಯಕೊಟ್ಟಿದ್ದೀರಿ. ಇಂದು ನಾನು ಅಬ್ಬುವಿನ ಜೊತೆ ಉದ್ಧಟತನದಿಂದ ವರ್ತಿಸಿದೆ. ಹುಡುಗ ನಿಮ್ಮೆಲ್ಲರಿಗೂ ಒಪ್ಪಿಗೆಯಾದಲ್ಲಿ ನಾನು ಬೇಡವೆನ್ನುವುದಿಲ್ಲ. ಆದರೆ ಸಲೀಂನನ್ನು ಪ್ರೀತಿಸಿದ್ದಂತೂ ನಿಜ. ನಿಮ್ಮ ಗಮನಕ್ಕೆ ಬಾರದಂತೆ ಪ್ರೀತಿಸಿ ನಿಮಗೆ ಮೋಸ ಮಾಡಿದೆ. ಈ ವಿಚಾರದಲ್ಲಿ ಹಸನ್‌ಭಾಯಿ ಮತ್ತು ನಾನು ಅನೇಕ ಬಾರಿ ಜಗಳವಾಡಿದ್ದೇವೆ. ನಿಮಗೆ ಈ ಗುಟ್ಟು ಹೇಳಿಬಿಡುತ್ತೇನೆಂದು ಬೆದರಿಸಿದ್ದ ಕೂಡಾ. ಆದರೆ ಭಾಯಿಜಾನ್‌ಗೆ ನನ್ನನ್ನು ಕಂಡರೆ ಅಪಾರವಾದ ಪ್ರೀತಿ. ಅದಕ್ಕೆ ನಿಮ್ಮ ಬಳಿ ಹೇಳಲಿಲ್ಲ!

ಅಸ್ಮತಳಿಗೆ ನೀಸಾಳ ಮಾತುಗಳನ್ನು ಕೇಳಿಸಿಕೊಂಡಾಗ ಹೃದಯ ತುಂಬಿ ಬಂತು. ಆದರೆ ಅವಳ ಆಸೆಗಳು ಎಟುಕಿಗೆ ಸಿಗುವಂಥದ್ದಲ್ಲ. ತಮ್ಮ ಬದುಕೆಲ್ಲ ಸಾಮ್ರಾಜ್ಯಶಾಹಿಯಿಂದ, ಬಾದಶಾಹರಿಂದ ನಿಯಂತ್ರಿಸಲ್ಪಟ್ಟಿದೆ; ನಿರ್ದೇಶಿಸಲ್ಪಟ್ಟಿದೆ. ತಾವೇನಿದ್ದರೂ ಸಾಮ್ರಾಜ್ಯದ ಸೇವಕರು. ಇಷ್ಟೇ ಅಲ್ಲದೆ ತಮಗೆ ಬದುಕನ್ನು, ಬದುಕಿಗೆ ಅರ್ಥವನ್ನು ತಂದುಕೊಟ್ಟಿರುವುದು ಅವರೇ! ಅಧಿಕಾರ, ಅಂತಸ್ತು. ವೈಭವೋಪೇತ ಜೀವನ–ಎಲ್ಲವೂ ಅವರ ಭಿಕ್ಷೆ. ಹೀಗಿರುವಾಗ ಯಾವ ಬಾಯಿಂದ ಅವರು ಕುದುರಿಸಿಕೊಟ್ಟ ಸಂಬಂಧವನ್ನು ಬೇಡ ಎನ್ನುವುದು. ಅದೂ ಅಲ್ಲದೆ ಅದನ್ನು ಹೇಳುವ ಸಾಹಸವಾದರೂ ನಮಗೆಲ್ಲಿದೆ? ಅವರು ಏನೇ ಮಾಡಲಿ, ನಮ್ಮ ಒಳಿತಿಗಾಗಿ ತಾನೇ ಮಾಡುತ್ತಿದ್ದಾರೆ. ಅಲಿಖುಲಿ ಕೂಡಾ ಬಾದಶಾಹರ ಸೇವೆಯಲ್ಲಿಯೇ ಇರುವುದಲ್ಲವೇ?..... ಅಂದರೆ ನಮ್ಮ ಕುಟುಂಬವೆಲ್ಲಾ ಸಾಮ್ರಾಜ್ಯಕ್ಕೆ ಮುಡಿಪಾಗಿದ್ದೇವೆ ಎಂದೆಲ್ಲಾ ಯೋಚಿಸಿದಳು. ಮೆಹರುನ್ನೀಸಾ ಸಾಮಾನ್ಯಳಲ್ಲ. ಅವಳ ಗುಣ, ಚಾರಿತ್ರ್ಯಗಳೆಲ್ಲ ನನಗೆ ಗೊತ್ತಿದೆ. ಎಲ್ಲರ ಒಳಿತನ್ನು, ಸಂತೋಷವನ್ನು ಬಯಸುತ್ತಾಳೆ. ಅವಳಿಗೆ ಸ್ವಲ್ಪ ಸಮಾಧಾನದ ಮಾತುಗಳನ್ನಾದರೂ ಹೇಳಬೇಕು ಎಂದುಕೊಂಡಳು.

"ನೀಸಾ ಬೇಟಿ. ನೀನು ಸಲೀಂರನ್ನು ಪ್ರೀತಿಸಿದ್ದರಲ್ಲಿ ಯಾವ ಅಪರಾಧವೂ ಇಲ್ಲ. ಆದರೆ ನಾವು ಬಯಸುವುದು ನಿರೀಕ್ಷಿಸುವುದು, ನಮ್ಮ ನಮ್ಮ ಯೋಗ್ಯತೆ ಅಂತಸ್ತುಗಳಿಗೆ ತಕ್ಕಂತೆ ಇರಬೇಕಲ್ಲವೇ? ಅಲ್ಲದೆ ನಿನ್ನ ಮತ್ತು ಸಲೀಂರ ಪ್ರೀತಿಯ ವಿಷಯ ಬಹಿರಂಗವಾದಲ್ಲಿ ಅದು ಜನಾನಾದಲ್ಲಿ, ಸಾಮ್ರಾಜ್ಯದಲ್ಲಿ ಅನೇಕ ಸಂಕಟಗಳನ್ನು ಸೃಷ್ಟಿಸಬಹುದು. ಈಗಾಗಲೇ ಮದುವೆಯಾಗಿರುವ ಜಗತ್‌ಗೋಸಿನಿ ಮತ್ತು ಮಾನ್‌ಬಾಯಿ ಮತ್ತು ಉಳಿದ ಹೆಂಡಂದಿರ ಬದುಕಿನಲ್ಲಿಯೂ ಅಲ್ಲೋಲ ಕಲ್ಲೋಲ

ಸೃಷ್ಟಿ ಮಾಡಲೂಬಹುದು. ಬಾದಶಾಹರಿಗೆ ಮತ್ತು ಅವರ ಮಕ್ಕಳಿಗೆ ಸುಂದರವಾದ ಹೆಣ್ಣು ಮಕ್ಕಳನ್ನೆಲ್ಲ ತಂದು ಕೂಡಿ ಹಾಕಿಕೊಳ್ಳುವ ಸ್ವಭಾವ. ಪ್ರೀತಿಮಾಡಿದಷ್ಟು ಕಾಲವೂ ಪ್ರೀತಿ ಉಳಿಯುವುದಿಲ್ಲ. ತಂದು ತಂದು ಜನಾನಾದಲ್ಲಿ ತುಂಬಿ, ನಂತರ ಅವರ ನೆನಪನ್ನೂ ಇರಿಸಿಕೊಳ್ಳುವುದಿಲ್ಲ. ಅವರ ಪ್ರೀತಿಗೆ ನಿಷ್ಠೆ ನಿಯಮ ಇರುವುದಿಲ್ಲ. ಆದ್ದರಿಂದ ಬೇಟಿ ಇದೆಲ್ಲ ಮನಸ್ಸಿಗೆ ಹಚ್ಚಿಕೊಂಡು ಕೊರಗಬೇಡ. ಅಲ್ಲಾಹ್‌ನ ಇಚ್ಛೆಯಾದಲ್ಲಿ, ನೀನು ಬಯಸಿದ್ದೆಲ್ಲವೂ ನಿನ್ನ ಕಾಲಡಿಯಲ್ಲಿ ಬಂದು ಬೀಳುತ್ತದೆ. ಅಂದ ಹಾಗೆ ಈ ಮಾತುಕತೆ ನಡೆದದ್ದು ತಡರಾತ್ರಿಯಲ್ಲಿ ಅಲ್ಲವೇ? ನೀಸಾ, ಪಾದಶಾಹ್ ಬೇಗಂ ರುಖೈಯ್ಯಾರನ್ನು ನೀನು ಹೋಗಿ ಕಾಣಬೇಕಂತೆ, ಎದ್ದೇಳು. ಮನಸ್ಸನ್ನು ಹಗುರ ಮಾಡಿಕೊ. ಅಬ್ಬು ಮನಸ್ಸಿಗೆ ನೋವು ಮಾಡಿದೆನೆಂದು ಕೊರಗಬೇಡ. ಅಭಿಪ್ರಾಯ ಸಂಘರ್ಷ ಇದ್ದೇ ಇರುತ್ತದೆ." ಎಂದು ತಾನು ತಿಳಿದ ರೀತಿಯಲ್ಲಿ ಅವಳನ್ನು ಸಮಾಧಾನ ಪಡಿಸಿದಳು ಅಸ್ಮತ್.

ಪಾದಶಾಹ್ ಬೇಗಂ ರುಖೈಯ್ಯಾ ವಿಶಾಲವಾದ ಕೋಣೆಯಲ್ಲಿನ ಸೋಫಾದಲ್ಲಿ ಕಾಲು ಚಾಚಿ ಒರಗಿಕೊಂಡು ಏನೇನೋ ಯೋಚಿಸುತ್ತಿದ್ದಳು. ಸೋಫಾದ ಬಳಿಯಲ್ಲಿ ಮರದ ಕುಸುರಿ ಕೆಲಸದ ಸುಂದರವಾದ ದುಂಡು ಮೇಜಿತ್ತು. ಅದರ ಮೇಲೆ ಹಣ್ಣುಗಳಿಂದ ಮತ್ತು ಒಣ ಹಣ್ಣುಗಳಿಂದ ತುಂಬಿದ ಎರಡು ತಟ್ಟೆಗಳಿದ್ದವು. ಸೋಫಾದ ಹಿಂದೆ ನಿಂತಿದ್ದ ಸೇವಕಿ ಬೀಸಣಿಗೆಯಿಂದ ಗಾಳಿ ಹಾಕುತ್ತಿದ್ದಳು.

ಯಾರೋ ಒಳಗೆ ಬಂದಹಾಗೆ ಆಗಿ, 'ಹುಸ್ನಾ, ನೋಡು ಯಾರೋ ಬಂದ ಹಾಗಿದೆ" ಎಂದ ಕೂಡಲೇ ಸೇವಕಿ ಬೀಸಣಿಗೆಯನ್ನು ಕೈಲಿ ಹಿಡಿದೇ ಬಾಗಿಲ ಬಳಿ ನಡೆದಳು. ಪರದೆ ಸರಿಸಿ ನೋಡಿದರೆ ಮೆಹರುನ್ನೀಸಾ ನಿಂತಿದ್ದಳು. ನಿಂತಲ್ಲಿಂದಲೇ ಪಾದಶಾಹ ಬೇಗಂಳನ್ನು ದಿಟ್ಟಿಸಿ ನೋಡಿದಳು. ಬಹಳ ತಾಜಾ ಆಗಿ, ಕಾಣಿಸಿದಳಾದರೂ ಗಹನವಾದ ಆಲೋಚನೆಯಲ್ಲಿ ಮಗ್ನಳಾಗಿದ್ದದ್ದು ಮಾತ್ರ ಸ್ಪಷ್ಟ ಗೋಚರವಾಗಿತ್ತು. ಒಳನುಗ್ಗಿ, ಯೋಚನೆಗೆ ಭಂಗ ತರುವುದಕ್ಕೆ ಮನಸ್ಸಿಲ್ಲದಿದ್ದರೂ, ಮಾತಾಡಿಸಲೇ ಬೇಕಾದ ಅನಿವಾರ್ಯತೆ ತನಗಿದೆಯೆಂದು ಭಾವಿಸಿ, ನಿಧಾನವಾಗಿ ಹೆಜ್ಜೆಯಿಡುತ್ತಾ ರುಖೈಯ್ಯಾ ಬೇಗಂಳನ್ನು ಸಮೀಪಿಸಿ,

"ಸಲಾಮ್ ಅಲೈಕುಂ ಪಾದಶಾಹ್ ಬೇಗಂ" ಎನ್ನುತ್ತಾ ತಸ್ಲೀಂ ಮಾಡಿದಳು. ನೀಸಾಳ ಧ್ವನಿ ಗುರುತಿಸಿದ್ದೇ ಥಟ್ಟನೆ ಎದ್ದು ಕುಳಿತು ಮುಖ ಅರಳಿಸಿ.

"ಬಾ ನೀಸಾ, ಈ ನಡುವೆ ನೀನು ಬರುವುದೇ ಅಪರೂಪವಾಗಿಬಿಟ್ಟಿದೆ. ಕಾಬೂಲಿನಿಂದ ಹಿಂತಿರುಗಿದ ಮೇಲೆ, ಬಹಳ ಅಪರೂಪ! ಅದು ಸರಿ, ನಾನು ಏನೇನೋ ಸಿಹಿ ಸುದ್ದಿ ಕೇಳಿದೆ. ನಮಗೆ ಮೊದಲೇ ತಿಳಿಸಬಾರದಿತ್ತೇ? ಬಾದಶಾಹರು ನಿನಗಾಗಿ ಬಹಳ ಒಳ್ಳೆಯ ಸಂಬಂಧ ನೋಡಿದ್ದಾರಂತೆ. ಹೇಗಿದ್ದಾನೆ. ಹುಡುಗ?......ಚೆನ್ನಾಗಿಯೇ ಇರುತ್ತಾನೆ!"

"ಯಾಕೆ ಬೇಗಂ, ನೀವು ಹುಡುಗನನ್ನು ನೋಡಿರಲಿಲ್ಲವೇ. ಛೇ ಛೇ"

"ನಾನೆಲ್ಲಿ ನೋಡಲಿ ಮಗಳೆ! ಬಾದಶಾಹರಿಗೆ ಇಷ್ಟವಾಗುವುದೆಲ್ಲ ನನಗೂ ಇಷ್ಟವೇ! ನಮ್ಮಿಬ್ಬರ ನಡುವೆ ಭಿನ್ನಾಭಿಪ್ರಾಯಕ್ಕೆ ಅವಕಾಶವೇ ಇಲ್ಲ. ಬಾದಶಾಹರಂತೂ

ಅಲಿಖುಲಿಯನ್ನು ಅವನ ಪರಾಕ್ರಮ, ದೇಹದಾರ್ಢ್ಯ ಎದೆಗಾರಿಕೆಗೆ ತುಂಬ ಮೆಚ್ಚಿಕೊಂಡಿದ್ದಾರೆ. ಈಗ ಅವರ ಸೇವೆಯಲ್ಲಿಯೇ ಇರುವುದರಿಂದ, ನನಗೂ ಒಳ್ಳೆಯದೇ ಆಯಿತು. ನೀನು ಇನ್ನು ಮುಂದೆ ಯಾವಾಗಲೂ ನನ್ನ ಜೊತೆಯೇ ಇರಬಹುದು. ನೀನು ನೋಡಿರಬಹುದು. ಹೇಳು ನೀಸಾ ನಿನಗೆ ಇಷ್ಟವೇ ತಾನೇ?"

"ಪಾದಶಾಹ್ ಬೇಗಂ, ಬಾದಶಾಹರ ಸೇವೆಯಲ್ಲಿ ಇರುವ ನಮಗೆ ಇಷ್ಟಾನಿಷ್ಟಗಳು ಏನಿರುತ್ತವೆ? ಅವರು ಬೆರಳೆತ್ತಿ ತೋರಿದ ದಾರಿಯಲ್ಲಿ ನಡೆಯಬೇಕಲ್ಲವೇ? ನಾವು ಬಯಸಿದ್ದು ಸಿಗಬೇಕೆಂದರೆ ಹೇಗೆ ಸಾಧ್ಯ?"

ರುಖೈಯ್ಯಾಳಿಗೆ ಅವಳ ಆಂತರ್ಯದ ನೋವಿನ ವಾಸನೆ ಬಡಿಯಿತು. ಅವಳ ಮನಸ್ಸಿನಲ್ಲಿ ಯಾರಿದ್ದಾರೋ? ಅವಳ ಇಚ್ಛೆಗೆ ವಿರುದ್ಧವಾಗಿ ನಡೆಯುವಂತಿದೆ. ಬಾದಶಾಹರಿಗೆ ಮತ್ತೊಮ್ಮೆ ಯೋಚಿಸಲು ಹೇಳೋಣವೆ? ಎಂದುಕೊಂಡಳು. ಆದರೆ ಹೇಳಿದ ಮಾತ್ರಕ್ಕೆ ತಮ್ಮ ನಿರ್ಧಾರದಿಂದ ಹೊರಳುತ್ತಾರೆ ಎನ್ನುವ ಭರವಸೆ ಇರಲಿಲ್ಲ.

"ಬೇಟಾ ನೀಸಾ, ಮದುವೆಯ ನಿಶ್ಚಿತಾರ್ಥ ಯಾವಾಗ? ನಾನಂತು ನಿನಗಾಗಿ ಎಷ್ಟೊಂದು ಉಡುಗೊರೆಗಳನ್ನು ಕೊಂಡಿಟ್ಟುಕೊಂಡಿದ್ದೀನಿ. ನಿಶ್ಚಿತಾರ್ಥವೂ ಅದ್ದೂರಿಯಾಗಿ ಇರಬೇಕೆಂದು ಬಾದಶಾಹರು ಮತ್ತು ನಾನು ಬಯಸುತ್ತಿದ್ದೇವೆ. ನಿನ್ನಂಥ ಅನುಪಮ ಸುಂದರಿ ಅವನಿಗೆ ದೊರೆತದ್ದು ನೂರು ಜನ್ಮಗಳ ಪುಣ್ಯವೆಂದರೂ ಕಡಿಮೆಯೇ?"

"ಯಾರ ಪುಣ್ಯದಿಂದ ನನಗೇನಾಗಬೇಕಿದೆ. ನಮ್ಮಂಥ ಹೆಣ್ಣು ಮಕ್ಕಳಿಗೆ ಅದೂ ಸಾಮಾನ್ಯರಾಗಿರುವವರಿಗೆ ಬಯಕೆಯ, ಆಯ್ಕೆಯ ಸ್ವಾತಂತ್ರ್ಯವಾದರೂ ಎಲ್ಲಿದೆ?" ಎಂದು ಹೇಳುತ್ತಲೇ ಒಂದು ನಿಟ್ಟುಸಿರೆಳೆದಳು.

"ಯಾಕೆ ನೀಸಾ, ಇಷ್ಟೊಂದು ನಿರಾಶೆ? ನಿನ್ನ ಮಾತಿನ ರೀತಿಯಿಂದ ಈ ಮದುವೆ ನಿನಗೆ ಇಷ್ಟವಿಲ್ಲವೆನಿಸುತ್ತದೆ. ಬೇರೆ ಯಾರನ್ನಾದರೂ ಪ್ರೀತಿಸಿರುವೆಯೇನು?"

"ಪ್ರೀತಿಸಿದ ಮಾತ್ರಕ್ಕೆ ಆಗುವುದಾದರೂ ಏನು?"

"ಯಾರೆಂದು ಹೇಳು. ನಾನು ಬೇಕಾದರೆ ಬಾದಶಾಹರ ಮನ ಒಲಿಸಲು ಪ್ರಯತ್ನಿಸುತ್ತೇನೆ."

"ಅದೆಲ್ಲ ಏನೂ ಬೇಡ. ನನ್ನ ಅಬ್ಬುವಿನ ಗೌರವ. ಬಾದಶಾಹರ ಆದೇಶಗಳ ಪಾಲನೆಯೇ ನನಗೆ ಮುಖ್ಯ. ನಿಮ್ಮಂಥವರ ಒಡನಾಟ, ನನ್ನ ಮೇಲಿರುವ ಪ್ರೀತಿ ಸ್ನೇಹಗಳೇ ಸಾಕು ನನಗೆ. ಇನ್ನು ನಾನು ಬರುತ್ತೇನೆ. ಕೈ ತುಂಬ ಕೆಲಸವಿದೆ. ಇನ್ನೆರಡು ದಿನಗಳಲ್ಲೆ ನಿಶ್ಚಿತಾರ್ಥವೆಂದು ಅಬ್ಬು ಹೇಳುತ್ತಿದ್ದಾರೆ."

"ಹೋಗಿ ಬಾ ಮಗಳೆ. ಅಲಿಖುಲಿ ಬಾದಶಾಹರ ಸೇವೆಯಲ್ಲಿಯೇ ಇರುವುದರಿಂದ, ನನ್ನಿಂದ ದೂರ ಹೋಗಬೇಕಾದ್ದಿಲ್ಲ. ನಿನ್ನ ಅಮ್ಮಿಗೆ ನನ್ನ ಸಲಾಂ ಹೇಳು."

ಮೆಹರುನ್ನೀಸಾ ಬಂದ ದಾರಿಯಲ್ಲಿಯೇ ಹಿಂತಿರುಗಲು ಸಿದ್ಧಳಾಗಿ, ಒಂದು ನಾಲ್ಕು ಹೆಜ್ಜೆ ಹಾಕಿರಬಹುದು. ದಿಢೀರನೆ ಒಬ್ಬ ವ್ಯಕ್ತಿ ಒಳನುಗ್ಗಿದ. ಅವಕುಂಠನದಲ್ಲಿ ಇದ್ದುದರಿಂದ ಯಾರೆಂದು ತಿಳಿಯಲಿಲ್ಲವಾದರೂ, ಪಾದಶಾಹ ಬೇಗಂ ರುಖೈಯ್ಯಾ ಪರಿವಾರದವರೇ ಆಗಿರಬೇಕು. ಇಲ್ಲವಾದಲ್ಲಿ ಜನಾನಾದ ಪ್ರವೇಶಕ್ಕೆ ಹೇಗೆ

ಸಾಧ್ಯವಾಗುತ್ತಿತ್ತು. ಬಂದದ್ದು ಕೂಡಾ ಸಲೀಮನೆ. ಅವಕುಂಠನದ ಒಳಗಿನಿಂದ ಮತ್ತು ಅವಳಿಂದ ಹೊಮ್ಮಿದ ಪರಿಮಳದಿಂದ, ಥಟ್ಟನೆ ಅವನಿಗೆ, ಮೆಹರುನ್ನಿಸಾಳೇ ಇರಬಹುದೆಂದು ಅನುಮಾನ ಬಂತಾದರೂ, ಅವಳನ್ನು ನಿಲ್ಲಿಸಿ ವಿಚಾರಿಸುವುದು ಸರಿಯಲ್ಲವೆಂದು ಸುಮ್ಮನಾದ. ಆದರೆ ಮನಸ್ಸಿನಲ್ಲಿ ನೂರೆಂಟು ಊಹೆಗಳು! ಪ್ರಶ್ನೆಗಳು. ನೀಸಾ ಅಲಿಖುಲಿ ನಿಶ್ಚಿತಾರ್ಥ ಇತ್ಯಾದಿ ವಿಷಯಗಳು ಈಗ ಗುಟ್ಟಾಗಿ ಉಳಿದಿರಲಿಲ್ಲ. ಇದಕ್ಕೆ ಸಂಬಂಧಪಟ್ಟಂತೆ, ಅನೇಕ ವದಂತಿಗಳು ಅನುಮಾನಗಳು! ಅವರವರದೇ ಆದ ತರ್ಕಗಳು. ಶಹಜಾದಾ ಮತ್ತು ನೀಸಾರ ಪ್ರಣಯ ಕಥೆಗಳು ಗಾಳಿಯಲ್ಲಿ ಹರಿದಾಡುತ್ತಿದ್ದವು. ಜಗತ್‌ಗೋಸಿನಿಯ ಅಸಮಾಧಾನಕ್ಕೆ ಕೊನೆಯೇ ಇರಲಿಲ್ಲ. ಅವಳು ತನ್ನ ಗಂಡನ ನೂರಾರು ಪ್ರೇಯಸಿಯರಲ್ಲಿ ಒಬ್ಬಳಾಗಿ ಉಳಿದರೆ ತನ್ನ ಅಭ್ಯಂತರವಿಲ್ಲ. ಆದರೆ ಮೆಹರುನ್ನೀಸಾ ವಿಷಯದಲ್ಲಿ ನಿರಾಳವಾಗಿ ಇರಲು ಸಾಧ್ಯವೇ ಇರಲಿಲ್ಲ. ಯಾರನ್ನಾದರೂ ಬೆಚ್ಚಿ ಬೀಳಿಸುವ ಸೌಂದರ್ಯ. ಚತುರಮತಿ, ಬಯಸಿದ್ದನ್ನೆಲ್ಲ ಸಾಧಿಸಿಕೊಳ್ಳಬಲ್ಲ ಸಾಮರ್ಥ್ಯ. ಅತ್ಯಂತ ಬುದ್ಧಿವಂತೆ, ವಿದ್ಯಾವಂತೆ, ರಾಜವಂಶದ ಹೆಣ್ಣು ಮಕ್ಕಳಿಗೇ ಸಾಧ್ಯವಾಗದಂತಹ ಯುದ್ಧ ಕಲೆಗಳನ್ನು ಬಲ್ಲವಳಾಗಿದ್ದಳು. ಸಣ್ಣಪ್ರಾಯದಲ್ಲಿಯೇ ಗಂಡು ಹುಡುಗರನ್ನು ಹಿಮ್ಮೆಟ್ಟಿಸಿ ಬಿಲ್ಲು ವಿದ್ಯೆಯಲ್ಲಿ ಪದಕ ಪಡೆದವಳು. ನಾಳೆ ತನ್ನ ಗಂಡ ಅವಳ ಕೈ ವಶವಾಗಿ ಅವಳನ್ನೇ ಪಾದಶಾಹ ಬೇಗಂ ಆಗಿ ಮಾಡಿ ಬಿಟ್ಟರೆ ತನ್ನ ಸ್ಥಿತಿಯೇನು? ಈಗ ಪಾದಶಾಹ ಬೇಗಂ ರುಖೈಯ್ಯಾ ಸುಲ್ತಾನಾ ಅವರನ್ನು ಕಂಡರೇನೆ ಅಷ್ಟಕ್ಕಷ್ಟೇ! ಆದಷ್ಟು ಬೇಗ, ಗಂಡ ಮೊಘಲ್ ಸಾಮ್ರಾಜ್ಯ ಕಿರೀಟವನ್ನು ಪಡೆಯಲೆಂಬ ತಹತಹಿಕೆ!

ನೀಸಾ ನೋಡಿಯೂ ನೋಡದಂತೆ, ವೇಗವಾಗಿ ಬಿರುಗಾಳಿಯಂತೆ ಹೆಜ್ಜೆ ಹಾಕಿ ನಡೆದು ಬಿಟ್ಟಳು. ಸ್ತಂಭಿಸಿ ನಿಂತಿದ್ದ ಸಲೀಂಗೆ ಮಾಮೂಲು ಸ್ಥಿತಿಗೆ ಕೂಡಲೇ ಬರಲು ಸಾಧ್ಯವಾಗಲಿಲ್ಲ. ರುಖೈಯ್ಯಾ ಈ ನಾಟಕವನ್ನು ಕುತೂಹಲದಿಂದ ನೋಡುತ್ತಿದ್ದಳು. ನೀಸಾ ಕಣ್ಮರೆಯಾದ ಮೇಲೆ, "ಶಹಜಾದೆ, ಯಾಕೆ ಹಾಗೆ ಕಂಬದ ಹಾಗೆ ನಿಂತಿದ್ದೀ? ಆಕೆ ಯಾರೆಂದು ನೋಡುತ್ತಿದ್ದೀಯ! ..... ಬಹುಶಃ ನಿನಗೆ ಪರಿಚಯವಿರಲಾರದೆನಿಸುತ್ತದೆ" ಎಂದು ತನ್ನೊಳಗೆ ನಕ್ಕಳು. ಸಲೀಂಗೆ ನಾಚಿಕೆ ಎನಿಸಿತು.

"ಒಳಗೆ ಬಾ. ಅಮ್ಮಿಯ ಬಳಿ ಸಂಕೋಚವೇಕೆ? ನಿನ್ನನ್ನು ಹೆತ್ತಮ್ಮನಿಗಿಂತಲೂ ನಾನು ನಿನಗೆ ಹೆಚ್ಚಲ್ಲವೇ? ಇತ್ತೀಚೆಗೆ ನಿನ್ನ ಬರವೇ ಅಪರೂಪವಾಗಿದೆ. ನಿನ್ನ ಗೆಳೆಯರು, ಹೆಂಗಳೆಯರು, ಸುರಾಪಾನ–ಇಷ್ಟರಲ್ಲೇ ನೀನು ಮುಳುಗಿಬಿಟ್ಟರೆ ಹೇಗೆ ಮಗು. ನಿನ್ನ ಅಬ್ಬು ನಿನ್ನ ವಿಚಾರದಲ್ಲಿ ತುಂಬಾ ಚಿಂತಿತರಾಗಿದ್ದಾರೆ. ನನಗೆ ವಯಸ್ಸಾಗಿ ಹೋಯಿತು. ಸಾಮ್ರಾಜ್ಯದ ಹೊರೆಹೊರುವಷ್ಟು ಶಕ್ತಿ, ಸಾಮರ್ಥ್ಯಗಳು ಕುಸಿದಿವೆ. ಶಹಜಾದಾರು ಸ್ವಲ್ಪವಾದರೂ ಜವಾಬ್ದಾರಿ ವಹಿಸಿದರೆ, ಸಾಮ್ರಾಜ್ಯದ ಆಗುಹೋಗುಗಳ ಕಡೆ ಗಮನ ಕೊಟ್ಟರೆ, ಈ ತಖ್ತನ್ನು ಅವನಿಗೆ ಒಪ್ಪಿಸಿ ಬಿಡಬಹುದೆಂದು ಆಲೋಚಿಸುತ್ತಿದ್ದಾರೆ. ಈಗೀಗ ಅವರ ಆರೋಗ್ಯವೂ ಸರಿಯಾಗಿಲ್ಲ. ನೋಡು ಯೋಚಿಸು, ಹೋಗಿ ಆಗಾಗ ಅವರ ಕ್ಷೇಮ ಸಮಾಚಾರವನ್ನು ವಿಚಾರಿಸುತ್ತಿರು. ನಿಜವಾಗಿಯೂ ನೀನು ಸಮರ್ಥ ಆಡಳಿತಗಾರನೆಂದು ನಿರೂಪಿಸಬಲ್ಲೆ ಎನ್ನುವ ಅಪಾರ ಭರವಸೆ ಇರಿಸಿಕೊಂಡಿದ್ದಾರೆ... ಕ್ಷಮಿಸು ಮಗು, ನಾನು

ಸ್ವಲ್ಪ ಭಾವುಕಳಾಗಿಬಿಟ್ಟೆ. ನೀನು ಬಂದದ್ದೇಕೆಂದು ವಿಚಾರಿಸಲೇ ಇಲ್ಲ.'

"ನಾನು ನಿಮ್ಮನ್ನು ಕಾಣಲು ಬಂದದ್ದೇಕೆಂದು ಈಗಾಗಲೇ ನಿಮ್ಮ ಬುದ್ಧಿಗೆ ಹೊಳೆದಿರುತ್ತದೆ."

"ಹೊಳೆಯುವುದಕ್ಕೆ ವಿಷಯ ಏನೆಂದು ತಿಳಿದಿದ್ದರೆ ತಾನೇ? ಪಾದಶಾಹ್ ಬೇಗಂ, ಸುಮ್ಮನೆ ಜನಾನಾದ ಆಧಿಪತ್ಯಕ್ಕೆ ಮಾತ್ರವೇ ಮೀಸಲು. ಹೊರಗೆ ಏನೇನು ನಡೆಯುತ್ತದೆ ಎಂದು ನಮಗೆ ತಿಳಿಯುವುದಾದರೂ ಹೇಗೆ. ಜನಾನಾದ ಗೋಡೆಗಳ ಹಿಂದೆ ನಾವೆಲ್ಲ ಬಂದಿಗಳು ಮಾತ್ರ."

"ಅಮ್ಮಿ ನೀವು ಹೀಗೆಲ್ಲ ಹೇಳುತ್ತೀರೆಂದು ನಾನು ಊಹಿಸಿಯೇ ಇದ್ದೆ. ಈಗ ನಾನು ಬಂದಾಗ, ಹೊರಗೆ ಹೋದ ಹೆಣ್ಣು ಮಗಳು ಮೆಹರುನ್ನೀಸಾ ಅಲ್ಲವೇ? ಆಕೆ ನಿಮ್ಮಲ್ಲಿಗೆ ಬಂದದ್ದು ಯಾಕೆ?"

"ಇದೇನು ಸಲೀಂ ಹೀಗೆ ಕೇಳುತ್ತೀ? ಅವಳಿಗೆ ವರ ಗೊತ್ತು ಮಾಡಿದ್ದಾರೆ. ಅದು ಗೊತ್ತು ಮಾಡಿದ್ದೂ ಕೂಡಾ ನಿನ್ನ ಅಬ್ಬೂನೇ! ..... ಇನ್ನೆರಡು ದಿನಗಳಲ್ಲಿ ನಿಶ್ಚಿತಾರ್ಥ. ಎರಡೂ ಕಡೆಯ ಪರಿವಾರದವರು ಪರಸ್ಪರ ಒಪ್ಪಿದ್ದಾರೆ. ಹುಡುಗ ಯಾರೆಂದು ನಿನಗೂ ಗೊತ್ತಿರಬಹುದು. ನಿನ್ನ ಅಬ್ಬುವಿನ ಸೇನೆಯಲ್ಲಿರುವ ಅಲಿಖುಲಿ. ಇಷ್ಟರಲ್ಲಿಯೇ ಅವನಿಗೆ ಒಳ್ಳೆಯ ಪದವಿಯನ್ನು ನೀಡಲಿದ್ದಾರೆ."

"ಅಮ್ಮೀ, ನೀವು ನನ್ನಿಂದ ಏನೋ ಮರೆಮಾಚುತ್ತಿದ್ದೀರಿ. ಅವಳು ಈ ಸಂಬಂಧಕ್ಕೆ ಒಪ್ಪಿಗೆಯಿದೆಯೆಂದು ಹೇಳಿದಳೇನು?"

"ಬಾಯಿ ಬಿಟ್ಟಂತೂ ಹೇಳಲಿಲ್ಲ. ಆದರೆ ಈ ಮದುವೆಯಿಂದ ಅವಳಿಗೆ ಸಂತೋಷವಾಗಿದೆ ಎಂದು ಹೇಳಲಾರೆ. ಅವಳ ವಿಚಾರದಲ್ಲಿ ನಿನಗ್ಯಾಕೆ ಅಷ್ಟೊಂದು ಕುತೂಹಲ?"

"ನಾಟಕವಾಡಬೇಡಿ ಅಮ್ಮಿ. ನಿಮಗೂ ಗೊತ್ತು. ನಾನು ಅವಳನ್ನು ಅಪಾರವಾಗಿ ಪ್ರೀತಿಸುತ್ತಿದ್ದೇನೆ."

"ಇರಬಹುದು. ಬಾದಶಾಹರಿಗೆ, ಶಹಜಾದಾರಿಗೆ ಸುಂದರವಾದ ಹೆಣ್ಣುಗಳನ್ನು ಪ್ರೀತಿಸುವುದು ಹೊಸದೇನಲ್ಲ."

"ಇದು ಆ ರೀತಿಯ ಪ್ರೀತಿಯಲ್ಲ, ಪ್ರೀತಿಸಿ ದೂರ ತಳ್ಳುವ ಎಸೆಯುವಂಥ ಹೆಣ್ಣಲ್ಲ ಅವಳು. ಅವಳನ್ನು ಇಡಿ ಇಡಿಯಾಗಿ ಅವಳ ವ್ಯಕ್ತಿತ್ವವನ್ನೂ ಸೇರಿಸಿಕೊಂಡು ಪ್ರೀತಿಸುತ್ತಿದ್ದೇನೆ. ಅವಳೂ ನನ್ನಷ್ಟೇ ಗಾಢವಾಗಿ ನನ್ನನ್ನು ಪ್ರೀತಿಸುತ್ತಿದ್ದಾಳೆ. ಅವಳನ್ನು ನಾನು ನಿಕಾಹ್ ಮಾಡಿಕೊಳ್ಳಬಯಸುತ್ತೇನೆ" ಎಂದ.

"ನಿನಗೆ ತಲೆ ಕೆಟ್ಟಿರಬೇಕು ಸಲೀಂ. ಪ್ರೀತಿಗೂ ಮದುವೆಗೂ ವ್ಯತ್ಯಾಸವಿದೆ. ಇಲ್ಲಿಯವರೆಗೆ ನಿನ್ನ ಮದುವೆಗಳ ಹಿಂದೆ ರಾಜಕೀಯ ಉದ್ದೇಶಗಳಿವೆ. ಬಂಧುತ್ವಗಳಿಂದ, ಸಾಮ್ರಾಜ್ಯದ ಶತ್ರುಗಳನ್ನು ಮಿತ್ರರಾಗಿ ಪರಿವರ್ತಿಸಿ, ಸಾಮ್ರಾಜ್ಯದ ಎಲ್ಲೆಗಳನ್ನು ವಿಸ್ತರಿಸಿಕೊಂಡು ಸಂಘರ್ಷಗಳಿಲ್ಲದೆ ಶಾಂತಿಯಿಂದ ಸಾಮ್ರಾಜ್ಯವನ್ನು ಆಳಬಹುದೆಂಬ ದೂರದೃಷ್ಟಿಯಿದೆ. ಅದಕ್ಕೇ ವಿವಾಹ ಸಂಬಂಧಗಳನ್ನು ರಾಜ ಪರಿವಾರಗಳೊಂದಿಗೆ ಕುದುರಿಸಿಕೊಳ್ಳುವುದು."

"ಅಮ್ಮೀ ಈ ರೀತಿಯ ಸ್ವಾರ್ಥವೇ ಇದ್ದಲ್ಲಿ, ಗಂಡ ಹೆಂಡಿರ ನಡುವೆ ಸಾಧ್ಯವಾಗುವುದು ಒಲ್ಲದ ದೇಹ ಸಂಬಂಧಗಳು ಮಾತ್ರವೇ! ಮಾನ್‌ಬಾಯಿ, ಜಗತ್‌ಗೋಸಿನಿ ಮತ್ತು ಇನ್ನೂ ಹಲವಾರು ರಾಜಕುಮಾರಿಯರು, ಕಟ್ಟಿಕೊಂಡವರು, ಇಟ್ಟುಕೊಂಡವರು ಮಾತ್ರ. ಯಾರನ್ನೂ ಇಲ್ಲಿಯವರೆಗೆ ಹೃದಯಪೂರ್ವಕವಾಗಿ ಪ್ರೀತಿಸಿಲ್ಲ. ಆದರೆ ಮೆಹರುನ್ನೀಸಾ ಯಾವ ಸಂಬಂಧವೂ ಇಲ್ಲದೆ ರಾಜ ಪರಿವಾರದ ಹೊರಗಿನವಳಾಗಿಯೂ ನನ್ನನ್ನು ಪೂರ್ತಿಯಾಗಿ ಗೆದ್ದುಕೊಂಡಿದ್ದಾಳೆ. ಅಮ್ಮೀ ಏನಾದರೂ ಮಾಡಿ ಅವಳನ್ನು ಈ ಮದುವೆಯಿಂದ ತಪ್ಪಿಸು. ಅವಳಿಲ್ಲದೆ ನಾನು ಬದುಕಲಾರೆ."

"ಸಲೀಂ ನಿನ್ನ ಪ್ರೀತಿಯ ಗಂಭೀರತೆಯನ್ನು ಅರ್ಥಮಾಡಿಕೊಳ್ಳಬಲ್ಲೆ. ನಿಮ್ಮಿಬ್ಬರ ಸಂಬಂಧ ನನಗೆ ಗೊತ್ತಿಲ್ಲವೆಂದು ತಿಳಿಯಬೇಡ. ಬಾದಶಾಹರ ಗಮನಕ್ಕೂ ಬಂದಿರುವುದರಿಂದಲೇ, ಮುಂದೆ ಆಗುವ ಅನಾಹುತಗಳನ್ನು ತಪ್ಪಿಸಲೆಂದೇ, ಆತುರವಾಗಿ, ಅಲಿಖುಲಿಗೆ ಅವನ ಶೌರ್ಯ ಸಾಹಸ, ಪರಾಕ್ರಮಗಳಿಗೆ ಮೆಚ್ಚಿಗೆಯ ಉಡುಗೊರೆಯಾಗಿ ಮೆಹರುನ್ನೀಸಾಳನ್ನು ನಿಕಾಹ್ ಮಾಡಿಕೊಡಲು ಮುಂದಾಗಿದ್ದಾರೆ. ಬಾದಶಾಹರ ಮಾತೆಂದರೆ ಮಾತು. ಘಿಯಾಸ್‌ಬೇಗ್‌ರ ಬಾಯಿಯೂ ಕಟ್ಟಿಹೋಗಿದೆ. ಬಾದಶಾಹರ ನಿಷ್ಠಾವಂತ ಸೇವಕರು. ಆದ್ದರಿಂದಲೇ ನಿನ್ನ ಅಬ್ಬುವಿನ ನಿರ್ಧಾರಕ್ಕೆ ಪ್ರತಿ ಹೇಳಲಾಗದೆ ಒಪ್ಪಿದ್ದಾರೆ. ಒಂದು ಹೆಣ್ಣಿಗಾಗಿ ನಿನ್ನ ಭವಿಷ್ಯ ಹಾಳು ಮಾಡಿಕೊಳ್ಳಬೇಡ. ಆದಷ್ಟು ಬೇಗ ಬಾದಶಾಹರು ನಿನಗೆ ಗದ್ದುಗೆಯನ್ನು ಒಪ್ಪಿಸುವ ಚಿಂತನೆಯಲ್ಲಿ ಇದ್ದಾರೆ. ಇಂಥ ಸಮಯದಲ್ಲಿ ಅವರ ಮನಸ್ಸನ್ನು ಕೆಡಿಸಬೇಡ. ನಾನು ನಿನ್ನ ಪರವಾಗಿ ಎಷ್ಟೇ ಕೇಳಿಕೊಂಡರೂ ಆಗದ ಮಾತು. ಈ ಒಂದು ಮದುವೆಯಿಂದ ಸಾಮ್ರಾಜ್ಯದಲ್ಲಿ ಸಂಬಂಧಗಳು ಕೆಡಬಹುದು. ಇಷ್ಟಕ್ಕೂ ಸದ್ಯದಲ್ಲಿಯೇ ಅವಳ ನಿಶ್ಚಿತಾರ್ಥವಿದೆ ಎನ್ನುವುದು ನಿನಗೂ ಗೊತ್ತಿದೆ."

"ಅಮ್ಮೀ ಇದೊಂದು ಬಾರಿ ಅಬ್ಬುವಿಗೆ ನನ್ನ ಪ್ರೀತಿಯ ವಿಚಾರ ತಿಳಿಸಿ. ನನ್ನ ಪರವಾಗಿ ಏನಾದರೂ ಮಾಡಿ. ಅಬ್ಬು ಮನಸ್ಸು ಮಾಡಿದರೆ, ಮದುವೆಗಳನ್ನು ಮುರಿಯುವುದು, ಬೆಸೆಯುವುದು ಅಸಾಧ್ಯವೇನಲ್ಲ" ಎಂದು ಅಳುಮೋರೆ ಮಾಡಿಕೊಂಡು ಹೇಳಿದ.

"ಸಲೀಂ ನೀನು ಇಷ್ಟು ಹೇಳಿದ್ದೀಯಲ್ಲ ನೋಡುತ್ತೇನೆ, ಪ್ರಯತ್ನಿಸುತ್ತೇನೆ. ಆದರೆ ಭರವಸೆ ಕೊಡಲಾರೆ. ಇನ್ನು ಮುಂದೆ ಇಂಥ ಕೆಲಸಗಳಿಗೆ ನನ್ನನ್ನು ದೂಡಬೇಡ. ಮುಂದೆ ಸಾಮ್ರಾಜ್ಯದ ಒಡೆತನವನ್ನು ನಿಭಾಯಿಸಬೇಕಾದವನು, ಸ್ವಲ್ಪ ಜವಾಬ್ದಾರಿಯಿಂದ ವರ್ತಿಸು, ಅಷ್ಟು ಮಾತ್ರವೇ ಹೇಳಬಲ್ಲೆ. ಹೋಗು ನಿನ್ನ ಅಬ್ಬುವಿನ ಜೊತೆ ಸ್ನೇಹದಿಂದ ಒಂದಷ್ಟು ಹೊತ್ತು ಕಳೆ."

ರುಖೈಯ್ಯಾ ಬೇಗಂಗೆ ದಿಕ್ಕು ತೋಚದಂತಾಗಿತ್ತು. ಒಂದು ಕಡೆ ಗಂಡ, ಮತ್ತೊಂದು ಕಡೆ ಮಗ. ಯಾರ ಮನಸ್ಸನ್ನೂ ಘಾಸಿಗೊಳಿಸುವುದು ಸಾಧ್ಯವಿಲ್ಲ. ಸಲೀಂನನ್ನು ಸಮಾಧಾನ ಪಡಿಸಲು, ಬಾದಶಾಹರ ಜೊತೆ ಮಾತಾಡುತ್ತೇನೆ ಎಂದಳಾದರೂ ಅವಳಿಗೆ ಗೊತ್ತು ಇದು ಎಂದಿಗೂ ಸಾಧ್ಯವಿಲ್ಲ ಎಂದು. ಬಾದಶಾಹರ ಆದೇಶವೆನ್ನುವದು ಶಿಲಾಶಾಸನದಂತೆ. ಆದ್ದರಿಂದ ಪ್ರಯೋಜನವಾಗಲಾರದು. ಆದಷ್ಟು ಬೇಗ ಆ ಹುಡುಗಿಯ ನಿಕಾಹ್ ಮುಗಿದುಬಿಟ್ಟರೆ, ನಂತರ ಎಲ್ಲವೂ ತಂತಾನೆ ಸರಿಹೋಗುತ್ತೆ. ಆ ಹುಡುಗಿಯನ್ನೂ ಕರೆಸಿ

ಮತ್ತೊಮ್ಮೆ ಬುದ್ಧಿ ಹೇಳಬೇಕು. ನಮ್ಮ ಮಾತಿಗೆ ಬೆಲೆಕೊಡದೆ ಈ ಇಬ್ಬರೂ ಏನಾದರೂ ಅನಾಹುತಕ್ಕೆ ಮುಂದಾದರೆ, ತುಂಬ ತೊಂದರೆಯಾಗುತ್ತದೆ ಎಂದುಕೊಂಡಳು.

* * *

ಮೆಹರುನ್ನೀಸಾಳಿಗೆ ಸಲೀಂನ ಕನಸುಗಳಿಂದ ಹೊರಬರುವುದು ಸಾಧ್ಯವೇ ಆಗಲಿಲ್ಲ. ಕಣ್ಣು ಮುಚ್ಚಿದರೆ ಸಾಕು, ಮಾವಿನ ತೋಪು, ಮೀನಿನ ಕೊಳ, ಗುಲಾಬಿ ತೋಟ, ಮೀನಾ ಬಜಾರ್‌ಗಳಲ್ಲಿ ತಮ್ಮಿಬ್ಬರ ನಡುವಿನ ರಹಸ್ಯ ನೋಟಗಳು, ಮಧುರ ಸಂಭಾಷಣೆಗಳು – ಇತ್ಯಾದಿ ಇತ್ಯಾದಿಗಳೆಲ್ಲ ಹಾದು ಹೋಗುತ್ತಿದ್ದವು. ಸಲೀಂನ ಸೌಂದರ್ಯಕ್ಕೆ ಮುಗ್ಧಳಾದದ್ದು ವಯಸ್ಸಿಗೆ ಬಂದಾಗಷ್ಟೇ ಅಲ್ಲ, ಎಂಟು ವರ್ಷದ ಬಾಲೆಯಾಗಿದ್ದಾಗಲೇ ಮದುಮಗನ ವೇಷದಲ್ಲಿದ್ದವನ ಬಗ್ಗೆ ಮುಗ್ಧ ಸೆಳೆತಕ್ಕೆ ಒಳಗಾಗಿದ್ದಳು. ಈಗ ನೋಡಿದರೆ ಅಲಿಖುಲಿ ತನ್ನ ಬಾಳ ಸಂಗಾತಿಯಾಗಲಿದ್ದಾನೆ. ಸಲೀಂಗೂ ಅಲಿಖುಲಿಗೂ ಎಲ್ಲಿಯ ಹೋಲಿಕೆ! ಅಲಿ ಸಾಧಾರಣ ಸೈನಿಕ. ರೂಪದಲ್ಲಿ ತೀರಾ ಸುಂದರ ಪುರುಷನೆಂದು ಹೇಳಲಾಗದಿದ್ದರೂ ಪರವಾಗಿಲ್ಲ. ಸ್ವಲ್ಪ ಒರಟು ಸ್ವಭಾವದವನು ಎಂಬುದನ್ನು ಕಲ್ಪಿಸಿಕೊಳ್ಳುವುದೂ ತನಗೆ ಅಸಹನೀಯ. ಆದರೂ ತಾನು ಅಸಹಾಯಕಳು. ಅಬ್ಬು, ಅಮ್ಮಿ, ಪರಿವಾರ ಎಲ್ಲರ ಮನಸ್ಸನ್ನು ಮುರಿದು ಸಲೀಂನ ಜೊತೆ ವಿವಾಹ ಸಾಧ್ಯವಾಗುವುದಾದರೂ ಹೇಗೆ? ಹಠದಿಂದ ಈ ಮದುವೆಯನ್ನು ತಿರಸ್ಕರಿಸಿ, ನಮ್ಮ ಬದುಕಿನ ವಿನಾಶಕ್ಕೆ ಕಾರಣವಾಗಲೇ? ಅದೂ ಅಲ್ಲದೆ ನಾನು ಪ್ರೀತಿಸಿದಷ್ಟೇ ಸಲೀಂ ನನ್ನನ್ನು ಪ್ರೀತಿಸುತ್ತಿದ್ದಾನೆಯೆ? ಒಂದು ವೇಳೆ ಅವನು ಪ್ರೀತಿಸುವುದೇ ನಿಜವಾಗಿದ್ದಲ್ಲಿ, ಅವನ ಕಡೆಯಿಂದ, ಪ್ರಯತ್ನಗಳೇಕೆ ನಡೆಯುತ್ತಿಲ್ಲ. ನನ್ನ ನಿಕಾಹ್ ವಿಚಾರ ಅವನಿಗೂ ತಿಳಿದೇ ಇರುತ್ತದೆಯಾದರೂ ಅವನಿಂದ ಒಂದು ಸುದ್ದಿ, ಸಂದೇಶವೂ ಇಲ್ಲ. ಅಲಿಖುಲಿ ಜೊತೆಗಿನ ಬದುಕನ್ನು ನೆನೆಸಿಕೊಂಡರೇನೇ ಭಯವಾಗುತ್ತದೆ. ಕೇವಲ ಒಬ್ಬ ಸೈನಿಕನಾಗಿ ಹೊಡಿ ಬಡಿ ಎನ್ನುವುದನ್ನು ಮಾತ್ರವೇ ತಿಳಿದವನಿಗೆ ಮಧುರ ಭಾವನೆಗಳು, ಕಾವ್ಯ, ಕಲೆ, ಸಂಗೀತಗಳಲ್ಲಿ ಏನು ತಾನೇ ಅಭಿರುಚಿ ಇರಲು ಸಾಧ್ಯ. ಒಂಟಿತನದ ಬದುಕು, ಯುದ್ಧಗಳಲ್ಲೇ ನಿರತನಾದವನಿಗೆ ಬದುಕುಳಿಯುವ ಭರವಸೆಯಾದರೂ ಏನಿದೆ? ಎಂದೆಲ್ಲ ಯೋಚಿಸುತ್ತ, ಕನಸುಗಳನ್ನು ಕಾಣುತ್ತಲೇ ಬೆಳಕು ಹರಿಯಿತು. ಆದರೆ ನೀಸಾ ಈಗ ನಿದ್ದೆಗೆ ಜಾರಿದಳು. ಎಷ್ಟು ಹೊತ್ತು ನಿದ್ದೆ ಮಾಡಿದಳೋ ತಿಳಿಯಲೇ ಇಲ್ಲ. ಎಂದಿಗಿಂತಲೂ ಹೆಚ್ಚು ಹೊತ್ತು ನಿದ್ದೆ ಮಾಡುತ್ತಿದ್ದುದನ್ನು ಗಮನಿಸಿದ ಅಸ್ಮತ್ ಅವಳು ಮಲಗಿದ್ದೆಡೆಗೆ ಬಂದು, 'ನೀಸಾ ನೀಸಾ' ಎಂದು ಒಂದೆರಡು ಬಾರಿ ಕೂಗಿ, ಅಲುಗಾಡಿಸಿ ಎಬ್ಬಿಸಿದಾಗ, ಥಟ್ಟನೆ ಗಾಬರಿಗೊಂಡವಳಂತೆ ಎದ್ದು ಕುಳಿತಳು.

"ಅಯ್ಯೋ ಅಮ್ಮಿ ಆಗಲೇ ಬೆಳಗಾಯಿತೇ? ನನಗೆ ಎಚ್ಚರವಾಗಲೇ ಇಲ್ಲ."

"ಇನ್ನು ಮುಂದೆ ಯಾರೂ ಬಂದು ನಿನ್ನನ್ನು ಎಚ್ಚರಗೊಳಿಸುವುದಿಲ್ಲ. ನೀನೇ ಎಚ್ಚರಗೊಳ್ಳುತ್ತಿರಬೇಕು. ಮಲಗಿದ್ದಿನ್ನು ಸಾಕು ಎದ್ದೇಳು. ನಾಳೆ ನಿನ್ನ ನಿಶ್ಚಿತಾರ್ಥ. ರಾಶಿ ಕೆಲಸಗಳು ಬಿದ್ದಿವೆ" ಎಂದು ಎಬ್ಬಿಸಿ, ಜೊತೆಗೆ ಕರೆದೊಯ್ದಳು.

* * *

ಮರುದಿನದ ನಿಶ್ಚಿತಾರ್ಥಕ್ಕೆ ತೀರಾ ಹತ್ತಿರದ ನೆಂಟರಿಷ್ಟರು ಮಾತ್ರವೇ ಬಂದಿದ್ದರು. ಅಲಿಖುಲಿಯ ಕಡೆಯಿಂದ ಖಾನ್-ಇ-ಖಾನನ್, ಅಬ್ದುರ್ ರಹೀಮ್ ಮತ್ತು ಆತನ ಹೆಂಡತಿ ಮಾಹ್‌ಬಾನು ಹುಡುಗಿಯ ಮನೆಯವರಿಗೆ ಮತ್ತು ಹುಡುಗಿಗೆ ಕೊಡಲೆಂದು ದೊಡ್ಡದೊಡ್ಡ ಹರಿವಾಣಗಳಲ್ಲಿ ರೇಶಿಮೆ ವಸ್ತ್ರಗಳು, ಹಲವು ರೀತಿಯ ಅಮೂಲ್ಯವಾದ ಮತ್ತು ಅದ್ಭುತ ಮೊಘಲ್ ವಿನ್ಯಾಸದ ಆಭರಣಗಳನ್ನು ತುಂಬಿಕೊಂಡು ತಂದಿದ್ದರು.

ನಿಶ್ಚಿತಾರ್ಥದ ಸಮಯಕ್ಕೆ ಮೆಹರುನ್ನೀಸಾ ಜರಿ ಕಸೂತಿಯ ಲೆಹಂಗಾ ಧರಿಸಿ, ತೆಳು ಗುಲಾಬಿ ಬಣ್ಣದ ಅವಕುಂಠನವನ್ನು ಮುಖದ ಮುಂದಕ್ಕೆ ಎಳೆದುಕೊಂಡಿದ್ದಳು. ಅಲಿಖುಲಿಯೂ ಬಹಳ ಠೀವಿಯಿಂದ ಗತ್ತು ಗೈರತ್ತಿನೊಂದಿಗೆ ಪ್ರವೇಶಿಸಿದ. ಪರದೆಯೊಳಗಿಂದಲೇ ಅಲಿ ಮೆಹರುನ್ನೀಸಾಳ ಸೌಂದರ್ಯವನ್ನು ವೀಕ್ಷಿಸಿದ. 'ಯಾ ಅಲ್ಲಾಹ್!' ಒಂದು ಕ್ಷಣದ ನೋಟವೇ ನನ್ನನ್ನು ಇಷ್ಟೊಂದು ತಬ್ಬಿಬ್ಬಾಗಿ ಮಾಡುತ್ತಿರುವಾಗ, ಇಡೀ ದೇಹವೇ ನನ್ನದಾದಾಗ, ನನಗೆ ತಾಳಿಕೊಳ್ಳುವ ಸಾಮರ್ಥ್ಯವಾದರೂ ಎಲ್ಲಿ ಸಾಧ್ಯ ಎಂದುಕೊಂಡ. ಆದರೆ ಮೆಹರುನ್ನೀಸಾಗೆ ಯಾವುದೇ ರೀತಿಯ ಭಾವ ಸ್ಪಂದನಗಳು ಸಾಧ್ಯವಾಗಲಿಲ್ಲ. ಒಲ್ಲದ ಮನಸ್ಸಿನಿಂದ ಬಿಗಿದುಕೊಂಡು ಕುಳಿತಿದ್ದಳೇ ಹೊರತು, ಅಲಿಖುಲಿಯ ಕಡೆ ಕಣ್ಣು ಹಾಯಿಸಲಿಲ್ಲ. ಸಲೀಂನ ಆ ಚೆಲುವಿನ ಮುಖವೇ ಹೃದಯವನ್ನೆಲ್ಲಾ ಆವರಿಸಿಕೊಂಡಿದ್ದಾಗ, ಒರಟು ಸೈನಿಕನಿಗೆ ಜಾಗವೇ ಇರಲಿಲ್ಲ.

ಎಲ್ಲಾ ಬಂಧುಬಳಗದ ಉಪಸ್ಥಿತಿಯಲ್ಲಿ ನಿಶ್ಚಿತಾರ್ಥದ ಸಮಾರಂಭ ನಡೆಯಿತು. ಮಿರ್ಜಾ ಘಿಯಾಸ್‌ಬೇಗ್ ಅಲಿಖುಲಿಯ ಕಡೆಯವರಿಗೆ, ತನ್ನ ಮಗಳನ್ನು ಅಲಿಖುಲಿ ಇಸ್ತಾಜ್ಲುವಿನ ಜೊತೆ ನಿಕಾಹ್‌ಮಾಡಿ ಕೊಡುವುದಾಗಿ ಮಾತುಕೊಟ್ಟ. ಆದರೆ ಅವನ ಮನಸ್ಸಿನಲ್ಲಿ, ನೀಸಾಳ ಅಸಂತುಷ್ಟ ಮುಖವೇ ಬಿಂಬಿತವಾಗುತ್ತಿತ್ತು. ಅವಳ ಕಡೆ ಕಣ್ಣಿಟ್ಟು ನೋಡಲೂ ಸಾಧ್ಯವಾಗಲಿಲ್ಲ; ಧೈರ್ಯವೂ ಸಾಲಲಿಲ್ಲ. ಮದುವೆಯ ದಿನಾಂಕವನ್ನು ಗುರುತಿಸಿ ತಿಳಿಸುವುದಾಗಿ ಹೇಳಿ ಬಂದವರನ್ನೆಲ್ಲಾ ಊಟೋಪಚಾರಗಳಿಂದ ಸತ್ಕರಿಸಿದರು.

ರುಖೈಯ್ಯಾ ಬೇಗಂಗೆ ಸಲೀಂನ ಕಾಟ ತಡೆಯಲಾಗಲಿಲ್ಲ. ಒಳಗೊಳಗೇ ಭಯ ಕಾಡುತ್ತಿತ್ತು. ಮೆಹರುನ್ನೀಸಾ ಚಾಲಾಕಿ ಹುಡುಗಿ, ಜೊತೆಗೆ ಧೈರ್ಯವಂತೆ. ಸ್ವಲ್ಪ ಹಠವಾದಿಯೂ ಕೂಡಾ. ಇದೆಲ್ಲದರ ನಂತರವೂ ಅವರಿಬ್ಬರೂ ಮದುವೆಗೆ ಸಾಹಸ ಮಾಡಿದರೆ! ಇದಕ್ಕೆ ಅವಕಾಶ ಕೊಡಬಾರದು. ನೀಸಾಳನ್ನು ಕರೆಸಿ ಮತ್ತೊಮ್ಮೆ ಎಚ್ಚರಿಕೆ ನೀಡಬೇಕು ಎಂದುಕೊಂಡು, ಅವಳಿಗೆ ಕರೆ ಕಳಿಸಿದಳು.

ಕೂಡಲೇ ಮೆಹರುನ್ನೀಸಾ ಜೋಲು ಮುಖದೊಂದಿಗೆ ರುಖೈಯ್ಯಾಳ ಕೋಣೆಯನ್ನು ಪ್ರವೇಶಿಸಿ, ಕುರ್ನಿಷ್ ಮಾಡಿದಳು.

"ಪಾದಶಾಹ್ ಬೇಗಂ, ನೀವು ಕರೆಕಳಿಸದಿದ್ದರೂ ನಾನು ಬರುವವಳೆ ಇದ್ದೆ. ನಿಮ್ಮನ್ನು ನೋಡದಿದ್ದರೆ ಹೇಗೆ? ನಿಮ್ಮ ಮಗಳಂತೆ, ಸ್ನೇಹಿತೆಯಂತೆ ನೋಡಿಕೊಳ್ಳುತ್ತೀರಿ. ನೀವು ತೋರುವ ಪ್ರೀತಿಗೆ ಪ್ರತಿಯಾಗಿ ನಾನೇನು ತಾನೇ ಕೊಡಬಲ್ಲೆ."

"ನೀನು ಕೊಡಬಲ್ಲೆಯಾಗಿರುವುದರಿಂದಲೇ ನಿನ್ನನ್ನು ಇಲ್ಲಿಗೆ ಕರೆಸಿದ್ದೇನೆ."

"ಹೇಳಿ ಬೇಗಂ ಏನೇ ಕೇಳಿದರೂ ಕೊಡುತ್ತೇನೆ."

"ನಿನ್ನ ಮತ್ತು ಸಲೀಂನ ಸಂಬಂಧ ನನಗೆ ಎಲ್ಲ ಮೂಲಗಳಿಂದ ತಿಳಿದಿದೆ. ಅವನು

ನಿನಗಾಗಿ ಹುಚ್ಚನಾಗಿದ್ದಾನೆ. ಬಾದಶಾಹರು ಚಿಂತೆಯಿಂದ ನಲುಗಿ ಹೋಗಿದ್ದಾರೆ. ಅವನ ಹುಚ್ಚುತನ ಅರ್ಥವಿಲ್ಲದ್ದು. ಸುಂದರ ಯುವತಿಯರನ್ನು ಕಂಡಾಗಲೆಲ್ಲ ಹೀಗೆಯೆ ಆಡುತ್ತಾನೆ. ಮೋಜು ತೀರಿದ ಮೇಲೆ ಮರೆತು ಬಿಡುತ್ತಾನೆ. ನಂತರ ಅವನ ಎದುರು ನಿಂತರೂ ನೆನಪಾಗುವುದಿಲ್ಲ. ಆದ್ದರಿಂದ ನೀನು ಇನ್ನೂ ಅವನ ಆಸೆಯನ್ನು ಇರಿಸಿಕೊಂಡಿದ್ದರೆ ಬಿಟ್ಟುಬಿಡು. ಅವನ ಚಿಂತೆಯಲ್ಲಿ ಬಂಗಾರದ ಭವಿಷ್ಯವನ್ನು ಹಾಳು ಮಾಡಿಕೊಳ್ಳಬೇಡ... ಈಗ ನಿನ್ನನ್ನು ನಾನೊಂದು ಪ್ರಶ್ನೆ ಕೇಳುತ್ತೇನೆ. ಅವನು ನಿನ್ನನ್ನು ಅಷ್ಟೊಂದು ಪ್ರೀತಿಸುತ್ತಿದ್ದರೆ, ನಿನಗೆ ಹೇಳಿಕಳುಹಿಸಿ, ನಿನ್ನಿಂದ ವಿಚಾರ ತಿಳಿದುಕೊಳ್ಳಬಹುದಾಗಿತ್ತಲ್ಲ... ನಿನಗೆ ಗೊತ್ತಿಲ್ಲ.... ಅವನಿಗೆ ಯಾವುದೂ ನೆನಪಿರುವುದಿಲ್ಲ. ಯಾವುದನ್ನೂ ಗಂಭೀರವಾಗಿ ತೆಗೆದುಕೊಳ್ಳುವುದಿಲ್ಲ. ಅವನಿಗೆ ಗೊತ್ತಿರುವುದೆಲ್ಲ ಐಷಾರಾಮಿ ವಿಲಾಸಗಳು, ಅವನ ಸ್ವಭಾವಕ್ಕೆ ತಕ್ಕಂತಹ ಗೆಳೆಯರ ಬಳಗ."

"ಪಾದಶಾಹ್ ಬೇಗಂ ಇದೆಲ್ಲವನ್ನು ನನ್ನ ಮುಂದೆ ಯಾಕೆ ಹೇಳುತ್ತಿದ್ದೀರಿ."

"ಯಾಕೆಂದರೆ ನೀನು ಇನ್ನೂ ಚಿಕ್ಕವಳು. ನಿಮಗೆ ನಿಮ್ಮ ಪ್ರಾಯದ ಬಯಕೆಗಳೇ ಮಹತ್ವದ್ದೆನಿಸಿ ಏನಾದರೂ ದಾರುಣಕ್ಕೆ ದಾರಿ ಮಾಡುವಿರೇನೋ ಎನ್ನುವ ಭಯ. ಅಲ್ಲದೆ ನೀನು ಈಗಾಗಲೇ ಇನ್ನೊಬ್ಬರ ಸ್ವತ್ತಾಗುವವಳಿದ್ದಿ. ಬಾದಶಾಹರು ಯಾರ ಮಾತಿಗೂ ಬಗ್ಗುವವರಲ್ಲ. ಸ್ವಂತ ಮಗನೇ ಆದರೂ ಸರಿ. ಆದ್ದರಿಂದಲೇ ಸ್ವಲ್ಪ ಎಚ್ಚರಿಕೆಯಿಂದ ವರ್ತಿಸು. ನಿನ್ನ ತಂದೆ ತಾಯಿಗಳಿಗೆ ಕೆಟ್ಟ ಹೆಸರು ತರಬೇಡ."

"ಪಾದಶಾಹ್ ಬೇಗಂ, ವಿನಾಕಾರಣ ನನ್ನನ್ನು ಅನುಮಾನಿಸುತ್ತಿದ್ದೀರಿ. ನಾನಾಗಿ ಎಂದೂ ನಿಮ್ಮ ಶಹಜಾದಾನನ್ನು ಬಯಸಲಿಲ್ಲ, ನನ್ನ ಹಿಂದೆ ಬಿದ್ದು ಪ್ರಾಣ ತೆಗೆದರು. ಅವರ ಪ್ರೀತಿಗೆ ನಾನು ಸ್ಪಂದಿಸಿದೆ. ನನಗೂ ಅವರೆಂದರೆ ಪ್ರೀತಿಯೇ! ಪ್ರೀತಿಯಿಲ್ಲವೆಂದು ಸುಳ್ಳು ಹೇಳಲಾರೆ. ಅವರ ಗುಣ ರೂಪ ಧೈರ್ಯಸಾಹಸಗಳಿಗೆ ಮೆಚ್ಚಿದ್ದು ಅಪರಾಧವಂತೂ ಅಲ್ಲವಲ್ಲ!"

"ಹುಡುಗಿ, ನಾನು ಹೇಳುವುದೇ ನೀನು ಸರಿಯಾಗಿ ಅರ್ಥಮಾಡಿಕೊಳ್ಳುತ್ತಿಲ್ಲ. ಮೊದಲೇ ಬಾದಶಾಹ್ ಮತ್ತು ಸಲೀಂರ ನಡುವೆ ಘರ್ಷಣೆ ಶುರುವಾಗಿದೆ. ಅಂಥಾದ್ದರಲ್ಲಿ ಮಗನ ಸಲುವಾಗಿ, ಕೊಟ್ಟ ಮಾತನ್ನು ತಪ್ಪುವುದಿಲ್ಲ, ಸ್ವಲ್ಪ ಮಟ್ಟಿಗೆ ಅವನು ಸ್ವಾರ್ಥಿಯೂ ಆಗಿದ್ದಾನೆ. ಆದಷ್ಟು ಬೇಗ ಅಪ್ಪನಿಂದ ಗದ್ದುಗೆಯನ್ನು ಕಿತ್ತುಕೊಳ್ಳಲು ಹೊಂಚಿ ಕಾಯುತ್ತಿದ್ದಾನೆ. ಅವನಿಗೆ ತಾಳ್ಮೆ ಎಂಬುದೇ ಇಲ್ಲ. ಅದರಿಂದಾಗಿ ಬಾದಶಾಹರಿಗೆ ಬೇಸರವಾಗಿದೆ. ಅಲ್ಲದೆ ನೀನೇನಾದರೂ ಮೂರ್ಖತನದಿಂದ ತಪ್ಪು ಹೆಜ್ಜೆ ಇಟ್ಟರೆ ನಿನ್ನ ತಂದೆ, ನಿನ್ನ ಕುಟುಂಬದ ಭವಿಷ್ಯದ ಭವನವೇ ಮುರಿದು ಬೀಳುತ್ತದೆ. ಕೆಟ್ಟ ಹೆಸರು ನಿನ್ನ ತಂದೆಯ ತಲೆಗೆ ಬರುತ್ತದೆ.....ನೆನಪಿರಲಿ."

ಮೆಹರುನ್ನೀಸಾಗೆ ರುಖೈಯ್ಯಾ ಬೇಗಂರಿಂದ ಇಷ್ಟೆಲ್ಲ ಕೇಳಿಸಿಕೊಳ್ಳಬೇಕಾಯಿತೆಂದು ಮನಸ್ಸಿಗೆ ತುಂಬಾ ಕಸಿವಿಸಿಯಾಯಿತು. ತನ್ನ ಪ್ರೀತಿ, ಮದುವೆ ವಿಷಯ ಇಷ್ಟು ದೊಡ್ಡ ರಾದ್ಧಾಂತವಾಗಬೇಕಾಯಿತೇ? ಗಂಡಸರು ಬಯಸಿದ್ದಲ್ಲಿ, ಬಯಕೆಯನ್ನು ಪೂರೈಸಿಕೊಳ್ಳಲು ಏನು ಬೇಕಾದರೂ ಮಾಡುತ್ತಾರೆ. ಆದರೆ ಹೆಣ್ಣು ಮಕ್ಕಳ ವಿಷಯಕ್ಕೆ ಬಂದಾಗ, ಸಮಾಜದಲ್ಲಿ ಅವಳಿಗೆ ಯಾವ ರೀತಿಯ ಸ್ವಾತಂತ್ರ್ಯವೂ ಇಲ್ಲ. ಸಾಲದ್ದಕ್ಕೆ

ತನ್ನ ಬಂಗಾರದ ಭವಿಷ್ಯಕ್ಕೆ ನಾಂದಿಯಾಗುವ, ಮದುವೆ ವಿಷಯದಲ್ಲಂತೂ, ತಾನು ಬಯಸುವ ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವೂ ಇಲ್ಲವೇ? ಸಲೀಂ ತನ್ನನ್ನು ಮರೆಯಲಾರ. ರುಖೈಯ್ಯಾ ಬೇಗಂ ಅವನ ಮರೆವಿನ ಬಗ್ಗೆ ಹೇಳಿದ್ದೆಲ್ಲವೂ ಸುಳ್ಳೇ ಎಂದುಕೊಂಡಳು. ತಂದೆ ತಾಯಿಗಳಿಗೆ ಮಾತು ಕೊಟ್ಟಿದ್ದೂ ನಿಶ್ಚಿತಾರ್ಥ ಆದದ್ದೂ, ವಿವಾಹದ ದಿನವನ್ನು ನಿರ್ಧರಿಸಿದ್ದೂ ಎಲ್ಲವೂ ಆಗಿತ್ತಾದರೂ ಮೆಹರುನ್ನೀಸಾಳ ಮನಸ್ಸಿಗೆ ನೆಮ್ಮದಿ ಸಾಧ್ಯವಾಗಿರಲಿಲ್ಲ.

ಸಲೀಂಗೆ ಮೆಹರುನ್ನೀಸಾಳನ್ನು ಭೇಟಿಯಾಗುವ ಮನಸ್ಸಿದ್ದರೂ, ಭೇಟಿಯಾಗುವ ಸಾಧ್ಯತೆಯ ಎಲ್ಲ ಬಾಗಿಲುಗಳು ಮುಚ್ಚಿ ಹೋಗಿದ್ದವು. ಕಡೆಗೆ ಹೇಗೋ ಮಾಡಿ, ಜಗತ್‌ಗೋಸಿನಿಯ ಖಾಸಗಿ ಸೇವಕ, ಗುಪ್ತಚರ ಹೋಷಿಯಾರ್‌ನನ್ನು ಪುಸಲಾಯಿಸಿ, ತನ್ನ ಪ್ರೀತಿಯನ್ನು ತೋಡಿಕೊಳ್ಳುತ್ತಾ, ಕವಿತೆಯನ್ನು ಬರೆದು, ಸಂದೇಶವನ್ನು ಮೆಹರುನ್ನೀಸಾಳಿಗೆ ತಲುಪಿಸುವಂತೆ ಪ್ರಾರ್ಥಿಸಿಕೊಂಡ.

ಹೋಷಿಯಾರ್ ಎಷ್ಟೇ ಹೋಷಿಯಾರಿತನದಿಂದ ಪ್ರಯತ್ನಿಸಿದರೂ, ನೀಸಾಳ ಅಣ್ಣ ಅಬುಲ್ ಹಸನ್‌ನ ಕಣ್ಣಿಗೆ ಬಿದ್ದೇ ಬಿದ್ದ. ಬಲವಂತದಿಂದ ಹೋಷಿಯಾರ್‌ನಿಂದ ಪತ್ರವನ್ನು ಕಸಿದುಕೊಂಡು ಓದಿದ. ಹೋಷಿಯಾರ್‌ನ ಕೈ ಕಾಲುಗಳಲ್ಲಿ ನಡುಕ ಉಂಟಾಯಿತು.

ಪತ್ರದ ವಿಷಯ ಓದಿ ಕಿಡಿಕಿಡಿಯಾದ. ನೇರವಾಗಿ ನೀಸಾಳ ಬಳಿಗೆ ಹೋಗಿ ಆ ಪತ್ರವನ್ನು ಬಿಡಿಸಿ ಓದುವಂತೆ ಹೇಳಿದ. ತಂಗಿಗೆ ಬುದ್ಧಿ ಹೇಳಿದ. ಮದುವೆಯಾಗ ಬೇಕಾದವಳು ಮಾನಗೆಟ್ಟು, ಇನ್ನೂ ಪ್ರಣಯ ಪತ್ರ ವಿನಿಮಯ, ರಹಸ್ಯ ಭೇಟಿಯನ್ನು ಖಂಡಿಸಿದ. ಅಣ್ಣ ತಂಗಿಯರ ಗಲಾಟೆ ಕೇಳಿ ಇವರಿದ್ದಲ್ಲಿಗೆ ಬಂದ ಅಸ್ಮತ್ ವಿಷಯ ತಿಳಿದು, ಮೆಹರುನ್ನೀಸಾಗೆ ಬುದ್ಧಿ ಹೇಳಿದಳು. ಈ ವಿಷಯ ಗಂಡಿನ ಕಡೆಯವರಿಗೆ ಗೊತ್ತಾದರೆ ಏನಾಗಬಹುದೆಂದು ಹೆದರಿದಳು. ಮದುವೆ ಗೊತ್ತಾದ ಹೆಣ್ಣಿಗೆ, ಸಲೀಂ ಹೀಗೆ ಪತ್ರ ಬರೆದದ್ದು ಕೆಡುಕೆನಿಸಿದರೂ ಏನೂ ಮಾಡಲಾಗದೆ ಹತಾಶಳಾಗಿದ್ದಳು. ಸಲೀಂ ನೆರವಿಗೆ ಯಾರೂ ಬರಲಿಲ್ಲವಾಗಿ, ಕಡೆಯ ಪ್ರಯತ್ನವಾಗಿ, ಬಾದಶಾಹರನ್ನೇ ನೇರವಾಗಿ ಕಾಣಲು ಹೋದ. ಅಕ್ಬರನ ಜೊತೆಯಲ್ಲಿ ರುಖೈಯ್ಯಾ ಬೇಗಂ ಕೂಡ ಇದ್ದಳು. ಸಲೀಂ ತಾನು ಬಂದ ಕಾರಣ ತಿಳಿಸಿ ಮಿರ್ಜಾ ಘಿಯಾಸ್‌ನ ಮಗಳಾದ ಮೆಹರುನ್ನೀಸಾಳನ್ನು ಪ್ರೀತಿಸಿದ ವಿಷಯವನ್ನು ತಿಳಿಸಿ, ಅವಳನ್ನು ತಾನು ಮದುವೆಯಾಗಲು ಅನುಮತಿ ಕೇಳಿದ. ಆದರೆ ಅಕ್ಬರ್ ಸುತರಾಂ ಒಪ್ಪಲಿಲ್ಲ. ತನ್ನ ಆದೇಶದಿಂದಲೇ ಈ ಮದುವೆ ನಡೆಯುತ್ತಿರುವುದರಿಂದ, ತನಗೆ ತನ್ನ ಮಾತಿನಿಂದ ಹಿಂದೆ ಸರಿಯಲು ಸಾಧ್ಯವೇ ಇಲ್ಲವೆಂದುಬಿಟ್ಟ.....ಸಲೀಂ ಜೋಲು ಮೋರೆ ಹಾಕಿಕೊಂಡು ಕಾಲು ಸುಟ್ಟುಕೊಂಡ ಬೆಕ್ಕಿನಂತೆ, ಬಂದ ದಾರಿಗೆ ಸುಂಕವಿಲ್ಲವೆಂದು ಹಿಂತಿರುಗಿದ.

ಮೆಹರುನ್ನೀಸಾ ಮತ್ತು ಸಲೀಂರ ನಡುವಿನ ಸಂಬಂಧ, ಈಗಾಗಲೇ ಸಾಕಷ್ಟು ಪ್ರಚಾರವಾಗಿ ಬಿಟ್ಟಿತ್ತು. ಎಲುಬಿಲ್ಲದ ನಾಲಗೆಗಳು, ಏನೇನೋ ಕತೆ ಕಟ್ಟಿದ್ರು, ಇದರ ಹಿಂದೆ ಘಿಯಾಸ್ ಕುಟುಂಬದ ಹುನ್ನಾರವಿದೆಯೆಂಬ ಲೆಕ್ಕಾಚಾರ ಅವರದು. ಸಲೀಂ ಅಳಿಯನಾದರೆ ತಮ್ಮ ಅಧಿಕಾರ ಅಂತಸ್ತುಗಳು ಬೆಳೆಯುತ್ತವೆ. ಮಗಳು ಚಕ್ರವರ್ತಿನಿ

ಆಗುತ್ತಾಳೆ. ಮೊಘಲ್ ಸಾಮ್ರಾಜ್ಯವೇ ಅಳಿಯನ ಕಾಲಡಿಯಲ್ಲಿ ಇರುತ್ತದೆ ಎಂದೆಲ್ಲ ಕೆಲವರು ಮಾತಾಡಿಕೊಂಡರು. ಅದರಲ್ಲಿಯೂ ಅಬುಲ್ ಫಜಲ್ ಹೆಂಡತಿ ಜನಾನಾದಲ್ಲಿ ಈ ಸಂಬಂಧ ರೋಚಕ ಕತೆಗಳನ್ನು ಬಣ್ಣಿಸಿ ಎಲ್ಲರಿಗೂ ಮನರಂಜನೆ ನೀಡುತ್ತಿದ್ದಳು. ಘಿಯಾಸ್‌ನ ದಾಯಾದಿಗಳಂತೂ ಹೊಟ್ಟೆ ಉರಿಸಿಕೊಳ್ಳುತ್ತಿದ್ದರು.

ರಾಜಾ ಮಾನ್‌ಸಿಂಗ್, ಖಾನ್ ಅಜಮ್, ಮಿರ್ಜಾ ಅಜೀಜ್ ಕೋಕಾ ಇವರಿಗೆ, ಈ ಇರಾನಿ ಹುಡುಗಿಯಿಂದ, ಖುಸ್ರೋಗೆ ಸಿಂಹಾಸನ ತಪ್ಪಿಹೋಗುವ ಚಿಂತೆ.

ಮತ್ತೆ ಕೆಲವರಿಗೆ, ಘಿಯಾಸ್‌ನಿಂದ ಮಗಳ ಭವಿಷ್ಯದ ಕತೆ ಕೇಳಿದ್ದರಿಂದ, ಆ ಭವಿಷ್ಯ ನಿಜವಾಗುವುದಾದರೆ, ಅವಳು ಉನ್ನತ ಸ್ಥಾನ ಪಡೆದುಕೊಂಡರೆ ಅಚ್ಚರಿಯಿಲ್ಲ ಎನಿಸಿತು. ಈ ವದಂತಿಗಳು, ಕಾಡು ಹರಟೆಗಳು ಘಿಯಾಸ್ ಮತ್ತು ಅಸ್ಮತ್‌ರನ್ನು ಚಿಂತೆಗೆ ದೂಡಿದವು. ಮಗಳ ಅನುಪಮ ಸೌಂದರ್ಯ, ಜಾಣ್ಮೆ, ಕೌಶಲ್ಯಗಳು ತಮ್ಮ ಪಾಲಿಗೆ ಅಪಾಯವೆನಿಸತೊಡಗಿದವು. ಮೊದಲು ಎಷ್ಟೊಂದು ಹೆಮ್ಮೆ ಅನುಭವಿಸಿದರೂ, ಈಗ ಹೆದರಿಕೆಯಾಗುತ್ತಿತ್ತು. ಆದರೆ ಇದನ್ನೆಲ್ಲ ಸಹಿಸಿಕೊಂಡು ಸುಮ್ಮನೆ ಇರುವುದರ ಹೊರತು ಬೇರೇನೂ ಮಾಡುವಂತಿರಲಿಲ್ಲ.

ಘಿಯಾಸ್‌ಗೂ ಭಯವಾಯಿತು. ಏನಾದರೂ ಅನಾಹುತ ಆದಲ್ಲಿ. ತನ್ನ ಪದವಿ, ಪ್ರತಿಷ್ಠೆ ಅಧಿಕಾರಗಳನ್ನು ಕಳೆದುಕೊಂಡು ಆರಂಭದ ಸ್ಥಿತಿ ತಲುಪಬೇಕಾಗುತ್ತದೆ ಎನಿಸಿದ್ದರಿಂದ ಮಗಳಿಗೆ ಸರಿಯಾಗಿ ತಿಳಿಸಿ ಹೇಳಬೇಕು. ಯಾವುದೇ ಅಚಾತುರ್ಯದ ಕೆಲಸ ಮಾಡಬೇಡವೆಂದು ಕೇಳಿಕೊಳ್ಳಬೇಕು. ತನ್ನ ಮಗಳು ಸಾಧಾರಣ ಹೆಣ್ಣಲ್ಲ. ಅವಳಂಥ ಪ್ರತಿಭಾವಂತೆ, ಧೈರ್ಯವಂತೆ, ಸಕಲಗುಣಸಂಪನ್ನೆ. ಜೊತೆಗೆ ತಂದೆತಾಯಿಗಳ ಬಗ್ಗೆ ಅಪಾರ ಪ್ರೀತಿ ಗೌರವವಿದೆ. ಒಂದು ಹೆಜ್ಜೆ ಎಡವಿದರೂ ದೊಡ್ಡ ಕೋಲಾಹಲ ಸೃಷ್ಟಿಯಾಗುತ್ತದೆ. ಆದ್ದರಿಂದ ಅವಳನ್ನು ಕರೆದು ಬುದ್ಧಿ ಹೇಳಬೇಕು ಎಂದು ಅಸ್ಮತಳಿಗೆ ಸೂಚಿಸಿದ.

ಅಸ್ಮತ್ ತನ್ನ ಕೆಲಸವನ್ನು ಅಚ್ಚುಕಟ್ಟಾಗಿ ಮಾಡಿದಳು. ಮದುವೆ ಮುಗಿಯುವವರೆಗೆ ಎಲ್ಲಿಯೂ ಒಂಟಿಯಾಗಿ ಅವಕುಂಠನವಿಲ್ಲದೆ ಹೋಗಬೇಡ. ಗಂಡಸರ ಬಗ್ಗೆ ಎಚ್ಚರಿಕೆಯಿಂದಿರು. ಅವರಿಗೆ ಹೆಂಗಸರ ಖಯಾಲಿ ಜನ್ಮಜಾತವಾಗಿ ಅಂಟಿಕೊಂಡು ಬಂದಿರುತ್ತದೆ. ಯಾರ ಬಳಿಯೂ ಮದುವೆ ವಿಷಯದ ಬಗ್ಗೆ ಚಕಾರ ಎತ್ತಬೇಡ. ಇಲ್ಲಿವರೆಗೆ ನಡೆದದ್ದನ್ನು ಕೆಟ್ಟಕನಸೆಂದು ಮರೆತುಬಿಡು. ಹೊಸ ಬದುಕನ್ನು ರೂಪಿಸಿಕೊ. ಮದುವೆಯಾದ ಮೇಲೆ ನಾವು ನಿನ್ನ ಜೊತೆ ಇರುವುದಿಲ್ಲ. ಹೊಸ ಊರು, ಹೊಸ ಮನೆ, ಹೊಸ ಸಂಬಂಧಗಳು ಮೊದಲಿಗೆ ಕಷ್ಟವೆನಿಸುತ್ತದೆ. ನಂತರ ಕ್ರಮೇಣ, ನಿನ್ನ ಬದುಕೇ ನಿನಗೆ ಪಾಠ ಕಲಿಸುತ್ತದೆ. ನೋಡು ಮಗಳೇ, ನಿನ್ನ ಭವಿಷ್ಯವೇ ಅಲ್ಲ ನಮ್ಮೆಲ್ಲರ ಭವಿಷ್ಯವೂ ನಿನ್ನ ಕೈಲಿದೆ ಎನ್ನುವುದನ್ನು ಮರೆಯಬೇಡ ಎಂದೆಲ್ಲ ವಿವರಿಸಿದಳು.

ನಿಶ್ಚಿತವಾದ ದಿನದಂದು ಗಂಡಿನ ಕಡೆಯವರು ಮದುಮಗ ಅಲಿಖುಲಿ ಇಸ್ತಾಜ್ಲುವಿನ ಜೊತೆಗೆ ಆಗಮಿಸಿದರು. ಘಿಯಾಸ್‌ಬೇಗ್ ಸ್ವತಃ ತನ್ನ ಬಂಧುಗಳ ಜೊತೆ ಬೀಗರನ್ನು ಬಾಗಿಲಿನಲ್ಲಿ ನಿಂತು ಸ್ವಾಗತಿಸಿದ. ಅಲಿಖುಲಿಗೆ ವಾಸ್ತವದಲ್ಲಿ, ಭಾರತದಲ್ಲಿ ಯಾರೂ ಬಂಧುಬಳಗ ಇರಲಿಲ್ಲವಾದರೂ ತನ್ನನ್ನು ತಂದೆಯಂತೆ ನೋಡಿಕೊಂಡು ಇಂತಹ

ಉತ್ತಮ ಸ್ಥಿತಿಯಲ್ಲಿ ಇರಿಸಿದ ಖಾನ್-ಇ-ಖಾನನ್ ಮತ್ತು ಅಬ್ದುರ - ರಹೀಮರು ಜೊತೆಗಿದ್ದರು. ಬಂದವರನ್ನು ಮನೆಯ ಒಳಗೆ ಕರೆದೊಯ್ದು ಅತಿಥಿ ಸತ್ಕಾರಕ್ಕೆ ಅಣಿಯಾದರು.

ಎಲ್ಲರೂ ಸಂಭ್ರಮದಿಂದ ಮದುವೆಯ ಕ್ಷಣಗಳಿಗೆ ಎದುರು ನೋಡುತ್ತಿದ್ದರೆ, ಮತ್ತೊಂದು ಕೋಣೆಯಲ್ಲಿ ಮದುಮಗಳು ಸಜ್ಜಾಗುತ್ತಿದ್ದಳು. ಚಿನ್ನದ ಕಸೂತಿಯ ಲೆಹಂಗಾ, ಅತ್ಯಂತ ತೆಳುವಾದ ಮತ್ತು ಸುಂದರವಾದ ಕಸೂತಿಯ ಅಂಚುಳ್ಳ ಅವಕುಂಠನ, ಕೈಗಳಿಗೆ ಮೆಹಂದಿ, ಕೈತುಂಬ ವಿವಿಧ ಬಣ್ಣದ ಬಳೆಗಳು, ಮೈ ತುಂಬಾ ಆಭರಣಗಳಿಂದ ಕೂಡಿದ ಮೆಹರುನ್ನೀಸಾ ಸ್ವರ್ಗದಿಂದ ಇಳಿದು ಬಂದ ಅಪ್ಸರೆಯಂತೆ ಕಾಣಿಸುತ್ತಿದ್ದಳು. ಬಂದ ಅತಿಥಿಗಳಿಗೆ ವಿವಿಧ ಬಗೆಯ ಭಕ್ಷ್ಯಗಳಿಂದ ದಾವತ್ ನೀಡಿ ಸಂತೃಪ್ತಿಪಡಿಸಿದರು. ಹಾಗೆಯೇ ಮದುವೆಗೆ ಹೊರತಾದ ಯಾವುದೇ ಮಾತುಗಳಿಗೆ ಅವಕಾಶವಾಗದಂತೆ ಎಚ್ಚರಿಕೆ ವಹಿಸಿದರು. ಆದಷ್ಟು ಸಂಕ್ಷಿಪ್ತವಾಗಿ ಮದುವೆಯ ವಿಧಿವಿಧಾನಗಳನ್ನು ಮುಗಿಸಿದರು. ನೀಸಾಗೆ ಒಳಗೊಳಗೇ ಅತೀವ ಹಿಂಸೆಯಾಗುತ್ತಿತ್ತು. ಸಲೀಂನನ್ನು ಮರೆಯಲು ಸಾಧ್ಯವಾಗಲಿಲ್ಲವಾಗಿ ಅಲಿಖುಲಿ ಇಸ್ತಾಜ್ಲುವನ್ನು ನೋಡಬೇಕೆಂದೇನೂ ಅನಿಸಲಿಲ್ಲ. ಮೂಕ ಬಲಿಪಶುವಿನಂತೆ ಈ ಮದುವೆಗೆ ತಲೆಕೊಟ್ಟಿದ್ದಳು. ಅಲಿಖುಲಿಯಂತೂ ಮೆಹರುನ್ನೀಸಾಳಂಥ ಅದ್ಭುತ ಸೌಂದರ್ಯವತಿ ಸಿಕ್ಕಿದ್ದು ತನ್ನ ಎಷ್ಟೋ ಜನ್ಮಗಳ ಪುಣ್ಯವೆಂದು ಭಾವಿಸಿದ. ಅವಳನ್ನು ಆದಷ್ಟು ಬೇಗ ಅವಕುಂಠನವಿಲ್ಲದೆ ನೋಡಬೇಕು. ಅವಳನ್ನು ಸ್ಪರ್ಶಿಸಬೇಕು. ಕೆನ್ನೆಗಳನ್ನು ಸವರಬೇಕು. ಇಡಿ ಇಡಿಯಾಗಿ ಅವಳನ್ನು ಬರಸೆಳೆದು ಬಿಗಿಯಾಗಿ ಬಾಹುಗಳಿಂದ ಅಪ್ಪಿಹಿಡಿಯಬೇಕೆಂದು ಕಾಯುತ್ತಿದ್ದ.

ಮೆಹರುನ್ನೀಸಾ ಕೈಯಿಂದ ತಪ್ಪಿಹೋದದ್ದು, ಸಲೀಂಗೆ ಬಹುದೊಡ್ಡ ಆಘಾತವೆನಿಸಿತು. ತಂದೆಯ ಮೇಲಿನ ಸಿಟ್ಟು ಮತ್ತಷ್ಟು ಹೆಚ್ಚಾಯಿತು. ಈ ಸಮಯದಲ್ಲಿ ಸಿಂಹಾಸನ ತನ್ನದಾಗಿದ್ದರೆ, ಯಾರ ಹಂಗೂ ಇಲ್ಲದೆ ಮೆಹರುನ್ನೀಸಾಳನ್ನು ಮದುವೆಯಾಗಬಹುದಿತ್ತು. ಈ ತಂದೆಯೋ ಹತ್ತಾರು ವರ್ಷಗಳು ಸಾಮ್ರಾಜ್ಯಶಾಹಿ ಸುಖವನ್ನು ಅನುಭವಿಸಿದ್ದರೂ ಕಿರೀಟವನ್ನು ಬಿಟ್ಟು ಬದುಕಲು ಮನಸ್ಸುಮಾಡಿಲ್ಲ. ರಾಜ್ಯವಿಲ್ಲದಿದ್ದರೂ ಬಯಸಿದ ಹುಡುಗಿಯ ಜೊತೆ ಬದುಕುವುದಕ್ಕೂ ಅವಕಾಶ ಕೊಡಲಿಲ್ಲ. ಈ ಅಪ್ಪನಿಗೆ ಇನ್ನೂ ಎಷ್ಟು ವರ್ಷ ಆಳಬೇಕೆಂಬ ಮೋಹವಿದೆಯೋ ಅರ್ಥವಾಗುತ್ತಿಲ್ಲ ಎಂದು ಅಸಮಾಧಾನದಿಂದ ಚಡಪಡಿಸುತ್ತಿದ್ದ. ಮೆಹರುನ್ನೀಸಾಳ ನೆನಪು ಅವನನ್ನು ಮತ್ತೂ ಅಧಃ ಪಾತಾಳಕ್ಕೆ ತಳ್ಳುತ್ತಿತ್ತು. ಅಕ್ಬರನ ದುರದೃಷ್ಟವೆಂಬಂತೆ ತನ್ನಿಬ್ಬರು ಮಕ್ಕಳಾದ ದಾನ್ಯಾಲ್, ಮುರಾದರು ಕೂಡಾ ಕೇವಲ ಮದ್ಯಪಾನ ವ್ಯಸನಿಗಳಾಗಿ, ಸ್ತ್ರೀಲೋಲುಪರಾಗಿ ಸಾವನ್ನಪ್ಪಿದ್ದರು. ಮುಘಲ್ ಸಾಮ್ರಾಜ್ಯದ ಭವಿಷ್ಯವಾಗಿ ಉಳಿದಿದ್ದ ಸಲೀಂ ಕೂಡಾ ಈಗ ಅದೇ ದಾರಿಯಲ್ಲಿ ಮುಂದುವರೆದಿದ್ದ. ಅತಿರೇಕದ ವರ್ತನೆಗೆ ಒಳಗಾಗಿದ್ದ. ಮಾತಾಡಿಸಲು ಹೋದವರ ಮೇಲೆ ಹರಿಹಾಯುತ್ತಿದ್ದ. ಅವನ ಗೆಳೆಯರಾಗಿದ್ದ ಖುತುಬುದ್ದೀನ್ ಕೋಕಾ, ಮಹಬ್ಬತ್ ಖಾನರು ಅವನನ್ನು ಸರಿದಾರಿಗೆ ತರಲು ಪ್ರಯತ್ನಿಸದೆ ಮತ್ತಷ್ಟು ಉತ್ತೇಜನ ಕೊಡುತ್ತಿದ್ದರು.

ಆದರೆ ಸಲೀಮಾ ಸುಲ್ತಾನ್‌ಬೇಗಂ. ತನ್ನ ದತ್ತು ಮಗನಂತಿದ್ದ ಸಲೀಂನ ಸ್ಥಿತಿಗೆ ನೊಂದುಕೊಂಡು, ಏನಾದರೂ ಮಾಡಿ ಅಪ್ಪ ಮಗನ ನಡುವೆ ರಾಜಿ ಮಾಡಿಸಲು ಯೋಚಿಸಿದಳು. ಅಲ್ಲದೆ ಸಲೀಮನಿಗೂ ತನ್ನ ನಡತೆಯನ್ನು ತಿದ್ದಿಕೊಂಡು ತಂದೆ ಹೇಳಿದಂತೆ ಕೇಳಿಸಿಕೊಳ್ಳಲು ಬುದ್ಧಿ ಹೇಳಿದಳು. ಇದೇ ರೀತಿಯಲ್ಲಿ, ಸಾಮ್ರಾಜ್ಯದಲ್ಲಿ ತಮಗೇ ಗೊತ್ತಿಲ್ಲದಂತೆ ಸಲೀಂನ ದೌರ್ಬಲ್ಯಗಳನ್ನು ದುರುಪಯೋಗಪಡಿಸಿಕೊಂಡರೆ ಹದಿಮೂರನೇ ವಯಸ್ಸಿನಿಂದಲೇ ಕಷ್ಟಪಟ್ಟು ಕಟ್ಟಿದ ಸಾಮ್ರಾಜ್ಯ ಕೈಜಾರಿಹೋದರೆ ಆಗುವ ದುರಂತಗಳ ಬಗ್ಗೆಯೂ ಬೇಗಂ ಸಲೀಂಗೆ ತಿಳಿಸಿ ಹೇಳಿದಳು.

ನಿಧಾನವಾಗಿ ಸ್ವಲ್ಪ ತಾಳ್ಮೆಯಿಂದ ಸಲೀಂ ತಾಯಿಯ ಮಾತುಗಳನ್ನು ಮನಸ್ಸಿಗೆ ಇಳಿಸಿಕೊಂಡ. ಜೊತೆಗೆ ಹಿಂದಿನ ಸಂಗತಿಗಳು, ಘಟನೆಗಳು ನೆನಪಿಗೆ ಬಂದವು. ತಂದೆಯ ತೀರಾ ಹತ್ತಿರದ ಬಂಟ ಅಬುಲ್ ಫಜಲ್‌ಗೆ ತನ್ನ ಬಗ್ಗೆ ಇದ್ದ ಅಸೂಯೆ, ಮಾನ್‌ಸಿಂಗ್, ಅಜೀಜ್‌ಕೋಕಾ ಇವರೆಲ್ಲರೂ ತನ್ನ ಮಗ ಖುಸ್ರೋನಿಗೇ ಸಿಂಹಾಸನ ಕೊಡಿಸುವ ಹುನ್ನಾರಗಳ ಬಗ್ಗೆಯೂ ಕೇಳಿಸಿಕೊಂಡಿದ್ದ. ಪರಿಸ್ಥಿತಿ ಹೀಗಿರುವಾಗ ತನ್ನ ಭಗ್ನ ಪ್ರಣಯ, ಮೆಹರುನ್ನೀಸಾಳ ಮಾದಕ ಸೌಂದರ್ಯ ಇತ್ಯಾದಿಗಳನ್ನು ಮರೆತು ಸಾಮ್ರಾಜ್ಯದ ಸುಭದ್ರತೆಯ ಕಡೆಗೆ ಗಮನಕೊಡಬೇಕೆಂಬ ಅರಿವು ಜಾಗೃತಗೊಂಡಿತು. ಜೊತೆ ಜೊತೆಗೆ ಹತ್ತಾರು ವರ್ಷಗಳು, ಅತ್ಯಂತ ಬಲಶಾಲಿ ಸಾಮ್ರಾಟನೆನಿಸಿಕೊಂಡು, ಇಡೀ ಹಿಂದೂಸ್ತಾನವನ್ನೇ ತನ್ನ ವಶಕ್ಕೆ ತೆಗೆದುಕೊಂಡ ಅಪ್ಪನ ಸಾಮರ್ಥ್ಯ, ಸಾಹಸ, ಬುದ್ಧಿವಂತಿಕೆಗಳ ಬಗ್ಗೆ ಹೆಮ್ಮೆ ಎನಿಸತೊಡಗಿತು. ಅಷ್ಟೇ ಅಲ್ಲದೆ ತನ್ನ ಸ್ವಂತ ಮಕ್ಕಳನ್ನೂ ಹೊರತುಪಡಿಸದೆ, ತನ್ನ ಆದೇಶಗಳನ್ನು ಪಾಲಿಸದಿದ್ದಲ್ಲಿ, ತನಗೆ ವಿರುದ್ಧವಾಗಿ ನಡೆದುಕೊಂಡಲ್ಲಿ ಯಾವ ಪಕ್ಷಪಾತವೂ ಇಲ್ಲದೆ ಕ್ರೂರವಾದ ಶಿಕ್ಷೆಯನ್ನು ಘೋಷಿಸುತ್ತಿದ್ದ. ಹಾಗಾಗಿ ಮೊದಲಿನಂತೆ ಅಪ್ಪನ ವಿರೋಧವನ್ನು ಕಟ್ಟಿಕೊಳ್ಳದೆ, ಅವನನ್ನು ಸಾಯಿಸುವ ಪ್ರಯತ್ನಗಳ ಬಗ್ಗೆ (ಮೊದಲೊಮ್ಮೆ ವಿಷ ಪ್ರಾಶನ ಮಾಡಿ ಹೇಗೋ ತಪ್ಪಿಸಿಕೊಂಡಿದ್ದ) ಆಲೋಚಿಸದೆ, ಅಪ್ಪನಲ್ಲಿ ಕ್ಷಮಾಯಾಚನೆ ಮಾಡಲು ಚಿಂತಿಸಿದ. ಹಾಗೆಯೇ ಸಲೀಮಾ ಸುಲ್ತಾನ್ ಬೇಗಂ ಹೇಳಿದ ರಾಜಕೀಯ ಷಡ್ಯಂತ್ರಗಳ ಬಗ್ಗೆ ಎಚ್ಚರ ವಹಿಸಲು ತೀರ್ಮಾನಿಸಿದ. ಆದರೆ ತಂದೆಯನ್ನು ಸಂಪ್ರೀತಗೊಳಿಸುವುದಾದರೂ ಹೇಗೆ?

ಈಗಾಗಲೇ ಇಡೀ ಹಿಂದೂಸ್ತಾನವೇ ಮೊಘಲ್ ಆಡಳಿತಕ್ಕೆ ಒಳಗಾಗಿದೆ. ಅದ್ಭುತವಾದ ರೀತಿಯಲ್ಲಿ ಆಡಳಿತ ನಡೆಸಿದ್ದಾರೆ. ತನಗೇನೋ ತಂದೆ, ಬಹುಶಃ ಮುಂದಿನ ಚಕ್ರವರ್ತಿಯನ್ನಾಗಿ ರೂಪಿಸುವುದಕ್ಕೆಂದೋ ಏನೋ ಒಳ್ಳೆಯ ರೀತಿಯಲ್ಲಿ ಯುದ್ಧ ಕಲೆಯಲ್ಲಿ ತರಬೇತಿಯನ್ನು ಕೊಡಿಸಿದ್ದಾರೆ. ಇನ್ನು ಮೃಗ ಬೇಟೆಯಲ್ಲಂತೂ ಅವರನ್ನೂ ಮೀರಿಸುವ ರೀತಿಯಲ್ಲಿ ನೈಪುಣ್ಯತೆಯನ್ನು ನನ್ನಲ್ಲಿ ಸೃಷ್ಟಿಸಿದ್ದಾರೆ. ಆದರೆ ರಾಜ್ಯಾಡಳಿತದ ಕಿಂಚಿತ್ ಅನುಭವವೂ ನನಗಿಲ್ಲ. ಇನ್ನು ಮುಂದೆ ತಂದೆಯ ಬಲಗೈಯಾಗಿ ನಿಂತು ಅವರ ಆಡಳಿತದಲ್ಲಿ ಸಹಕರಿಸಬೇಕು. ಅಲ್ಲಾಹ್‌ನ ಕೃಪೆಯಿಂದ ಸಾಮ್ರಾಜ್ಯ ನನ್ನ ಕೈಗೆ ದಕ್ಕಿದರೆ ತಂದೆಯ ಹೆಸರನ್ನು ಉಳಿಸುವ ರೀತಿಯಲ್ಲಿ, ಎಲ್ಲರೀತಿಯಿಂದಲೂ, ಸತ್ಯ, ಧರ್ಮ, ನ್ಯಾಯನೀತಿಗಳಿಂದ, ಆಳ್ವಿಕೆ ನಡೆಸಿ ಎಲ್ಲರಿಗೂ ಮಾದರಿಯಾಗಬೇಕು ಎಂದು ಬಹಳ ಗಂಭೀರವಾಗಿ ಆಲೋಚಿಸಿ, ತನ್ನನ್ನು ಆಲೋಚನೆಗೆ ತಕ್ಕಂತೆ ರೂಪಿಸಿಕೊಳ್ಳತೊಡಗಿದ.

ಮತ್ತೊಂದು ಕಡೆ ಅಕ್ಬರ್ ಇತ್ತೀಚಿನ ಘಟನೆಗಳನ್ನು ನೋಡಿದವನಿಗೆ, ತನ್ನ ಕಳೆದ ಹಿಂದಿನ ದಿನಗಳ ನೆನಪುಗಳು ಅವನ ಮುಂದೆ ಸುಳಿದವು. ಇಷ್ಟು ದೊಡ್ಡ ಸಾಮ್ರಾಜ್ಯವನ್ನು ಆಳಲು ತನಗೊಬ್ಬ ಸಮರ್ಥ ಉತ್ತರಾಧಿಕಾರಿ ಇಲ್ಲದೆ ಹೋದನಲ್ಲ ಎಂದು ಕೊರಗಿದ. ತನಗಿದ್ದ ನೂರಾರು ಹೆಂಡಿರಲ್ಲಿ ಹುಟ್ಟಿದ ಯಾವ ಮಗುವೂ ಬದುಕುಳಿಯಲಿಲ್ಲ. ಆದರೆ ಸಲೀಮಾ ಸುಲ್ತಾನಳಲ್ಲಿ ಮತ್ತು ತನ್ನ ಹಿಂದೂ ಹೆಂಡತಿಯಾದ ಹಮಿದಾ ಬಾನುವಿನಿಂದ ಮಕ್ಕಳು ಜನಿಸಿದರು. ಅವರಲ್ಲಿ ಸಲೀಂ ಕೂಡಾ ಒಬ್ಬ ಮಗ. ಸಲೀಂನನ್ನು ಪಡೆಯಲು ಫತೇಪುರ್ ಸಿಕ್ರಿಯ ಶೀಕ್ ಸಲೀಂ ಚಿಶ್ತಿ ಬಾಬಾರನ್ನು ಕಂಡು ಪ್ರಾರ್ಥಿಸಿ, ಅವರ ಆಶೀರ್ವಾದದಿಂದ ಸಲೀಂ ಹಮೀದಾ ಬಾನುವಿಗೆ ಜನಿಸಿದ. ನಂತರ ಸಲೀಮಾ ಸುಲ್ತಾನಾಳಿಗೆ ಇಬ್ಬರು ಗಂಡು ಮಕ್ಕಳು ದಾನ್ಯಾಲ್ ಮತ್ತು ಮುರಾದ್ ಹುಟ್ಟಿದರು. ಉತ್ತರಾಧಿಕಾರಿಯಾಗಿ ಹುಟ್ಟಿದ ಸಲೀಮನಿಗೆ ಪ್ರೀತಿಯಿಂದ, ಚಿಶ್ತಿ ಬಾಬಾರ ನೆನಪಿಗಾಗಿ, ಶೀಕುಬಾಬಾ ಎಂದೇ ಕರೆಯುತ್ತಿದ್ದ. ಆದರೆ ಪರಿಸ್ಥಿತಿಗಳು ಈಗ ಏರುಪೇರಾಗಿದೆ. ತನ್ನ ಪ್ರೀತಿಯ ಶೀಕು ತನ್ನಿಂದ ದೂರವಾಗುತ್ತಿದ್ದಾನೆ ಎನ್ನುವ ಕೊರಗಿನಿಂದ ದಿನೇದಿನೇ ಕೃಶನಾಗುತ್ತಿದ್ದ.

ಇಂತಹ ಮಾನಸಿಕ ಸ್ಥಿತಿಯಲ್ಲಿ, ರುಖೈಯ್ಯಾ ಬೇಗಂ, ಸಲೀಮಾ ಸುಲ್ತಾನಾಬೇಗಂ– ಇಬ್ಬರೂ ಅವನಿಗೆ ಬಲವಾಗಿ, ಬೆಂಬಲವಾಗಿ ನಿಂತಿದ್ದರು. ಸಲೀಂನ ವಿಚಾರವಾಗಿ ಅಷ್ಟೊಂದು ತಲೆ ಕೆಡಿಸಿಕೊಳ್ಳಬೇಕಾದ್ದಿಲ್ಲ. ಸಲೀಂ ಬಹಳ ಒಳ್ಳೆಯವನು, ಬುದ್ಧಿವಂತ. ಸಾಮ್ರಾಜ್ಯದ ಹೊರೆಹೊರಲು ಎಲ್ಲ ರೀತಿಯಿಂದಲೂ ಸಮರ್ಥ. ಏನೋ ಪ್ರಾಯದ ಹುಚ್ಚು, ಗೆಳೆಯರ ಸಹವಾಸ ಅವನನ್ನು ಹಾಳು ಮಾಡಿದೆ ಅಷ್ಟೆ! ಎಂದು ಸಮಾಧಾನ ಪಡಿಸಿದರು. ಅಕ್ಬರ್‌ಗೆ ಸಲೀಂನ ಉದ್ಧಟತನ ಅವನ ಬೇಜವಾಬ್ದಾರಿತನ, ವಿಲಾಸಿ ಜೀವನದಿಂದ ಬೇಸರಗೊಂಡಿದ್ದುದರ ಜೊತೆಗೆ ಅಬುಲ್‌ಫಜಲ್‌ನ ಕೊಲೆಯ ಹಿಂದೆ ಅವನ ಕೈವಾಡವಿರುವ ಸುದ್ದಿ ಅವನನ್ನು ಪೂರ್ತಿಯಾಗಿ ಕುಸಿದು ಹೋಗುವಂತೆ ಮಾಡಿತು. ಜೊತೆಗೆ ಅವನ ಬೇಸರಕ್ಕೆ ತಾನೇ ಕಾರಣ ಎಂದು ನಂಬುತ್ತಿರುವವನಿಗೆ, ತನ್ನ ಮೇಲೂ ಸೇಡು ತೀರಿಸಿಕೊಳ್ಳಲು ಮುಂದಾಗುವುದಿಲ್ಲವೆನ್ನುವುದಕ್ಕೆ ಖಾತರಿಯೇನಿದೆ. ಅವನ ಬಗ್ಗೆ ಇಷ್ಟು ನೀಚವಾಗಿ ಆಲೋಚಿಸುವುದು ಸರಿಯಲ್ಲವೆನಿಸಿದರೂ ಯಾವುದೋ ಅವ್ಯಕ್ತ ಭಯ ಅವನನ್ನು ಕಾಡುತ್ತಿತ್ತು. ಆದರೂ ಅಂತರಾಳದಲ್ಲಿ ಸಲೀಂನನ್ನು ಅತಿಯಾಗಿ ಪ್ರೀತಿಸುತ್ತಿದ್ದ. ತನ್ನ ಭವಿಷ್ಯ ಅವನ ಮೇಲೆ ನಿಂತಿದೆ ಎನ್ನುವ ಅರಿವೂ ಇತ್ತು. ಆದರೂ ಯಾಕೋ ತಾನಾಗಿ, ಮಗನನ್ನು ಕರೆದು ಮಾತನಾಡಿಸಲು ಸಂಕೋಚವೆನಿಸುತ್ತಿತ್ತು. ಅಕ್ಬರನ ಮನಃಸ್ಥಿತಿ ಏನೆಂಬುದು ಇಬ್ಬರು ಬೇಗಂರಿಗೂ ತಿಳಿಯುತ್ತಿತ್ತು. ತಾವು ಸಾಮಾನ್ಯ ಹೆಂಗಸರು ಜನಾನಾ ಜಗತ್ತಿನ ಆಚೆಗೆ ಏನನ್ನೂ ತಿಳಿಯದವರಾಗಿದ್ದರೂ ಸ್ವಂತ ಕುಟುಂಬದ ಸದಸ್ಯರನ್ನು ಅರ್ಥಮಾಡಿಕೊಳ್ಳುವುದು ಅಷ್ಟೇನೂ ಕಷ್ಟವೆನಿಸಲಿಲ್ಲ. ಅವರ ಕೈಯಲ್ಲಿ ಈಗ ಆಗಬಹುದಾದ ಕೆಲಸವೆಂದರೆ ತಂದೆಮಗನ ನಡುವೆ ರಾಜಿ ಮಾಡಿಸುವುದು. ಅದು ಸುಲಭವೇ? ಅಲ್ಲದೆ ಸಲೀಮಾ ಸುಲ್ತಾನಾ ಬೇಗಂ, ಈ ಮೊದಲೂ ಸಲೀಂನೊಂದಿಗೆ ಮಾತಾಡಿ ಎಂತೆಂಥ ಸಮಸ್ಯೆಗಳು ಬರಬಹುದೆಂಬುದನ್ನು ವಿವರಿಸಿ ಸಾಮ್ರಾಜ್ಯದ ಭದ್ರತೆಯ ಜವಾಬ್ದಾರಿ ಎಷ್ಟು

ದೊಡ್ಡದೆಂಬುದನ್ನು ವಿವರಿಸಿ ತಿಳಿಸಿದ್ದಾಳೆ. ಇದೊಂದೇ ದಾರಿ ಎಂಬುದನ್ನು ಇಬ್ಬರೂ ಅರ್ಥಮಾಡಿಕೊಂಡು ಆ ಕೆಲಸಕ್ಕೆ ಮುಂದಾದರು.

ಅಕ್ಬರನ ಆರೋಗ್ಯ ದಿನೇದಿನೇ ಕುಸಿಯುತ್ತಿತ್ತು. ನೋಡಿದರೇನೆ ಭಯವಾಗುತ್ತಿತ್ತು. ಯಾವ ಕ್ಷಣದಲ್ಲಾದರೂ ಸಾವು ಅಪ್ಪಳಿಸಬಹುದು ಎಂಬುದು ನೋಡಿದವರೆಲ್ಲರಿಗೂ ಅನಿಸುತ್ತಿತ್ತು. ಅಕ್ಬರನಿಗೂ ತನ್ನ ಸಾವು ಹತ್ತಿರದಲ್ಲಿದೆ ಎಂದು ಕ್ಷಣಕ್ಷಣವೂ ಅನಿಸುತ್ತಿತ್ತು. ಮನಸ್ಸಿನಲ್ಲಿಯೇ ಹೊಯ್ದಾಡುತ್ತಿದ್ದ. ಸಲೀಂನನ್ನು ಬರಹೇಳಲು ಸ್ವಾಭಿಮಾನ ಅಡ್ಡಬರುತ್ತಿತ್ತು. ಆದರೆ ಒಳಗೊಳಗೇ ಅವನು ಬರುವಂತಾಗಲಿ ಎಂದು ಅಲ್ಲಾಹ್‌ನನ್ನು ಪ್ರಾರ್ಥಿಸುತ್ತಿದ್ದ. ಅವನ ಪ್ರಾರ್ಥನೆ ಫಲಿಸಿತ್ತು. ಅಲಹಾಬಾದಿನಲ್ಲಿದ್ದ ಸಲೀಂ ಪಾದಶಾಹ್ ಬೇಗಂ, ರುಖೈಯ್ಯಾ ಬೇಗಂರ ಸಂದೇಶದಂತೆ ಕೂಡಲೆ ಆಗ್ರಾಗೆ ಬಂದ. ಖುತುಬುದ್ದೀನ್ ಕೋಕಾ, ಮಹಬ್ಬತ್ ಖಾನರಿಗೆ ದಿಢೀರನೆ ಪ್ರತ್ಯಕ್ಷನಾದ ಸಲೀಂನನ್ನು ನೋಡಿ ದಿಗ್ಭ್ರಾಂತಿಯುಂಟಾಯಿತು. ಬಂದವನೇ ಯಾರನ್ನೂ ಮಾತನಾಡಿಸದೇ ನೇರವಾಗಿ, ದಿವಾನ–ಇ–ಆಮ್ ಪ್ರವೇಶಿಸಿ, ಸಿಂಹಾಸನದ ಮೇಲೆ ತೀರಾ ತೀರಾ ಬಡಕಲಾದ, ಬಿಳುಚಿಕೊಂಡಿದ್ದ ಮುಖದ ಮತ್ತು ತೀರಾ ತೀರಾ ವಯಸ್ಸಾದ ವ್ಯಕ್ತಿಯಂತೆ ಕಾಣುತ್ತಿದ್ದ ತಂದೆಯನ್ನು ನೋಡಿ ಗಾಬರಿಯಾದ. ನಿನ್ನೆ ಮೊನ್ನೆಯವರೆಗೂ ಗಟ್ಟಿಮುಟ್ಟಾಗಿ ಉತ್ಸಾಹಿ ತರುಣನಂತೆ ಕಾಣುತ್ತಿದ್ದ ತಂದೆಗೆ ಏನಾಯಿತು ಎಂದು ಯೋಚಿಸುತ್ತಾ ಸ್ತಂಭಿಸಿ ನಿಂತಿದ್ದು ಕುರ್ನಿಶ್ ಮಾಡುವುದನ್ನೂ ಮರೆತಿದ್ದ.

ದಿವಾನ್–ಇ–ಆಮ್‌ನಲ್ಲಿ ಎಲ್ಲ ಸಭಾಸದರಿಗೂ, ಅಧಿಕಾರಿಗಳಿಗೂ ಮತ್ತು ಜನಾನಾದ ಹೆಂಗಸರಿಗೂ ಏನು ನಡೆಯುತ್ತದೆ ಎಂಬುದನ್ನು ನೋಡಲು ಅವಕಾಶವಿತ್ತು. ಸಲೀಂನನ್ನು ನೋಡುತ್ತಿದ್ದಂತೆ ಬರ ಸೆಳೆದು ಬಿಗಿದಪ್ಪಿಕೊಂಡ. ಇಂತಹ ದೃಶ್ಯ ಎಲ್ಲರಿಗೂ ಬಹಳ ಅಪರೂಪವಾಗಿ ಲಭ್ಯವಾಗಿತ್ತು. ಅಕ್ಬರನ ಕಣ್ಣಂಚಿನಲ್ಲಿ ಕಂಬನಿ ತೊಟ್ಟಿಕ್ಕುತ್ತಿತ್ತು. ಇಬ್ಬರ ನಡುವೆಯೂ ಮಾತಿಲ್ಲ. ಆದರೆ ಅಮೂಲ್ಯವಾದ ರತ್ನಗಳಿಂದ ಹುದುಗಿದ್ದ ತನ್ನ ತಲೆಯ ಮೇಲಿನ ಪೇಟ ತೆಗೆದು ಅವನ ತಲೆಮೇಲಿಟ್ಟ, ರತ್ನ ಖಚಿತವಾದ ಖಡ್ಗ, ಚಕ್ರವರ್ತಿಯ ಪೋಷಾಕನ್ನು ಅವನಿಗೆ ನೀಡಿದ. ತುಂಬಿದ ಆಸ್ಥಾನ. ಅಲ್ಲಿ ನೆರೆದಿದ್ದವರೆಲ್ಲರೂ ತಂದೆ ಮಗನ ನಡುವಿನ ನಾಟಕದ ದೃಶ್ಯವನ್ನು ತಬ್ಬಿಬ್ಬಾಗಿಯೂ, ಅಚ್ಚರಿಯಿಂದಲೂ ನೋಡುತ್ತಿದ್ದರು. ಇದೆಲ್ಲ ಏನು ನಡೆಯುತ್ತಿದೆ ಎಂದು ತಮ್ಮೊಳಗೆ ತಾವೇ ಪ್ರಶ್ನಿಸಿಕೊಳ್ಳುತ್ತಿದ್ದರು.

"ಅಬ್ಬು ಇದೆಲ್ಲ ಏನು? ಯಾಕೆ ಹೀಗೆ ಮಾಡುತ್ತಿದ್ದೀರಿ? ನಾನು ನಿಮ್ಮನ್ನು ಸಿಂಹಾಸನಕ್ಕಾಗಿ ಪೀಡಿಸಲಿಲ್ಲ."

"ನೀನು ಪೀಡಿಸಿದೆ ಎಂದು ನಾನು ಹೇಳುತ್ತಿಲ್ಲ. ಮುಂದಿನ ಜವಾಬ್ದಾರಿ ನಿನ್ನದು. ನೀನೇ ಈ ಮೊಘಲ್ ಸಾಮ್ರಾಜ್ಯದ ಉತ್ತರಾಧಿಕಾರಿಯೂ ಹೌದು, ಭವಿಷ್ಯವೂ ಹೌದು. ನಿನ್ನನ್ನು ಹೊರತುಪಡಿಸಿ ಇನ್ಯಾರಿಗೆ ತಾನೇ ಈ ಜವಾಬ್ದಾರಿಯನ್ನು ವಹಿಸಿಕೊಡಲಿ?"

"ಅಬ್ಬು ನೀವಿರುವಾಗ, ನನಗ್ಯಾಕೆ ಈ ಹೊರೆ. ನೀವು ಆದೇಶಿಸಿ, ನಾನು ಮಾಡುತ್ತೇನೆ. ನಾವಿನ್ನೂ ಗೆದ್ದುಕೊಳ್ಳಬೇಕಾದ ಪ್ರದೇಶಗಳಿವೆಯಾದ್ದರಿಂದ, ಸೈನ್ಯಾಚರಣೆಗೆ ಕಳಿಸಿಕೊಡಿ."

"ಅದಕ್ಕೆಲ್ಲ ಈಗ ಸಮಯವಿಲ್ಲ. ನಾನು ಸಾವಿನ ಕ್ಷಣಗಳನ್ನು ಎಣಿಸುತ್ತಿದ್ದೇನೆ. ನನ್ನ

ನಂತರ, ನನ್ನ ಹೆಸರನ್ನು ಮಸುಕುಮಾಡದೆ, ನಿನ್ನ ಶೌರ್ಯ, ಪರಾಕ್ರಮ, ನೀತಿನ್ಯಾಯಗಳಿಂದ ಸಾಮ್ರಾಜ್ಯವನ್ನು ಆಳು. ಸುಭಿಕ್ಷವಾಗಿ ಇರಿಸು. ಪ್ರಜೆಗಳಿಗೆ ಯಾವ ರೀತಿಯಲ್ಲೂ ಅನ್ಯಾಯವಾಗದಂತೆ ನೋಡಿಕೋ. ಕೈ ತಪ್ಪಿದ ಹುಡುಗಿಯ ನೆನಪಿನಿಂದ ನಿನ್ನ ಕೆಲಸಕಾರ್ಯಗಳನ್ನು ನಿರ್ಲಕ್ಷಿಸಬೇಡ."

"ಅಬ್ಬು ನೀವು ಹೇಳಿದ್ದೆಲ್ಲವನ್ನೂ ತಪ್ಪದೆ ಪಾಲಿಸುತ್ತೇವೆ. ನಿಮ್ಮ ಆರೋಗ್ಯ ನೋಡಿಕೊಳ್ಳಿ. ನನಗಿನ್ನು ಸೇನಾ ಕಾರ್ಯಾಚರಣೆಗೆ ಮೇವಾಡದ ಕಡೆಗೆ ಹೊರಡಬೇಕಿದೆ. ಅಪ್ಪಣೆ ಕೊಡಿ ಎಂದು ತನ್ನ ತಲೆಮೇಲಿನ ಪೇಟವನ್ನು ತೆಗೆದು ಮತ್ತೆ ತಂದೆಯ ತಲೆ ಮೇಲೆ ಇರಿಸಿದ."

ರುಖೈಯ್ಯಾ ಸಲೀಮಾರಿಗೆ ಅವನು ಇಲ್ಲಿಂದ ಹೋಗುವುದು ಸರಿಯೆನಿಸಲಿಲ್ಲ. ಒಂದು ವೇಳೆ ಅಕ್ಬರ್ ಕಣ್ಣು ಮುಚ್ಚಿದರೆ, ಮತ್ತೆ ಇಲ್ಲಿಗೆ ಬರುವುದು ಬಹಳ ದೂರವಾದ್ದರಿಂದ ಬರಲು ಸಾಧ್ಯವಾಗುವುದಿಲ್ಲ ಎಂಬ ಕಾರಣಕ್ಕಾಗಿ ಇಲ್ಲಿಯೇ ಉಳಿಯಲು ಒತ್ತಾಯಿಸಿದರು. ಅಲ್ಲದೆ ಸಲೀಂನ ಸ್ನೇಹಿತರೂ ಕೂಡಾ ಅಕ್ಬರನ ಸಾವಿನ ಕ್ಷಣದಲ್ಲಿಯೇ ಸಿಂಹಾಸನಕ್ಕಾಗಿ ಮೇಲಾಟ ಶುರುಮಾಡಬಹುದು, ಈಗಾಗಲೇ ಬೆನ್ನ ಹಿಂದೆ ಸಾಕಷ್ಟು ಷಡ್ಯಂತ್ರಗಳು ನಡೆಯುತ್ತಿರುವಾಗ ಸಲೀಂ ಇಲ್ಲಿ ಇಲ್ಲದೆ ಹೋದಲ್ಲಿ ಉತ್ತರಾಧಿಕಾರಿಯ ಅನುಪಸ್ಥಿತಿಯನ್ನು ದುರ್ಬಳಕೆ ಮಾಡಿಕೊಂಡು ಆಕ್ರಮಣ, ಅತಿ ಕ್ರಮಣಗಳಿಂದ, ಯಾರದೋ ಪಾಲಾಗಬಹುದು ಎಂದು ಬುದ್ಧಿ ಹೇಳಿ, ಸಲೀಂನನ್ನು ಉಳಿದುಕೊಳ್ಳಲು ಒತ್ತಾಯಿಸಿದರು. ಅಕ್ಬರ್ ಸತ್ತರೆ ನಿಜವಾಗಿಯೂ ಸಿಂಹಾಸನ ಯಾರಿಗೆ ಹೋಗುವುದು ಎನ್ನುವುದು ಎಲ್ಲರ ಪ್ರಶ್ನೆಯಾಗಿತ್ತು. ಸಲೀಂನ ಮಗ ಖುಸ್ರೋನ ಪರವಾಗಿ ಒಂದು ಬಣ ಪ್ರಯತ್ನಿಸುತ್ತಿದ್ದರೆ, ಮತ್ತೊಂದು ಬಣ ಸಲೀಂನ ಪರವಾಗಿ ಇತ್ತು. ಮುಖಾಮುಖಿ ಘರ್ಷಣೆಯೂ ಎದುರಾಯಿತು. ಸಲೀಂನನ್ನು ಎದುರಿಸಲು ಖುಸ್ರೋಗೆ ಸಾಧ್ಯವಾಗದೆ ಸಮರ ಕೈದಿಯಾಗಿ ಸೆರೆಸಿಕ್ಕು, ಕಣ್ಣುಗಳನ್ನು ಕಳೆದುಕೊಂಡ.

ಸೇವಕರು, ಸಲೀಂ ಇದ್ದಲ್ಲಿಗೆ ಬಂದು ಬಾದಶಾಹರ ಸ್ಥಿತಿ ತೀರಾ ಗಂಭೀರ ವಾಗಿರುವುದನ್ನು ತಿಳಿಸಿದರು. ಕೂಡಲೇ ಸಲೀಂ ಅಕ್ಬರ್ ಬಾದಶಾಹರಿದ್ದ ಕೊಠಡಿಯನ್ನು ಪ್ರವೇಶಿಸಿದ. ಸೇವಕರು, ಕೆಲ ಆಸ್ಥಾನಿಕರು ಸಾಲುಗಟ್ಟಿ ನಿಂತಿದ್ದರು. ಒಳಗೆ ಪಾದಶಾಹ್ ಬೇಗಂ ರುಖೈಯ್ಯಾ, ಸಲೀಮಾ ಸುಲ್ತಾನ್ ಬೇಗಂ ಇಬ್ಬರೂ ದುಃಖದ ಮಡುವಿನಲ್ಲಿ ಮುಳುಗಿದ್ದಂತೆ ಕಂಡರು. ಬಾದಶಾಹ್ ಅರೆಪ್ರಜ್ಞಾವಸ್ಥೆಯಲ್ಲಿ ಇದ್ದರು. ಏನೇನೋ ಬಡಬಡಿಸುತ್ತಿದ್ದರು. ಆಗೊಮ್ಮೆ ಈಗೊಮ್ಮೆ ಸಲೀಂನ ಹೆಸರು ಅರಿವಿಲ್ಲದೆಯೇ ಹೊಮ್ಮುತ್ತಿತ್ತು.

"ಅಬ್ಬು, ಅಬ್ಬು, ನಾನು ಸಲೀಂ.....ನಿಮ್ಮ ಮಗ, ಬಂದಿದ್ದೀನಿ. ನೋಡಿ ಮಾತಾಡಿ. ನಿಮಗೇನೂ ಆಗುವುದಿಲ್ಲ. ನಿಮ್ಮ ಮಾತನ್ನು ಮೀರುವುದಿಲ್ಲ" ಎಂದು ಬಿಕ್ಕಿಬಿಕ್ಕಿ ಅಳುತ್ತಾ ಹೇಳಿದ. ಅಕ್ಬರ್ ಮಾತಾಡಲಿಲ್ಲ. ಸುಮ್ಮನೆ ಧಾರಾಕಾರವಾಗಿ ಕಂಬನಿ ಹರಿಯುತ್ತಿತ್ತು. ಸನ್ನೆಯಿಂದ ಏನನ್ನೊ ಆದೇಶಿಸುತ್ತಿದ್ದ. ಇಬ್ಬರು ಬೇಗಂರಿಗೆ ಅರ್ಥವಾಯಿತು. ಬಾದಶಾಹರ ವಸ್ತ್ರಗಳನ್ನು, ಪೇಟವನ್ನು ಸೇವಕರಿಗೆ ತರಲು ಹೇಳಿದರು. ನಡುಗುವ ಕೈಗಳಿಂದ, ಪೇಟವನ್ನು ಹಿಡಿದುಕೊಂಡು ಅಳುತ್ತಾ ಕುಳಿತಿದ್ದ ಸಲೀಂನ ತಲೆ ಮೇಲೆ ಇರಿಸಿದ. ಅಷ್ಟೇ! ನಿಧಾನವಾಗಿದ್ದ ಉಸಿರಾಟ ನಿಂತೇ ಹೋಯಿತು.

ಅಕ್ಬರ್ ಬಾದಶಾಹ್, ಮೊಘಲ್ ಚಕ್ರವರ್ತಿ, ಮೊಘಲ್ ಸಾಮ್ರಾಜ್ಯದ ಆಗಸದಲ್ಲಿ ಅಸ್ತಂಗತನಾದ. ಇಡೀ ಸಾಮ್ರಾಜ್ಯದಲ್ಲಿ ಸೂತಕದ ವಾತಾವರಣ ಕವಿಯಿತು. ಪ್ರಜೆಗಳು ತಮ್ಮ ಬಾದಶಾಹರಿಗಾಗಿ ಅಶ್ರುತರ್ಪಣ ನೀಡಿದರು.

## ದಾಂಪತ್ಯ

ಆಗ್ರಾದಲ್ಲಿ ಬಹಳಷ್ಟು ಘಟನೆಗಳು ಘಟಿಸಿದವು. ಮೆಹರುನ್ನೀಸಾ ಮಾತ್ರ, ಭಗ್ನ ಪ್ರಣಯದ ಚೂರಿ ಇರಿತಗಳನ್ನು ನೋವಿನ ನಂಜನ್ನು ನುಂಗಿಕೊಂಡು ಅಲಿಖುಲಿಯೊಂದಿಗೆ ಬದುಕನ್ನು ಆರಂಭಿಸಿದಳು. ಅಲಿಖುಲಿಗೆ ತನ್ನ ಹೆಂಡತಿಯ ಬಗ್ಗೆ ಅಪಾರವಾದ ಹೆಮ್ಮೆ ಮತ್ತು ಪ್ರೀತಿ. ಅವಳ ಸೌಂದರ್ಯಕ್ಕೆ ದಾಸನಾಗಿದ್ದ. ಅವನೂ ಕೂಡಾ ಸುಂದರ ಪುರುಷನೇ. ಚೆಲುವಿನ ಜೊತೆಗೆ ಶೌರ್ಯ ಸಾಹಸಗಳು ಅವನ ವ್ಯಕ್ತಿತ್ವಕ್ಕೆ ಮತ್ತಷ್ಟು ಘನತೆ, ಗಾಂಭೀರ್ಯವನ್ನು ತಂದುಕೊಟ್ಟಿದ್ದವು. ಪ್ರತಿ ಕ್ಷಣವೂ ಹೆಂಡತಿಯನ್ನು ರಂಜಿಸಲು ಸುಖವಾಗಿಡಲು ಪ್ರಯತ್ನಿಸುತ್ತಿದ್ದ. ಹೆಂಡತಿಯ ಜಾಣ್ಮೆ, ವಿವೇಕಗಳ ಜೊತೆಗೆ ಗಂಡಸರಿಗೆ ಮೀಸಲಿದ್ದ ಸಮರಕಲೆ, ಕುದುರೆ ಸವಾರಿ ಬೇಟೆಯಾಟಗಳಲ್ಲಿ ಅಪಾರ ಪರಿಣತಿಯನ್ನು ಹೊಂದಿದ್ದಳು.

ಅವಳಿಂದಾಗಿ ಅರಮನೆಯಂತಹ ವಿಶಾಲವಾದ, ಹಲವು ಕೋಣೆಗಳಿದ್ದ ಮನೆಯನ್ನು ನಿರ್ಮಿಸಿದ. ಮನೆಗೆ ಬೇಕಾದ ಅಲಂಕರಣ ವಸ್ತುಗಳನ್ನೆಲ್ಲಾ ತಂದು ಹೇರಿದ. ಮೆಹರುನ್ನೀಸಾ ಮನಸ್ಸಿನಲ್ಲಿ ಏನೇ ಅಸಮಾಧಾನವಿದ್ದರೂ ತನಗೀಗ ದೊರೆತ ಬದುಕಿನೊಂದಿಗೆ ರಾಜಿ ಮಾಡಿಕೊಂಡಿದ್ದಳು. ತನ್ನೊಳಗೆ ತಾನೇ ಸಮಾಧಾನ ಮಾಡಿಕೊಳ್ಳಲು ಪ್ರಯತ್ನಿಸಿದಳು. ಇನ್ನು ಕಳೆದುಹೋದ ಕ್ಷಣಗಳನ್ನು ಮರೆತು, ತನ್ನ ಮುಂದಿನ ದೀರ್ಘಕಾಲದ ಬದುಕನ್ನು ಅಲ್ಲಾನ ಆದೇಶವೆಂದು ಭಾವಿಸಿ ಅದಕ್ಕೆ ಹೊಂದಿಸಿಕೊಳ್ಳಬೇಕು ಎಂದು ತೀರ್ಮಾನಿಸಿದಳು.

ಅಲಿಖುಲಿ ತನ್ನನ್ನು ಅಪಾರವಾಗಿ ಪ್ರೀತಿಸುತ್ತಿದ್ದಾನೆ. ನನ್ನಿಂದಾಗಿ ನೋವು ಅನುಭವಿಸುವುದು ಸರಿಯಲ್ಲ, ಅವನನ್ನು ಸುಖವಾಗಿ ಇಡಬೇಕಾದ್ದು ನನ್ನ ಧರ್ಮ. ಅವನ ಕಡೆಯ ಬಂಧುಗಳು ಕೂಡಾ ಎಂತಹ ಪ್ರೀತಿಯ ಧಾರೆ ಎರೆಯುತ್ತಿದ್ದಾರೆ. ಗಂಡನನ್ನು ಸಂತೃಪ್ತವಾಗಿರಿಸಲು ಅತ್ಯಂತ ಪ್ರಮುಖವಾದ ವಿಧಾನವೆಂದರೆ, ಊಟೋಪಚಾರಗಳು. ಪುರುಷನನ್ನು ಹೊಟ್ಟೆಯ ಮೂಲಕ ಗೆಲ್ಲಬೇಕೆನ್ನುವ ಗಾದೆಯೇ ಇದೆಯಲ್ಲವೆ? ಮನೆಯನ್ನೆಲ್ಲ ಓರಣಗೊಳಿಸಿದಳು. ಯಾವ ಯಾವ ಕೋಣೆಯಲ್ಲಿ ಏನೇನು ಇರಬೇಕೋ ಅದೆಲ್ಲವನ್ನೂ ಅಣಿಗೊಳಿಸಿದಳು. ರತ್ನಗಂಬಳಿಗಳು, ಸೋಫಾಗಳು, ಮೇಜುಗಳು, ಹೂದಾನಿಗಳು, ಸುಂದರವಾದ ಕಲಾತ್ಮಕವಾದ ಮೂರ್ತಿಗಳು, ಪರದೆಗಳು, ಭಿತ್ತಿ ಚಿತ್ರಗಳು ಏನೆಲ್ಲ ಬೇಕೋ ಅದೆಲ್ಲವನ್ನೂ ಅಲಿ ತಂದು ತಂದು ತುಂಬಿದ್ದ. ಸೇವಕ, ಸೇವಕಿಯರ ಸಹಾಯದಿಂದ ಎಲ್ಲವನ್ನೂ ಅಚ್ಚುಕಟ್ಟಾಗಿ, ವ್ಯವಸ್ಥಿತವಾಗಿ ಅವುಗಳು ಇರಬೇಕಾದ ಜಾಗಗಳಲ್ಲಿ ಇರಿಸಿ, ಮನೆಯನ್ನು ಮಾಯಾ ಲೋಕವಾಗಿ ಪರಿವರ್ತಿಸಿದ್ದಳು. ಮೆಹರುನ್ನೀಸಾಳ ಕಲಾಭಿರುಚಿ ಎಲ್ಲೆಲ್ಲೂ ಇಣುಕುತ್ತಿತ್ತು. ಅಲಿಖುಲಿ ಅದೆಲ್ಲವನ್ನೂ ನೋಡಿ ದಂಗಾಗಿ ಬಿಟ್ಟ. ಅವನೊಬ್ಬ ಯೋಧ, ಸ್ವಲ್ಪ ಒರಟುತನವೂ

ಇತ್ತು. ಇಂತಹ ವಿಷಯಗಳಲ್ಲಿ ಅಷ್ಟೊಂದು ಆಸಕ್ತಿ ಇರಿಸಿಕೊಂಡವನಲ್ಲದಿದ್ದರೂ ತನ್ನ ಪ್ರೀತಿಯ ಮಡದಿಗಾಗಿ ಕಲಾಪ್ರಜ್ಞೆ, ಸೌಂದರ್ಯ ಪ್ರಜ್ಞೆ, ಸಂವೇದನಾಶೀಲತೆಗಳನ್ನು ಸಹಜವಾಗಿಯೋ ಪ್ರಯತ್ನಪೂರ್ವಕವಾಗಿಯೋ ಬೆಳೆಸಿಕೊಂಡಿದ್ದ.

ಮೆಹರುನ್ನೀಸಾಳದು ಬಹುಮುಖ ಪ್ರತಿಭೆ, ಕಾವ್ಯ, ಚಿತ್ರಕಲೆ, ಸಂಗೀತ, ನೃತ್ಯ, ಅಧ್ಯಾತ್ಮ, ಎಲ್ಲ ಧರ್ಮಗಳ ಬಗ್ಗೆ ತಿಳಿವಳಿಕೆ ಹೀಗೆ ಬಹುಮುಖಿಯಾಗಿ ಹಂಚಿಕೊಂಡಿದ್ದ ಪ್ರತಿಭೆ, ಪಾಕಶಾಸ್ತ್ರ ಪ್ರಾವೀಣ್ಯತೆಯನ್ನೂ ದಕ್ಕಿಸಿಕೊಂಡಿದ್ದಳು. ಎಲ್ಲ ಮುಸ್ಲಿಂ ಸಮುದಾಯದ ಹೆಣ್ಣು ಮಕ್ಕಳಂತಿರದೆ ಹೆಣ್ಣುಮಕ್ಕಳ ದೈನ್ಯ ಸ್ಥಿತಿಗಾಗಿ ಮರುಗುವಂತಹ, ಅವರಲ್ಲಿ ಬದಲಾವಣೆ ಬರಬೇಕೆಂದು ತುಡಿಯುವ ಮನಸ್ಸಿನವಳಾಗಿದ್ದಳು.

ಗಂಡನಿಗೆ ಬೇಕಾದ ಇರಾನಿ ಶೈಲಿಯ ಸಿಹಿತಿಂಡಿಗಳು, ಬಿರಿಯಾನಿಗಳು, ಹಲ್ವಾಗಳು–ಎಲ್ಲವನ್ನೂ ಮಾಡಿ. ತಿನಿಸಿ ಸಂತೃಪ್ತಗೊಳಿಸುತ್ತಿದ್ದಳು.

ಅಲಿಖುಲಿ ದಿನೇ ದಿನೇ ವರ್ಚಸ್ವಿ ವ್ಯಕ್ತಿಯಾಗಿ ರೂಪುಗೊಳ್ಳುತ್ತಿದ್ದ. ಪರ್ಷಿಯಾದ ವಶದಲ್ಲಿದ್ದ ಖಾಂದಾಹಾರವನ್ನು ಗೆಲ್ಲುವಲ್ಲಿ, ಅಲಿಖುಲಿಯ ಶೌರ್ಯ ಸಾಹಸಗಳು ಸಹಕರಿಸಿದ್ದರಿಂದ ಅಕ್ಬರ್ ಬಾದಶಾಹರ ಮೆಚ್ಚಿಗೆಯ ಸಂಕೇತವಾಗಿ, ಮುಘಲ್ ಸೈನ್ಯದಲ್ಲಿ ಮನಸಬ್‌ಅನ್ನು ನೀಡಲಾಗಿತ್ತು. ನಂತರ ಅಲಿಖುಲಿ ಸಲೀಂನ ಸೇವೆಗೆ ನಿಯುಕ್ತನಾದ. ಸಲೀಂನ ಸೈನ್ಯಾಚರಣೆಯಲ್ಲಿ ಅಲಿಖುಲಿಯ ಪಾತ್ರ ಬಹಳ ಮಹತ್ವದ್ದಾಗಿರುತ್ತಿತ್ತು. ಒಮ್ಮೆ ಮೇವಾಡದ ವಿರುದ್ಧ ಯುದ್ಧಕ್ಕೆ ಅಲಿಖುಲಿಯೂ ಸಲೀಂನ ಜೊತೆ ಹೊರಟ. ಈ ಸಮರಯಾತ್ರೆಯ ಸಂದರ್ಭದಲ್ಲಿ ಹುಲಿಯೊಂದು ಆಕಸ್ಮಿಕವಾಗಿ ಎದುರಾಯಿತು. ಸಲೀಂನ ಮೇಲೆ ಎರಗುವಷ್ಟರಲ್ಲಿ ಅಲಿಖುಲಿ ಸಮಯಸ್ಫೂರ್ತಿಯಿಂದ ಸಲೀಂಗೆ ಅಡ್ಡನಿಂತು ಏಕಾಂಗಿಯಾಗಿ ಅದರೊಂದಿಗೆ ಹೋರಾಡಿ ಅವನ ಪ್ರಾಣ ಉಳಿಸಿದ್ದಕ್ಕಾಗಿ, ಸಲೀಂ ಅವನಿಗೆ ಮೆಚ್ಚುಗೆಯ ರೂಪದಲ್ಲಿ ಷೇರ್–ಇ–ಆಫ್ಘನ್ ಎನ್ನುವ ಬಿರುದನ್ನು ಕೊಟ್ಟಿದ್ದ.

ಅಲಿಖುಲಿ ಸಲೀಂಗೆ ನಿಷ್ಠಾವಂತನಾಗಿಯೇ ನಡೆದುಕೊಂಡ. ಆದರೆ, ಸಲೀಂ ಸಾಮ್ರಾಜ್ಯದಾಹದಿಂದ, ಅತ್ಯಂತ ಧರ್ಮನಿಷ್ಠ, ಉದಾರಿ, ಸಾಹಸಿ, ಅನನ್ಯ ವ್ಯಕ್ತಿತ್ವವನ್ನು ಹೊಂದಿದ್ದ ತಂದೆ ಅಕ್ಬರ್‌ನ ವಿರುದ್ಧವೇ ದಂಗೆ ಎದ್ದದ್ದನ್ನು ನೋಡಿ ಬೇಸರಗೊಂಡು, ಮತ್ತೆ ಅಕ್ಬರನ ಆಶ್ರಯಕ್ಕೆ ಮರಳಿದ್ದ.

ಈಗ ಅಕ್ಬರ್‌ನ ಸಾವಿನಿಂದಾಗಿ, ಮತ್ತೆ ಅಲಿಖುಲಿ ಸಲೀಂನ ಸೇವೆಗೆ ಹಿಂತಿರುಗಿದ. ಸಿಂಹಾಸನಕ್ಕಾಗಿ ಸಲೀಂ ಮತ್ತು ಮಗ ಖುಸ್ರೊ–ಇಬ್ಬರೂ ಸೆಣಸಾಡುತ್ತಿದ್ದಾಗ, ಅಲಿ ಖುಸ್ರೋನ ಪರವಾಗಿ ನಿಂತು, ಅವನ ವಿದ್ರೋಹದಲ್ಲಿ ಸಹಕರಿಸಿ, ಸಲೀಂನ ದೃಷ್ಟಿಯಲ್ಲಿ ಅಪರಾಧಿಯಾಗಿದ್ದ.

ಸಲೀಂ – ತಂದೆಯ ಸಿಂಹಾಸನಕ್ಕೆ ಅಧಿಕಾರಿಯಾಗಿದ್ದು ವಿಧಿಬದ್ಧವಾಗಿ, ಸಿಂಹಾಸನಾರೋಹಣ ಮಾಡಿ, **'ನೂರುದ್ದೀನ್ ಮಹಮ್ಮದ್ ಜಹಾಂಗೀರ್ ಪಾದಶಾಹ್ ಘಾಜಿ'** ಎಂದು ಹೊಸದಾಗಿ ನಾಮಕರಣಗೊಂಡ. ಮೊಘಲ್ ಸಾಮ್ರಾಜ್ಯದ ಬಾದಶಾಹನಾಗಿ ಅಧಿಕಾರ ಸ್ವೀಕರಿಸಿದ ಮೇಲೆ, ತನ್ನ ವಿರುದ್ಧ ಬಂಡೆದ್ದವರನ್ನೆಲ್ಲ ವಿಚಾರಣೆಗೆ ಒಳಪಡಿಸಬೇಕಾಗಿತ್ತು. ಆದರೆ ಸಿಂಹಾಸನಾರೋಹಣದ ಶುಭ

ಸಂದರ್ಭದಲ್ಲಿ ಕ್ರೂರವಾದ ತೀರ್ಪನ್ನು ನೀಡುವುದು ಸರಿಯಲ್ಲವೆನಿಸಿತು. ಅದಕ್ಕಾಗಿ ಒಬ್ಬೊಬ್ಬರನ್ನೇ ಕರೆದು ಅವರವರು ಮಾಡಿದ ಕೆಲಸಗಳಿಗೆ ಮತ್ತು ಸೇವೆಗಳಿಗೆ ಪುರಸ್ಕಾರ ಮತ್ತು ಸರಳಶಿಕ್ಷೆ, ಕ್ಷಮೆಗಳನ್ನು ನೀಡಿದ. ಎಲ್ಲರಿಗಿಂತ ಮುಖ್ಯವಾಗಿ ಮೆಹರುನ್ನೀಸಾಳ ತಂದೆ ಘಿಯಾಸ್ ಬೇಗ್‌ರನ್ನು ಕರೆಸಿದ. ಘಿಯಾಸ್ ಬೇಗ್‌ಗೆ ಒಳಗೊಳಗೇ ಹೆದರಿಕೆ! ತನ್ನ ಮಗಳು ಮತ್ತು ಬಾದಶಾಹರ ಸಂಬಂಧ ಉಂಟಾಗಿದ್ದ ಕೋಲಾಹಲ, ಒಂದೆಡೆಯಾದರೆ, ಅಳಿಯ ಅಲಿಖುಲಿ ರಾಜದ್ರೋಹದ ಕೆಲಸದಲ್ಲಿ ಪಾಲುದಾರನಾಗಿದ್ದ. ಹಾಗಾಗಿ ಆತಂಕದಿಂದಲೇ ಮುಂದೆ ಬಂದು ಕೋರ್ನಿಶ್ ಮಾಡಿದ. ಅದೇ ಸಂದರ್ಭದಲ್ಲಿ, ಒಂದು ವೇಳೆ ತನ್ನ ಮಗಳು ಸಲೀಂನನ್ನು ಮದುವೆಯಾಗಿದ್ದರೆ, ಈಗ ಚಕ್ರವರ್ತಿನಿಯಾಗಿರುತ್ತಿದ್ದಳು. ತನ್ನ ಸ್ಥಾನ ಏನಾಗಿರಬಹುದಾಗಿತ್ತು ಎಂಬುದನ್ನು ಊಹಿಸಿಕೊಂಡಾಗ ರೋಮಾಂಚನವೆನಿಸಿತು. ಎಲ್ಲಾ ಅಲ್ಲಾನ ಆದೇಶದಂತೆ ನಡೆಯುತ್ತಿದೆ. ತನ್ನವರಿಂದಾದ ತಪ್ಪುಗಳಿಗಾಗಿ, ತನಗೆ ಯಾವ ಶಿಕ್ಷೆ ಕಾದಿದೆಯೋ, ಬಾದಶಾಹರು ಏನನ್ನು ಘೋಷಿಸುತ್ತಾರೋ ಎಂಬ ಹಿಂಜರಿಕೆಯಲ್ಲಿ ನಿಂತಿದ್ದ.

"ಮಿರ್ಜಾ ಘಿಯಾಸ್ ಬೇಗ್ ಅವರೇ, ನೀವು ನಮ್ಮ ತಂದೆಯವರ ಆಪ್ತರು, ನಿಷ್ಠಾವಂತರು. ನಿಮ್ಮ ಚಾತುರ್ಯ ಬುದ್ಧಿವಂತಿಕೆ, ಸಲಹೆ ಸೂಚನೆಗಳಿಂದ ಸಾಮ್ರಾಜ್ಯಕ್ಕೆ ಬಹುದೊಡ್ಡ ಸೇವೆಯನ್ನು ಸಲ್ಲಿಸಿದ್ದೀರಿ. ನಮಗೆ ನಿಮ್ಮ ಬಗ್ಗೆ ಅಪಾರವಾದ ಗೌರವವಿದೆ."

"ದಯವಿಟ್ಟು ಹಾಗೆ ಹೇಳಬೇಡಿ ಖಾವಂದ್, ನನ್ನ ಇಂದಿನ ಈ ಸ್ಥಿತಿಗೆ, ಸಮಾಜದಲ್ಲಿ ನಾನು ಗಳಿಸಿರುವ ಗೌರವ, ಪ್ರತಿಷ್ಠೆ, ಸ್ಥಾನಮಾನಗಳಿಗೆ ಕಾರಣ ದಿವಂಗತ ಬಾದಶಾಹರು. ಅವರು ಮಾಡಿದ ಉಪಕಾರಕ್ಕೆ ಹೋಲಿಸಿದರೆ ನಾನು ಮಾಡಿದ ಸೇವೆಗೆ ಏನು ಬೆಲೆ."

"ನೀವಷ್ಟು ದೈನ್ಯರಾಗಿ ಇರಬೇಕಾದ್ದಿಲ್ಲ. ನೀವೊಬ್ಬರೇ ಅಲ್ಲದೆ ನಿಮ್ಮ ಕುಟುಂಬದವರನ್ನೂ ಸಾಮ್ರಾಜ್ಯದ ನೊಗಕ್ಕೆ ಕಟ್ಟಿದ್ದೀರಿ, ಇನ್ನು ಮುಂದೆ ನಿಮ್ಮಂತಹ ಹಿರಿಯರಿಂದ ಸಾಮ್ರಾಜ್ಯಕ್ಕೆ ಮತ್ತೂ ಹೆಚ್ಚಿನ ಸೇವೆಯ ಅಗತ್ಯವಿದೆ. ನಿಮ್ಮ ಮಾರ್ಗದರ್ಶನ ನಮಗೆ ಅಮೂಲ್ಯವಾದದ್ದು. ಕಿರೀಟ ಧಾರಣೆ ಮಾಡಿದ ಈ ಸಂದರ್ಭದಲ್ಲಿ, ನಾವು ಸಂತೋಷದಿಂದ ನಿಮಗೆ ದಿವಾನ್ ಪದವಿಯನ್ನು ಬಹುಕರಿಸುತ್ತಿದ್ದೇವೆ. ಹಣಕಾಸಿನ ದೊಡ್ಡ ಹೊರೆ ನಿಮ್ಮ ಮೇಲೆ ಇರಲಿದೆ. ದಯವಿಟ್ಟು ಇದನ್ನು ಒಪ್ಪಿಕೊಳ್ಳಿ" ಎಂದು ಹೇಳಿ, ಸಾಂಕೇತಿಕವಾಗಿ ಕೆಲವು ಉಡುಗೊರೆಗಳನ್ನು ನೀಡಿದ. ಜೊತೆಗೆ ಇನ್ನು ಮುಂದೆ ಘಿಯಾಸ್ ಬೇಗ್‌ರನ್ನು 'ಇತಿಮಿದಾದ್ದೌಲ' ಎಂದು ಕರೆಯಲಾಗುತ್ತದೆ ಎಂದು ಘೋಷಿಸಿದ.

ನಂತರ, ತಾನು ಇಲ್ಲಿಗೆ ಬಂದಾಗ, ಅಲಹಾಬಾದಿನಲ್ಲಿ ಗವರ್ನರ್ ಆಗಿ ಹಿಂದುಳಿದಿದ್ದ ಮಹಮ್ಮದ್ ಷರೀಫ್‌ನನ್ನು ಕರೆಸಿ, ರಾಜ್ಯದ ಮುಖ್ಯಮಂತ್ರಿಯಾಗಿ ಘೋಷಿಸಿ, ಅಮೀರ್-ಉಲ್-ಉಮ್ರಾ ಎಂದು ನಾಮಕರಣ ಮಾಡಿದ. ನಂತರ ತನಗೆ ನೆರವಾದ ಅನೇಕ ಅಧಿಕಾರಿಗಳನ್ನು ಕರೆದು ಒಬ್ಬೊಬ್ಬರಿಗೂ ಒಂದೊಂದು ರೀತಿಯಲ್ಲಿ ಸನ್ಮಾನಿಸಿದ. ಕೆಲವರಿಗೆ ಮನಸಬ್ ಪದವಿಗಳನ್ನು ಹೆಚ್ಚಿಸಿದ.

ನಂತರ ತನ್ನ ವಿರುದ್ಧದ ಬಂಡುಕೋರರ ಸರದಿ ಬಂದಾಗ ಮೊದಲಿಗೆ ವಿಚಾರಣೆಗೆ ಗುರಿಯಾದದ್ದು ಅಲಿಖುಲಿ. ಅಲಿಖುಲಿ ಸಂಕೋಚದಿಂದಲೇ ಬಂದು ಬಾದಶಾಹ್ ಜಹಾಂಗೀರನಿಗೆ ತಸ್ಲೀಮ್ ಮಾಡಿದ. ಜಹಾಂಗೀರನಿಗೂ ಒಂದು ರೀತಿಯ ಸಂಕೋಚ. ಅಲಿಖುಲಿಯ ಅಪರಾಧವನ್ನು ಯಾವ ರೀತಿಯಿಂದ ಪರಿಗಣಿಸುವುದು. ಯಾವುದು ದೊಡ್ಡದು? ತನ್ನ ಬಾಹುಬಲದಿಂದ, ಅನೇಕ ಯುದ್ಧಗಳಲ್ಲಿ ಭಯಂಕರವಾಗಿ ಹೋರಾಡಿ ಗೆಲುವಿಗೆ ಕಾರಣನಾಗಿದ್ದ. ಜೊತೆಗೆ ತಂದೆಯ ಅಪಾರ ಮೆಚ್ಚುಗೆಗೆ ಪಾತ್ರನಾಗಿದ್ದ, ಸ್ವತಃ ಒಮ್ಮೆ ತನ್ನನ್ನು ಹುಲಿಯ ಜೊತೆ ಹೋರಾಡಿ ಪ್ರಾಣಾಪಾಯದಿಂದ ರಕ್ಷಿಸಿದ್ದ. ಇಷ್ಟೆಲ್ಲದರ ಜೊತೆಗೆ, ತನ್ನ ಬಂಡುಕೋರ ಮಗ ಖುಸ್ರೋನ ಪಕ್ಷ ನಿಂತು ತನಗೆ ದ್ರೋಹ ಮಾಡಿದ್ದ. ಇದೆಲ್ಲವೂ ಜಹಾಂಗೀರನ ಮನಸ್ಸಿನಲ್ಲಿ ಸುಳಿದುಹೋದಾಗ, ವಿದ್ರೋಹಕ್ಕೆ ನೀಡಬಹುದಾಗಿದ್ದ ಮರಣದಂಡನೆಯಂತಹ ಕ್ರೂರ ಶಿಕ್ಷೆಯನ್ನು ವಿಧಿಸುವುದಾದರೂ ಹೇಗೆಂದು ಪ್ರಶ್ನಿಸಿಕೊಂಡ. ಕೂಡಲೇ ಮೆಹರುನ್ನೀಸಾಳ ನೆನಪಾಯಿತು. ಅಲಿಖುಲಿಗೆ ಈ ದಂಡನೆ ವಿಧಿಸಿದರೆ ಸುಲಭವಾಗಿ ಆ ಸುರಸುಂದರಿ ಮೆಹರುನ್ನೀಸಾಳನ್ನು ಮದುವೆಯಾಗಬಹುದು. ಆದರೆ ಅವನ ಉಪಕಾರಗಳು ಮರೆಯುವಂಥದ್ದಲ್ಲ. ನನಗೆ ಪ್ರಾಣ ಕೊಟ್ಟವನಿಗೆ, ಪ್ರಾಣಕೊಡುವುದೇ ಧರ್ಮ ಎಂದು ಆಲೋಚಿಸಿ,

"ಅಲಿಖುಲಿ, ನಿನಗೆ ನಾನೇನು ಶಿಕ್ಷೆ ವಿಧಿಸಬೇಕೋ ನೀನೇ ಹೇಳು. ವಿದ್ರೋಹಿಗಳ ಜೊತೆ ಕೈಜೋಡಿಸಿದೆ. ನನ್ನೊಡನೆ ನೀನು ಕಳೆದ ಆತ್ಮೀಯ ಕ್ಷಣಗಳನ್ನು ಮರೆತು ಬಿಟ್ಟೆ."

"ಬಾದಶಾಹರೇ, ನಾನೇನು ಹೇಳುವುದು. ನಿಮ್ಮ ದೃಷ್ಟಿಯಲ್ಲಿ ಯಾವುದು ನಿಮಗೆ ನ್ಯಾಯವೆಂದು ತೋರುವುದೋ ಅದನ್ನೇ ವಿಧಿಸಿ."

ಜಹಾಂಗೀರ್ ಅವನ ಮಾತುಗಳನ್ನು ಕೇಳಿಸಿಕೊಂಡು ನಕ್ಕ.

"ಅಲಿಖುಲಿ, ಹೆದರಬೇಡ. ನೀನು ಮಾಡಿದ್ದು ವಿದ್ರೋಹವೊಂದೇ ಅಲ್ಲ, ಉಪಕಾರಗಳನ್ನೂ ಮಾಡಿದ್ದಿ. ನಿನ್ನೆಲ್ಲ ತಪ್ಪುಗಳನ್ನು ಮರೆತು ನಿನಗೊಂದು ಉಡುಗೊರೆ ನೀಡಲಿದ್ದೇನೆ. ನಿನಗೆ ಬಂಗಾಳದ ಬರ್ದವಾನನ್ನು ಜಾಗೀರಾಗಿ ಕೊಡುತ್ತಿದ್ದೇನೆ. ನನ್ನ ಪ್ರೀತಿಯ ಉಡುಗೊರೆಯನ್ನು ಸ್ವೀಕರಿಸಿ, ಬರ್ದವಾನಿಗೆ ಹೊರಡುವ ಸಿದ್ಧತೆ ಮಾಡಿಕೋ" ಎಂದದ್ದೇ ಅಲ್ಲಿ ನೆರೆದಿದ್ದವರಲ್ಲಿ ಗುಜುಗುಜು ಪ್ರಾರಂಭವಾಯಿತು. ಜಹಾಂಗೀರನ ಘೋಷಣೆ ಎಲ್ಲರನ್ನೂ ತಬ್ಬಿಬ್ಬುಗೊಳಿಸಿತು. ಇದೇನಿದು ಎಂದುಕೊಂಡರು. ಕೆಲವರು ಜಹಾಂಗೀರನ ಕ್ಷಮಾಗುಣ, ಔದಾರ್ಯಗಳನ್ನು ಮೆಚ್ಚಿ ಶಹಭಾಸ್ ಎಂದುಕೊಂಡರೆ, ಕೆಲವರಿಗೆ ಅಲಿಖುಲಿಯ ಮರಣದಂಡನೆ ತಪ್ಪಿಹೋಯಿತಲ್ಲ ಎಂದು ನಿರಾಶೆಯಾಯಿತು.

ಜಹಾಂಗೀರ್ ಸಭೆಯನ್ನು ಮುಗಿಸಿ, ಸಿಂಹಾಸನದಿಂದ ಎದ್ದು ಹೊರಟ. ಮೆಹರುನ್ನೀಸಾ ಬದುಕಿಗೆ ಹೊಂದಿಕೊಂಡು ಬಿಟ್ಟಿದ್ದಳು. ಅಲಿಖುಲಿಯ ಅಪರಾಧವನ್ನು ಜಹಾಂಗೀರ್ ಮನ್ನಿಸಿದ್ದೇ ಅಲ್ಲದೆ, ಗವರ್ನರ್ ಪದವಿಯನ್ನೂ ನೀಡಿದ್ದ. ಹೀಗೆ ಮಾಡಲು ಕಾರಣ? ತನ್ನವರ ಅಪರಾಧಗಳನ್ನು ಕಡೆಗಣಿಸಿ, ಅವರಿಗೆ ಉಡುಗೊರೆಯಾಗಿ

ಪದೋನ್ನತಿಗಳನ್ನು ಕೊಡುವುದರ ಹಿಂದೆ ತನ್ನ ನೆನಪು ಇರಬಹುದೇ? ಇನ್ನೂ ತನ್ನನ್ನು ಪ್ರೀತಿಸುತ್ತಿದ್ದಾನೆಯೇ? ಎಂದು ಯೋಚಿಸಿದಳು. ಮರುಕ್ಷಣದಲ್ಲಿ ಎಚ್ಚೆತ್ತುಕೊಂಡು ಛೆ! ಛೆ! ಅವನೆಲ್ಲಿ ನಾನೆಲ್ಲಿ? ಇನ್ನು ಪ್ರೀತಿಸಿದರೂ ಅವನ ಚಕ್ರವರ್ತಿ ಪಟ್ಟ ದೊಡ್ಡ ಗೋಡೆಯಾಗಿದೆ. ಆಗ ವಯಸ್ಸು, ಪ್ರೀತಿಯ ಹುಕಿ ಇತ್ತು. ಹೆಣ್ಣು, ಹೆಂಡಗಳಲ್ಲದೆ ಬೇರೇನು ಕೆಲಸವಿತ್ತು? ಮದುವೆಯೊಂದಾಗಿ ಬಿಟ್ಟಿದ್ದರೆ, ಇಂದು ನಾನು ಬಾದಶಾಹ್ ಬೇಗಂ ಆಗಬಹುದಾಗಿತ್ತು. ಜಗತ್‌ಗೋಸಿನಿ ನನ್ನ ಸ್ಪರ್ಧಿಯೇ ಆಗಿದ್ದರೂ ಸಲೀಂನ ಆಯ್ಕೆಯಲ್ಲಿ ನಾನಿರುತ್ತಿದ್ದೆ. ಹೀಗೆಲ್ಲ ಯೋಚಿಸುತ್ತಿದ್ದಳು.

* * *

ಮದುವೆಯಾಗಿ ನಾಲ್ಕು ವರ್ಷವಾಗಿತ್ತು. ಆದರೂ ಮೆಹರುನ್ನೀಸಾಗೆ ಒಂದು ಮಗುವನ್ನು ಕೊಡಲಾಗಿರಲಿಲ್ಲ. ಅಲಿಖುಲಿ ಒಬ್ಬ ಉತ್ತರಾಧಿಕಾರಿಯಾಗಿ ಮಗ ಹುಟ್ಟಬೇಕೆಂದು ಹಂಬಲಿಸುತ್ತಿದ್ದ. ಆದರೆ ಮೆಹರುನ್ನೀಸಾ ಪ್ರತಿ ಸಾರಿಯೂ ಗರ್ಭಧರಿಸಿ ಒಂದೆರಡು ತಿಂಗಳಲ್ಲಿಯೆ ಗರ್ಭಪಾತವಾಗಿ ಬಿಡುತ್ತಿತ್ತು, ಬರಬರುತ್ತಿದ್ದಂತೆ ಅಲಿಖುಲಿ ಮತ್ತು ಮೆಹರುನ್ನೀಸಾಳ ದಾಂಪತ್ಯದಲ್ಲಿ ಅನ್ಯೋನ್ಯತೆ ಸ್ವಲ್ಪ ಕಡಿಮೆ ಎನ್ನಿಸುತ್ತಿತ್ತು. ಅಲಿಖುಲಿಯೂ ಖಾನ್-ಇ-ಖಾನನ್ ಜೊತೆ ಸೈನಿಕ ಕಾರ್ಯಾಚರಣೆಗಾಗಿ ತಿಂಗಳುಗಟ್ಟಲೆ ಮನೆಯಿಂದ ದೂರವಿರುತ್ತಿದ್ದ. ಒಂದು ವೇಳೆ ಹಿಂತಿರುಗಿದರೂ ತನ್ನ ಕೆಲಸಗಳಲ್ಲಷ್ಟೇ ಮಗ್ನನಾಗಿರುತ್ತಿದ್ದ. ಅವಕಾಶ ಸಿಕ್ಕಾಗ ಜಹಾಂಗೀರನ ಜೊತೆ ಮೃಗಯಾ ವಿಹಾರಕ್ಕೆ ಹೋಗುತ್ತಿದ್ದ. ಮಗಳ ಸ್ಥಿತಿಯಿಂದ ಅಸ್ಮತ್ ಬೇಗಂ ಬಹಳ ದುಃಖಿತಳಾಗಿದ್ದಳು. ಅಸಫ್‌ನ ಮಗಳು ಅರ್ಜುಮಂದ್ ಎಲ್ಲರ ಕಣ್ಮಣಿಯಾಗಿದ್ದಳು. ಆ ಮಗುವನ್ನು ಮುದ್ದಾಡುವ ಪರಿ ನೋಡಿ, ಎಲ್ಲೋ ಮನಸ್ಸಿನಲ್ಲಿ ಮುಳ್ಳುಚುಚ್ಚಿದಂತಾಗುತ್ತಿತ್ತು.

ಅಲಿಖುಲಿಗೆ, ಇನ್ನು ತನ್ನ ಹೆಂಡತಿ ತನಗೊಂದು ಮಗುವನ್ನು ಕೊಡಲು ಅಸಮರ್ಥಳಾಗಿರುವುದು ಯಾಕೆಂದು ತಿಳಿಯಲಿಲ್ಲ. ಮೆಹರುನ್ನೀಸಾಳು ತನ್ನ ಅಸಮರ್ಥತೆಗೆ ಕಾರಣ ಏನೆಂದು ತಿಳಿಯಲು ಪ್ರಯತ್ನಿಸುತ್ತಿದ್ದಳು. ತನ್ನ ಅಕ್ಕಂದಿರು ಅಣ್ಣಂದಿರು ಎಲ್ಲರೂ ಮಕ್ಕಳೊಂದಿಗೆ ಸಂತೋಷವಾಗಿರುವುದನ್ನು ನೋಡಿದಾಗ ಹಿಂಸೆಯಾಗುತ್ತಿತ್ತು.

ಇತ್ತೀಚೆಗೆ ಅಲಿಖುಲಿ ಮನೆಗೆ ಬರುವುದೇ ಅಪರೂಪ. ಬಂದರೂ ವ್ಯಾವಹಾರಿಕವಾಗಿ ಒಂದೆರಡು ಮಾತು ಅಷ್ಟೇ! ಅವನ ನಡವಳಿಕೆ ನೋಡಿದಾಗ ಭಯವಾಗುತ್ತಿತ್ತು. ಆ ಭಯಂಕರ ಮೌನದ ಆಳದಲ್ಲಿ ಏನೇನು ಆಲೋಚನೆಗಳು ಇವೆಯೋ ಎಂದು ಹೆದರುತ್ತಿದ್ದಳು.

ತಾಯಿ ಅಸ್ಮತ್ ಅವಳ ಸ್ಥಿತಿಯನ್ನು ನೋಡಿ ಸಂಕಟ ಪಡುತ್ತಿದ್ದಳು. ಅವಳ ಗರ್ಭಪಾತಗಳು ನಿಲ್ಲುವುದಕ್ಕೆ ಹಕೀಮರೊಂದಿಗೆ, ಏನಾದರೂ ದಾರಿ ಇದೆಯೇ ಎಂದು ಮಾತನಾಡಿ ನೋಡಿದಳು. ಆದರೆ ಪ್ರಯೋಜನವಾಗಲಿಲ್ಲ. ಅವಳಲ್ಲಿ, ಯಾವುದೋ ಪಾಪಪ್ರಜ್ಞೆ ಕಾಡಲು ಶುರುವಾಯಿತು. ಅವಳು ಬಯಸಿದವನೊಂದಿಗೆ ಮದುವೆ ಮಾಡಿದ್ದರೆ ಹೀಗಾಗುತ್ತಿರಲಿಲ್ಲವೇನೋ. ಅವಳ ಮಾನಸಿಕ ಸ್ಥಿತಿಯಿಂದಾಗಿ ಹೀಗಾಗಿರಬಹುದೇ ಎಂದು ಯೋಚಿಸಿದಳು. ಆದರೆ ತಾವು ಬಾದಶಾಹರ ಸೇವಕರು

ಯಾವುದೂ ತಮ್ಮ ಇಚ್ಛೆಯಂತೆ ನಡೆಯುವ ಹಾಗಿರಲಿಲ್ಲ. ಅವರು ತೋರಿದ ದಾರಿಯಲ್ಲಿ ನಡೆಯುವುದಷ್ಟೇ ತಮ್ಮ ಕರ್ತವ್ಯವಾಗಿತ್ತು.

ಮೆಹರುನ್ನೀಸಾ ಮತ್ತು ಅಲಿಖುಲಿಗೆ ತಮ್ಮ ಬದುಕು ಬರಡಾಗಿ ಉಳಿಯುವುದಷ್ಟೆ. ಯಾವುದೇ ಆಸೆ ಭರವಸೆಗಳಿಲ್ಲ ಎಂಬ ತೀರ್ಮಾನಕ್ಕೆ ಬಂದು ಬಿಟ್ಟಿದ್ದರು.

ಅದೃಷ್ಟವೆಂಬಂತೆ, ಅಸ್ಮತ್‌ಳ ಸೂಕ್ಷ್ಮ ಮನಸ್ಸಿಗೆ, ಒಂದೆರಡು ಮೂರು ಗರ್ಭಪಾತಗಳಾಗಿ ಹೋದ ಮೇಲೆ, "ಈ ಸಲ ಖಂಡಿತ ಮಗುವನ್ನು ಉಳಿಸಿಕೊಳ್ಳಬಹುದೆನಿಸಿದೆ ಈ ವಿಷಯವನ್ನು ನಿನ್ನ ಗಂಡನಿಗೆ ತಿಳಿಸು."

"ಅಮ್ಮೀ ನನಗೆ ಖಾತ್ರಿಯಾಗುವವರೆಗೆ, ಅವರಿಗೆ ಹೇಳುವುದಿಲ್ಲ. ಹೇಳಿದರೂ ಅವರು ನಂಬುವುದಿಲ್ಲ. ಅವರ ದೃಷ್ಟಿಯಲ್ಲಿ ನಾನು ಆಜನ್ಮಪರ್ಯಂತ ಬಂಜೆಯೇ!"

"ಹಾಗೆಲ್ಲ ಇಲ್ಲಸಲ್ಲದ್ದನ್ನು ಕಲ್ಪಿಸಿಕೊಳ್ಳಬೇಡ. ನಿಜವಾಗಿಯೂ ಅಲಿಗೆ ಸಂತೋಷವಾಗುತ್ತದೆ."

"ಅಮ್ಮಿ ಅವನ ಸ್ವಭಾವ ನಿನಗೆ ಗೊತ್ತಿಲ್ಲ. ಮದುವೆಯಾದ ಆರಂಭದ ದಿನಗಳಲ್ಲಿ ನನ್ನನ್ನು ಹೂವಿನಂತೆ ನೋಡಿಕೊಂಡ. ನಾನು ಹೇಳದಿದ್ದರೂ ಕೇಳದಿದ್ದರೂ ನನಗೆ ಸಂತೋಷಪಡಿಸುವುದಕ್ಕೆ ಏನೆಲ್ಲ ಮಾಡಬೇಕೋ ಮಾಡುತ್ತಿದ್ದ. ದಂಡಯಾತ್ರೆಗೆ ಹೋಗುವಾಗಲೂ ಒಲ್ಲದ ಮನಸ್ಸಿನಿಂದ ಹೋಗುತ್ತಿದ್ದನೇ ಹೊರತು, ಒಂದು ಕ್ಷಣ ನನ್ನನ್ನು ಅಗಲಿ ಇರಲೂ ಅಳುಮೋರೆ ಹಾಕುತ್ತಿದ್ದ. ಆದರೆ ಮಗುವನ್ನು ಕೊಡಲು ಅಸಮರ್ಥಳೆಂದು ತಿಳಿದಾಗಿನಿಂದಲೂ, ಆದಷ್ಟೂ ನನ್ನಿಂದ ದೂರವಿರುತ್ತಾನೆ. ಮಾತಿಲ್ಲ ಕತೆಯಿಲ್ಲ. ದಿನಗಟ್ಟಲೆ ತಿಂಗಳು ಗಟ್ಟಲೆ ಏನೇನೋ ಕೆಲಸಗಳ ನೆಪದಲ್ಲಿ ಮನೆಯಿಂದ ದೂರವಿದ್ದುಬಿಡುತ್ತಾನೆ."

"ನಿನ್ನ ಈ ಸ್ಥಿತಿಯಲ್ಲಿ ಇದೆಲ್ಲವನ್ನು ಹಚ್ಚಿಕೊಂಡು ಕೊರಗಬೇಡ. ನಿನ್ನ ಆರೋಗ್ಯ, ಉಪಚಾರಗಳು ಬಹಳ ಮುಖ್ಯ. ಅಂದ ಹಾಗೆ ಬರ್ದವಾನಿಗೆ ಯಾವಾಗ ಹೊರಡುತ್ತಾರಂತೆ?"

"ಗೊತ್ತಿಲ್ಲ, ನನ್ನನ್ನೂ ಜೊತೆಗೆ ಕರೆದೊಯ್ಯುತ್ತಾರೋ ಇಲ್ಲ ಇಲ್ಲಿಯೇ ಉಳಿಸಿಹೋಗುತ್ತಾರೊ, ಏನನ್ನೂ ನನ್ನ ಬಳಿ ಇನ್ನೂ ಹೇಳಿಲ್ಲ. ಬಾದಶಾಹರ ಜೊತೆ ದಂಡಯಾತ್ರೆಗಳಿಗೆ ಹೋಗುತ್ತಿದ್ದಾರೆ... ಅವರಿಗೆ ವಾಸ್ತವವಾಗಿ ಬರ್ದವಾನಿಗೆ ಹೋಗಲು ಇಷ್ಟವೆ ಇಲ್ಲ. ತನ್ನ ಯೋಗ್ಯತೆಗೆ ತಕ್ಕ, ತನ್ನ ಸಾಮರ್ಥ್ಯಕ್ಕೆ ತಕ್ಕ ಸೈನ್ಯಾಧಿಕಾರದ ಜವಾಬ್ದಾರಿ ವಹಿಸಿಕೊಡುವುದನ್ನು ಬಿಟ್ಟು, ಗದ್ದಲ, ಗಲಭೆ, ದಂಗೆ, ಪಿತೂರಿಗಳ ಕೊಂಪೆಯಾಗಿರುವ ಬರ್ದವಾನಿಗೆ ಕಳಿಸಿಕೊಡುತ್ತಿರುವುದು ಶಿಕ್ಷೆಯ ರೂಪವಾಗಿಯೆ!"

"ಮೆಹರುನ್ನೀಸಾ ಗಂಡಸರ ಮನಃಸ್ಥಿತಿ ಹೇಗಿರುತ್ತೆ ಅಂತ ಹೇಳುವುದಕ್ಕೇ ಸಾಧ್ಯವಿಲ್ಲ. ಏನಾದರಾಗಲಿ, ಹೆಂಡತಿಯಾದವಳಿಗೆ ಗಂಡನ ಇಚ್ಛೆಯಂತೆ ನಡೆಯಲೇ ಬೇಕಾಗುತ್ತದೆ."

ಸಲೀಂ ಮತ್ತು ಅಲಿಖುಲಿಯ ನಡುವೆ ಸ್ವಲ್ಪ ಆಪ್ತತೆ ಬೆಳೆಯುತ್ತಿದ್ದುದನ್ನು ಗಮನಿಸಿದ ಸಲೀಂನ ವಿರೋಧಿ ಬಣದವರಿಗೆ, ಅವರಿಬ್ಬರ ನಡುವೆ ದ್ವೇಷದ, ಅನುಮಾನದ ಬೀಜ ಬಿತ್ತುವ ಮನಸ್ಸಾಯಿತು. ಮರಣದಂಡನೆಗೆ ಒಳಗಾಗಬೇಕಿದ್ದ ಅಲಿಗೆ ಗವರ್ನರ್ ಪದವಿ

ಕೊಟ್ಟಿದ್ದಕ್ಕೆ ಏನೇನೋ ವದಂತಿಗಳನ್ನು ಹರಡಿದ್ದೇ ಅಲ್ಲದೆ ಅಲಿಖುಲಿಯನ್ನು ಸಲೀಂನ ವಿರುದ್ಧ ಪ್ರಚೋದಿಸುವ ಮನಸ್ಸಾಯಿತು.

ಬರ್ದ್ವಾನ್ ಕಡೆಗೆ ಹೊರಟಿದ್ದ ಅಲಿಖುಲಿಯ ಜೊತೆಗೆ, ಮೆಹರುನ್ನೀಸಾಳ ಸಂಬಂಧಿ ನೂರುದ್ದೀನ್ ಕೂಡಾ ಹೊರಟಿದ್ದ. ರಾಜಾ ಮಾನ್‌ಸಿಂಗ್ ಅವನಿಗೆ ಅಲಿಖುಲಿಯ ಮನಸ್ಸು ಕೆಡಿಸಲು ಹೇಳಬೇಕಾದ ವಿಷಯಗಳನ್ನೆಲ್ಲ ಪಾಠ ಹೇಳಿ ಕಳಿಸಿದ್ದ.

"ರಾಜಾ ಮಾನ್‌ಸಿಂಗ್, ನಿನ್ನ ಪ್ರಾಣಕ್ಕೆ ಅಪಾಯವಿರುವುದರಿಂದ ತುಂಬ ಜಾಗರೂಕತೆಯಿಂದ ಇರಲು ಹೇಳಿ ಕಳಿಸಿದ್ದಾನೆ. ಜೊತೆಗೆ ನಿನ್ನ ನೆರಳಿನಂತೆ ಇದ್ದು ನಿನ್ನನ್ನು ಕಾಪಾಡಬೇಕೆಂದೂ ತಿಳಿಸಿದ್ದಾನೆ. ಈ ಒಂದು ಪಿತೂರಿಯಲ್ಲಿ ದೊಡ್ಡದೊಡ್ಡವರೆಲ್ಲಾ ಒಟ್ಟಾಗಿದ್ದಾರೆ. ಹೊರಗಡೆಯ ಜನಮಾತ್ರವಲ್ಲ, ನಿನ್ನವರೂ ಕೆಲವರು ನಿನಗಾಗದವರೂ ಸೇರಿಕೊಂಡಿದ್ದಾರೆ."

"ನನ್ನ ಪ್ರಾಣದ ಹಿಂದೆ ಬೀಳುವುದಕ್ಕೆ ನಾನೇನು ಮಾಡಿದ್ದೇನೆ, ಯಾರ ಶತ್ರುತ್ವವನ್ನೂ ಕಟ್ಟಿಕೊಂಡಿಲ್ಲ. ಯಾರಿಗೂ ಅನ್ಯಾಯಮಾಡಿಲ್ಲ. ನನ್ನನ್ನು ಸಾಯಿಸುವುದರಿಂದ ಅವರಿಗೆ ಆಗುವ ಪ್ರಯೋಜನವಾದರೂ ಏನು? ಯಾರೆಲ್ಲ ಸೇರಿದ್ದಾರೆ ಅನ್ನುವುದಾದರೂ ಹೇಳು?"

"ಪ್ರಯೋಜನ ಬೇಕಾದಷ್ಟು ಜನಕ್ಕೆ ಆಗುತ್ತೆ. ಅವರವರು ಬಯಸಿದ್ದು ಅವರವರಿಗೆ ಸುಲಭವಾಗಿ ದಕ್ಕುತ್ತದೆ."

"ಹೀಗೆ ಒಗಟೊಗಟಾಗಿ ಮಾತಾಡಬೇಡ ನೂರುದ್ದೀನ್."

"ಇಲ್ಲ ನಾನು ಹೇಳಲಾರೆ. ಹೇಳಿದರೆ ನನ್ನ ತಲೆ ಹೋಗುತ್ತದೆ. ನೀನೊಬ್ಬ ದಾರಿಗೆ ಅಡ್ಡವಾಗಿದ್ದಿ. ಆದ್ದರಿಂದ ನಿನ್ನನ್ನು ದಾರಿಯಿಂದ ಬದಿಗೆ ಸರಿಸಿದರೆ, ಸುಲಭವಾಗಿ ಮುಂದೆ ಸಾಗಬಹುದು-ಸಂಪ್ರದಾಯವನ್ನು ಧಿಕ್ಕರಿಸುವ, ಪರದೆ ಇಲ್ಲದೆ ಓಡಾಡುವ, ಗಂಡು ಕಲೆಗಳನ್ನು ಕಲಿತಿರುವ ಹೆಣ್ಣನ್ನು ನಮ್ಮ ಸಮಾಜ ಒಪ್ಪಿಕೊಳ್ಳುವುದಿಲ್ಲ. ಆದರೆ ಅಂತಹ ಹೆಣ್ಣುಗಳ ರಕ್ಷಣೆಗೆ ರಾಜಶಾಹಿಯ ಅಭಯ ಹಸ್ತವಿದೆ. ನೀನೇನು ಹೆದರಬೇಡ. ನಿನಗೆ ಬಾದಶಾಹ ಜಹಾಂಗೀರನ ರಕ್ಷಣೆಯಿದೆ. ನಿನ್ನ ಮಾವ ಘಿಯಾಸ್ ಬೇಗ್ ದಿವಾನರಾಗಿ ಸಾಕಷ್ಟು ಅಧಿಕಾರವನ್ನು ಕೈಲಿ ಇರಿಸಿಕೊಂಡಿದ್ದಾರೆ. ಅಲ್ಲದೆ ಪಾದಶಾಹ್ ಬೇಗಂ, ಸಲೀಮಾ ಸುಲ್ತಾನ್ ಬೇಗಂ ಇವರುಗಳ ರಕ್ಷಣೆ ಅವರ ಕುಟುಂಬಕ್ಕಿದೆ. ನಿನ್ನ ಮಾವ ಬಹಳ ಮಹತ್ವಾಕಾಂಕ್ಷಿ. ಅಧಿಕಾರಕ್ಕಾಗಿ ಸಂಬಂಧಗಳನ್ನೂ ಪರಿಗಣಿಸದೆ ಎಂಥ ಹೇಯ ಕೃತ್ಯಕ್ಕೂ ಮುಂದಾಗಿ ಬಿಡುತ್ತಾನೆ. ದಯವಿಟ್ಟು ನಾನು ಹೇಳಿದ ವಿಷಯಗಳನ್ನು ನಿನ್ನ ಹೆಂಡತಿಗೂ ತಿಳಿಸಬೇಡ. ತಿಳಿಸಿದರೆ ಕೆಲಸ ಕೆಡುತ್ತದೆ. ಎಲ್ಲರೂ ಎಚ್ಚೆತ್ತುಕೊಂಡು ಬಿಡುತ್ತಾರೆ" ಎಂದು ಹೇಳಿ ಕುದುರೆ ಓಡಿಸಿದ.

ಅಲಿಖುಲಿಯ ತಲೆಯಲ್ಲಿ ಅನುಮಾನದ ವಿಷ ವೃಕ್ಷವನ್ನೆ ನೆಟ್ಟುಬಿಟ್ಟ. ಅಲಿಖುಲಿಗೆ ಸೂಕ್ಷ್ಮವಾಗಿ, ವಿಶ್ಲೇಷಣಾತ್ಮಕವಾಗಿ ಆಲೋಚಿಸುವ ಶಕ್ತಿಯಿಲ್ಲ. ಹೇಳಿದ್ದನ್ನು ಹಿಂದುಮುಂದು ನೋಡದೆ ನಂಬಿ ಬಿಡುವ ಪ್ರವೃತ್ತಿ ಅವನದು.

ಇಬ್ಬರೂ ಸವಾರರು ಅಲಿಮನೆಯ ಹತ್ತಿರ ಬಂದರು. ಆದರೆ ನೂರುದ್ದೀನ್, ಮನೆ ಒಳಗೆ ಬರದೆ, ತನ್ನ ಮನೆಕಡೆ ಕುದುರೆಯನ್ನು ಓಡಿಸಿದ. ಮೆಹರುನ್ನೀಸಾ ದೂರದಿಂದಲೇ ಜೊತೆಗಿದ್ದ ವ್ಯಕ್ತಿಯನ್ನು ನೋಡಿದಳು. ಅವಳಿಗೆ ಅವನ ಪರಿಚಯವಿದ್ದಂತೆನಿಸಿತು.

ಒಳಗೆ ಬಂದ ಅಲಿ ಅವಳು ನಿಂತಿದ್ದನ್ನು ಕಂಡರೂ ಮಾತಾಡಿಸದೆ ನೇರವಾಗಿ ತನ್ನ ಕೊಠಡಿಯ ಕಡೆಗೆ ಹೊರಟ. ಜೊತೆಗಿದ್ದವರು ಯಾರೆಂದು ಕೇಳಬೇಕೆಂದುಕೊಂಡರೂ ಧೈರ್ಯವಾಗಲಿಲ್ಲ.

ದಿನೇ ದಿನೇ ಅಲಿಖುಲಿಯ ವರ್ತನೆ ತೀರಾ ಒರಟಾಗುತ್ತಿತ್ತು. ಮಾತು ಮಾತಿಗೆ ಸಿಡುಕುತ್ತಿದ್ದ. ಮೆಹರುನ್ನೀಸಾಳನ್ನು ಎಲ್ಲ ರೀತಿಯಿಂದಲೂ ನಿಯಂತ್ರಿಸುತ್ತಿದ್ದ. ತಾನು ಹೇಳಿದ್ದನ್ನು ಕೇಳಬೇಕೆಂದು ಒತ್ತಾಯಿಸುತ್ತಿದ್ದ.

ಇತ್ತೀಚೆಗೆ ನೂರುದ್ದೀನ್ ಬರ್ದ್ವಾನಿನ ಮನೆಗೆ ಪದೇ ಪದೇ ಬರುತ್ತಿದ್ದ. ಅಲಿಖುಲಿಯ ಜೊತೆ ಗಂಟೆಗಟ್ಟಲೆ, ಗುಟ್ಟು ಗುಟ್ಟಾಗಿ ಏನನ್ನೋ ಹೇಳುತ್ತಿದ್ದ. ಅಲಿಖುಲಿಯ ಮೇಲೆ ಆಗ ಬೇಕಾದ ಪರಿಣಾಮ ನಿರೀಕ್ಷೆಗಿಂತ ಹೆಚ್ಚು ಫಲಕಾರಿಯಾಯಿತು. ಮೆಹರುನ್ನೀಸಾಳ ಪ್ರತಿಯೊಂದು ಕೆಲಸದಲ್ಲಿಯೂ ತಪ್ಪು ಕಂಡುಹಿಡಿಯುತ್ತಿದ್ದ. ಮಾಡಿದ ಅಡಿಗೆ ಚೆನ್ನಾಗಿಲ್ಲವೆಂದು ಊಟ ಬಿಟ್ಟು ಎದ್ದು ಹೋಗುತ್ತಿದ್ದ. ಈಗ ಅವನಿಗೆ ಅವಳ ರೂಪ, ಗುಣ, ಬುದ್ಧಿವಂತಿಕೆಗಳೆಲ್ಲವೂ ಕಸವಾಗಿ ಕಾಣುತ್ತಿತ್ತು. ಹೆಣ್ಣು ಹೆಣ್ಣಾಗಿ, ಗಂಡನ ಕಾಲಡಿಯಲ್ಲಿ ಇರಬೇಕೇ ಹೊರತು, ತನ್ನತನವನ್ನು ತೋರಿಸಲು ಅವಕಾಶವಿರಲಿಲ್ಲ.

ಮೆಹರುನ್ನೀಸಾ ಎಲ್ಲ ಸಾಧಾರಣ ಮಹಿಳೆಯರಂತೆ, ಪುರುಷ ದೌರ್ಜನ್ಯ, ದಬ್ಬಾಳಿಕೆಗಳನ್ನು ಮೂಕವಾಗಿ ಸಹಿಸಿಕೊಂಡು ಬದುಕುತ್ತಿದ್ದಳು. ತನ್ನ ಕಷ್ಟಗಳನ್ನು ಹೇಳಿಕೊಳ್ಳಲು ತನ್ನವರೊಬ್ಬರೂ ಬಳಿಯಲ್ಲಿ ಇರಲಿಲ್ಲ. ತನ್ನ ಶೀಲವನ್ನು ಶಂಕಿಸುತ್ತಿದ್ದಾನೆ ಎನ್ನುವ ಅನುಮಾನದಿಂದ ದಹಿಸಿ ಹೋಗುತ್ತಿದ್ದಳು. ಇದ್ಯಾಕೆ ಅಲ್ಲಾಹ್ ಹೆಣ್ಣು ಕುಲಕ್ಕೆ ಇಂತಹ ಹಿಂಸೆಗಳನ್ನು ಕರುಣಿಸಿದ್ದಾನೆ. ಹೆಣ್ಣಿಗೆ ಮನಸ್ಸಿಲ್ಲವೇ? ಅವಳೂ ಮನುಷ್ಯಳಲ್ಲವೇ? ಅವಳಿಗೂ ಬದುಕಿನಲ್ಲಿ ಆಸೆ, ಆಕಾಂಕ್ಷೆ ಕನಸುಗಳು ಇರುವುದಿಲ್ಲವೇ. ಸಮಾಜ, ಸಂಪ್ರದಾಯ, ಧರ್ಮ ಎನ್ನುವ ಹೆಸರಿನಲ್ಲಿ ಏನೇನು ನಿರ್ಬಂಧಗಳು, ಎಷ್ಟೆಲ್ಲ ಹಿಂಸೆ!..... ತನ್ನ ಬಸಿರಲ್ಲಿ ಚಿಗುರುತ್ತಿರುವ ಕೂಸು ಇಂತಹ ಪರಿಸರದಲ್ಲಿ ಹೇಗೆ ಬದುಕಬಲ್ಲದು? ಅಮ್ಮಿ, ಅಬ್ಬು ಇವರಿಗೆ ಸಂದೇಶವನ್ನು ಕಳಿಸಿ, ತನ್ನ ದುಃಖ ಹೇಳಿಕೊಂಡು ಸಾಂತ್ವನವನ್ನು ಪಡೆಯಬಹುದು ಎನಿಸಿದರೂ, ಅದು ಸಾಧ್ಯವಾಗಲಿಲ್ಲ. ಅವಳ ಪ್ರತಿಯೊಂದು ನಡೆಯನ್ನೂ ಅಲಿ ಗುಮಾನಿಯಿಂದ ನೋಡುತ್ತಿದ್ದ. ಗೂಢಚಾರಿಕೆಗಾಗಿ ಯಾಸ್ಮಿನ್ ಎಂಬ ಸೇವಕಿಯನ್ನೂ ನೇಮಿಸಿದ. ಆದರೆ ಆಕೆ ಗೂಢಚಾರಿಕೆಗಾಗಿ ಇದ್ದರೂ, ಅವಳೂ ಹೆಣ್ಣಾದ್ದರಿಂದ ಯಜಮಾನಿಯ ಸಂಕಟಕ್ಕಾಗಿ ಮರುಗುತ್ತಿದ್ದಳು. ಅಲಿ ಹೊರಗೆ ಹೋದಾಗ, ಇಲ್ಲವೆ ಸೈನಿಕ ಕಾರ್ಯಾಚರಣೆ ಇತ್ಯಾದಿ ಕೆಲಸಗಳಿಂದ ದೂರ ಪ್ರದೇಶಗಳಿಗೆ ಹೋದಾಗಲೆಲ್ಲ ಇಬ್ಬರು ಹೆಂಗಸರೂ ತಮ್ಮ ತಮ್ಮ ಕಥೆಗಳನ್ನು ಹೇಳಿಕೊಂಡು ಪರಸ್ಪರ ಸಂತೈಸಿಕೊಳ್ಳುತ್ತಿದ್ದರು. ಮೆಹರುನ್ನೀಸಾ ತನ್ನ ಮಗುವಿನ ಚಿಂತೆಯ ಬಗ್ಗೆ ಹೇಳಿದಾಗ, ತಾನು ಇರುವಾಗ ಅವಳಿಗೆ ಭಯಬೇಡವೆಂದು ಭರವಸೆ ಹೇಳುತ್ತಿದ್ದಳು. ಅದೂ ಇಂತಹ ಸಂದರ್ಭಗಳಲ್ಲಿ, ಅಲಿಖುಲಿಯ ಬದಲಾದ ವರ್ತನೆ. ಕ್ರೌರ್ಯ, ಹಿಂಸೆ, ದಬ್ಬಾಳಿಕೆಗಳನ್ನು ಅನುಭವಿಸುತ್ತಿರುವ ಕ್ಷಣಗಳಲ್ಲಿ ಸಲೀಂನ ನೆನಪುಗಳು ಮತ್ತಷ್ಟು ಗಾಢವಾಗಿ ಕಾಡುತ್ತಿದ್ದವು. ಅವನ ಚೆಲುವಾದ ಮುಖ, ಮಂದಹಾಸ, ಮೃದು ಸ್ಪರ್ಶ, ಮಾತು ಮಾತಿನಲ್ಲೂ ತೊಟ್ಟಿಕ್ಕುವ ಶಾಯರಿಯ ತುಣುಕುಗಳು, ಎಲ್ಲವೂ

ನೆನಪಾದಾಗ, ದೇವರೇ ಯಾಕೆ ನನ್ನನ್ನು ಅಂತಹ ಅನುಭವಗಳಿಂದ ವಂಚಿಸಿ, ಕ್ಷಣಕ್ಷಣವೂ ನರಕದರ್ಶನ ಮಾಡಿಸುತ್ತಿರುವಿ ಎಂದು ಹಂಬಲಿಸಿ, ಪ್ರಾರ್ಥಿಸಿ ಪ್ರಶ್ನಿಸುತ್ತಿದ್ದಳು. ಬಂದ ಬದುಕನ್ನೇ ತನ್ನ ಪುಣ್ಯವೆಂದು, ಹೊಂದಿಕೊಂಡು ಅವನನ್ನು, ಅವನ ಪ್ರವಾಹದಂತಹ ಪ್ರೀತಿಯನ್ನು ಅನುಭವಿಸುತ್ತಾ ಗತವನ್ನೆಲ್ಲಾ ಮರೆಯಲು ಪ್ರಯತ್ನಿಸುತ್ತಿರುವಾಗಲೇ ಮನುಷ್ಯನಾಗಿದ್ದ ಅಲಿ ಸೈತಾನನಾದದ್ದು ಹೇಗೆ?

ಅವಳ ಯಾವ ಪ್ರಶ್ನೆಗಳಿಗೂ ಉತ್ತರವಿರಲಿಲ್ಲ. ಬಸಿರು ಹೊತ್ತ ತನ್ನ ಬಗ್ಗೆ ಇಂತಿಷ್ಟು ಕಾಳಜಿಯಾಗಲಿ, ಕುತೂಹಲವಾಗಲಿ ಬೇಡವೇ? ಮಕ್ಕಳಾಗಬೇಕು, ಗಂಡು ಮಕ್ಕಳೇ ಆಗಬೇಕು ಎನ್ನುವುದಕ್ಕೆ ನಾವು ಯಾರು? ನಾವೇನು ಸೃಷ್ಟಿಕರ್ತರೇ? ಅಲಿ ಹೀಗೆ ವರ್ತಿಸುತ್ತಿರುವುದಕ್ಕೆ ಬರೀ ಇದೊಂದೇ ಕಾರಣವಿರಲಾರದು. ಆಗದವರು ಯಾರು ಯಾರೋ ತಲೆಕೆಡಿಸಿರಬೇಕು. ನನ್ನ ಮತ್ತು ಸಲೀಂನ ವಿಷಯ ಬಟಾಬಯಲು ಮಾಡಿರಬೇಕು. ನನ್ನ ಪಾವಿತ್ರ್ಯವನ್ನು ಶಂಕಿಸುತ್ತಿರಬೇಕು. ಇನ್ನೂ ನಮ್ಮಿಬ್ಬರ ಸಂಬಂಧವಾಗಿ ಅನುಮಾನ ಕಾಡುತ್ತಿರಬೇಕು. ಅಲ್ಲಾಹ್, ನನ್ನಂಥ ದೀನಳನ್ನು ನೀನೇ ರಕ್ಷಿಸಬೇಕು. ಸುಸೂತ್ರವಾಗಿ ಹೆರಿಗೆಯಾಗಿಬಿಟ್ಟರೆ, ಗಂಡೋ ಹೆಣ್ಣೋ ಒಂದು ಮಗುವಾಗಿ ಬಿಟ್ಟರೆ, ಅದರ ಆಟಪಾಟಗಳಲ್ಲಿ ತೊದಲು ಮಾತುಗಳಲ್ಲಿ ಬಹುಶಃ ಮನಸ್ಸಿನ ಕ್ಲೇಶವನ್ನು ಮರೆತು, ಮತ್ತೆ ಮೊದಲಿನಂತೆ ಆಗಬಹುದೇನೋ – ಎಂದು ಪರಿಪರಿಯಾಗಿ ಪ್ರಾರ್ಥಿಸುತ್ತಿದ್ದಳು.

ಯಾಸ್ಮಿನ್ ಮತ್ತು ಫಿರದೌಸಿಯರ ಸಹಾಯದಿಂದ ಮೆಹರುನ್ನೀಸಾ ಹೆರಿಗೆಯ ಸಂಕಟದಿಂದ ಪಾರಾದಳು. ಒಂದು ಮುದ್ದಾದ ಹೆಣ್ಣು ಮಗುವಿಗೆ ಜನ್ಮಕೊಟ್ಟಳು. ಆ ಮಗುವಿನ ಮುಖ ನೋಡುತ್ತಿದ್ದಂತೆ ಅವಳಿಗೆ ಇರಿಯುತ್ತಿದ್ದ ನೋವುಗಳೆಲ್ಲ ಮಾಯವಾದವು. ಥಟ್ಟನೆ ಅವಳಿಗೆ, ಈ ಮಗುವಿನ ಬರವಿನಿಂದಾದರೂ ಅಲಿಖುಲಿ ಮೊದಲಿನಂತೆ ಬದಲಾದರೆ 'ಅಲ್ಲಾಹ್‌ಕಾ ಲಾಖ್‌ಲಾಖ್ ಶುಕರ್‌ಹೈ' ಎಂದುಕೊಂಡಳು.

ಫಿರ್‌ದೌಸ್ ಓಡಿ ಹೋಗಿ ಅಲಿಖುಲಿಗೆ ವಿಷಯ ತಿಳಿಸಿದಳು. "ಬೇಗಂ ತಮ್ಮನ್ನು ಕೂಡಲೆ ಬರಹೇಳಿದ್ದಾಳೆ" ಎಂದಳು. ಅಲಿಖುಲಿಗೆ ಅಷ್ಟಾಗಿ ಸಂತೋಷವಾಗಲಿಲ್ಲ. ಅವನಿಗೆ ಎಂಥ ಮಗು ಎನ್ನುವ ಕುತೂಹಲ; ಜೊತೆಗೆ ಹೆದರಿಕೆ ಕೂಡಾ. ಸ್ವಲ್ಪ ಗಂಟು ಮುಖ ಹಾಕಿಕೊಂಡೇ ಬೇಗಂ ಇದ್ದ ಕೋಣೆ ಪ್ರವೇಶಿಸಿದ. ಫಿರ್‌ದೌಸ್ ಒಳಬಂದ ಅಲಿಖುಲಿಯ ಮುಖದಲ್ಲಿನ ಕುತೂಹಲವನ್ನು ಗಮನಿಸಿದಳು. ಅಲಿಖುಲಿಯ ಇತ್ತೀಚಿನ ಬದಲಾವಣೆಯನ್ನು ಗಮನಿಸಿದ್ದರಿಂದ ಹೆಣ್ಣು ಮಗು ಎಂದರೆ ಹೇಗೆ ಪ್ರತಿಕ್ರಿಯಿಸುತ್ತಾನೋ ಎಂದು ಹೆದರಿದಳು.

"ಬೇಗಂ, ಹೇಳಿ, ಯಾವ ಮಗು? ನನ್ನಾಸೆಯನ್ನು ಪೂರೈಸಿದ್ದೀರಿ ಎಂದು ಕೊಳ್ಳುತ್ತೇನೆ" ಎಂದು ಬಹಳ ಕಷ್ಟದಿಂದ ಒಂದು ಸಣ್ಣ ನಗೆಯನ್ನು ಮುಖದ ಮೇಲೆ ತಂದುಕೊಂಡ.

"ನನ್ನನ್ನು ಮಾಫ್ ಮಾಡಿ. ನಿಮ್ಮ ನಿರೀಕ್ಷೆಯನ್ನು ಪೂರೈಸಲಾಗಲಿಲ್ಲ. ಹೆಣ್ಣು ಮಗುವನ್ನು ಮಾತ್ರವೇ ನೀಡುತ್ತಿದ್ದೇನೆ" ಎಂದು ಹೇಳಿ ಕಣ್ಣು ಒದ್ದೆ ಮಾಡಿಕೊಂಡಳು. ಅಲಿಖುಲಿಗೆ ಏನು ಹೇಳಬೇಕೋ ತಿಳಿಯಲಿಲ್ಲ. ತನಗೊಬ್ಬ ವಾರಸುದಾರ ಬೇಕಿದ್ದನೇ

ಹೊರತು, ಯಾರದೋ ಮನೆ ಸೇರುವ ಹೆಣ್ಣು ಮಗುವಲ್ಲ. ತನ್ನ ಶೌರ್ಯ, ಪರಾಕ್ರಮ, ಸಾಮರ್ಥ್ಯಗಳ ಮೂಸೆಯಲ್ಲಿ ಅದ್ದಿ ತೆಗೆದ ಪರಾಕ್ರಮಿ ಯೋಧ ಎನಿಸಿಕೊಳ್ಳುವ ಉತ್ತರಾಧಿಕಾರಿ ಮಗ. ತನಗೆ ಇಲ್ಲದ ಮೇಲೆ ತಾನು ಪೂರ್ತಿ ಗಂಡಸೇ ಅಲ್ಲ. ಎಲ್ಲರೂ ತನ್ನನ್ನು ಲೇವಡಿ ಮಾಡಬಹುದು. ಷೇರ್ ಆಫ್ಘನ್ ಇಸ್ತಾಜ್ಲು ಬಿರುದು ಬಾದಶಾಹರು ಕೊಟ್ಟಿದ್ದರು. ಆ ಬಿರುದನ್ನು ತನ್ನ ಮಗನಿಗೆ ರವಾನಿಸಬೇಕೆಂದಿದ್ದ. ಆದರೆ ತನ್ನ ಬದುಕಿನಲ್ಲಿ, ತನ್ನ ಬಯಕೆಗಳು ಯಾವುವೂ ಫಲಿಸುವಂತೆ ಕಾಣಲಿಲ್ಲ. ತುಂಬಾ ನಿರಾಶೆಯಾಯಿತು. ಮೆಹರುನ್ನೀಸಾಳ ಸೌಂದರ್ಯಕ್ಕೆ ದಾಸನಾಗಿ ಬಿಟ್ಟಿದ್ದೆ. ಒಂದೆರಡು ಮೂರು ಸಲ ಗರ್ಭಪಾತವಾಗಿದ್ದರೂ ತಾನು ಸುಮ್ಮನಿದ್ದುದೇಕೆ. ಮತ್ತೊಂದು ಹೆಣ್ಣನ್ನು ತಂದುಕೊಳ್ಳಬಹುದಾಗಿತ್ತು. ಆದರೆ..... ಆದರೆ...... ನಾನು ಗಂಡಸು, ಒರಟು ಮನುಷ್ಯನೇ ಆಗಿರಬಹುದು, ನನ್ನ ಮೆಹರುನ್ನೀಸಾಳಿಗೆ ನೋವುಂಟುಮಾಡುವಷ್ಟು ಕಟುಕತನ ತನ್ನಲ್ಲಿಲ್ಲ. ಅವಳ ಮೇಲಿನ ಬೇಸರ, ಸಲೀಂ ಮತ್ತು ಅವಳ ನಡುವಿನ ಸಂಬಂಧ ನನ್ನಿಂದ ಮರೆಮಾಚಿ, ಮೋಸ ಮಾಡಿ ವಿವಾಹ ಮಾಡಿಸಿದ್ದೇ ಅಲ್ಲದೆ, ಅವಳ ಚಾರಿತ್ರ್ಯದ ಬಗ್ಗೆ ಊರ ತುಂಬ ವದಂತಿಗಳನ್ನು ಕೇಳಬೇಕಾಗಿ ಬಂತು, ನನಗೆಂತಹ ಅವಮಾನ. ಹಠದಿಂದ ಮತ್ತು ಅಕ್ಬರ್ ಬಾದಶಾಹರ ವಿರೋಧದಿಂದ ಪಡೆಯಲಾಗದ ಮೆಹರುನ್ನೀಸಾಳನ್ನು, ಈಗ ಬಾದಶಾಹ ಜಹಾಂಗೀರ್ ಆಗಿರುವುದರಿಂದ ಸರ್ವತಂತ್ರ ಸ್ವಾತಂತ್ರ್ಯ ಪಡೆದುಕೊಂಡಿರುವುದರಿಂದ ಯಾವುದೇ ರೀತಿಯಿಂದಲಾದರೂ ದಕ್ಕಿಸಿಕೊಳ್ಳುವ ಸಾಧ್ಯತೆಯಿದೆ. ನೂರುದ್ದೀನ್ ಮತ್ತು ರಾಜಾ ಮಾನ್‌ಸಿಂಗ್ ತಿಳಿಸಿದಂತೆ. ಬಲಾತ್ಕಾರದಿಂದಲೋ, ಬೆದರಿಕೆಯಿಂದಲೋ ಇಲ್ಲವೇ ನನ್ನ ಕೊಲೆಮಾಡಿಯೋ, ಮೆಹರುನ್ನೀಸಾಳನ್ನು ದಕ್ಕಿಸಿಕೊಳ್ಳಬೇಕೆಂದಿರುವುದರಿಂದ ನನ್ನ ಪ್ರಾಣಕ್ಕೆ ಸಂಚಕಾರವಿದೆ ಎನ್ನುವ ಮಾತಿನಲ್ಲಿ ಸತ್ಯವಿದೆ.

ಎಷ್ಟು ಹೊತ್ತು ಆಲೋಚನೆಗಳಲ್ಲಿ ಮುಳುಗಿದ್ದನೋ ಏನೋ "ಮಗುವನ್ನು ಒಮ್ಮೆಯಾದರೂ ನೋಡುವುದಿಲ್ಲವೇ? ನಾನು ನಿಮಗೆ, ನೀವು ಬಯಸುವ ಗಂಡು ಮಗುವನ್ನು ಹೆತ್ತು ಕೊಡುತ್ತೇನೆ. ಈ ಮಗುವಷ್ಟೇ ನಮ್ಮ ಕಡೆಯ ಸಂತಾನವಲ್ಲ. ನೋಡಿ ಎಷ್ಟು ಮುದ್ದಾಗಿ ಮುಗ್ಧವಾಗಿ ಪಿಳಿಪಿಳಿ ಕಣ್ಣು ಮುಚ್ಚುತ್ತಾ ತೆಗೆಯುತ್ತಾ ಇರುವ ಈ ಮಗುವನ್ನು ದಯವಿಟ್ಟು ಒಮ್ಮೆ ತಿರುಗಿ ನೋಡಿ."

ಅವಳೆಷ್ಟೇ ಕೇಳಿಕೊಂಡರೂ ಅವನ ಮನಸ್ಸು ಕೇಳಿಸಿಕೊಳ್ಳಲಿಲ್ಲ. ಅವನಿಗೆ ಅಲ್ಲಿ ನಿಲ್ಲುವುದಕ್ಕೆ ಸಾಧ್ಯವಾಗಲಿಲ್ಲ. ಮೆಲ್ಲನೆ ಬೆನ್ನು ತಿರುಗಿಸಿ ಬಾಗಿಲ ಕಡೆ ಮುಖಮಾಡಿ ಸದ್ದಿಲ್ಲದೆ ಹೊರಗೆ ಹೊರಟುಬಿಟ್ಟ. ಮೆಹರುನ್ನೀಸಾಳ ಬಿಕ್ಕುಗಳು ಮುಂದುವರೆದವು. ಅಲಿಖುಲಿಗೆ ಇದೊಂದು ದೊಡ್ಡ ಆಘಾತ. ಇದರಿಂದ ಅವನು ಎಂದಿಗೂ ಚೇತರಿಸಿಕೊಳ್ಳಲಾರ. ಹುಟ್ಟಿದ ಈ ನಿಷ್ಪಾಪಿ ಮಗುವನ್ನು ಕಣ್ಣೆತ್ತಿಯೂ ನೋಡದಷ್ಟು ನಿಷ್ಠುರನಾದನೆ? ಗಂಡು ಮಗು ಹುಟ್ಟಿದ ಮಾತ್ರಕ್ಕೇ, ಇವನ ಎಲ್ಲ ಗುಣಗಳೂ ಅವನಿಗೆ ಬರುತ್ತವೆಯೇ? ಇವನೆಂತಹ ತಂದೆ? 'ತಂದೆ' ಪದಕ್ಕೆ ಅರ್ಹನೇ ಅಲ್ಲ. ಅವನಿಗೆ ಬೇಡದಿದ್ದರೆ ಏನಾಯಿತು. ಇದು ನನ್ನ ಮಗು. ನನ್ನಷ್ಟೇ ಸಮರ್ಥವಾಗಿ, ಮಹತ್ವಾಕಾಂಕ್ಷಿಯಾಗಿ ಬೆಳೆಸುತ್ತೇನೆ. ಅರಸು ಮನೆತನದ ನೆಂಟಸ್ತಿಕೆ ನನಗೆ ತಪ್ಪಿದರೆ

ಏನು? ನನ್ನ ಮಗಳಿಗೆ ಅದನ್ನು ಸಾಧ್ಯಮಾಡಿಸುತ್ತೇನೆ ಎಂದುಕೊಂಡಳು.

ಅಲಿಖುಲಿಯ ನಡೆಯೇ ಅರ್ಥವಾಗುತ್ತಿರಲಿಲ್ಲ. ಅವನಿಗೆ ಬರ್ದವಾನ ಬೇಡವಾಗಿತ್ತು. ಜಹಾಂಗೀರ್ ಬೇಕೆಂದೇ ತನ್ನನ್ನು ದೂರ ಕಳಿಸಿದ್ದಾನೆ. ಇರಲಿ ಖುಸ್ರೋ, ಗದ್ದುಗೆ ಗೆದ್ದರೆ, ಈ ಶಿಕ್ಷೆಯಿಂದ ಪಾರಾಗಬಹುದು ಎನ್ನುವ ಲೆಕ್ಕಾಚಾರದಲ್ಲಿಯೇ ಕನಸುಗಳನ್ನು ಕಾಣುತ್ತಿದ್ದ. ಆಗದ್ದನ್ನು ಊಹಿಸಿಕೊಳ್ಳುತ್ತಾ, ಜಹಾಂಗೀರನ ಅನುಮಾನಕ್ಕೆ ದಾರಿ ಮಾಡಿಕೊಡದೆ, ಮೊದಲಿಗೆ ಇರಿಸಿಕೊಂಡಿದ್ದ ನಿಷ್ಠೆಯೊಂದಿಗೆ ಇದ್ದರೆ, ಲಾಭವಾಗುತ್ತದೆಯೇ ಹೊರತು, ದಡ್ಡನಂತೆ ಏನೇನೋ ಆಲೋಚಿಸುತ್ತಿದ್ದಾನೆ ಎಂದು ಅಸಮಾಧಾನಗೊಂಡಳು.

ಹೇಗಾದರೂ ನನ್ನ ಬದುಕು ನಿಲ್ಲಬಾರದು. ನನ್ನ ಬದುಕಿನ ಹರಿವು ಯಾವುದೇ ಅಡೆತಡೆಗಳಿಗೆ ನಿಲ್ಲದೆ ಕೊರಕಲುಗಳನ್ನು ದೊಡ್ಡ ಬಂಡೆಗಳೆಲ್ಲವನ್ನೂ ತಬ್ಬಿಕೊಳ್ಳುತ್ತಾ ತಪ್ಪಿಸಿಕೊಳ್ಳುತ್ತಾ ಮುಂದೆ ಸಾಗಬೇಕು. ನಾನು ಯಾವುದಕ್ಕೂ ಹಿಂಜರಿಯುವುದಿಲ್ಲ ಎಂದು ತನಗೆ ತಾನೇ ಸಮಾಧಾನ ತಂದುಕೊಳ್ಳುತ್ತಿದ್ದಳು.

ತನ್ನ ಹೆರಿಗೆಯ ವಿಷಯವನ್ನು ತಂದೆಗೆ ತಿಳಿಸಲು ಪತ್ರ ಬರೆದಳು. ತಂದೆ ಘಿಯಾಸ್ ಮೆಹರುನ್ನೀಸಾಳನ್ನು ಬಹಳವಾಗಿ ಪ್ರೀತಿಸುತ್ತಿದ್ದ. ಅವಳನ್ನು ಅದೃಷ್ಟದ ಗಣಿಯೆಂದೇ ಭಾವಿಸಿದ್ದ. ಆದರೆ ಎಲ್ಲೋ ಲೆಕ್ಕಾಚಾರ ಸ್ವಲ್ಪ ಎಡವಟ್ಟಾಗಿದೆ. ಪರಿಸ್ಥಿತಿಗಳು ಎಂದಿಗೂ ಒಂದೇ ಥರ ಇರುವುದಿಲ್ಲ. ಚಕ್ರವರ್ತಿನಿಯಾಗುವ ಭವಿಷ್ಯ ನಿಜವಾದರೂ ಆಗಬಹುದು. ಆದರೆ ಹೇಗೆ? ಯಾವಾಗ ಎಂಬುದನ್ನು ಖಂಡಿತವಾಗಿಯೂ ಸಾಮಾನ್ಯ ಮನುಷ್ಯರಾದ ನಮಗೆ ಊಹಿಸಲು ಸಾಧ್ಯವಾಗುವುದಿಲ್ಲ ಎಂದೇ ತಿಳಿದಿದ್ದ. ಅವಳ ಮನಸ್ಸಿಗೆ ಅಲಿಖುಲಿಯ ನಡೆಯಿಂದ ಹಠಮಾರಿತನದಿಂದ ತುಂಬ ನೋವಾಗಿದೆ. ಹತ್ತಿರವಾದರೂ ಇದ್ದರೆ, ಸಮಾಧಾನ, ನೆಮ್ಮದಿಗಳು ಸಾಧ್ಯವಾಗುತ್ತಿತ್ತು. ಆದರೆ ಹಾಗಾಗಲು ಸಾಧ್ಯವಿಲ್ಲವೆನಿಸಿ, ತನ್ನ ಕೆಲಸ ಕಾರ್ಯಗಳ ಬಗ್ಗೆ, ಕುಟುಂಬದವರ ಬಗ್ಗೆ, ರಾಜ್ಯದಲ್ಲಿ ಏನೇನಾಗುತ್ತಿದೆ ಎನ್ನುವುದನ್ನೆಲ್ಲ, ತುಂಬ ವಿವರವಾಗಿ, ಎರಡು ತಿಂಗಳಿಗೊಮ್ಮೆಯಾದರೂ ಪತ್ರ ಬರೆಯುತ್ತಿದ್ದ.

ಈಗ ಮಗಳಿಂದ ಬಂದ ಪತ್ರ ನೋಡಿ ತುಂಬಾ ಸಂತೋಷವಾಗಿತ್ತು. ಅಸ್ಮತ್‌ಳನ್ನು ಕರೆದು ಈ ಸಿಹಿಸುದ್ದಿಯನ್ನು ತಿಳಿಸಿದ.

"ಘಿಯಾಸ್, ಆಕೆಗೆ ಮಗುವಾಗಿ, ಬಂಜೆತನದ ಆರೋಪದಿಂದ ಮುಕ್ತವಾದ ವಿಷಯ ಸಂತೋಷವಲ್ಲವೇ?"

"ಹೌದು ಅಸ್ಮತ್. ಆದರೆ ಆ ನನ್ನ ನಿಷ್ಠುರಿ ಅಳಿಯನಿಗೆ ಗಂಡು ಮಗುವನ್ನು ಹೆತ್ತುಕೊಡಲಿಲ್ಲ ಅನ್ನುವ ಕೋಪ. ಹೆಣ್ಣು ಗಂಡು ಹೆತ್ತು ಕೊಡುವುದು ನಮ್ಮ ಕೈಲಿದೆಯೇ? ಅವನು ಆ ಸತ್ಯವನ್ನು ಅರ್ಥಮಾಡಿಕೊಳ್ಳದಿದ್ದರೆ ಹೇಗೆ? ತಗೋ ಈ ಪತ್ರ ಓದು ಎಷ್ಟು ಸಂಕಟದಿಂದ ಬರೆದಿದ್ದಾಳೆ ಎನ್ನುವುದು ತಿಳಿಯುತ್ತದೆ."

"ಹೋಗಲಿ, ನೀಸಾಳನ್ನು ಮಗುವನ್ನು ಎತ್ತಿಕೊಂಡು ಇಲ್ಲಿಗೆ ಬರಲು ತಿಳಿಸಿ. ನಮ್ಮೊಟ್ಟಿಗೆ ಇದ್ದಾಗ, ಚಿಂತೆ, ನೋವುಗಳನ್ನು ಮರೆಯುತ್ತಾಳೆ. ನಮ್ಮ ಅರ್ಜುಮಂದ್ ಬಾನು ಜೊತೆಗೇ ಬೆಳೆಯುತ್ತಾಳೆ."

"ಅವಳು ಬಂದರೆ ನನಗೂ ಸಂತೋಷವೇ. ಆದರೆ ಅಲಿಖುಲಿ ಕಳಿಸಿಕೊಡಲು ಒಪ್ಪಬೇಕಲ್ಲ. ತಾನೂ ಮನೆಯಲ್ಲಿ ಸಾಮಾನ್ಯವಾಗಿ ಇರುವುದೇ ಇಲ್ಲ. ಅಲ್ಲಿ ಯುದ್ಧ ಇಲ್ಲಿ ಯುದ್ಧ ಅಂತ, ಯುದ್ಧದ ನೆಪಗಳಲ್ಲಿ ವಾರಗಟ್ಟಲೆ, ತಿಂಗಳುಗಟ್ಟಲೆ ಮನೆಯಿಂದ ಹೊರಗೇ ಇರುತ್ತಾನೆ. ನಮ್ಮ ನೀಸಾಳ ಯೋಗಕ್ಷೇಮ ವಿಚಾರಿಸಿಕೊಳ್ಳಲು ಯಾಸ್ಮಿನ್, ನಾದಿರಾ ಬಿಟ್ಟರೆ ಬೇರೆ ಯಾರೂ ಇಲ್ಲ. ಸಣ್ಣಪುಟ್ಟ ಕೆಲಸಗಳಿಗೆ, ಕೆಲಸದ ಹುಡುಗ ಇದ್ದಾನೆ."

ಗಂಡ-ಹೆಂಡಿರು ಮೆಹರುನ್ನೀಸಾಳ ಯೋಚನೆಯಲ್ಲಿಯೇ ಉಳಿದರು.

ತಂದೆ ಮಗಳ ನಡುವೆ ಒಂದು ಆತ್ಮೀಯ ಸಂಬಂಧ ಬೆಳೆಯಬೇಕೆಂಬ ಆಸೆ ಕ್ರಮೇಣ ಚಿಗುರಿ ಮೊಗ್ಗಿಟ್ಟಿತ್ತು. ಅಲಿಖುಲಿ ಎಷ್ಟೇ ತನ್ನನ್ನು ತಡೆಹಿಡಿದುಕೊಳ್ಳಲು ಪ್ರಯತ್ನಿಸಿದರೂ ಲಾಡ್ಲಿಯ ಮುದ್ದು ಮುಖ, ತೊದಲು ಮಾತು, ಬೇಡವೆಂದರೂ ಬಂದು ತಬ್ಬಿಕೊಳ್ಳುತ್ತಾ 'ಅಬ್ಬು' ಎಂದಾಗ ಅವನಲ್ಲಿ ಏನೋ ಒಂದು ಬಗೆಯ ಭಾವ ಸಂಚಲನ. ಆ ಮಗುವನ್ನು ಬರಸೆಳೆದು ಬಿಗಿದಪ್ಪಿಕೊಂಡ. ಅದೇ ಸಮಯಕ್ಕೆ ಮೆಹರುನ್ನೀಸಾ ಅಲ್ಲಿಗೆ ಬಂದು ತಂದೆ-ಮಗಳ ಮಿಲನ ನೋಡಿದಾಗ ಸಾರ್ಥಕತೆಯ ಭಾವ ಮೂಡಿತು. ಹೆಜ್ಜೆ ಸದ್ದಿನಿಂದ ಎಚ್ಚೆತ್ತ ಅಲಿ ಮುಂದೆ ದೇವಕನ್ಯೆಯೊಬ್ಬಳು ನಿಂತಂತೆ ಭಾಸವಾಯಿತು. ಅವಳ ಮೈಬಣ್ಣಕ್ಕೊಪ್ಪುವ ಕುರ್ತಾ. ಅದರ ಮೇಲೆ ಚಿನ್ನದ ಎಳೆಗಳಿಂದ ಬಿಡಿಸಿದ ಕಸೂತಿ. ಹಾಲುಗೆನ್ನೆಯ ಮೇಲೆ ಮೃದು ಮಂದಹಾಸ! ಅಲಿಖುಲಿ ಒಂದು ಕ್ಷಣ ಸ್ತಂಭಿತನಾದ. ಇಷ್ಟು ಕಾಲ ಅವನ ಕಣ್ಣಿಗೆ ಕಾಣದ ಸೌಂದರ್ಯ ಹೊರಚೆಲ್ಲಿದೆಯೇನೋ ಎನಿಸಿತು. ಅವಕುಂಠನವಿಲ್ಲದೆ ಅವಳ ಚಹರೆಯ ಕಲಾತ್ಮಕ ವಿನ್ಯಾಸವನ್ನು ಕಣ್ತುಂಬಿಕೊಂಡ. ಮರಳುಗಾಡಿನಂತಹ ಹೃದಯದಲ್ಲೂ ಸಂವೇದನೆಯ ಚಿಲುಮೆಯೊಡೆಯಲು ಸಾಧ್ಯವೆಂಬುದನ್ನು ಸಾರುತ್ತಿತ್ತು. ತನ್ನನ್ನು ಒಂದೇ ಸಮನೆ ದಿಟ್ಟಿಸುತ್ತಿದ್ದ ಗಂಡನನ್ನು ಸ್ವಲ್ಪ ಛೇಡಿಸಬೇಕೆನಿಸಿತು.

"ಹುಜೂರ್. ಇವತ್ತು ನಿಮಗೆ ಏನಾಗಿದೆ? ನನ್ನನ್ನು ಎಂದೂ ನೋಡದವರಂತೆ ತಿಂದು ಬಿಡುವ ಹಾಗೆ ನೋಡುತ್ತಿದ್ದೀರಿ. ಅಲ್ಲದೆ, ಕಣ್ಣೆತ್ತಿಯೂ ನೋಡಬಾರದೆಂದು ನಿರ್ಧರಿಸಿದವರು. ಹೀಗೆ ತಬ್ಬಿಕೊಂಡು ಕುಳಿತಿದ್ದೀರಿ. ನಿಮಗೆ ಬೇಡವಾಯಿತೆಂದರೆ, ನನಗೆ ನನ್ನ ಮಗಳು ಬೇಡವೆಂದು ಹೇಗೆ ಹೇಳಲಿ. ಅವಳು ನನ್ನ ಕರುಳಕುಡಿ. ಅವಳನ್ನು ನನ್ನಂತೆಯೇ ಬೆಳೆಸುತ್ತೇನೆ. ನೋಡುತ್ತಿರಿ. ಮುಂದೆ ಅವಳು ಬೆಳೆದು ರಾಜಕುಮಾರನನ್ನೇ ಮದುವೆಯಾಗುತ್ತಾಳೆ. ಇದು ಅವಳ ಬಗ್ಗೆ ನನ್ನ ಭವಿಷ್ಯ."

..."ಬೇಗಂ, ಕ್ಷಮಿಸಿ, ನನಗೆ ಗಂಡು ಮಗು ಬೇಕೆಂದು ಬಯಸಿದ್ದು ನಿಜವೇ. ನನಗೊಬ್ಬ ಉತ್ತರಾಧಿಕಾರಿಯಾಗಿ ಇರಬೇಕೆಂದು, ಬರಬೇಕೆಂದು ಅಪೇಕ್ಷಿಸಿದ್ದು ಅಪರಾಧವೇ? ಆದರೆ ನಿನ್ನ ಈ ಮಗಳ ಮುಗ್ಧ ಅಪ್ಪುಗೆ, ವಾತ್ಸಲ್ಯದ ಅನುಭವ ಹೇಗಿರುತ್ತದೆ ಎಂದು ಅರ್ಥಮಾಡಿಕೊಂಡೆ. ನನ್ನ ನಿರ್ಲಕ್ಷ್ಯ, ಉದ್ಧಟತನ, ಒರಟುತನಗಳಿಂದ ನಿಮಗೆ ಬೇಸರವಾಗಿರುವುದು ಸಹಜವೇ. ಆದರೆ ಈಗ ನನಗೆ ಅರ್ಥವಾಗಿದೆ. ಎಲ್ಲಾ ಅಲ್ಲಾಹುವಿನ ನಿರ್ಧಾರ. ಗಂಡು ಮಗುವಿಗೆ ಕಾದು ಕಾದು, ಒಂದು ಮಗುವೂ ಆಗಲಿಲ್ಲವೆಂದೂ, ತಂದೆ ಆಗುವ ಅದೃಷ್ಟವೇ ಇಲ್ಲವೇನೊ ಎಂದುಕೊಂಡು ಕೊರಗುತ್ತಿದ್ದ ಮನಸ್ಸಿಗೆ, ಈ ಮಗು ಹುಟ್ಟಿ ತಂದೆ ಎಂದು ಕರೆಸಿಕೊಳ್ಳುವ ಅದೃಷ್ಟವನ್ನು

ಕೊಟ್ಟಿರುವಾಗ ಅದನ್ನು ಅಲ್ಲಾಹುನ ಕರುಣೆಯೆಂದು ಸ್ವೀಕರಿಸದಿರುವುದು ಹೇಗೆ ಸಾಧ್ಯ? ದಯವಿಟ್ಟು ನನ್ನನ್ನು ಕ್ಷಮಿಸಿ, ನಾನೂ ಈ ಮಗುವನ್ನು ಗಂಡು ಮಗುವಿನಂತೆಯೇ ಸಮರ್ಥವಾಗಿ, ಶೌರ್ಯ, ಸಾಹಸಗಳನ್ನು ರೂಢಿಸಿಕೊಳ್ಳುವಂತೆ, ನಿನ್ನಂತೆಯೇ ಆಗುವಂತೆ ಬೆಳೆಯಲು ಸಹಕರಿಸುತ್ತೇನೆ" ಎಂದು ಹೇಳುತ್ತಾ, ಲಾಡ್ಲಿಯಿಂದ ಬಿಡಿಸಿಕೊಂಡು ಒಮ್ಮೆಲೇ ಭಾವುಕನಾಗಿ ಎದ್ದು ಬಂದು ಅವಳನ್ನು ಗಟ್ಟಿಯಾಗಿ ಬಿಗಿದಪ್ಪಿಕೊಂಡ. ಈ ಅಪ್ಪುಗೆ ಎಂದೂ ದಕ್ಕದ ಅಪ್ಪುಗೆಯಾಗಿತ್ತು. ತುಂಬಾ ವಿಶೇಷವಾಗಿತ್ತು. ನಮ್ಮ ಮನಸ್ಸಿನ ಭಾವನೆಗಳಿಗೆ ಅನುಗುಣವಾಗಿಯೇ ನಮ್ಮ ಸ್ಪರ್ಶಾನುಭವಗಳು ಇರುತ್ತವೆ ಎಂಬ ಸತ್ಯ ಇಂದು ಶೇರ್‌ಆಫ್ಘನ್, ಅಲಿಖುಲಿಗೆ ಅರ್ಥವಾಗಿತ್ತು.

ಮೆಹರುನ್ನೀಸಾಗೆ ಫಿರ್‌ದೌಸ್ ಹೇಳಿದ ಮಾತುಗಳು ಅನುರಣಿಸಿದವು. ಅಲಿಖುಲಿಯ ನಿರ್ಲಕ್ಷ್ಯ, ಸಿಟ್ಟುಗಳನ್ನು ಹೇಳಿಕೊಂಡಾಗ, 'ಗಂಡಸರ ಬುದ್ಧಿಯೇ ಹಾಗೆ, ಕ್ರಮೇಣ ಅವರು ಬದಲಾಗುತ್ತಾರೆ. ನೋಡುತ್ತಿರಿ, ನಿಮಗಿಂತ ಹೆಚ್ಚಾಗಿ ನಿಮ್ಮ ಲಾಡ್ಲಿಯನ್ನು ಪ್ರೀತಿಸುತ್ತಾರೆ' ಎಂದದ್ದು, ಇಂದು ಪ್ರತ್ಯಕ್ಷವಾಗಿ ಕಂಡಂತಾಯಿತು. ಈಗ ಸಂಪೂರ್ಣವಾಗಿ ಗಂಡ ಬದಲಾಗಿದ್ದಾನೆ. ನಮ್ಮದು ಇನ್ನು ಸುಖೀಸಂಸಾರ, ಎಂದು ಮೆಹರುನ್ನೀಸಾ ಹಿರಿಹಿರಿ ಹಿಗ್ಗಿದಳು. ಗಂಡನ ಗೆಳೆಯರನ್ನು ತನ್ನ ಅಕ್ಕಪಕ್ಕದವರನ್ನು ಕರೆದು ಗಂಡ ಹೆಂಡಿರು, ತಮ್ಮ ಸಂಭ್ರಮವನ್ನು ಅದ್ದೂರಿಯಾಗಿ ಆಚರಿಸಿದರು. ಅಬ್ಬುಜಾನ್, ಅಮ್ಮೀಜಾನ್‌ರಿಗೆ, ತನ್ನ ಬದುಕಿನಲ್ಲಾದ ಬದಲಾವಣೆಯನ್ನು ವಿವರಿಸಿ ಬರೆಯಬೇಕು ಎಂದುಕೊಂಡಳು.

ಅಲಿಖುಲಿ ತನ್ನ ಬಿಡುವಿನ ವೇಳೆಯನ್ನೆಲ್ಲ ಮಗಳ ಜೊತೆಗೆ ಕಳೆಯುತ್ತಿದ್ದ. ಮಗುವಿಗೆ ಬೇಕಾಗುವ ವಸ್ತುಗಳನ್ನು ತಂದುತಂದು ತುಂಬಿದ. ಮಗಳ ಮೇಲೆ ಮೇರೆ ಮೀರಿ ಸುರಿಯುತ್ತಿದ್ದ ವಾತ್ಸಲ್ಯ ತನ್ನ ಮೇಲಿನ ಪ್ರೀತಿಗಳು ನಿರೀಕ್ಷೆಗಿಂತ ಹೆಚ್ಚಾದ್ದನ್ನು ಕಂಡ ಮೆಹರುನ್ನೀಸಾಗೆ, ಸಲೀಂನ ನೆನಪು ಮಸುಕಾಗುತ್ತಿದ್ದಂತೆ ಭಾಸವಾಯಿತು. ಇನ್ನು ಸಲೀಂ ತನಗೆ ಒಂದು ಕನಸು. ಕೈಗೆ ಎಟುಕದ ಗಗನ ಕುಸುಮ. ಮರಳ್ಗಾಡಿನ ಮರೀಚಿಕೆ. ಈಗ ನಾನು ಒಬ್ಬ ಪುರುಷನ ಹೆಂಡತಿ. ಒಂದು ಮಗುವಿನ ತಾಯಿ! ಬಾದಶಾಹ್ ಅಕ್ಬರ್ ಮತ್ತು ಪಾದಶಾಹ್ ಬೇಗಂ ರುಖೈಯ್ಯಾರ ವಿರೋಧ ಸಲೀಂನನ್ನು ಮದುವೆಯಾಗುವ ಅವಕಾಶದಿಂದ ತಪ್ಪಿಸಿತು. ಆದರೆ ಈಗ ಚಕ್ರವರ್ತಿ, ಮಾತಿಗೆ ಅಡ್ಡಿ ಹೇಳುವವರು ಯಾರೂ ಇಲ್ಲ. ಮೊದಲಿನ ನನ್ನ ನೆನಪು, ನನ್ನ ಮೇಲಿನ ಪ್ರೀತಿ ಇನ್ನೂ ಉಳಿದಿದ್ದರೆ, ಬಲವಂತದಿಂದ ತನ್ನನ್ನು ಪಡೆದುಕೊಳ್ಳಬಹುದಾಗಿತ್ತು. ಆದರೆ ಹಾಗಾಗಲಿಲ್ಲ. ತನ್ನಂಥ ಸುಂದರಿಯರು ಜನಾನಾದಲ್ಲಿ ನೂರಾರು ಮಂದಿ ಇದ್ದಾರೆ. ಜಗತ್‌ಗೋಸಿನಿಯಂತಹ ಸುಂದರವಾದ ಹೆಂಡತಿ ಇದ್ದಾಳೆ. ರುಖೈಯ್ಯಾಬೇಗಂ ಹೇಳಿದ್ದು ನಿಜ. ಗಂಡಸರ ಪ್ರೀತಿ ಕೇವಲ ತಾತ್ಕಾಲಿಕ. ಬಯಸುವುದೂ ಬೇಗ, ಬಯಸಿದ್ದನ್ನು ಅನುಭವಿಸಿ ಪಕ್ಕಕ್ಕೆ ಸರಿಸಿ ಮರೆಯುವುದೂ ಬೇಗ ಎಂದದ್ದು ಸತ್ಯ. ಬಾದಶಾಹ್ ಆಗಿರುವ ಜಹಾಂಗೀರನಿಗೆ ಇನ್ನೂ ನನ್ನ ನೆನಪು ಇರಬಹುದು ಎಂದು ಭಾವಿಸುವುದು ಹುಚ್ಚುತನ.

ನನ್ನ ಬಾಳಿನಲ್ಲಿ ಈಗ ಎಲ್ಲವೂ ನೆಟ್ಟಗಿದೆ. ನನ್ನ ಗಂಡ ನನಗೆ ತನ್ನ ಪೂರ್ವಸ್ಥಿತಿಯಲ್ಲಿ

ಲಭಿಸಿದ್ದಾನೆ. ಅವನ ಪ್ರೀತಿ ನನ್ನ ಆರಾಧನೆಯಾಗಿತ್ತು. ಎಲ್ಲ ರೀತಿಯಿಂದಲೂ ನನ್ನನ್ನು ಸಂತೋಷದಿಂದ ಇರಿಸಲು ಪ್ರಯತ್ನಿಸುತ್ತಿದ್ದ. ಅಂದಿನ ಆ ದಿನಗಳೇ ಮರುಕಳಿಸುತ್ತಿರುವಾಗ ನನ್ನ ನಿರಾಶೆ, ಹತಾಶೆ, ಸಂಕಟ, ನೋವುಗಳನ್ನು ಮರೆತು ಅವನೊಂದಿಗೆ ಅನ್ಯೋನ್ಯವಾಗಿ ಬಾಳುವುದೊಂದೇ ನನ್ನ ಗುರಿಯಾಗಬೇಕು ಎಂದುಕೊಂಡಳು.

ಗಂಡನ ಸಾವು, ಪಾದಶಾಹ್ ಬೇಗಂ ರುಖೈಯ್ಯಾ ಪದಚ್ಯುತಳಾಗುವಂತೆ ಮಾಡಿತ್ತು. ಜನಾನಾದ ಅಧಿಕಾರ ಕೈಜಾರಿ ಹೋಗಿತ್ತು. ಮಾತನಾಡುವುದಕ್ಕೆ ಜನಾನಾದಲ್ಲಾಗಲಿ, ಅರಮನೆಯಲ್ಲಾಗಲಿ ಯಾರೂ ಇರಲಿಲ್ಲ. ಒಂಟಿತನ ಬಹಳವಾಗಿ ಕಾಡಿತ್ತು. ಆಗ ಅವಳಿಗೆ ನೆನಪಾದದ್ದು ನೀಸಾ! ಕೂಡಲೇ ತನ್ನ ಅಳಲನ್ನು ಪತ್ರದಲ್ಲಿ ಬರೆದು, ಅಹಮದ್ ಕೈಲಿ ನೀಸಾಳಿಗೆ ಕೊಡುವಂತೆ ಹೇಳಿ ಕಳಿಸಿದಳು. ಸೇವಕ ಹುಡುಗ ಅಹಮದ್, ಮೆಹರುನ್ನೀಸಾಳನ್ನು ಹುಡುಕುತ್ತಾ ಓಡಿ ಬಂದ. ಲಾಡ್ಲಿ ಎದುರಾದಳು.

"ಲಾಡ್ಲಿ ಅಮ್ಮೀಜಾನ್ ಎಲ್ಲಿದ್ದಾರೆ?"

"ಯಾಕೆ ಭಾಯಿಜಾನ್"

"ಅಮ್ಮೀಜಾನ್‌ರನ್ನು ಹುಡುಕಿಕೊಂಡು ಯಾರೋ ಬಂದಿದ್ದಾರೆ"

"ಹಾಗೋ, ಸರಿ ನೀನು ಇಲ್ಲಿಯೇ ಇರು. ನಾನು ಹೋಗಿ ಕರೆದುಕೊಂಡು ಬರುತ್ತೇನೆ" ಎಂದು ಒಳಗೆ ಓಡಿದಳು. ಒಂದೆರಡು ನಿಮಿಷಗಳಲ್ಲಿ ಲಾಡ್ಲಿ ಜೊತೆ ಮೆಹರುನ್ನೀಸಾ ಹೊರಗೆ ಬಂದಳು.

"ಯಾಕೋ ಅಹಮದ್. ನನ್ನನ್ನು ಕೇಳಿದೆಯಂತೆ. ಏನಾಗಬೇಕಿತ್ತು?"

"ಏನೂ ಇಲ್ಲ ಮಾಲಕಿನ್, ತಮ್ಮನ್ನು ಹುಡುಕಿಕೊಂಡು ಸಂದೇಶವಾಹಕರೊಬ್ಬರು ಬಂದಿದ್ದಾರೆ!!"

"ಸರಿ ಒಳಗೆ ಬರಹೇಳು"

ಸಂದೇಶವಾಹಕ ಒಳಗೆ ಬಂದು, ತಲೆ ಬಾಗಿ ಕೋರ್ನಿಶ್ ಮಾಡಿ ತಾನು ತಂದಿದ್ದ ಸಂದೇಶ ಪತ್ರವನ್ನು ನೀಡುತ್ತಾ,

"ಮಾಲಕಿನ್, ಪಾದಶಾಹ ಬೇಗಂ ತಮಗೆ ಈ ಸಂದೇಶವನ್ನು ತಲುಪಿಸಲು ಹೇಳಿದ್ದಾರೆ. ಹಾಗೆಯೇ ಇದನ್ನು ಓದಿಯಾದ ನಂತರ, ತಾವೇನಾದರೂ ಪತ್ರ ನೀಡಿದರೆ, ಅದನ್ನು ಕೂಡಲೇ ತಂದು ತಲುಪಿಸಬೇಕೆಂದಿದ್ದಾರೆ."

ಮೆಹರುನ್ನೀಸಾ ಅವನು ಕೊಟ್ಟ ಪತ್ರವನ್ನು ಅವನಿಂದ ಪಡೆದು, ಅಹಮದ್‌ಗೆ, ಅವನಿಗೆ ಉಳಿದುಕೊಳ್ಳಲು ವ್ಯವಸ್ಥೆ ಮಾಡೆಂದು ಆದೇಶಿಸಿದಳು.

"ರುಖೈಯ್ಯಾಬಾನು ಬೇಗಂರಿಂದ ಪತ್ರ ಬರುವುದೆಂದರೆ! ಏನೋ ವಿಶೇಷವಿರಬೇಕು. ಅವರನ್ನು ಕಂಡು ಮಾತಾಡಿ ಬಹಳ ದಿನಗಳಾದವು. ಅವರ ಜೊತೆ ನಾನೆಷ್ಟು ಸಂತೋಷದ ದಿನಗಳನ್ನು ಕಳೆದಿದ್ದೇನೆ. ಇಷ್ಟು ದಿನ ಆದ ಮೇಲೆ ನನ್ನ ನೆನಪಾದರೂ ಹೇಗೆ ಬಂತು? ಯಾಕೆ ಬಂತು? ಎಂದು ಯೋಚಿಸುತ್ತಲೇ ತನ್ನ ಕೋಣೆಯತ್ತ ನಡೆದು ಸುಪ್ಪತ್ತಿಗೆಯ ಮೇಲೆ ಒರಗಿ, ಮೆಲ್ಲಗೆ ಪತ್ರ ಬಿಡಿಸಿ ಕಣ್ಣಾಡಿಸಿದಳು.

"ನನ್ನ ಪ್ರೀತಿಯ ನೀಸಾ ಹೇಗಿದ್ದೀಯ? ಷೇರ್-ಇ-ಆಫ್ಘನ್ ಮತ್ತು ಮಗಳು ಹೇಗಿದ್ದಾರೆ? ಈಗ ನಿನಗೆ ಪತ್ರ ಬರೆಯುತ್ತಿರುವುದನ್ನು ನೋಡಿ ಆಶ್ಚರ್ಯವಾಗಿರಬೇಕು.

ಪದೇ ಪದೇ ನಿನ್ನ ನೆನಪಾಗುತ್ತದೆ. ನನ್ನ ಜೊತೆಗೆ ನನ್ನ ಒಂಟಿತನವೊಂದನ್ನು ಬಿಟ್ಟರೆ ಯಾರೂ ಇಲ್ಲ. ನನ್ನ ಭಾವನೆಗಳನ್ನು ಯಾರೊಂದಿಗೆ ಹಂಚಿಕೊಳ್ಳಲಿ. ಈಗ ನನ್ನಲ್ಲಿ ಯಾವ ಅಧಿಕಾರವೂ ಇಲ್ಲ. ಜನಾನಾದ ಅಧಿಕಾರವನ್ನು ಜಗತ್‌ಗೋಸಿನಿ ವಹಿಸಿಕೊಂಡಿದ್ದಾಳೆ. ನಿನಗೇ ತಿಳಿದಂತೆ ಮೊದಲಿನಿಂದಲೂ ನನ್ನ ಒಡೆತನದ ಬಗ್ಗೆ ಕರುಬುತ್ತಿದ್ದಳು. ಸಲೀಂ ಬಾದಶಾಹ್ ಆದ ಮೇಲೆ ಅವಳನ್ನು ಹಿಡಿಯುವವರೇ ಇಲ್ಲ. ನನ್ನ ಅಸ್ತಿತ್ವಕ್ಕೆ ಬೆಲೆಯೇ ಇಲ್ಲ. ಸಲೀಂ ಕೂಡಾ, ನಿನ್ನಿಂದ ತಪ್ಪಿಸಿದ್ದಕ್ಕಾಗಿ ಬಾದಶಾಹ್ ಮತ್ತು ನಮ್ಮಿಬ್ಬರ ಮೇಲೆ ಅಸಮಾಧಾನಗೊಂಡು, ಅವರು ತೀರಿಕೊಂಡ ಮೇಲೂ, ಇನ್ನೂ ರಾಜಿಯಾದಂತೆ ಕಾಣುವುದಿಲ್ಲ. ಬೇಟಾ ನೀಸಾ ನಿನಗೂ ನನ್ನ ಮೇಲೆ ಸಿಟ್ಟಿರಬಹುದು. ಸಲೀಂನ ಸಂಗಾತಿಯಾಗಿ ಬಂದಿದ್ದರೆ, ನನಗೂ ಸಂತೋಷವೇ ಆಗುತ್ತಿತ್ತು. ಆದರೆ ಈ ವಿಚಾರದಲ್ಲಿ ಬಾದಶಾಹರ ಲೆಕ್ಕಾಚಾರವೇ ಮುಖ್ಯ. ಅಧಿಕಾರಿಗಳು, ಆಸ್ಥಾನಿಕರು, ಬಾದಶಾಹರ ಆಪ್ತ ಸಲಹಾಗಾರರು, ಎಲ್ಲರೂ ನಿನ್ನ ವಿರುದ್ಧವಿದ್ದರು. ರಾಜ್ಯದಲ್ಲಿ ಏನೇನೋ ವದಂತಿಗಳು ಟೀಕೆಗಳು! ನಾಳೆ ಈ ಮದುವೆಯ ಪರಿಣಾಮ ಏನಾಗಬಹುದೆಂಬ ಕಾರಣದಿಂದ ಮತ್ತು ಅದೇ ಸಮಯಕ್ಕೆ ಷೇರ್ ಆಫ್ಘನ್ ಕಣ್ಣಿಗೆ ಬಿದ್ದದ್ದರಿಂದ, ತಮಗೊಂದು ದಾರಿಯನ್ನು ಕಂಡುಕೊಂಡರು. ಖುರ್ರಂ ಆಗಾಗ ನಿನ್ನನ್ನು ನೆನಪಿಸಿಕೊಳ್ಳುತ್ತಾನೆ. ನನ್ನ ಮನಸ್ಸಿನ ಬೇಗುದಿ ದೂರವಾಗಬೇಕಾದರೆ, ಒಮ್ಮೆ ನೀನು ನನ್ನಲ್ಲಿಗೆ ಬರುವ ಸಾಧ್ಯತೆಯಿದೆಯೇ ಯೋಚಿಸು. ನಿನ್ನ ಅಮ್ಮಾಜಿ ಅಸ್ಮತ್, ಅಬ್ಬಾಜಾನ್ ಘಿಯಾಸ್‌ರನ್ನು ಮಾತನಾಡಿಸಿದಾಗಲೆಲ್ಲ ನಿನ್ನ ಬಗ್ಗೆ ವಿಚಾರಿಸುತ್ತಿರುತ್ತೇನೆ.

"ಸಲೀಂಗೆ ನಿನ್ನ ನೆನಪು ಇನ್ನೂ ಉಳಿದಿದೆಯೋ ಏನೋ ತಿಳಿಯುತ್ತಿಲ್ಲ. ಅವನೂ ಕೂಡಾ ಕೆಲವು ಸಮಸ್ಯೆಗಳಲ್ಲಿ ಸಿಲುಕಿದ್ದಾನೆ. ಮಾನ್‌ಬಾಯಿಯ ಸಾವು, ಮಗ ಖುಸ್ರೋನ ವಿದ್ರೋಹ, ರಾಜಾ ಮಾನ್‌ಸಿಂಗ್‌ನ ಪಿತೂರಿ, ಇತ್ಯಾದಿ ಇತ್ಯಾದಿಗಳಿಂದ ತಲೆಕೆಡಿಸಿಕೊಂಡಿದ್ದಾನೆ. ಇವುಗಳನ್ನು ಮರೆಯಲಿಕ್ಕೋಸ್ಕರ ಸದಾ ಕುಡಿತದಲ್ಲಿ ಮುಳುಗಿರುತ್ತಾನೆ. ಅವನಿಗೆ ಬುದ್ಧಿ ಹೇಳುವುದಕ್ಕೆ ಮಾರ್ಗದರ್ಶನ ನೀಡುವುದಕ್ಕೆ ಸರಿಯಾದ ಹಿರಿಯರ್‍ಯಾರೂ ಇಲ್ಲ. ಖುತುಬುದ್ದೀನ್ ಕೋಕಾ, ಮಹಬ್ಬತ್‌ಖಾನ್‌ರು ಅವನ ತಲೆಕೆಡಿಸುತ್ತಿದ್ದಾರೆ.

"ನೀಸಾ ನಿನ್ನ ಗಂಡನನ್ನು ಎಚ್ಚರಿಕೆಯಿಂದ ನೋಡಿಕೋ, ಖುಸ್ರೋ ವಿಷಯದಿಂದ ದೂರವಿರಲು ಬುದ್ಧಿಹೇಳು. ರಾಜಕೀಯ ನಡೆ ಹೇಗೋ ಏನೋ. ಯಾವ ಸಮಯದಲ್ಲಿ ಯಾರಿಂದ ಏನಾಗುತ್ತದೋ ಹೇಳಲಾಗುವುದಿಲ್ಲ. ಜಗತ್‌ಗೋಸಿನಿ ಮತ್ತು ಮಹಬ್ಬತ್‌ಖಾನರು ಒಟ್ಟಿಗೆ ಏನೇನೋ ಮಸಲತ್ತುಗಳನ್ನು ಮಾಡುತ್ತಿರುವಂತೆ ಕಾಣುತ್ತದೆ. ಅವಳ ಕಡೆಯ ಗೂಢಚಾರಿಗಳು ಮೈಯೆಲ್ಲ ಕಣ್ಣಾಗಿ ಕಾಣುತ್ತಿದ್ದಾರೆ.

"ಸಲೀಮಾ ಸುಲ್ತಾನ್‌ಬೇಗಂ ಕೂಡಾ ಈಗ ಜೊತೆಗಿಲ್ಲ. ನೀನಿಲ್ಲಿ ಇದ್ದಾಗ, ನನಗೇನೋ ಬಲ, ಭರವಸೆಗಳು ಜೊತೆಗಿದೆ ಎನ್ನುವ ಧೈರ್ಯವಿತ್ತು. ಆದರೆ ಈಗ ಹೆದರಿಕೆ, ಒಂಟಿತನಗಳು ಬಹಳ ಭಯಾನಕವಾಗಿ ಕಾಡುತ್ತಿವೆ. ಹೋಗಲಿ ಬಿಡು. ನನ್ನ ಗೋಳಿನಿಂದ ನಿನ್ನ ಮನಸ್ಸಿಗೆ ನೋವುಂಟುಮಾಡಿದ್ದಕ್ಕೆ ಕ್ಷಮಿಸು.

"ನಿನ್ನಂಥ ಅದ್ವಿತೀಯ ಹೆಂಡತಿ ಜೊತೆ ದೊರೆತದ್ದು ಅಲಿಖುಲಿಯ ಪುಣ್ಯ. ನಿನ್ನನ್ನು

ತುಂಬ ಚೆನ್ನಾಗಿ ನೋಡಿಕೊಳ್ಳುತ್ತಿರಬೇಕೆಂದು ಭಾವಿಸುತ್ತೇನೆ. ನಿನ್ನ ಪ್ರೀತಿಯ ರುಖೈಯ್ಯಾ ಬೇಗಂಳ ಆಶೀರ್ವಾದಗಳು. ಸ್ವಲ್ಪ ಬಿಡುವು ಮಾಡಿಕೊಂಡು ಇಲ್ಲಿಗೆ ಬಾ. ಎಲ್ಲರ ಜೊತೆ ನೀನೂ ಒಂದಷ್ಟು ದಿನಗಳನ್ನು ಕಳೆಯಬಹುದು."

– ರುಖೈಯ್ಯಾ ಬೇಗಂ

ಪತ್ರವನ್ನು ಇಡಿಯಾಗಿ ಓದಿದಳು. ಅರಿವಿಲ್ಲದಂತೆ ಎರಡು ಹನಿಗಳು ಕಣ್ಣಿಂದ ಉದುರಿದವು. ಎದ್ದು ಕಣ್ಣೊರೆಸಿಕೊಂಡು ತಾನೂ ಆ ಪತ್ರಕ್ಕೆ ಉತ್ತರ ಬರೆಯಲು ಕುಳಿತಳು.

ಹೆಚ್ಚಿಗೇನೂ ಬರೆಯಲಿಲ್ಲ. ಒಂದಷ್ಟು ಸಾಂತ್ವನದ ಮಾತುಗಳನ್ನು ಬರೆದಳು. ತಪ್ಪಿಯೂ ಅಲಿಖುಲಿಯ ಅಸಮಾಧಾನ, ಒರಟುತನ, ಮಗುವಿನ ವಿಚಾರದಲ್ಲಿ ಅವನ ನಿಲುವುಗಳು ನಂತರದಲ್ಲಿ ಬದಲಾದದ್ದು ಬರೆಯಲಿಲ್ಲ. ಲಾಡ್ಲಿಯ ಬಗ್ಗೆಯಂತೂ ಪ್ರಶಂಸೆಯ ಸುರಿಮಳೆ. ಹೀಗೆ ಏನೆಲ್ಲವನ್ನು ಬರೆದು ಸಂದೇಶವಾಹಕನ ಕೈಲಿ ಕಳಿಸಿಕೊಟ್ಟಳು.

ಮತ್ತೆ ಕನಸುಗಳು! ನೆನಪುಗಳು! ಸಂಪೂರ್ಣವಾಗಿ ಮೈಮರೆತು ಕುಳಿತಳು. ಎಲ್ಲವೂ ತಾನು ಬಯಸಿದಂತೆ ಆಗಿದ್ದರೆ, ತನ್ನ ಪ್ರತಿಸ್ಪರ್ಧಿಯಾಗಿ ಕಾಡುತ್ತಿದ್ದ ಜಗತ್‌ಗೋಸಿನಿಗೆ ಸರಿಯಾಗಿ ಬುದ್ಧಿ ಕಲಿಸುತ್ತಿದ್ದೆ. ಅಧಿಕಾರ, ಚೆಲುವುಗಳಿಂದಾಗಿ ಅತಿಯಾದ ಅಹಂಕಾರದಿಂದ ಬೀಗುವ ಅವಳಿಗೆ, ನಾನೇನೆಂದು ತೋರಿಸುತ್ತಿದ್ದೆ. ಆದರೆ ವಿಧಿಯಾಟ ಅದಕ್ಕೆ ಅವಕಾಶವೇ ಇಲ್ಲದಂತೆ ನನ್ನ ಸುಂದರ ಭವಿಷ್ಯವನ್ನು ಹೊಸಕಿ ಹಾಕಿಬಿಟ್ಟಿತು.

ಒಂದು ವೇಳೆ ಸಲೀಂರಿಗೆ ಇನ್ನೂ ನನ್ನ ನೆನಪು ಮಾಸದೆ ಉಳಿದಿದ್ದರೆ, ಏನಾದರೂ ಮಾಡುತ್ತಿದ್ದ. ತನ್ನನ್ನು ಭೇಟಿಯಾಗಲು ಪ್ರಯತ್ನಿಸುತ್ತಿದ್ದ. ಪ್ರೇಮಭಿಕ್ಷೆ ಬೇಡುತ್ತಿದ್ದ. ಆದರೆ ಈಗ ಅವನಿಗೆ ತಾನೇಕೆಬೇಕು. ಜನಾನಾದ ತುಂಬಾ ಹೆಂಡಿರು, ನಾಚ್‌ವಾಲಿಗಳು, ಪೀಪಾಯಿಗಟ್ಟಲೆ ಹೆಂಡ, ತಲೆಕೆಡಿಸುವ, ತಮಗೆ ತಕ್ಕಂತೆ ತಾಳ ಹಾಕಿಸುವ ಗೆಳೆಯರು, ಎಲ್ಲಕ್ಕಿಂತ ಹೆಚ್ಚಾಗಿ ಎಲ್ಲೆಯಿಲ್ಲದ ಅಧಿಕಾರ! ಹೀಗಿರುವಾಗ, ಬಡಪಾಯಿ ಘಿಯಾಸ್‌ನ ಮಗಳು ಮೆಹರುನ್ನೀಸಾ ಯಾಕೆ ಬೇಕು? ರುಖೈಯ್ಯಾ ಬೇಗಂ ಹೇಳಿದಂತೆ ಅವನಿಗೆ ನನ್ನ ನೆನಪಾದರೂ ಹೇಗೆ ಇದ್ದೀತು?

* * *

ರುಖೈಯ್ಯಾ ಬೇಗಂರ ಪತ್ರ ಓದಿದ ಮೇಲೆ, ಅವಳಿಗೆ ಯಾಕೋ ಸಂಕಟವೆನಿಸಿತು. ಒಂಟಿತನವನ್ನು ಅನುಭವಿಸುವ ಹೆಣ್ಣಿನ ನೋವು ಹೇಗಿರುವುದೆಂಬುದನ್ನು ಸ್ವಂತ ಅನುಭವದಿಂದ ಅರಿತಿದ್ದಳು. ಅಲಿಖುಲಿಯ ಅನುಪಸ್ಥಿತಿಯಿಂದ ಎಷ್ಟೋ ಸಲ ಒಮ್ಮೊಮ್ಮೆ, ಮಧ್ಯಂತರಗಳಲ್ಲಿ ಅನುಭವಿಸುವ ನೋವೇ ಹಾಗಿದ್ದ ಪಕ್ಷದಲ್ಲಿ, ಬಾದಶಾಹ್ ಅಕ್ಬರನ ಜೊತೆ ಸುದೀರ್ಘ ಕಾಲದ ಅನ್ಯೋನ್ಯ ದಾಂಪತ್ಯದ ಸುಖ, ಪಾದಶಾಹ ಬೇಗಂ ಎಂದು ಕರೆಸಿಕೊಳ್ಳುವ ಅಭಿಮಾನ, ಜನರಿಂದ ದೊರೆಯುತ್ತಿದ್ದ ಗೌರವ ಮರ್ಯಾದೆಗಳು, ಯಾರ ಹಂಗಿಗೂ ಬೀಳಬೇಕಾದ ಅಗತ್ಯವಿಲ್ಲದೆ ಜನಾನಾದ ಅಧಿಕಾರ, ಆಡಳಿತ – ಇವೆಲ್ಲವೂ ತಪ್ಪಿಹೋದಾಗ ಅನುಭವಿಸುವ ಒಂಟಿತನ ಮತ್ತೂ ಕ್ರೂರವಾಗಿರುತ್ತದೆ. ದೇವರೇ ಅಂತಹ ಪರಿಸ್ಥಿತಿಯನ್ನು ನನಗೆ ಕೊಡಬೇಡವೆಂದು ಮನಸ್ಸಿನಲ್ಲಿಯೇ ಪ್ರಾರ್ಥಿಸಿದಳು.

ಈ ಪತ್ರದ ನೆನಪಿನ ಕಾಟದ ಜೊತೆಗೆ, ಸೆಕೆ, ಬೆವರು. ಇಷ್ಟು ಹೊತ್ತಾದರೂ ಗಂಡ

ಬರಲಿಲ್ಲವೆಂಬ ಕಾತುರಗಳಿಂದ ನಿದ್ದೆಯೂ ಸರಿಯಾಗಿ ಬಂದಿರಲಿಲ್ಲ. ಪಕ್ಕದಲ್ಲಿ ಮಲಗಿದ್ದ ಲಾಡ್ಲಿಯ ಮುಖ ನೋಡಿದಳು. ಎಷ್ಟು ಮುಗ್ಧತೆ, ನಿರಾಳತೆ, ತಾಯಿಯ ವಾತ್ಸಲ್ಯದ ಸ್ಪರ್ಶ! ತನ್ನ ಬಾಲ್ಯದ ದಿನಗಳು ನೆನಪಾದವು. ಅಬ್ಬುವೇ ಅಮ್ಮೀಜಾನ್‌ಗಿಂತ ಹೆಚ್ಚಾಗಿ ತನ್ನನ್ನು ನೋಡಿಕೊಳ್ಳುತ್ತಿದ್ದುದು. ಅಬ್ಬಾ! ಅಂತಹ ದಿನಗಳು ಶಾಶ್ವತವಾಗಿ ದೊರೆಯಬಾರದೇನು? ಎಂದು ಯೋಚಿಸುತ್ತಲೇ ಹೊರಳಾಡುತ್ತಿದ್ದಳು.

ಥಟ್ಟನೆ, ಯಾರೋ ಒಳಗೆ ನುಗ್ಗಿದಂತಾಗಿ, ಗಾಬರಿಯಿಂದ ಎದ್ದಳು. ಸೊಳ್ಳೆ ಪರದೆಯನ್ನು ಪಕ್ಕಕ್ಕೆ ಸರಿಸಿ ನೋಡಿದಳು. ಆಶ್ಚರ್ಯಪಟ್ಟಳು.

"ಇದೇನು ಹೀಗೆ ಈ ಹೊತ್ತಿನಲ್ಲಿ ಇಷ್ಟೊಂದು ಆತುರದಲ್ಲಿ ನುಗ್ಗಿ ಬರುತ್ತಿದ್ದೀರಿ?"

"ಬೇಗಂ, ನನಗೊಂದು ಪತ್ರ ಬಂದಿದೆ."

"ಪತ್ರ ಬಂದಿದೆ! ನಿಮಗೆ ಯಾರು ಪತ್ರ ಬರೀತಾರೆ. ನನ್ನ ತಂದೆಯಿಂದಲೇ ಇರಬೇಕು" ಎಂದು ಸಂತಸ ವ್ಯಕ್ತಪಡಿಸಿದಳು.

"ನಿನ್ನ ಆತುರ, ಕಾತರಗಳನ್ನು ಸ್ವಲ್ಪ ಬದಿಗಿಟ್ಟು ಕೇಳಿಸಿಕೋ. ನನಗೆ ಬಾದಶಾಹರಿಂದ ಪತ್ರ ಬಂದಿದೆ."

"ಬಾದಶಾಹರಿಂದ ಪತ್ರ! ಅದೂ ನಿಮಗೆ! ತಮಾಶೆಯಾಗಿದೆ. ಏನಂತೆ ವಿಷಯ?"

"ಖುಸ್ರೋ ತಪ್ಪಿಸಿಕೊಂಡು, ಮತ್ತೆ ಹುನ್ನಾರ ನಡೆಸಿ ಸೇನೆಯೊಂದಿಗೆ, ಆಗ್ರಾದಿಂದ ಲಾಹೋರಿಗೆ ಹೊರಟಿದ್ದಾನಂತೆ."

"ಅದಕ್ಕೆ ನೀವೇನು ಮಾಡಬೇಕಂತೆ? ನಿಮಗ್ಯಾಕೆ ವಿಷಯ ತಿಳಿಸುತ್ತಿದ್ದಾರೆ."

"ಬಹುಶಃ ನನ್ನ ಸಹಾಯದ ನಿರೀಕ್ಷೆಯಿಂದಲೇ ಈ ಪತ್ರ ಬರೆದಿದ್ದಾರೆ."

"ಹಾಗಾದರೆ ಒಳ್ಳೆಯದೇ ಅಲ್ಲವೇ? ಅವರಿಗೆ ನೆರವಾಗಿ ನಿಂತರೆ, ಸಂತೋಷವಾಗುತ್ತದೆ. ನಿಮ್ಮ ಅಧಿಕಾರ, ಅಂತಸ್ತುಗಳೂ ಬೆಳೆಯುತ್ತವೆ. ನಮ್ಮ ಇಡೀ ಕುಟುಂಬದ ಬಗ್ಗೆ ಅವರಿಗೆ ಎಲ್ಲಿಲ್ಲದ ಅಭಿಮಾನ, ಗೌರವ."

"ಅಯ್ಯೋ ಹುಚ್ಚಿ ನಾನು ಹೋಗಬೇಕೆಂದಿರುವುದು ಖಾನ್-ಇ-ಖಾನನ್‌ಗೆ ನೆರವು ನೀಡಲು. ಅವನು ಖುಸ್ರೋನನ್ನು ರಕ್ಷಿಸಿಕೊಳ್ಳುತ್ತಾನೆ. ಮಾನ್‌ಸಿಂಗ್, ಅಬ್ದುರ್ರಹೀಮ್ ಎಲ್ಲರೂ ಅವನ ಪರವಾಗಿದ್ದಾರೆ. ಗೆಲುವು ಅಷ್ಟೇನೂ ಕಷ್ಟವಲ್ಲ. ಯಾವಾಗಲೂ ಗೆಲ್ಲುವ ಕುದುರೆಯ ಜೊತೆಗಿರಬೇಕು. ಖುಸ್ರೋ ಗೆದ್ದರೆ, ಈ ದರಿದ್ರ ಬರ್ದವಾನದಿಂದ ಮುಕ್ತಿ ಸಿಗುತ್ತದೆ."

ಮೆಹರುನ್ನೀಸಾಗೆ ನೋವಾಯಿತು. ಆದರೆ ಅಲಿಖುಲಿ ಈಗಾಗಲೇ ಖುಸ್ರೋ ಸಿಂಹಾಸನಾರೋಹಣ ಮಾಡಿಬಿಟ್ಟಿರುವನೇನೋ ಎಂಬಂತೆ ಸಂಭ್ರಮಿಸಿದ. ಜಹಾಂಗೀರ್ ಬಾದಶಾಹನಾಗಿ ಅಧಿಕಾರ ಸ್ವೀಕರಿಸಿ ಕೆಲವೇ ದಿನಗಳಾಗಿರುವಾಗ ಈಗಲೇ ಕಂಟಕ ಎದುರಾಗಬೇಕೆ? ಎಂದು ಚಿಂತಿಸಿದಳು.

ಅಲಿಖುಲಿ ತುಂಬು ಉತ್ಸಾಹದಲ್ಲಿ ಹೊರಡುವ ಸಿದ್ಧತೆ ನಡೆಸಿದ.

ಎಷ್ಟೇ ಹೇಳಿದರೂ ಕೇಳಿಸಿಕೊಳ್ಳುವ ಸ್ಥಿತಿಯಲ್ಲಿ ಅಲಿ ಇರಲಿಲ್ಲ. ಅಲ್ಲಿನ ಪರಿಸ್ಥಿತಿಯ ಬಗ್ಗೆ ಸುದ್ದಿ ಬರುವವರೆಗೆ ಸುಮ್ಮನಿರುವಂತೆ ಬೇಡಿಕೊಂಡಳು. ಆದರೆ "ಇಷ್ಟು ದಿನ ಸುಮ್ಮನಿದ್ದದ್ದೇ ಈ ದರಿದ್ರ ಸ್ಥಿತಿಗೆ ಕಾರಣ. ಆಪತ್ಕಾಲದಲ್ಲಿ ನನ್ನ ಆಪ್ತರಿಗೆ ಸಹಾಯ

ಮಾಡದಿದ್ದರೆ, ಯಾವಾಗ ನನ್ನ ಕೃತಜ್ಞತೆಯನ್ನು ಸಲ್ಲಿಸಲಿ" ಎಂದು ನಿಷ್ಠುರ ನಿರ್ಧಾರವನ್ನು ತಿಳಿಸಿದ.

ಈಗ ಜೊತೆಯಾಗಿರುವ ಇವರೆಲ್ಲ ದೇಶದ್ರೋಹಿಗಳೆಂದು ಶಿಕ್ಷೆಯನ್ನು ಅನುಭವಿಸಬೇಕಿದ್ದವರು ಜಹಾಂಗೀರ್ ಬಾದಶಾಹರ ಉದಾರ ಮನಸ್ಸಿನಿಂದಾಗಿ ಬದುಕಿ ಉಳಿದಿದ್ದಾರೆ. ಇದನ್ನೂ ಅರ್ಥಮಾಡಿಕೊಳ್ಳದ ಕೃತಘ್ನರು, ಈಗ ಸಿಕ್ಕಿ ಬಿದ್ದಲ್ಲಿ ಖಂಡಿತವಾಗಿಯೂ ಬದುಕುಳಿಯಲಾರರು. ಅದರಲ್ಲಿ ಅಲಿಖುಲಿಯೂ ಒಬ್ಬ. ಇಷ್ಟಾದರೂ ಅಲಿಖುಲಿ ಮತ್ತೆ ಅಪಾಯದ ದಾರಿಗೆ ಹಿಂತಿರುಗುತ್ತಿದ್ದಾನೆ. ಅಲಿಖುಲಿಗೆ ಬರ್ದವಾನದಿಂದ ಲಾಹೋರಿಗೆ ಹೋಗಲು ಎಷ್ಟು ತಿಂಗಳೋ! ಯಾರಿಗೆ ಗೊತ್ತು. ಈ ದೀರ್ಘ ಅವಧಿಯಲ್ಲಿ ಏನೇನು ಬದಲಾವಣೆಗಳಾಗುವುದೋ ಯಾರಿಗೆ ಗೊತ್ತು. ಈ ಬಾರಿ, ಖುಸ್ರೋನ ಬಂಡಾಯದಲ್ಲಿ ಅಲಿಖುಲಿಯ ಪಾತ್ರವಿದೆಯೆಂದು ತಿಳಿದು ಬಂದರೆ ಮುಗಿಯಿತು. ಅವನೊಂದಿಗೆ ನನ್ನ ಭವಿಷ್ಯ, ನಮ್ಮೆಲ್ಲರ ಭವಿಷ್ಯ ಏನಾಗುವುದೋ ಎಂದು ಚಿಂತಿತಳಾದಳು. ಬಾದಶಾಹರು ಬಹುಶಃ ಅಲಿಖುಲಿಯನ್ನು, ಮತ್ತೆಂದಾದರೂ ವಿದ್ರೋಹದ ಪ್ರಯತ್ನ ನಡೆದಲ್ಲಿ, ಅದರಲ್ಲಿ ಸೇರದಿರಲೆಂದೇ ಇಷ್ಟು ದೂರದ ಬರ್ದವಾನಿಗೆ ಕಳಿಸಿದ್ದಾರೆ ಎನಿಸುತ್ತೆ. ಆದರೆ ಈ ಮೂರ್ಖನಿಗೆ ಸೂಕ್ಷ್ಮಗಳು ತಿಳಿಯುವುದಿಲ್ಲ. ಪರಿಸ್ಥಿತಿಯ ಬಗ್ಗೆ, ಅದರ ಆಗುಹೋಗುಗಳ ಬಗ್ಗೆ ಸ್ವಲ್ಪ ಮಟ್ಟಿಗಾದರೂ ಆಲೋಚಿಸುವುದು ಬೇಡವೇ? ಯೋಚನೆಗಿಂತ ಮೊದಲು ದಿಢೀರನೆ ಕಾರ್ಯಪ್ರವೃತ್ತನಾಗುತ್ತಾನೆ. ಇಂತಹ ವ್ಯಕ್ತಿಯ ಭವಿಷ್ಯದ ಬಗ್ಗೆ ಯಾವ ರೀತಿಯ ನಂಬಿಕೆಯನ್ನು ಇರಿಸಿಕೊಳ್ಳುವುದು? ಮತ್ತೊಮ್ಮೆ ಪ್ರಯತ್ನಿಸಿ ನೋಡಬೇಕು ಎನಿಸಿ,

"ಹುಜೂರ್ ನಿಮಗೆ ಖುಸ್ರೋ ಮೇಲೆ, ನಿಮ್ಮ ಹಿತೈಷಿಗಳ ಮೇಲೆ ಪ್ರೀತಿ ಇರಬಹುದು. ಆದರೆ ಸ್ವಲ್ಪ ತಾಳ್ಮೆ ಇರಿಸಿಕೊಳ್ಳಿ. ನಿಮ್ಮ ಹೆಂಡತಿ, ಮಗಳ ಬಗ್ಗೆ ಯೋಚಿಸಿ."

"ನೀನು ನನಗೆ ರಾಜಕೀಯ ಬೋಧಿಸಬೇಡ. ನಾನು ಏನು ಮಾಡಬೇಕೆಂಬುದನ್ನು ನಿನ್ನಿಂದ ಹೇಳಿಸಿಕೊಳ್ಳಬೇಕಿಲ್ಲ. ಸುಮ್ಮನೆ ನನ್ನ ದಾರಿಗೆ ಅಡ್ಡ ಬರಬೇಡ. ನನಗೇನಾದರೇನು? ನಿನಗೆ ನಿನ್ನ ಮಗಳಿಗೆ ರಕ್ಷಣೆಗೆ ನಾನೇ ಬೇಕೇನು? ಬಾದಶಾಹರೇ ಸಂತೋಷದಿಂದ ನಿಮ್ಮನ್ನು ಕರೆಸಿಕೊಂಡು, ರಾಜಭೋಗಗಳನ್ನು ನೀಡಿ ಪೋಷಿಸುತ್ತಾರೆ. ಸಾಧ್ಯವಾದರೆ ನಿನ್ನ ಈ ಅನುಪಮ ಸೌಂದರ್ಯಕ್ಕೆ ಮರುಳಾಗಿ, ಹೆಂಡತಿಯನ್ನಾಗಿ ಮಾಡಿಕೊಂಡು ಮೆರೆಸುವ ಸಾಧ್ಯತೆಯೂ ಇದೆ. ಆದ್ದರಿಂದ ನಾನು ಅವರ ಸಹಾಯಕ್ಕೆ ಹೋಗುವುದು ನಿನಗೇ ಕ್ಷೇಮ."

ಮೆಹರುನ್ನೀಸಾ ದಿಗ್ಭ್ರಾಂತಳಾದಳು. ಎಂದೂ ಈ ರೀತಿಯಲ್ಲಿ ಅನುಮಾನದಿಂದ ಮಾತನಾಡಿದ್ದಿಲ್ಲ. ಅವನಿಗೆ ನನ್ನ ಪೂರ್ವ ಚರಿತ್ರೆಯ ವಾಸನೆ ಹತ್ತಿದೆಯೋ ಹೇಗೆ? ಹಾಗಿದ್ದಲ್ಲಿ ಇದೊಂದು ರೀತಿಯಲ್ಲಿ ಸೇಡು ತೀರಿಸಿಕೊಳ್ಳುವುದೇ ಆಗಿದೆಯೋ ಹೇಗೆ? ಎಂದು ಯೋಚಿಸಿದಾಗ. ಒಳಗೆ ಸಣ್ಣ ಕಂಪನವಾಯಿತು.

ಅಲಿಖುಲಿ ಬಾಗಿಲೆಡೆಗೆ ನುಗ್ಗಿದ. ಮೆಹರುನ್ನೀಸಾ ತಕ್ಷಣ ಹೋಗಿ ಬಾಗಿಲಿಗೆ ಅಡ್ಡವಾಗಿ ನಿಂತಳು. ಇಬ್ಬರ ಮುಖಗಳೂ ಸಿಟ್ಟಿನಿಂದ ಕೆಂಪಾಗಿದ್ದವು.

"ಅಡ್ಡ ಬಿಡು. ನೀನೇನೇ ಮಾಡಿದರೂ ನಾನು ಹೋಗಿಯೇ ಹೋಗುತ್ತೇನೆ" ಎಂದು ಬಾಗಿಲಿಗೆ ಅಡ್ಡ ನಿಂತಿದ್ದ ಮೆಹರುನ್ನೀಸಾಳನ್ನು ಪಕ್ಕಕ್ಕೆ ತಳ್ಳಿ ಹೊರನಡೆದ.

ಸುದ್ದಿಗಳು ಬೇಗ ಬೇಗ ತಲುಪಬೇಕಾದವರಿಗೆ ತಲುಪಿದವು. ಜಹಾಂಗೀರ್ ಕೂಡಲೇ ಆಗ್ರಾದಿಂದ ಲಾಹೋರಿಗೆ ಹೊರಟುಬಂದ. ಅದೇ ಸಮಯಕ್ಕೆ ಇಬ್ರಾಹಿಂಖಾನನೂ ಗವರ್ನರ್ ಪದವಿ ಸ್ವೀಕರಿಸಬೇಕಾಗಿದ್ದರಿಂದ ಕೂಡಲೆ ಹೊರಟು ಬಂದ. ಎಲ್ಲವೂ ಸಮಯಕ್ಕೆ ಸರಿಯಾಗಿ ಸಜ್ಜುಗೊಂಡಿದ್ದರಿಂದ ಬಹಳ ದೊಡ್ಡ ಸೈನ್ಯವಿದ್ದುದರಿಂದ ಖುಸ್ರೋ ಪಕ್ಷದವರು ಎಷ್ಟೇ ಹೋರಾಡಿದರೂ, ಲಾಹೋರಿನ ಮೇಲೆ ವಿಜಯ ಸಾಧಿಸಲು ಆಗಲಿಲ್ಲ. ಇತಿಹಾಸದ ಪುನರಾವರ್ತನೆಯಂತೆ, ಶತ್ರುಪಡೆಯಲ್ಲಿನ ಪ್ರಮುಖ ವ್ಯಕ್ತಿಗಳನ್ನೆಲ್ಲ ಯುದ್ಧ ಕೈದಿಗಳನ್ನಾಗಿ ಮಾಡಿ, ವಿಚಾರಣೆ ನಡೆಸಲಾಯಿತು.

ಮಹಬ್ಬತ್ ಖಾನನಿಗೆ ಜಹಾಂಗೀರ್ ಪೂರ್ಣ ಸ್ವಾತಂತ್ರ್ಯವನ್ನು ನೀಡಿದ. ದೇಶದ್ರೋಹಿಗಳನ್ನು ಗುರುತಿಸಿ, ಅವರಿಗೆ ಕ್ರೂರವಾದ ಶಿಕ್ಷೆಯನ್ನು, ಅಂದರೆ ಮರಣದಂಡನೆಯನ್ನು ನೀಡುವುದರ ಮೂಲಕ ಮುಂದೆ ಯಾರಿಗೂ ಈ ರೀತಿಯ ದೇಶದ್ರೋಹಕ್ಕೆ ಮುಂದಾಗಲು ಧೈರ್ಯವಾಗದಂತೆ, ಈ ಶಿಕ್ಷೆ ಒಂದು ಎಚ್ಚರಿಕೆಯ ಸಂದೇಶವಾಗಬೇಕು ಎಂಬುದನ್ನೆಲ್ಲ ತಿಳಿಸಿ ಹೇಳಿದ.

ತನ್ನ ಮಗನೆಂಬುದನ್ನೂ ನೋಡದೆ ತಂದೆಯ ವಿರುದ್ಧವೇ ಎದುರು ನಿಂತಿದ್ದು ಅದೂ ಎರಡನೇ ಬಾರಿ! ಜಹಾಂಗೀರನ ಮನಸ್ಸನ್ನು ಕಠಿಣಗೊಳಿಸಿಬಿಟ್ಟಿತ್ತು. ಖುಸ್ರೋ ತಂದೆಯ ಮುಂದೆ ಕಾಲೂರಿ ಕ್ಷಮಿಸಲು ಕೇಳಿಕೊಂಡ. ಆದರೆ ಹೃದಯ ಸ್ವಲ್ಪ ದ್ರವಿಸಿದಂತೆ ಎನಿಸಿದರೂ ಶಿಕ್ಷೆಯನ್ನು ಕೊಡದಿರಲಾಗದು. ಸ್ವಲ್ಪ ದ್ವಂದ್ವದಲ್ಲಿ ಸಿಲುಕಿದ್ದ. ನಂತರ, ಬೇರೆಯೇ ರೀತಿಯ ಶಿಕ್ಷೆಯನ್ನು ಯೋಚಿಸಿದ. ಬದುಕಿದ್ದೂ ಸತ್ತವನಂತೆ ಇರುವ ಸ್ಥಿತಿಯನ್ನು ಆಲೋಚಿಸಿ, ಕಣ್ಣುಗಳನ್ನು ಕೀಳಿಸಿ, ಪ್ರಾಣ ಉಳಿಸಿ, ಮಾಸಾಶನ ಕೊಟ್ಟು ಜೀವನೋಪಾಯಕ್ಕೆ ದಾರಿ ಮಾಡಿದ.

ಸದ್ಯಕ್ಕೆ ಅಲಿಖುಲಿ ಇಲ್ಲಿಯೇ ಉಳಿದಿದ್ದ. ಅವರನ್ನು ಸೇರಿಕೊಳ್ಳಬೇಕೆಂದು ಹೊರಟರೂ ಸೇರಿಕೊಳ್ಳಲಾಗಲಿಲ್ಲ. ಆಗಲೇ ಎಲ್ಲವೂ ಮುಗಿದು ಹೋಗಿತ್ತು. ಸುದ್ದಿಗಳು ಬೆಂಕಿಯಂತೆ ಹರಡಿದವು. ಅಲಿಖುಲಿಗೂ ವಿದ್ರೋಹದ ಪರಿಣಾಮ ಏನಾಗಿದೆ ಎಂಬುದು ತಿಳಿಯಿತು. ಕೂಡಲೇ ತಾನು ಹೋಗುವುದರಿಂದ ಪ್ರಯೋಜನವಿಲ್ಲವೆನಿಸಿ ಬರ್ದವಾನಿಗೆ ಹಿಂತಿರುಗಿದ.

ಮೆಹರುನ್ನೀಸಾಳಿಗೆ ನಿರಾಳವೆನಿಸಿತು. ತಲೆ ಮೇಲಿದ್ದ ತೂಗು ಕತ್ತಿಯ ಅಪಾಯ ತಪ್ಪಿತು. ಬಿಡುವಿನ ಸಮಯದಲ್ಲಿ ನೂರೆಂಟು ನೆನಪುಗಳು, ಆಲೋಚನೆಗಳು ಅವಳನ್ನು ಮುತ್ತಿದವು. ಬರ್ದವಾನಿಗೆ ಬಂದು ಒಂದು ವರ್ಷವಾಯಿತು. ಕೇವಲ ಒಂದು ವರ್ಷ! ಆದರೆ ಎಷ್ಟೆಲ್ಲ ಘಟನೆಗಳು ನಡೆದುಹೋಗಿವೆ. ಆಗ್ರಾ, ಲಾಹೋರಿನ ಬದುಕು, ಅಪ್ಪ, ಅಮ್ಮರ, ಅಣ್ಣಂದಿರ, ಅಕ್ಕಂದಿರ, ಸ್ನೇಹಿತರ ಎಲ್ಲಕ್ಕಿಂತ ಹೆಚ್ಚಾಗಿ ರುಖೈಯ್ಯಾ ಬೇಗಂರ ಸಾಂಗತ್ಯ ತಪ್ಪಿಹೋಗಿರುವುದು ನೆನಪಾದಾಗ ಮನಸ್ಸು ಮುದುಡಿ ಹೋಗುತ್ತೆ. ಆದಷ್ಟು ಬೇಗ ಅಲ್ಲಿಗೆ ಹೋಗುವ ಅವಕಾಶ ಸಿಕ್ಕರೆ ಎಷ್ಟು ಚೆನ್ನ! ಲಾಡ್ಲಿಗೆ ಸುಖ ಸಿಗದಂತಾಗಿದೆ.

ದೇವರೇ ಅಲ್ಲಿಗೆ ಹೋಗುವ ಅವಕಾಶವಾದರೂ ಸಿಗಬಾರದೇ? ಎಂದುಕೊಳ್ಳುತ್ತಾಳೆ.

ಥಟ್ಟನೆ ಅವಳ ಮನಸ್ಸಿನಲ್ಲಿ ಪೂರ್ವದ ಸಲೀಂ ಸುಳಿದುಹೋದ. ಎಂಥ ವಿಧಿಯಾಟ! ಎಲ್ಲವೂ ಸರಿಯಿದ್ದಿದ್ದರೆ, ತಾನು ಚಕ್ರವರ್ತಿನಿ ಆಗಬಹುದಿತ್ತು. ಅವನಿಗೆ ನೆರವಾಗಿ, ಅವನ ಕೆಲಸ ಕಾರ್ಯಗಳಲ್ಲಿ ಕೈ ಜೋಡಿಸಿ, ನ್ಯಾಯ, ವಿಚಾರಣೆಗಳಲ್ಲಿ ಸ್ವಲ್ಪ ಸಲಹೆ ಸಹಕಾರ ನೀಡಬಹುದಾಗಿತ್ತು. ಪಾಪ! ಖುಸ್ರೋನ ಸ್ಥಿತಿ ನೆನೆಸಿಕೊಂಡರೆ ಕರುಳು ಹಿಂಡಿದಂತಾಗುತ್ತದೆ. ಜಹಾಂಗೀರ್ ಇಷ್ಟೊಂದು ನಿರ್ದಯತೆಯೊಂದಿಗೆ, ಕಣ್ಣುಕೀಳಿಸಿ ಖುಸ್ರೋವನ್ನು ಯಾತಕ್ಕೂ ಬಾರದ ಅಸಹಾಯಕ ಸ್ಥಿತಿಯಲ್ಲಿ ಇರಿಸಿದ್ದು ಯಾವ ನ್ಯಾಯ? ಎಂದುಕೊಂಡಳಾದರೂ ರಾಜಕೀಯದಲ್ಲಿ ಮತ್ತು ಸಾಮ್ರಾಜ್ಯದಲ್ಲಿ ದಂಗೆ ಗಲಭೆಗಳನ್ನು ಹತ್ತಿಕ್ಕಿ, ದೇಶದ್ರೋಹಿಗಳೆನಿಸಿಕೊಂಡವರಿಗೆ ಸರಿಯಾದ ಪಾಠ ಕಲಿಸದಿದ್ದರೆ, ಶಾಂತಿ, ಸಮಾಧಾನಗಳು ನೆಲೆಸುವುದು ಹೇಗೆ? ಪ್ರಜೆಗಳು ಸುರಕ್ಷಿತವಾಗಿ, ಧೈರ್ಯವಾಗಿ ಓಡಾಡುವುದಾದರೂ ಹೇಗೆ? ಎಂದು ತನ್ನ ಪ್ರಶ್ನೆಗಳಿಗೆ ತಾನೇ ಸಮಾಧಾನ ಕಂಡುಕೊಂಡಳು.

ಅಲಿಖುಲಿಯ ಮನಃಸ್ಥಿತಿ ಸರಿಯಾಗಿಲ್ಲವೆಂದು ಅವನ ನಡವಳಿಕೆಯಿಂದಲೇ ತಿಳಿಯುತ್ತಿತ್ತು. ಸಾವು ತಪ್ಪಿತೆಂಬ ಸಮಾಧಾನವೂ, ಖುಸ್ರೋ ಸೋತಿದ್ದಕ್ಕೆ ಮುಂದಿನ ನಡೆಯ ಬಗ್ಗೆ ಖಚಿತತೆಯೂ ಇರಲಿಲ್ಲ. ಯಾವ ಸಮಯದಲ್ಲಿ ಏನು ನಿರ್ಧಾರ ತೆಗೆದುಕೊಳ್ಳುತ್ತಾನೋ ಯಾರಿಗೂ ತಿಳಿಯುತ್ತಿರಲಿಲ್ಲ. ಸ್ವಂತ ಹೆಂಡತಿಯಾದ ತನ್ನ ಮಾತನ್ನಾಗಲೀ, ಸಲಹೆ–ಸೂಚನೆ, ಬುದ್ಧಿವಾದವನ್ನಾಗಲಿ, ಯಾವುದನ್ನೂ ಸ್ವೀಕರಿಸುತ್ತಿರಲಿಲ್ಲ. ಅವನ ದೃಷ್ಟಿಯಲ್ಲಿ ಹೆಣ್ಣು ಗಂಡನ ಗುಲಾಮಳಾಗಿ ಅವನ ಹೆಜ್ಜೆಯನ್ನನುಸರಿಸಿ ನಡೆಯಬೇಕೇ ಹೊರತು ಸ್ವಾತಂತ್ರ್ಯವಹಿಸುವುದಾಗಲಿ ಗಂಡನಿಗಿಂತ ಬುದ್ಧಿವಂತೆ ಎಂದು ತೋರಿಸಿಕೊಳ್ಳುವುದಾಗಲಿ ಗಂಡನಿಗೆ ಮಾಡುವ ಅವಮಾನ! ಅವನ ಜೊತೆ ಮೂಕ ಬೆಕ್ಕಿನಂತೆ ಮಿಯಾಂವ್ ಎನ್ನದೆ, ಅವನು ಹೋದಲ್ಲಿ ಅವನನ್ನು ಅನುಸರಿಸಿ ಹಿಂಬಾಲಿಸಿ ಹೋಗಬೇಕು ಅಷ್ಟೆ!

ಅವಳಿಗೆ ಸಮಾಧಾನ ಸಿಗುತ್ತಿದ್ದರೆ, ಅಬ್ಬು ಬರೆದ ಪತ್ರಗಳಿಂದ ಮಾತ್ರ. ಹತಾಶಳಾಗಿ ಮನೋಧೈರ್ಯವನ್ನು ಕಳೆದುಕೊಂಡು ಕುಸಿಯುವ ಸ್ಥಿತಿಯಲ್ಲಿ ಇದ್ದಾಗ, ಸಂಜೀವಿನಿಯಾಗಿ ಕೆಲಸ ಮಾಡಿ, ಪುನಃಶ್ಚೇತನಗೊಳಿಸುತ್ತಿದ್ದುದು ಘಿಯಾಸ್‌ನ ಪತ್ರಗಳೇ!

ಜಹಾಂಗೀರ್‌ಗೆ ಆಡಳಿತದ ಕಡೆ ಗಮನ ಹರಿಸುವುದು ಮೊದಲ ಆದ್ಯತೆಯಾಗಿತ್ತು. ಹೆಚ್ಚು ಕಡಿಮೆ ಇಡೀ ಹಿಂದೂಸ್ತಾನವೇ ಮೊಘಲ್ ಸಾಮ್ರಾಜ್ಯಕ್ಕೆ ಒಳಪಟ್ಟಿತ್ತು. ತಂದೆಯ ಆದರ್ಶಪೂರ್ಣ ಆಳ್ವಿಕೆಯನ್ನು ಮನಸ್ಸಿಗೆ ತಂದುಕೊಂಡಿದ್ದ. ಅವರಂತಾಗಲು ಸಾಧ್ಯವಿಲ್ಲದಿದ್ದರೂ ಅವರಂತಾಗುವ ಪ್ರಯತ್ನ ಮಾಡುತ್ತಿದ್ದ.

ಜಹಾಂಗೀರ್ ಗದ್ದುಗೆ ಸ್ವೀಕರಿಸಿದ ಆರಂಭದ ದಿನಗಳಲ್ಲಿ, ಕೆಲವು ಪ್ರದೇಶಗಳ ಹೊಸ ಆಳ್ವಿಕೆ ಅಷ್ಟೊಂದು ಸಬಲವಾಗಿ ಇರಲಾರದೆಂದು ಭಾವಿಸಿ ಆಕ್ರಮಣದ ಪ್ರಯತ್ನಗಳು ನಡೆಯುತ್ತಿದ್ದವು. ಖುಸ್ರೋನ ಬಂಡಾಯ ಹತ್ತಿಕ್ಕಿದ ಸಂದರ್ಭದಲ್ಲಿ, ಅಕ್ಬರ್ ಕಷ್ಟ ಪಟ್ಟು ಸಂಪಾದಿಸಿಕೊಂಡಿದ್ದ ಖಾಂದಾಹಾರ್ ಮೇಲೆ ಆಕ್ರಮಣ ಮಾಡಿ ಮತ್ತೆ ಹಿಂಪಡೆಯಬೇಕೆಂಬ ಪ್ರಯತ್ನಗಳನ್ನು ಹೆರಾತ್, ಸಿಸ್ತಾನ್ ಮತ್ತು ಫರಾಹ್‌ನ

ಗವರ್ನರ್‌ಗಳು, ಪರ್ಷಿಯಾದ ಶಾಹ್ ಅಬ್ಬಾಸ್‌ನ ಆದೇಶದ ಮೇರೆಗೆ ನಡೆಯುತ್ತಿದ್ದ ವಿಚಾರವನ್ನು ಮೆಹರುನ್ನೀಸಾಳ ತಂದೆ ಮಿರ್ಜಾಘಿಯಾಸ್ ಬೇಗ್ ತಿಳಿಸಿದ್ದೇ ಕಾರ್ಯೋನ್ಮುಖನಾದ. ಖಾಂದಾಹಾರ್ ವ್ಯಾಪಾರ, ವಾಣಿಜ್ಯ ದೃಷ್ಟಿಯಿಂದ ಅತ್ಯಂತ ಮಹತ್ವದ ಪ್ರದೇಶವಾಗಿತ್ತು. ಪಶ್ಚಿಮ ರಾಷ್ಟ್ರಗಳ ಜೊತೆಗಿನ ವ್ಯಾಪಾರ ವ್ಯವಹಾರದಿಂದಾಗಿ ದೊಡ್ಡ ಮೊತ್ತದ ಆದಾಯ ಗಳಿಕೆಯಾಗುತ್ತಿತ್ತು. ಇಂತಹ ಪ್ರದೇಶವನ್ನು, ಕೈಗೆ ದಕ್ಕಿಸಿಕೊಂಡಿರುವುದನ್ನು ಬಿಟ್ಟುಕೊಡಲು ಸಾಧ್ಯವೇ ಇರಲಿಲ್ಲ. ಈ ವಿಷಯದಲ್ಲಿ ಜಹಾಂಗೀರ್ ಬಹಳ ಗಂಭೀರವಾಗಿ ಯೋಚಿಸಿದ. ಸ್ನೇಹಿತನಂತೆ ಇದ್ದ ಶಾಹ್ ಅಬ್ಬಾಸ್, ಆಕ್ರಮಣ ಮಾಡುವ ಆದೇಶವನ್ನು ನೀಡಿದ್ದಾದರೂ ಹೇಗೆಂದು ಯೋಚಿಸಿದ. ಖಾಂದಾಹಾರ ಕೈ ಬಿಟ್ಟುಹೋಗಲು ಬಿಡಬಾರದೆಂದು ಕೂಡಲೇ ಜಹಾಂಗೀರನೇ ಸ್ವತಃ ದಂಡಯಾತ್ರೆಗೆ ಸಿದ್ಧವಾಗಿ ಹೊರಟು, ಅಲ್ಲಿನ ಸೈನ್ಯವನ್ನು ಸೋಲಿಸಿ, ಖಾಂದಾಹಾರವನ್ನು ಹಿಂದಕ್ಕೆ ಪಡೆದ. ಶಾಹ್ ಅಬ್ಬಾಸ್ ಕ್ಷಮೆಕೋರಿದ. ಗವರ್ನರ್‌ಗಳು ಬಾಲ ಮುದುಡಿ ಸುಮ್ಮನಾದರು. ಸಾಮ್ರಾಜ್ಯದ ಭದ್ರತೆ, ಸುವ್ಯವಸ್ಥೆಗಳು ಸಾಮ್ರಾಜ್ಯದ ಪ್ರಪ್ರಥಮ ಆದ್ಯತೆಗಳಾದವು.

ಜಹಾಂಗೀರನಿಗೆ ಸಮರಗಳು ಸಾಕಾಗಿ ಹೋಗಿದ್ದವು. ತನ್ನ ಬೇಸರ ನೀಗುವುದಕ್ಕಾಗಿ ಜನಾನಾ ಪ್ರವೇಶಿಸಿದ. ನೂರಾರು ಉಪಪತ್ನಿಯರು ಮತ್ತು ಅತಿ ಸುಂದರಿಯರೆಂದು ಗುರುತಿಸಿಕೊಂಡಿದ್ದ ಜಗತ್‌ಗೋಸಿನಿ ಮುಂತಾದವರು ಜಹಾಂಗೀರನನ್ನು ಅತ್ಯಂತ ಪ್ರೀತಿಯಿಂದ ಬರಮಾಡಿಕೊಂಡರು. ಜಹಾಂಗೀರನ ಮನಸ್ಸನ್ನು ಉಲ್ಲಾಸಗೊಳಿಸಲು ಹೆಚ್ಚಿನ ಉಪಚಾರ ಮಾಡಿದರು. ಜಹಾಂಗೀರನ ಪ್ರೀತಿಯ ಮಡದಿ ಜಗತ್‌ಗೋಸಿನಿ ಮದ್ಯದ ಬಟ್ಟಲುಗಳನ್ನು ಸ್ವತಃ ಕೈಗೆ ನೀಡಿದಳು. ಮೆಲ್ಲನೆ ಪಕ್ಕಕ್ಕೆ ಸರಿದು, ಅವನ ಎದೆಯ ಮೇಲೆ ತಲೆ ಇರಿಸಿ, ಬೆಚ್ಚನೆಯ ಅನುಭೂತಿಯನ್ನು ಪಡೆಯುತ್ತಾ, ನೀಡುತ್ತಾ,

"ಜಹಾಂಪನಾಹ್ ಇತ್ತೀಚೆಗೆ ನೀವು ನಮ್ಮಲ್ಲಿಗೆ ಬರುವುದನ್ನೆ ಮರೆತು ಬಿಟ್ಟಿದ್ದೀರಿ. ಯಾವಾಗಲೂ ದೇಶದ್ರೋಹವನ್ನು ಹತ್ತಿಕ್ಕುವುದೇ ನಿಮ್ಮ ಕೆಲಸವಾಗಿಬಿಟ್ಟಿದೆ. ಸಮಯವಿದೆಯೆಂದರೆ ನಾಚ್‌ವಾಲಿಗಳನ್ನು ಕರೆಸುತ್ತೇನೆ." ಎಂದು, ಹೋಷಿಯರ್ ಎಂದು ಕೂಗಿದಳು. ಕ್ಷಣಾರ್ಧದಲ್ಲಿ ಒಳಬಂದು ಸಲಾಂ ಹೇಳಿ "ಆದೇಶಿಸಿ ಪಾದಶಾಹ್ ಬೇಗಂ" ಎಂದ.

"ನಾಚ್‌ವಾಲಿಗಳನ್ನು ಬರಹೇಳು" ಎಂದಳು. ಅತ್ಯಂತ ಹೆಸರಾದ ನಾಚ್‌ವಾಲಿಗಳ ಒಂದು ತಂಡ ಒಳಗೆ ಪ್ರವೇಶಿಸಿ, ಕೋರ್ನಿಶ್ ಮಾಡಿ, ಅದ್ಭುತವಾದ ರೀತಿಯಲ್ಲಿ ಸೊಂಟವನ್ನು ಬಳುಕಿಸುತ್ತಾ, ಗಿರ್ರನೆ ಹೆಜ್ಜೆಗತ್ತುಗಳೊಂದಿಗೆ ತಿರುಗುತ್ತಾ, ತಮ್ಮ ಹಾವ ಭಾವಗಳೊಂದಿಗೆ, ಬಾದಶಾಹ್ ಜಹಾಂಗೀರ್ ದಣಿವವರೆಗೂ ನರ್ತಿಸಿದರು. ಒಬ್ಬೊಬ್ಬ ಸುಂದರವಾದ ಹೆಣ್ಣನ್ನೂ ಬರಸೆಳೆದು ಬಿಗಿದಪ್ಪಿ, ತನ್ನ ರಸಿಕತೆಯನ್ನು ಅವರ ಮೇಲೆ ಸುರಿದು ತಣಿಸಿದ, ದಣಿಸಿದ. ಮಧ್ಯೆ ಮಧ್ಯೆ ರಂಗೇರಲು ಜಗತ್‌ಗೋಸಿನಿ ಮದ್ಯದ ಬಟ್ಟಲು ತುಂಬಿಸುತ್ತಿದ್ದಳು. ಹಾಗೆಯೇ ಹುಕ್ಕಾದಲ್ಲಿ ಅಫೀಮು ತುಂಬಿ ಕೈಗೆ ಕೊಡುತ್ತಿದ್ದಳು. ಜಹಾಂಗೀರ್ ಮದ್ಯದ ಮತ್ತು ರಸಿಕತೆಯ ಮತ್ತಿನಲ್ಲಿ ಮುಳುಗಿ ದಣಿವು, ಬೇಸರಗಳನ್ನು ಮರೆತ. ನಿದ್ದೆಯ ಗುಂಗಿಗೆ ಬಿದ್ದ. ಅವನಿಗರಿವಿಲ್ಲದೆ ಅವನ ಬಾಯಿಂದ

ಮೆಹರುನ್ನೀಸಾ! ಆಹಾ! ನಿಜವಾಗಿಯೂ ಹೆಂಗಸರ ನಡುವಿನ ಸೂರ್ಯ ಎಂದು ಬಡಬಡಿಸಿದ. ಜಗತ್‌ಗೋಸಿನಿ ಯಾವುದಕ್ಕಾಗಿ ಹೆದರುತ್ತಿದ್ದಳೋ, ಅದೇ ಆಗುತ್ತಿರುವಂತೆನಿಸಿತು. ಸದ್ಯಕ್ಕೆ ನಾಚ್‌ವಾಲಿಗಳು ಮತ್ತು ಬೇರೆ ಯಾರೂ ಹತ್ತಿರ ಇರಲಿಲ್ಲ. ಜಗತ್‌ಗೋಸಿನಿಗೆ ಅನುಮಾನ ಬಂತು. ನಿಜವಾಗಿಯೂ ನಿದ್ದೆ ಮಾಡುತ್ತಿದ್ದಾನೆಯೋ ಇಲ್ಲ, ನಿದ್ದೆ ಬಂದವನಂತೆ ನಟಿಸುತ್ತಿದ್ದಾನೆಯೋ ಎಂದು ಯೋಚಿಸಿದಳು.

"ಜಹಾಂಪನಾಹ್, ಏಳಿ, ಎದ್ದೇಳಿ, ಇಲ್ಲಿಯೇ ಮಲಗುವುದು ಸರಿಯಿಲ್ಲ. ಒಳಗೆ ಹೋಗೋಣ. ಪಾಪ ಖುರ್ರಂ ನಿಮ್ಮ ಜೊತೆ ಮಾತಾಡಬೇಕೆಂದು ಕಾದು ಕಾದು ಸುಸ್ತಾದ. ಈಗೀಗ ಖುಸ್ರೋ ಜೊತೆ ಸ್ವಲ್ಪ ಹೊತ್ತು ಕಳೆಯುತ್ತಿದ್ದಾನೆ. ಖುಸ್ರೋಗೂ ಅವನನ್ನು ಕಂಡರೆ ತುಂಬಾ ಪ್ರೀತಿ" ಎಂದು ಹೇಳುತ್ತಾ ಎಬ್ಬಿಸಿ ಒಳಗೆ ಕರೆದೊಯ್ದಳು. ಜಹಾಂಗೀರನಿಗೆ ಏಳುವುದಕ್ಕೂ ಆಲಸ್ಯವೆನಿಸಿತು.

ಮೆಹರುನ್ನೀಸಾ ಮೆಹರುನ್ನೀಸಾ! ಆ ಹೆಸರು ಕಿವಿ ಮೇಲೆ ಬಿದ್ದರೂ ಸಾಕು ಉರಿದು ಬೀಳುತ್ತಿದ್ದಳು. ಈಗ ಅವಳಿಗೆ ಮದುವೆಯಾಗಿ ಮಗುವೂ ಇದೆ. ಆದರೂ ಗಂಡಸರನ್ನು ಸೂಜಿಗಲ್ಲಿನಂತೆ ಆಕರ್ಷಿಸುವಂತಹ ಸೌಂದರ್ಯದಲ್ಲಿ ಒಂದಿಷ್ಟೂ ಕೊರತೆ ಯುಂಟಾಗಲಿಲ್ಲ. ದೂರದ ಬರ್ದವಾನಿಗೆ ಸಾಗಹಾಕಿದರೂ, ಅವಳ ನೆನಪು ಇನ್ನೂ ಜಹಾಂಗೀರನನ್ನು ಕಾಡುತ್ತಿರಬೇಕು ಎನ್ನುವ ಆಲೋಚನೆಯೇ ಅವಳ ಈರ್ಷ್ಯೆಯನ್ನು ಮತ್ತಷ್ಟು ಪ್ರಜ್ವಲಿಸುತ್ತಿತ್ತು.

ತಡವರಿಸುತ್ತಾ, ಹೆಜ್ಜೆ ಹಾಕುತ್ತಿದ್ದ ಜಹಾಂಗೀರನ ಮುಂದೆ ಕಂದೀಲು ಹಿಡಿದು ತೋರಿಸುತ್ತಾ ಹೆಜ್ಜೆ ಹಾಕಿಸುತ್ತಿದ್ದಳು.

ಒಂದು ಕ್ಷಣ ಬಿಡುವು ಸಿಕ್ಕರೂ ಮೆಹರುನ್ನೀಸಾಳ ನೆನಪಿನ ಭೂತ ಥಟ್ಟನೆ ಎರಗುತ್ತಿತ್ತು. ಹೇಗಾದರೂ ಮಾಡಿ ಅವಳ ನೆರಳೂ ಬಾದಶಾಹರ ಮೇಲೆ ಬೀಳದಂತೆ ಎಚ್ಚರಿಕೆ ವಹಿಸುವಂತೆ ಹೋಷಿಯಾರ್‌ಗೆ ಹೇಳಬೇಕು ಎಂದುಕೊಂಡಳು.

ಜಹಾಂಗೀರನಿಗೆ ವಿಲಾಸಿ ಜೀವನದ ಮೋಜು ಪೂರ್ತಿಯಾಗಿ ಕೈ ಬಿಟ್ಟಿರಲಿಲ್ಲ. ತಾನು ಜವಾಬ್ದಾರಿಯಿಂದ ವರ್ತಿಸಬೇಕಾದ ಅಗತ್ಯವಿದೆ. ತನ್ನ ಶ್ರಮ ಸಾಮರ್ಥ್ಯಗಳಿಂದ ಅಬ್ಬಾ ಹುಜೂರು ಇಷ್ಟು ದೊಡ್ಡ ಸಾಮ್ರಾಜ್ಯವನ್ನು ಕಟ್ಟಿ ನನಗೆ ಒಪ್ಪಿಸಿದ್ದಾರೆ. ಅದನ್ನು ಕಾಪಾಡಿಕೊಂಡು ಬರುವುದರ ಜೊತೆಗೆ, ಮತ್ತೂ ಉಳಿದು ಬಿಟ್ಟಿರುವ ಪ್ರದೇಶಗಳನ್ನೂ ಸೇರಿಸಿಕೊಂಡು ಇನ್ನಷ್ಟು ವಿಸ್ತಾರವಾಗಿ ಬೆಳೆಸಬೇಕು ಎನ್ನುವುದು ಅವನ ಆಸೆಯಾಗಿತ್ತು. ಅಕ್ಬರ್ ಬಾದಶಾಹರ ಬಗ್ಗೆ ಯೋಚಿಸಿದಂತೆಲ್ಲ ಅವರು ತನ್ನನ್ನು ಕರೆದು ಬುದ್ಧಿ ಹೇಳಿ, ಆಡಿದ ಮಾತುಗಳು ಮರುಕಳಿಸಿ ಪ್ರತಿಧ್ವನಿಸತೊಡಗಿದವು.

"ಶೇಕು ಬೇಟಾ, ನನ್ನ ಮುಂದಿನ ಉತ್ತರಾಧಿಕಾರಿಯಾಗಬೇಕಾದವನು ಇನ್ನೂ ಹುಡುಗಾಟಿಕೆ, ವಿಲಾಸಗಳಲ್ಲಿ ಮುಳುಗಿ ರಾಜ್ಯಾಡಳಿತದ ಕಡೆ ಗಮನ ಕೊಡದೆ ಹೋಗುವುದು ಸರಿಯಲ್ಲ. ನಾನೆಷ್ಟು ತಪಸ್ಸು ಮಾಡಿ, ಪ್ರಾರ್ಥನೆ ಮಾಡಿ, ಸೂಫಿಸಂತ ಸಲೀಂ ಚಿಶ್ತಿ ಅವರ ಸಮಾಧಿಗೆ ಭೇಟಿ ಕೊಟ್ಟು, ಅವರ ಆಶೀರ್ವಾದದಿಂದ ನನಗೊಬ್ಬ ಮಗನನ್ನು, ನನ್ನ ಉತ್ತರಾಧಿಕಾರತ್ವವನ್ನು ಹೆಗಲಿಗೇರಿಸಿಕೊಳ್ಳುವಷ್ಟು ಸಮರ್ಥನಾದ

ಮಗನನ್ನು ಕರುಣಿಸು ಎಂದು ದೈನ್ಯತೆಯಿಂದ ಬೇಡಿಕೊಂಡು ನಿನ್ನನ್ನು ಪಡೆದೆ. ನಿನಗೆ ಬೇಕಾದ ಶಿಕ್ಷಣ, ಸಂಸ್ಕಾರ, ಶಸ್ತ್ರಾಸ್ತ್ರಗಳಲ್ಲಿ ಪರಿಣತಿ–ಎಲ್ಲವನ್ನೂ ಕಲಿಸಿದೆ. ಈಗ ಮುಂದಿನ ಜವಾಬ್ದಾರಿ ನಿನ್ನದು. ಮದ್ಯ ಸೇವನೆಯನ್ನು ಮಿತಗೊಳಿಸು. ನಾನು ನಿನ್ನ ವಯಸ್ಸಿಗೆ ಆಗಲೇ ರಾಜ್ಯಭಾರ ಹೊತ್ತುಕೊಂಡು ನಾಲ್ಕು ವರ್ಷಗಳಾಗಿತ್ತು. ಶೀಕೂ, ಕೇವಲ ಕನಸುಗಳಿಂದ ಸಾಮ್ರಾಜ್ಯಗಳನ್ನು ಕಟ್ಟುವುದು ಸಾಧ್ಯವಿಲ್ಲ. ಅದಕ್ಕೆ ಶ್ರಮವಹಿಸಬೇಕು. ವಿವೇಕ ಬೇಕು" ಎಂದು ಹೇಳಿದ್ದು, ಇಂದು ತನಗೆ ದಾರಿದೀಪವಾಗಿದೆ ಎಂದುಕೊಂಡ. ಇನ್ನು ಮುಂದೆ, ನಾಚ್ ಗಾನಾಗಳು, ಪ್ರಣಯ ಸಾಹಸಗಳು, ಅತಿಯಾದ ಮದ್ಯಸೇವನೆಯನ್ನು ಬಿಡಬೇಕು ಎಂದು ತೀರ್ಮಾನಿಸಿದ. ಜಹಾಂಗೀರ್ ಮೊದಲ ಮದುವೆಯಾದ ಮರು ವರುಷವೇ ಸಂಪ್ರದಾಯಬದ್ಧವಾಗಿ, ಮುಸ್ಲಿಂ ಕಾನೂನುರೀತ್ಯಾ ಮೂರು ಮದುವೆಯಾದ. ಅವರಲ್ಲಿ ಜೋಧಪುರದ ರಾಜಕುಮಾರಿ ಜಗತ್‌ಗೋಸಿನಿ, ನಂತರ ಮತ್ತೊಬ್ಬಳು, ಬಿಕಾನೇರ್ ರಾಜಕುಮಾರಿ. ಈ ಇಬ್ಬರೂ ಹಿಂದೂ ಹೆಂಡತಿಯರು, ಅದರ ನಂತರವೂ ಆಫ್ಘಾನಿಸ್ತಾನದ ಗಡಿ ಪ್ರದೇಶದ ಸುಲ್ತಾನನ ಮಗಳನ್ನು ಮದುವೆಯಾಗಿದ್ದ. ಸಾಲದ್ದಕ್ಕೆ ಇವರ ಜೊತೆಗೆ ಬೇರೆ ಬೇರೆ ಕಾರಣಗಳಿಂದ ಮುನ್ನೂರಕ್ಕೂ ಹೆಚ್ಚು ಉಪಪತ್ನಿಯರು ಜನಾನಾಕ್ಕೆ(ರಾಜಾಂತಃಪುರ, ರಾಣಿವಾಸ) ಬಂದು ಸೇರಿದರು.

ಮಾನ್‌ಬಾಯಿ ಅವನ ಹೆಂಡತಿಯರಲ್ಲಿ ಅತ್ಯಂತ ಸುಂದರಿಯಾಗಿದ್ದಳು. ಅವಳನ್ನು ಅತಿಯಾಗಿ ಪ್ರೀತಿಸುತ್ತಿದ್ದ. ಆದರೆ ಬರಬರುತ್ತಾ ಅವನನ್ನು ತನ್ನ ಹಿಡಿತದಲ್ಲಿ ಇರಿಸಿಕೊಳ್ಳಲು ಪ್ರಯತ್ನಿಸಿದ್ದರಿಂದ ಬೇಸರಗೊಂಡು ಜಗತ್‌ಗೋಸಿನಿಯತ್ತ ತಿರುಗಿದ. ರಾಣಿಯರಲ್ಲಿ ಪರಸ್ಪರ ಅಸೂಯೆ, ಸ್ಪರ್ಧೆ. ಒಬ್ಬರಿಗಿಂತ ಒಬ್ಬರು, ಗಂಡನನ್ನು ತಮ್ಮ ನಿರ್ಬಂಧದಲ್ಲಿ ಇರಿಸಿಕೊಳ್ಳಲು ಮೇಲಾಟ ಮಾಡುತ್ತಿದ್ದುದು, ಎಲ್ಲವೂ ಜಹಾಂಗೀರನ ನೆನಪಿನ ಮೂಸೆಯಲ್ಲಿ ಕಾಣಿಸಿಕೊಂಡವು.

ತಂದೆಯ ಜಾಡಿನಲ್ಲಿ ಮುಂದುವರೆಯುವ ಗಟ್ಟಿ ನಿರ್ಧಾರವನ್ನು ಕೈಗೊಂಡ. ಸದ್ಯಕ್ಕೆ ಯಾವ ಸಮಸ್ಯೆಗಳೂ ಇರಲಿಲ್ಲ. ಖುಸ್ರೋನಿಂದ ಇನ್ನು ಮುಂದೆ ಯಾವ ಅಪಾಯವೂ ಇರುವುದಿಲ್ಲ. ಅವನ ಹಿಂಬಾಲಕರೆಲ್ಲ ಶಿಕ್ಷೆ ಅನುಭವಿಸಿದ್ದಾರೆ. ಮತ್ತೆ ಕೆಲವರು ಬುದ್ಧಿ ಕೆಟ್ಟು ಸೇರಿದವರು, ಸಾಮ್ರಾಜ್ಯಕ್ಕೆ ಸಲ್ಲಿಸಿದ ಸೇವೆಯಿಂದಾಗಿ ಕ್ಷಮಾ ಪಾತ್ರರಾಗಿ ಬಿಡುಗಡೆಗೊಂಡಿದ್ದಾರೆ. ಬಂಗಾಳದ ಗವರ್ನರ್ ಆಗಿದ್ದ ಮಾನ್‌ಸಿಂಗ್‌ನ ಜಾಗದಲ್ಲಿ ತನ್ನ ದಾಯಾದಿ ಸೋದರ ಖುತುಬುದ್ದೀನ್ ಕೋಕಾ ಗವರ್ನರ್ ಆಗಿ ನೇಮಕವಾದ.

ತನ್ನ ಮಗ ಖುರ್ರಂ ಕೂಡಾ ವಯಸ್ಸಿಗೆ ಬಂದಿದ್ದಾನೆ. ತನ್ನಂತೆಯೇ ಬಹಳ ಪರಾಕ್ರಮಿಯಾಗಿದ್ದಾನೆ. ಅವನಿಗೂ ಒಂದು ಮದುವೆ ಮಾಡಿಬಿಟ್ಟು, ದಖ್ಖನ್ ಕಡೆಯ ಪ್ರದೇಶಗಳನ್ನು ಸುಪರ್ದಿಗೆ ಕೊಡಬೇಕು ಎಂದು ಆಲೋಚಿಸುತ್ತಿದ್ದ. ಜಹಾಂಗೀರನಿಗೆ ಯೋಚಿಸುತ್ತಿದ್ದಂತೆ, ತನ್ನ ಅಧಿಕಾರಿಗಳಲ್ಲಿ ಯಾರಿಗಾದರೂ ಯೋಗ್ಯಳಾದ, ಸುಂದರಳಾದ ಮಗಳಿದ್ದರೆ ಯಾಕೆ ನೋಡಬಾರದು ಎಂದುಕೊಂಡ. ಮಗನಿಗೆ ತಕ್ಕ ಹೆಂಡತಿಯನ್ನು ಹುಡುಕುವುದು ಈಗ ಜಹಾಂಗೀರನ ಕೆಲಸವಾಯಿತು.

ಹತ್ತಿರದಲ್ಲಿಯೇ ಈದ್–ಉಲ್–ಫಿತರ್ ಹಬ್ಬ ಬರುವುದಿತ್ತು. ಆ ಸಂದರ್ಭ,

ಯುವಕ ಯುವತಿಯರಿಗೆ ಸಂಭ್ರಮದ ಕ್ಷಣಗಳಾಗಿರುತ್ತಿದ್ದವು. ಜನಾನಾದ ಹೆಂಗಸರೆಲ್ಲ ಸೇರಿ ಮೀನಾ ಬಜಾರ್ ಏರ್ಪಡಿಸುತ್ತಿದ್ದರು. ಇದರಲ್ಲಿ ಭಾಗವಹಿಸುವವರು ಸಾಮಾನ್ಯವಾಗಿ, ಮನಸಬ್‌ದಾರರ, ಉಮ್ರಾಗಳ, ಅಧಿಕಾರಿಗಳ, ಆಸ್ಥಾನಿಕರ ಮನೆಯ ಹೆಂಗಸರು. ತಮ್ಮ ಕೈಕುಶಲತೆಯನ್ನು ತೋರಲು ಇದೊಂದು ದೊಡ್ಡ ಅವಕಾಶವಾಗಿತ್ತು. ಕಲಾತ್ಮಕವಾದ, ವಿಶಿಷ್ಟ, ವಿಭಿನ್ನವಾದ ವಸ್ತುಗಳು ಅಲ್ಲಿ ಮಾರಾಟ ಮಾಡುತ್ತಿದ್ದರು. ಚಿನ್ನ, ಬೆಳ್ಳಿ ಆಭರಣಗಳು, ಗೃಹಾಲಂಕಾರ ವಸ್ತುಗಳು, ಬುಖಾರದ ರಗ್ಗುಗಳು, ಪಾನಪಾತ್ರೆಗಳು, ಪರ್ಷಿಯಾದ ಹಾಸುಗಂಬಳಿಗಳು, ಪಿಂಗಾಣಿ ಪಾತ್ರೆಗಳು, ಹೂದಾನಿಗಳು, ರೇಶಿಮೆಯ ಉಡುಪುಗಳು, ಪರದೆಗಳು, ಸುಗಂಧ ದ್ರವ್ಯಗಳು, ಹೆಂಗಸರ ಪ್ರಸಾಧನಗಳು, ಹಕ್ಕಿ ಪಕ್ಕಿಗಳು, ತಿಂಡಿಪದಾರ್ಥಗಳು, ಹಣ್ಣುಗಳು, ಸಂಬಾರಪದಾರ್ಥಗಳು ಇತ್ಯಾದಿ ಇತ್ಯಾದಿ ಲೆಕ್ಕಕ್ಕೇ ಸಿಗದಷ್ಟು ವಸ್ತುಗಳು ಮತ್ತು ವೈವಿಧ್ಯಮಯವೂ ವಿಶಿಷ್ಟವೂ ಅಪರೂಪದ ಮತ್ತು ಅಮೂಲ್ಯವಾದ ವಸ್ತುಗಳು ಮೀನಾ ಬಜಾರಿನಲ್ಲಿ ಲಭ್ಯವಾಗುತ್ತಿದ್ದವು. ಇಲ್ಲಿನ ವಸ್ತುಗಳನ್ನು ಕೊಳ್ಳುವ ಗಿರಾಕಿಗಳೆಂದರೆ ರಾಜಪರಿವಾರದವರು, ಅತ್ಯಂತ ಶ್ರೀಮಂತ ವರ್ಗದವರು, ಉನ್ನತ ಅಧಿಕಾರಿ ವರ್ಗದವರೂ ಆಗಿರುತ್ತಿದ್ದರು. ತಮಗೆ ಇಷ್ಟವಾದ ವಸ್ತುಗಳನ್ನು ಯಾವುದೇ ಚೌಕಾಶಿ ಮಾಡದೆ, ಹೇಳಿದ ಬೆಲೆ ಕೊಟ್ಟು ಖರೀದಿಸುತ್ತಿದ್ದರು. ನಪುಂಸಕರು, ದಾಸಿಯರು, ಉಪಪತ್ನಿಯರು, ರಾಣಿಯರು ಎಲ್ಲರೂ ಈ ಬಜಾರಿನ ಭಾಗವಾಗಿರುತ್ತಿದ್ದರು. ಅದರಲ್ಲಿಯೂ ಯುವತಿಯರು ತಮಗೆ ಯೋಗ್ಯರಾದ, ರಾಜಕುಮಾರರೋ ಶ್ರೀಮಂತರ ಮಕ್ಕಳೋ ಸಿಗುವ ನಿರೀಕ್ಷೆಯಲ್ಲಿ ಅಡ್ಡಾಡುತ್ತಿದ್ದರು. ಇದೇ ಮೀನಾಬಜಾರಿನಲ್ಲಿ ಅರ್ಜುಮಂದ್ ಕೂಡಾ ಭಾಗವಹಿಸಿದ್ದಳು. ಅರ್ಜುಮಂದ್ ಬಾನು, ಮಂತ್ರಿ ಅಸಫ್‌ಖಾನನ ಮಗಳು. ಅತ್ಯಂತ ಸುಂದರಿ, ಮಹಾಚತುರೆ, ಖುರ್ರಂ ಮತ್ತು ಅರ್ಜುಮಂದರ ನಡುವೆ ಸ್ನೇಹ ಸಲುಗೆಗಳಿದ್ದವು. ಅವಳನ್ನು ತುಂಬಾ ಪ್ರೀತಿಸುತ್ತಿದ್ದ. ಮದುವೆಯಾಗುವುದಾದರೆ ಅವಳನ್ನೇ ಎಂದು ತೀರ್ಮಾನಿಸಿದ್ದ.

ಜಹಾಂಗೀರನೂ ತನ್ನ ಪರಿವಾರದೊಂದಿಗೆ ಅಲ್ಲಿಗೆ ಬಂದ. ಒಂದೊಂದೇ ಮಳಿಗೆಯನ್ನು ಗಮನಿಸುತ್ತಾ, ಅಲ್ಲಿನ ವಸ್ತುಗಳ ಕಲೆಗಾರಿಕೆಗೆ ತಲೆ ತೂಗುತ್ತಾ, ಜಗತ್‌ಗೋಸಿನಿಗೆ ಬೇಕಾದ್ದೆಲ್ಲವನ್ನೂ ಖರೀದಿಸಿ ಕೊಟ್ಟ, ಹಾಗೆಯೇ ಮುಂದುವರೆಯುತ್ತಾ ಅರ್ಜುಮಂದಳ ಮಳಿಗೆಗೆ ಬಂದು ನೋಡಿದ. ಕ್ಷಣಾರ್ಧದಲ್ಲಿ ಬೆಕ್ಕಸ ಬೆರಗಾಗಿ ನಿಂತ. ಥಟ್ಟನೆ ಅವಳ ಮುಖ ಮೆಹರುನ್ನೀಸಾಳ ನೆನಪನ್ನು ಹೊತ್ತು ತಂದಿತು. ಅವಳನ್ನೇ ಕಣ್ಣು ರೆಪ್ಪೆ ಮಿಟುಕಿಸದೆ ನೋಡುತ್ತಾ ನಿಂತಿರುವಾಗಲೇ ಯಾರೋ. 'ಅರ್ಜು' ಎಂದು ಕೂಗಿದಂತಾಯಿತು. ಸದ್ದು ಬಂದ ಕಡೆ ನೋಡಿದಾಗ, ಖುರ್ರಂ ಕಾಣಿಸಿದ. ಜಗತ್‌ಗೋಸಿನಿಗೆ ಅವನತ್ತ ಬೆರಳು ತೋರಿಸಿದ. ಕೂಡಲೇ ಜಗತ್‌ಗೋಸಿನಿ ಅವನಿದ್ದ ಜಾಗಕ್ಕೆ ಹೋಗಿ, "ಬೇಟಾ ಖುರ್ರಂ, ಇಲ್ಲೇನು ಮಾಡುತ್ತಿದ್ದಿ?" ಎಂದು ಕೇಳಿದಳು.

"ಅಮ್ಮೀಜಾನ್ ನಾನೂ ನಿಮ್ಮ ಹಾಗೆ ಮೀನಾಬಜಾರ್ ನೋಡಲು ಬಂದೆ."

"ಬಂದಿರುವುದೇನೋ ಸರಿ. ಆದರೆ 'ಅರ್ಜು' ಎಂದು ಕೂಗಿದ್ದು ಯಾರನ್ನು?"

ಎಂದು ಕೇಳಿದಳು. ಖುರ್‍ರಂ ಮುಸಿನಗುತ್ತ, 'ಅಗೋ ಅಲ್ಲಿ ನಿಂತಿದ್ದಾಳಲ್ಲ ಅವಳೇ!' ಜಹಾಂಗೀರ್ ಮತ್ತು ಜಗತ್‌ಗೋಸಿನಿ ಒಬ್ಬರ ಮುಖವನ್ನು ಒಬ್ಬರು ನೋಡಿಕೊಂಡರು. ಮೃದುವಾಗಿ ಅರ್ಜುಮಂದ್ ಬಾನುಳನ್ನು "ಬೇಟಾ ನೀನು ಯಾರ ಮಗಳು" ಎಂದು ಕೇಳಿದ. ಅವಳು ಹೆದರದೆ ಸಂಕೋಚಿಸದೆ

"ಜಹಾಂಪನಾಹ್, ಅಸಫ್‌ಖಾನ್ ವಜೀರರ ಮಗಳು. ನನ್ನ ಪೂರ್ತಿ ಹೆಸರು ಅರ್ಜುಮಂದ್ ಬಾನು" ಎಂದಳು.

ಮೀನಾ ಬಜಾರಿನಿಂದ ಮರಳಿದ ಮೇಲೆ ತನ್ನ ಖಾಸಗಿ ಕೋಣೆಯಲ್ಲಿ ಕುಳಿತು ಖುರ್‍ರಂ ಮತ್ತು ಅರ್ಜುಮಂದ್‌ರ ಬಗ್ಗೆ ಯೋಚಿಸುತ್ತಿದ್ದ. ಬಹಳ ಒಳ್ಳೆಯ ಸಂಬಂಧ ಈ ಹುಡುಗಿ ಮೆಹರುನ್ನೀಸಾಳ ರೂಪವನ್ನೇ ಹೋಲುತ್ತಾಳೆ. ಏನಾದರಾಗಲೀ, ಸಾಮ್ರಾಜ್ಯಕ್ಕೆ ನಿಷ್ಠಾವಂತ ಸೇವಕ ಕುಟುಂಬದ ಸಂಬಂಧ ಎಲ್ಲ ರೀತಿಯಿಂದಲೂ ಅನುಕೂಲಕರ ವಾಗಿರುತ್ತದೆ. ಮಿರ್ಜಾ ಘಿಯಾಸ್ ಬೇಗ್‌ರ ಸೇವೆಯಂತೂ ಅನನ್ಯವಾದುದು. ಅಂತಹ ಕುಟುಂಬದ ಜೊತೆಗೆ ಸಂಬಂಧ ಬೆಳೆಸಿದರೆ, ಸಾಮ್ರಾಜ್ಯದ ಭದ್ರತೆ ಗಟ್ಟಿಗೊಳ್ಳುತ್ತದೆ. ನಾಳೆಯೇ ಅಸಫ್‌ಖಾನ್ ಮತ್ತು ಮಿರ್ಜಾ ಘಿಯಾಸ್ ಬೇಗ್‌ರನ್ನು ಕರೆಸಿ, ವಿವಾಹದ ಪ್ರಸ್ತಾಪವಿಡುತ್ತೇನೆ. ಖಂಡಿತವಾಗಿಯೂ ಅವರು ನಿರಾಕರಿಸುವುದಿಲ್ಲ. ಖುರ್‍ರಂಗೂ ಸಂತೋಷವಾಗುತ್ತದೆ. ಒಂದು ಪುಟ್ಟ ಮೆಹರುನ್ನೀಸಾ ನನ್ನ ಕಣ್ಣ ಮುಂದೆ ಇದ್ದ ಹಾಗೆ ಆಗುತ್ತದೆ ಎಂದುಕೊಂಡನಲ್ಲದೆ, ರಹಸ್ಯವಾಗಿ ಇರಿಸಿದ್ದ, ಮೆಹರುನ್ನೀಸಾ ತನಗಾಗಿ, ತನ್ನ ಭಾವಚಿತ್ರವೊಂದನ್ನು ತಾನೇ ಬಿಡಿಸಿ, ಬಾದಶಾಹತ್ತನ್ನು ಸ್ವೀಕರಿಸಿದ ಸಂದರ್ಭದಲ್ಲಿ, ಅಲಿಖುಲಿಯ ಕೈಯಲ್ಲಿ ಕಾಣಿಕೆಯಾಗಿ ಕಳಿಸಿದ್ದನ್ನು ಹುಡುಕಿ ತೆಗೆದು, ಮಂದಹಾಸ ದೊಂದಿಗೆ ಭಾವಚಿತ್ರದಲ್ಲಿ ಅಂಗುಲಂಗುಲವಾಗಿ ಕಾಣಿಸುತ್ತಿದ್ದ ಕಲಾ ಪ್ರತಿಭೆಯನ್ನು ಮೆಚ್ಚುತ್ತಾ, ಸವಿಯುತ್ತಿದ್ದ. ಹಾಗೆಯೇ ಈ ಮದುವೆಯ ಸಂಬಂಧದಿಂದಾಗಿ ಮೆಹರುನ್ನೀಸಾ ಇನ್ನೂ ಹತ್ತಿರವಾಗುವ ಸಾಧ್ಯತೆಯಿರುತ್ತದೆ. ಅಬ್ಬಾಜಾನ್, ಪಾದಶಾಹ್‌ಬೇಗಂರ ಮಸಲತ್ತಿನಿಂದಾಗಿ ನನ್ನ ಹೆಂಡತಿಯಾಗುವ ಅವಕಾಶ ತಪ್ಪಿಹೋಯಿತು. ಅಲ್ಲದೆ ಆ ಬಡಪಾಯಿ ಒರಟು ಸ್ವಭಾವದ, ಸಾಮಾನ್ಯ ಸೈನಿಕನಾಗಿರುವ ಶೇರ್‌ಖಾನ್‌ನ ಕೈ ಹಿಡಿಯಬೇಕಾಯಿತು. ಈ ದುರದೃಷ್ಟ ನಮ್ಮಿಂದಾದುದು. ಅದಕ್ಕೆ ಪರಿಹಾರವಾಗಿ ಈ ಮದುವೆಯಾದಲ್ಲಿ, ಚಕ್ರವರ್ತಿಯ ನೆಂಟಸ್ತನದಿಂದಾಗಿ ಅವರ ಅಂತಸ್ತು ಇನ್ನೂ ಎತ್ತರವಾಗುತ್ತದೆ ಎಂದು ಭಾವಿಸಿದ.

ಮರುದಿನವೇ ಅಸಫ್‌ಖಾನ್, ಮಿರ್ಜಾ ಘಿಯಾಸ್ ಬೇಗ್‌ರನ್ನು ಕರೆಸಿ, ತನ್ನ ವಿಚಾರವನ್ನು ಅವರ ಮುಂದಿರಿಸಿದ. ಈ ಇಬ್ಬರಿಗೂ ಜಹಾಂಗೀರನ ಮಾತಿನಲ್ಲಿ ನಂಬಿಕೆ ಬರಲಿಲ್ಲ. ಇದೂ ಏನಾದರೂ ರಾಜಕೀಯ ತಂತ್ರವೇ? ಬಾದಶಾಹರ ಬಂಧುತ್ವ ಸಾಮಾನ್ಯವಾಗಿ ರಾಜಮನೆತನಗಳ ಜೊತೆ ಆಗುವಂಥಾದ್ದು. ಒಂದು ವೇಳೆ ಬೇರೆಯವರ ಹೆಣ್ಣು ಮಕ್ಕಳನ್ನು ಅವರ ಅಂದಚೆಂದಕ್ಕಾಗಿ ಮದುವೆಯಾದಲ್ಲಿ ಉಪಪತ್ನಿಯರಾಗಿಯೋ ರಂಜನೆಯ ಅವಕಾಶಕ್ಕಾಗಿಯೋ ಸೀಮಿತವಾಗುವ ಜನಾನಾದ ಬಳಗದಲ್ಲಿಯೇ ಇರಬೇಕಾಗುತ್ತದೆ. ಹಾಗಿರುವಾಗ ಈ ಪ್ರಸ್ತಾವದ ಉದ್ದೇಶವನ್ನು ತಿಳಿಯುವುದಾದರೂ ಹೇಗೆ? ಎಂದು ಕೂಡಲೇ ಪ್ರತಿಕ್ರಿಯಿಸದೆ ಮೌನದಿಂದ ಇದ್ದುದನ್ನು ಗಮನಿಸಿ,

"ಮಿರ್ಜಾ ಘಿಯಾಸ್ ಬೇಗರೇ, ನಿಮ್ಮ ಮೌನವನ್ನು, ನಿಮ್ಮ ಅನುಮಾನವೆಂದು ಭಾವಿಸಬೇಕಾಗುತ್ತದೆ. ಇದರ ಹಿಂದೆ ಯಾವುದೇ ರಾಜಕೀಯವಿಲ್ಲ. ತಂತ್ರವೂ ಇಲ್ಲ. ನಮ್ಮ ಮಗನಾದ ಖುರ್ರಂ, ನಿಮ್ಮ ಮಗ ಅಸಫ್‌ಖಾನರ ಮಗಳಾದ ಅರ್ಜುಮಂದ್ ಬೇಗಂರನ್ನು ಬಹಳವಾಗಿ ಪ್ರೀತಿಸುತ್ತಾರೆ. ಆ ಮಕ್ಕಳು ನಮ್ಮ ಹಿರಿಯರ ಹಸ್ತಕ್ಷೇಪದಿಂದಾಗಿ ಹತಾಶರಾಗಬಾರದು; ಪ್ರೇಮಭಗ್ನರಾಗಬಾರದು. ಈ ಅಗಲಿಕೆಯ ನೋವು ತೀವ್ರವಾದಲ್ಲಿ ಸಾಮ್ರಾಜ್ಯದ ಕೆಲಸಕಾರ್ಯಗಳಲ್ಲಿ ಮನಃಪೂರ್ವಕವಾಗಿ ತೊಡಗಿಸಿಕೊಳ್ಳಲಾಗದು. ನಿಮ್ಮ ಅರ್ಜುಮಂದಳನ್ನು ಮೀನಾಬಜಾರಿನಲ್ಲಿ ನೋಡಿದೆ. ಅದ್ಭುತ ರೂಪವತಿ, ಬಹಳ ಚುರುಕಾದ ಹುಡುಗಿ, ಮುಂದೆ ನಮ್ಮ ಖುರ್ರಂ ಬಾದಶಾಹನಾದಲ್ಲಿ, ಅವನ ಪ್ರೀತಿಯ ಸಂಗಾತಿಯಾಗಿ ಅವನ ಕೆಲಸ ಕಾರ್ಯಗಳಲ್ಲಿ ಸಂಪೂರ್ಣವಾಗಿ ಸಹಕರಿಸುತ್ತಾಳೆ ಎನ್ನುವ ಭರವಸೆಯಿದೆ. ನೀವು ಬೇಕಾದರೆ ಸ್ವಲ್ಪ ಯೋಚಿಸಿ. ನಿಮ್ಮ ಬೇಗಂರ ಜೊತೆ ಮಾತನಾಡಿ ನಮಗೆ ತಿಳಿಸಿ.

ಘಿಯಾಸ್ ನಂಬಲಾಗದ ಸ್ಥಿತಿಯನ್ನು ತಲುಪಿದ. ಶಾಹನ್‌ಶಾಹ್ ಬಾದಶಾಹರು, ವಿವಾಹ ಸಂಬಂಧವನ್ನು ನಮ್ಮೊಂದಿಗೆ ಮಾಡಲು ಮುಂದಾಗಿರುವುದನ್ನು ನೋಡಿದರೆ ಯಾಕೋ ಭಯವಾಗುತ್ತದೆ. ಅವರು ಬಯಸಿದ ನಮ್ಮ ನೀಸಾ ತಪ್ಪಿಹೋದದ್ದನ್ನು ಪೂರ್ತಿಯಾಗಿ ಮರೆತುಬಿಟ್ಟಿದ್ದಾರೆಯೇ. ಇಲ್ಲವೇ ಈ ವಿವಾಹದಿಂದ ಕುಟುಂಬಗಳು ಹತ್ತಿರವಾಗಿ ತಮ್ಮ ಪ್ರೇಯಸಿಯನ್ನು ಆಗಾಗ ನೋಡುವ ಅವಕಾಶವನ್ನು ಗಳಿಸಿಕೊಂಡು ಮತ್ತೆ ಪ್ರೀತಿ ಗೀತಿ ಅಂತ ಹಿಂದಿನ ಪರಿಸ್ಥಿತಿ ಮರುಕಳಿಸಬಹುದೇ ಹೇಗೆ? ಅಲ್ಲದೆ, ಮೆಹರುನ್ನೀಸಾ ಜಹಾಂಗೀರರ ಸಂಬಂಧದಿಂದ ಅಸಮಾಧಾನಗೊಂಡಿರುವ ಪಾದಶಾಹ್ ಬೇಗಂ, ಜಗತ್‌ಗೋಸಿನಿ ಇದಕ್ಕೆ ಒಪ್ಪಿದ್ದಾದರೂ ಹೇಗೆ? ನೀಸಾಳ ನೆರಳು ಕಂಡರೆ ಸಿಡಿಮಿಡಿಗೊಳ್ಳುವ ಅವರು ಈ ಸುದ್ದಿಯನ್ನು ತಿಳಿದಿದ್ದಾರೆಯೇ ಹೇಗೆ? ಮನಸ್ಸಿನಲ್ಲಿ ಏನೋ ಗೊಂದಲ, ಥಟ್ಟನೆ ಉತ್ತರಿಸುವುದು ಕಷ್ಟವೆನಿಸಿತು. ಜಹಾಂಗೀರ್ ಘಿಯಾಸ್‌ರ ಈ ದೀರ್ಘಮೌನವನ್ನು ಮುರಿಯುವ ಪ್ರಯತ್ನದಿಂದ.

"ಮಿರ್ಜಾ ಘಿಯಾಸ್, ಯಾಕೆ ನಮ್ಮ ಪ್ರಸ್ತಾವ ನಿಮಗೆ ಹಿಡಿಸಲಿಲ್ಲವೇ?"

"ಹಾಗಲ್ಲ ಜಹಾಂಪನಾಹ್, ನಾವು ನಿಮ್ಮ ಸೇವಕರು ಅಷ್ಟೆ. ಯಾವ ರಾಜಮನೆತನಕ್ಕೂ ಸೇರಿದವರಲ್ಲ. ನಿರಾಶ್ರಿತರಾಗಿ ಬಂದು ಬಾದಶಾಹ್ ಅಕ್ಬರರ ಕರುಣೆ, ದಯೆ ಸಹಾನುಭೂತಿಗಳಿಂದ ನಿರಾಶ್ರಿತರಾಗಿ, ಅನಾಥರಾಗಿ ಇದ್ದ ನಮಗೆ ಅಧಿಕಾರ, ಅಂತಸ್ತು, ಸಮಾಜದಲ್ಲಿ ಪ್ರತಿಷ್ಠೆ, ಗೌರವ, ವೈಭವೋಪೇತ ಬದುಕು-ಇತ್ಯಾದಿಗಳನ್ನು ಕಲ್ಪಿಸಿಕೊಟ್ಟಿರುವಾಗ, ತಮ್ಮ ಯಾವುದೇ ಆದೇಶವನ್ನು ಬೇಡಿಕೆಯನ್ನು ನಿರಾಕರಿಸಲಾಗದು. ಆದರೆ ಆಸ್ಥಾನದ ಅಧಿಕಾರಿಗಳು, ವರಿಷ್ಠರು, ಸಾಮಾಜಿಕರು ಈ ಸಂಬಂಧವನ್ನು ಪುರಸ್ಕರಿಸುತ್ತಾರೆಯೋ ಇಲ್ಲವೋ ಎನ್ನುವ ಅಳುಕು, ನನ್ನ ಮೊಮ್ಮಗಳು ನಾಳೆ ಚಕ್ರವರ್ತಿನಿ ಆಗುತ್ತಾಳೆ ಅನ್ನುವದಾದರೆ, ಯಾವ ಮೂರ್ಖನೂ ತಿರಸ್ಕರಿಸಲಾರ. ನಮ್ಮ ಮಗ ಅಸಫ್‌ಖಾನ್, ಮಹಮ್ಮದ್, ನಾನು ಎಲ್ಲರೂ ಸಾಮ್ರಾಜ್ಯದ ಸೇವೆಯಲ್ಲಿದ್ದೇವೆ. ನಿಮ್ಮ ಉಪ್ಪಿನ ಋಣ ನಮ್ಮ ಮೇಲಿದೆ."

"ಆ ಚಿಂತೆಗಳು ನಿಮಗೆ ಬೇಡ. ನಮ್ಮ ಶಹಜಾದ ಖುರ್ರಂನ ಆಸೆಯನ್ನು ಗೌರವಿಸಿ ಪೂರೈಸುವುದೇ ನಮ್ಮ ಕರ್ತವ್ಯ."

"ಜಹಾಂಪನಾಹ್, ತಮ್ಮ ಮೆಹರ್‌ಬಾನಿ ನನ್ನ ಬಾಯಿಯನ್ನು ಕಟ್ಟಿಸಿ ಬಿಟ್ಟಿದೆ. ನಿಮ್ಮ ಸಂಬಂಧವನ್ನು ಖುದಾ ನಿಶ್ಚಯಿಸಿರುವುದಾದರೆ, ನಾವು ಮನುಷ್ಯರು ಅದಕ್ಕೆ ವ್ಯತಿರಿಕ್ತವಾಗಿ ಏನನ್ನೂ ಮಾಡಲಾಗುವುದಿಲ್ಲ."

"ಈಗ ನಮಗೆ ಸಂತೋಷವಾಗಿದೆ. ಹೋಗಿ ನಿಮ್ಮ ಮನೆಯವರೊಂದಿಗೆ ಚರ್ಚಿಸಿ, ನಿಶ್ಚಿತಾರ್ಥದ ದಿನವನ್ನು ನಮಗೆ ತಿಳಿಸಿ."

ಘಿಯಾಸ್ ಬೇಗ್‌ಗೆ ರೆಕ್ಕೆ ಹರಡಿ ಮುಗಿಲುದ್ದಕ್ಕೂ ಸಂತೋಷದಿಂದ ಹಾರಾಡಬೇಕೆನಿಸಿತು. ತಾನು ಬಾದಶಾಹ್ ಪರಿವಾರದ ಭಾಗವಾಗುವುದನ್ನು ಊಹಿಸಿಯೂ ಇರಲಿಲ್ಲ. ಅನಾಯಾಸವಾಗಿ ಈಗ ಈ ಅವಕಾಶ ಸಿಗುತ್ತಿದೆ. ಮೆಹರುನ್ನೀಸಾಳ ವಿವಾಹವಾದರೆ, ಇದೆಲ್ಲವೂ ಲಭ್ಯವಾಗುತ್ತದೆ ಎಂದು ಭಾವಿಸಿದ್ದುಂಟು. ಆದರೆ ಈಗ ದೊರೆಯುತ್ತಿರುವ ಅವಕಾಶ ನಿಜವಾಗಿಯೂ ಖುದಾನ ಕರಿಶ್ಮಾ ಅಲ್ಲದೆ ಮತ್ತೇನು ಎಂದು ಯೋಚಿಸುತ್ತಾ ಜಹಾಂಗೀರನಿಗೆ ಕೋರ್ನಿಶ್ ಮಾಡುತ್ತಾ, ಮನೆಯತ್ತ ಹೆಜ್ಜೆ ಹಾಕಿದ.

ಘಿಯಾಸ್‌ಗೆ ಈ ಸಂತೋಷದ ಸುದ್ದಿಯನ್ನು ಅಸ್ಮತ್‌ಗೆ ಮುಟ್ಟಿಸಬೇಕೆಂಬ ಆತುರ. ಅವನ ಹೆಜ್ಜೆಗಳ ವೇಗ, ಗಾಳಿಗಿಂತ ಹೆಚ್ಚಾಗಿದೆಯೇನೋ ಎನಿಸುತ್ತಿತ್ತು. ಅವನ ಮನಸ್ಸಿನಲ್ಲಿ ಏನೇನೋ ಕನಸುಗಳು, ಕಲ್ಪನೆಗಳು!

ವಾಸ್ತವವಾಗಿ ಮನೆಯವರಿಗೆ ಈ ವಿಷಯದಲ್ಲಿ ಯಾವ ಅಭ್ಯಂತರವೂ ಇರಲಿಲ್ಲ. ಅಸಫ್‌ಖಾನನಂತೂ ತನ್ನ ಮಗಳ ಅದೃಷ್ಟಕ್ಕೆ ಹಿರಿಹಿರಿ ಹಿಗ್ಗಿದ. ಆದರೆ ಈ ಹಿಗ್ಗಿನಲ್ಲಿಯೂ ಎಲ್ಲೋ ಒಂದು ಕಡೆ ನೋವಿನ ಮುಳ್ಳು ಚುಚ್ಚುತ್ತಿತ್ತು. ತನ್ನ ತಂಗಿ ಮೆಹರುನ್ನೀಸಾಳಿಗೆ ತಪ್ಪಿಹೋದ ಅದೃಷ್ಟ ತನ್ನ ಮಗಳನ್ನು ಅರಸಿಕೊಂಡು ಬಂದಿದೆ. ಆದರೂ ಸಂತೋಷ ಪಡಲೇಬೇಕು. ಈಗಾಗಲೇ ತಾನು ವಜೀರ. ಇನ್ನು ಮುಂದೆ ಈ ಸಾಮ್ರಾಜ್ಯವನ್ನು ಮೊದಲಿಗಿಂತ ಹೆಚ್ಚಾಗಿ ಕಾಪಾಡುವ ಜವಾಬ್ದಾರಿ ತನ್ನ ಮೇಲಿರುತ್ತದೆ. ಹಾಗೆಂದು ಈಗ ತಾನೇನೂ ನಿರ್ಲಕ್ಷಿಸಿಲ್ಲ. ಜಹಾಂಗೀರ್ ತನ್ನ ಒಡನಾಡಿಯೂ, ಆಪ್ತ ಗೆಳೆಯನೂ ಅಂತರಂಗ ಸಲಹಾಕಾರನೂ ಆಗಿರುವಾಗ, ಅವರನ್ನು ಅವರ ಸಾಮ್ರಾಜ್ಯವನ್ನು ಕಾಪಾಡುವುದು ನನ್ನ ಧರ್ಮವೇ ಸರಿ ಎಂದು ಭಾವಿಸಿದ.

ಅಸ್ಮತಳಿಗಂತೂ ಈ ಸಂತೋಷವನ್ನು ಹತ್ತಿಕ್ಕಿಕೊಳ್ಳಲು ಸಾಧ್ಯವಾಗಲಿಲ್ಲ. 'ಯಾ ಅಲ್ಲಾಹ್ ನಿನ್ನ ಕರಿಶ್ಮಾಗೆ ನೂರೆಂಟು ಸಲಾಮು' ಎಂದು ಹೇಳಿ ಕೂಡಲೆ ಅಡಿಗೆ ಮನೆಗೆ ನುಗ್ಗಿ ಸಿಹಿತಿಂಡಿಗಳನ್ನು ತಂದು ಎಲ್ಲರಿಗೂ ಒತ್ತಾಯದಿಂದ ತಿನ್ನಿಸಿದಳು. ಈ ಸಂಭ್ರಮವನ್ನು ಗುಟ್ಟಾಗಿ ಗಮನಿಸುತ್ತಿದ್ದ ಅರ್ಜುಮಂದ್‌ಬಾನು ನಾಚಿ ಕೆಂಪಾಗುತ್ತಿದ್ದಳು.

ಅಸ್ಮತ್‌ಳ ಸೂಕ್ಷ್ಮನೋಟ ಅವಳ ಮೇಲೆ ಬೀಳದೆ ಇರಲಿಲ್ಲ. ಹೋಗಿ ಅವಳನ್ನು ಎಳೆದು ತಂದಳು. ಬಿಗಿಯಾಗಿ ಆಲಂಗಿಸಿಕೊಂಡಳು.

"ಅರ್ಜು, ಅರ್ಜು ನೀನೆಷ್ಟು ಅದೃಷ್ಟವಂತಳು. ಖುರ್ರಂ ಬೇಟಾ ನಮಗೆ ಅಳಿಯನಾಗುತ್ತಿರುವುದು ನಮಗೆಷ್ಟು ಸಂತೋಷ ತಂದಿದೆ ಗೊತ್ತಾ" ಎಂದು ಹೇಳಿ

ಅವಳ ಬಾಯಿಗೆ ಸಿಹಿಯಿಟ್ಟಳು. ಮೊಮ್ಮಗಳ ನಿಶ್ಚಿತಾರ್ಥದ ಸಂದರ್ಭದಲ್ಲಿಯೇ ತನ್ನ ಮಗಳ ಇತಿಹಾಸವೂ ಬಿಚ್ಚಿಕೊಳ್ಳುತ್ತಿತ್ತು. ನೀಸಾಗೆ ಈ ಸುದ್ದಿ ತಿಳಿದಾಗ ಅವಳ ಪ್ರತಿಕ್ರಿಯೆ ಹೇಗಿರುತ್ತದೆಯೋ ಎಂದು ಘಿಯಾಸ್ ಯೋಚಿಸುತ್ತಿದ್ದನು. ಅವಳೂ ಆ ಜಾಗದಲ್ಲಿಯೇ ಇರಬಹುದಾಗಿತ್ತು. ಘಿಯಾಸ್‌ನ ಮನಸ್ಸು ನೋವು, ಸಂಭ್ರಮಗಳ ದ್ವಂದ್ವದಲ್ಲಿ ಸಿಲುಕಿತ್ತು.

ನೀಸಾಗೆ ಕೂಡಲೇ ಪತ್ರ ಬರೆದು ಈ ವಿಷಯ ತಿಳಿಸಬೇಕು. ಈ ನೆಪದಲ್ಲಾದರೂ ತವರಿಗೆ ಬರುತ್ತಾಳೆ. ಅವಳನ್ನು ಅವಳ ಮಗಳನ್ನು ನೋಡಬೇಕೆಂದು ಮನಸ್ಸು ತುಡಿಯುತ್ತಿದೆ. ಅವಳೂ ಎಷ್ಟೋ ಸಲ ಆಗ್ರಾದ ಬದುಕನ್ನು ನೆನಪಿಸಿಕೊಂಡು, ಅದರಿಂದ ದೂರವಿರುವುದಕ್ಕಾಗಿ ನಿಟ್ಟುಸಿರು ಬಿಡುತ್ತಿದ್ದಳು. ಇದು ಒಳ್ಳೆ ಅವಕಾಶ ಎಂದು ಘಿಯಾಸ್ ಕೂಡಲೆ ಮೆಹರುನ್ನೀಸಾಳಿಗೆ ಪತ್ರ ಬರೆಯಲು ಕುಳಿತ. ಬರೆಯಲು ಎಷ್ಟೊಂದು ವಿಷಯಗಳಿದ್ದವು. ತಮ್ಮ ಬದುಕಿಗೊಂದು ದಾರಿ ತೋರಿಸಿ, ಕಷ್ಟಕಾಲದ ಉದ್ದಕ್ಕೂ ಜೊತೆಯಾಗಿದ್ದ, ಮಲ್ಲಿಕ್ ಮಾಸೂದ್ ಮತ್ತೊಮ್ಮೆ ಸಾರ್ಥದ ನೆಪದಲ್ಲಿ ಬಂದದ್ದು, ಪ್ರಯಾಣದಲ್ಲಿ ಜೊತೆಯಾದ ದಿನದಿಂದ ಇಂದಿನವರೆಗೂ ಸಾಗಿ ಬಂದ ತಮ್ಮಿಬ್ಬರ ಬದುಕಿನಲ್ಲಿ ಘಟಿಸಿದ ಘಟನೆಗಳು, ಕಷ್ಟ ಸುಖಗಳು ಎಲ್ಲವೂ ತಮ್ಮಿಬ್ಬರ ನಡುವೆ ಚರ್ಚೆಗೆ ಬಂದವು. ಮೆಹರುನ್ನೀಸಾಳ ಬಗ್ಗೆ ವಿಶೇಷವಾಗಿ ವಿಚಾರಿಸಿ ಅವಳ ವಿವರಗಳನ್ನು ಕೇಳಿ ತಿಳಿದುಕೊಂಡದ್ದು, ಆದರೆ ಭವಿಷ್ಯ ನಿಜವಾಗಲಿಲ್ಲವಲ್ಲ ಎಂದು ವ್ಯಥೆ ಪಟ್ಟದ್ದು, ಇಷ್ಟೆಲ್ಲದರ ನಡುವೆ, ಮತ್ತೆ ತನ್ನ ಅಂತಃಪ್ರಜ್ಞೆಯಲ್ಲಿ ನೀಸಾ ಚಕ್ರವರ್ತಿನಿಯಾಗುತ್ತಾಳೆಂದೇ ಭವಿಷ್ಯ ನುಡಿದದ್ದು ಎಲ್ಲವನ್ನೂ ವಿವರಿಸಿ ಬರೆದ.

ನೀಸಾಳ ಅಣ್ಣಂದಿರಿಬ್ಬರ ಬಗ್ಗೆಯೂ ವಿವರಿಸಿ ಬರೆದ. ಮಹಮ್ಮದ್ ಎಷ್ಟು ಬೇಡವೆಂದರೂ ಖುಸ್ರೋ ಪಕ್ಷವಹಿಸಿದ್ದ. ಯಾವಾಗಲೂ ಅವನು ಮುಂಗೋಪಿ, ಹೇಳಿದ್ದನ್ನು ಕೇಳಿಸಿಕೊಳ್ಳುವುದಿಲ್ಲ. ಸಿಕ್ಕಿಬಿದ್ದು ಶಿಕ್ಷೆಗೆ ಒಳಗಾಗಬೇಕಿದ್ದವನನ್ನು ಜಹಾಂಪನಾಹ್ ಕ್ಷಮಿಸಿ ಮರುಜನ್ಮ ಕೊಟ್ಟರು. ಏನಾದರೂ ಅವನ ದಾರಿ ಅವನದೇ! ಬಾದಶಾಹ್ ಜಹಾಂಗೀರ್ ಉದಾರಿಗಳು. ನಮ್ಮ ವಿಷಯದಲ್ಲಿಯಂತೂ ಅಪಾರವಾದ ಗೌರವ, ಹಲವಾರು ರೀತಿಗಳಲ್ಲಿ ನಮಗೆ ಸಹಾಯ ಮಾಡಿದ್ದಾರೆ. ನಿನ್ನ ಗಂಡನನ್ನೂ ಕೂಡಾ ಚೆನ್ನಾಗಿ ನೋಡಿಕೊಂಡಿದ್ದಾನೆ. ಉನ್ನತ ಅಧಿಕಾರ, ಪದವಿಗಳನ್ನು ನೀಡಿದ್ದಾನೆ. ಎಲ್ಲಕ್ಕಿಂತ ಹೆಚ್ಚಾಗಿ ಈಗೊಂದು ಮಹದುಪಕಾರ ಮಾಡಿದ್ದಾರೆ. ನಾವು ಕನಸು ಮನಸಿನಲ್ಲಿಯೂ ಊಹಿಸಲಾಗದ್ದನ್ನು, ನಮಗೆ ಅನುಗ್ರಹಿಸಿದ್ದಾರೆ.

ಅದೇನು ಗೊತ್ತಾ? ನಿನ್ನ ಅಣ್ಣ ಅಸಫ್‌ಖಾನ್ ಈಗ ಚಕ್ರವರ್ತಿಗಳ ಸಂಬಂಧಿಯಾಗಲಿದ್ದಾನೆ. ನಮ್ಮ ಅರ್ಜುಮಂದ್‌ಳನ್ನು ಖುರ್ರಂಗೆ ಮದುವೆ ಮಾಡಿಕೊಡುವಂತೆ ಕೇಳಿಕೊಂಡಿದ್ದಾರೆ. ನಮಗೆ ಈ ವಿಷಯ ಕೇಳಿದ್ದೇ ದಿಗ್ಭ್ರಾಂತಿಗೆ ಒಳಗಾದೆವು. ಆದಷ್ಟು ಬೇಗ ನಿಶ್ಚಿತಾರ್ಥವನ್ನು ಏರ್ಪಡಿಸಲಿದ್ದೇವೆ. ನೀನು ಖಂಡಿತ ನಿನ್ನ ಗಂಡ ಮತ್ತು ಮಗಳೊಂದಿಗೆ ಬರಲೇಬೇಕು. ಒಂದಿಷ್ಟು ದಿನ ಇದ್ದು ಹೋಗುವಿಯಂತೆ. ನಿನ್ನ ಮಗಳು ಲಾಡ್ಲಿಯನ್ನು ನೋಡಬೇಕೆಂದು ಆಸೆಯಾಗುತ್ತಿದೆ, ಎಂದು ಬಹಳ ಭಾವುಕತೆಯೊಂದಿಗೆ ಪತ್ರ ಬರೆದ.

ನೀಸಾಗೆ ಪತ್ರ ತಲುಪಿದ್ದೇ ಸ್ವರ್ಗ ಮೂರೇ ಗೇಣು ಎಂಬಂತಾಯಿತು. ಸದ್ಯ

ಒಂದಷ್ಟು ದಿನ ಆರಾಮವಾಗಿ ಇರಬಹುದು. ನಮ್ಮ ಅರ್ಜು, ನನ್ನ ಕಣ್ಣ ಮುಂದಿನ ಮಗು ಈಗಾಗಲೇ ಮದುಮಗಳಾಗುತ್ತಿದ್ದಾಳೆ ಎಂದು ಸಂತೋಷ ಪಟ್ಟರೂ ತನ್ನ ಮಗಳು ಲಾಡ್ಲಿಯ ನೆನಪು ಬಂದಾಗ ಒಂದು ಚೂರು ಅಸೂಯೆಯಾಯಿತು. ತನಗಾಗಲಿ ತನ್ನ ಮಗಳಿಗಾಗಲಿ ಆ ಅದೃಷ್ಟ ಸಾಧ್ಯವಿಲ್ಲ. ಒರಟು ಗಂಡನ ಜೊತೆ ಬಾಳಬೇಕೆಂದು ಬರೆದಿದ್ದರೆ ಯಾರು ತಾನೇ ಏನುಮಾಡಲು ಸಾಧ್ಯ ಎಂದುಕೊಂಡಳು. ಎಲ್ಲವೂ ಅಂದುಕೊಂಡಂತೆ ಆಗಿದ್ದರೆ ನಾನು ಜಹಾಂಗೀರನ ರಾಣಿಯಾಗಿರುತ್ತಿದ್ದೆ. ಆದರೆ ಆ ಅವಕಾಶ ನನಗೆ ಬದಲಾಗಿ ಅರ್ಜುಗೆ ಬಂದಿದೆ. ಇರಲಿ ಅವಳೂ ನನ್ನ ಮಗಳಂತೆಯೇ ಅಲ್ಲವೆ ಎಂದು ತನ್ನನ್ನು ತಾನೇ ಸಮಾಧಾನಗೊಳಿಸಿಕೊಳ್ಳಲು ಪ್ರಯತ್ನಿಸಿದಳು.

ಲಾಹೋರಿಗೆ ಹೋಗಲು ಒಂದು ಸಂದರ್ಭವಂತೂ ಸೃಷ್ಟಿಯಾಯಿತು. ಅಲಿಖುಲಿಗೂ ತನ್ನ ಪತ್ರದ ಜೊತೆಯಲ್ಲಿಯೇ ಮತ್ತೊಂದು ಪತ್ರವನ್ನು ಪ್ರತ್ಯೇಕವಾಗಿ ಇರಿಸಿದ್ದ. ಗಂಡ ಬರುವುದನ್ನೇ ಎದುರು ನೋಡುತ್ತಾ ಕುಳಿತಳು. ಎಷ್ಟೇ ದಕ್ಷತೆಯಿಂದ ನೋಡಿಕೊಂಡರೂ ಅಲ್ಲಿ ಇಲ್ಲಿ ಗಲಭೆಗಳು ಕಾಣಿಸಿಕೊಳ್ಳುತ್ತಿದ್ದುದರಿಂದ, ಅಲಿಖುಲಿ ಹೆಚ್ಚಾಗಿ ಹೊರಗೇ ಇರುತ್ತಿದ್ದ. ಒಂದೆರಡು ದಿನಗಳಲ್ಲಿ ಬರುವುದಾಗಿ ಸಂದೇಶ ಕಳಿಸಿದ್ದ.

ಮಗಳು ಲಾಡ್ಲಿಯನ್ನು ಕೂರಿಸಿಕೊಂಡು ಅಜ್ಜನ ಪರಿವಾರದ ಕಥೆಗಳನ್ನೆಲ್ಲ ವಿವರಿಸಿದಳು. ಅಜ್ಜನ ಮನೆಗೆ ಹೋಗುವ ಸುದ್ದಿ ಅವಳಿಗೂ ರೋಮಾಂಚನ ಉಂಟು ಮಾಡಿತು. ದಾದಾಜಿಯ ಮಡಿಲಲ್ಲಿ ಕುಳಿತುಕೊಳ್ಳುವುದಕ್ಕೆ ತುಂಬಾ ಆಸೆ ಅವಳಿಗೆ. ಈಗಾಗಲೇ ಫಿರ್‌ದೌಸ್ ಅವಳಿಗೆ ಅಮ್ಮ ಹುಟ್ಟಿದಾಗಿನಿಂದ ಇಂದಿನವರೆಗಿನ ಸಂಗತಿಗಳನ್ನು ಅಮ್ಮಿಯ ಸಾಹಸಗಾಥೆಗಳನ್ನು, ಅವಳ ಸೌಂದರ್ಯವನ್ನು ರೋಚಕವಾಗಿ ವಿವರಿಸಿದ್ದಳು. ಅದೆಲ್ಲವೂ ಲಾಡ್ಲಿಯ ತಲೆಯಲ್ಲಿದ್ದು ಮೆಹರುನ್ನೀಸಾಳಿಗಿಂತಲೂ ಹೆಚ್ಚಿನ ಕಾತುರತೆಯಿಂದ ಲಾಹೋರಿಗೆ ಹೋಗುವ ಕ್ಷಣಗಳಿಗಾಗಿ ಎದುರು ನೋಡುತ್ತಿದ್ದಳು.

ಅಲಿಖುಲಿ ಸಂದೇಶದಲ್ಲಿ ತಿಳಿಸಿದಂತೆ, ಸಮಯಕ್ಕೆ ಸರಿಯಾಗಿ ಬಂದಿಳಿದ. ಅಹಮದ್, ಸೇವಕ ಹುಡುಗ ಓಡಿಹೋಗಿ ಅಲಿ ಬಂದ ಸುದ್ದಿಯನ್ನು ತಿಳಿಸಿದ.

ಕಸೂತಿ ಕೆಲಸದಲ್ಲಿ ಮಗ್ನಳಾಗಿ ಕುಳಿತಿದ್ದ ಮೆಹರುನ್ನೀಸಾ ದಿಢೀರನೆ ಎದ್ದು ಹೋಗಿ ಅಲಿಯ ಮುಂದೆ ನಿಂತಳು. ಬರುವಾಗಲೇ ಕೈಯಲ್ಲಿ ಮಧು ಬಟ್ಟಲನ್ನು ಹಿಡಿದಿದ್ದಳು. ಅಲಿಯ ಕ್ಷೇಮ ಸಮಾಚಾರವನ್ನು ವಿಚಾರಿಸಿದಳು. ಮಧು ಪಾತ್ರೆಯನ್ನು ಅವನ ಮುಂದೆ ಹಿಡಿದಳು. ಅಲಿ ಅವಳತ್ತ ತಿರುಗಿ ಅವಳ ಚಹರೆಯನ್ನು ಗಮನಿಸಿದ.

"ಏನು ಬೇಗಂ ಸಾಹಿಬಾ. ಇವತ್ತು ಇಷ್ಟೊಂದು ಉಪಚಾರ. ಮೊಗದಲ್ಲಿ ಉಕ್ಕಿ ಹರಿಯುತ್ತಿರುವ ಸಂತೋಷ?"

"ನೀವು ಈ ಬಾರಿ ಎಂದಿನಂತೆ ಬಹಳ ದಿನಗಳು ನಮ್ಮನ್ನು ಕಾಯಿಸುತ್ತಿದ್ದಂತೆ, ಮಾಡಲಿಲ್ಲವೆಂಬ ಸಂತೋಷ ಅಷ್ಟೇ!" ಎಂದಳು.

ಅಷ್ಟರಲ್ಲಿಯೆ ಮೆಹರುನ್ನೀಸಾಳ ಮಾತನ್ನು ಸುಳ್ಳಾಗಿಸಲು ಲಾಡ್ಲಿ ಅಲಿ ಬಂದ ವಿಷಯ ತಿಳಿದಿದ್ದರಿಂದ ಓಡಿ ಬಂದು ಅವನಿಗೆ ತೆಕ್ಕೆ ಹಾಕಿಕೊಂಡಳು.

"ಅಬ್ಬು ನಾವೆಲ್ಲಾ ಲಾಹೋರಿಗೆ ಹೋಗೋಣ. ದಾದು ಪತ್ರ ಬರೆದಿದ್ದಾರೆ.

ಅರ್ಜುದೀದಿಗೆ 'ನಿಕಾ' ಅಂತೆ" ಎಂದು ಬಡಬಡ ಮಾತಾಡಿ ಗುಟ್ಟು ಬಯಲು ಮಾಡಿಬಿಟ್ಟಳು. ಅಲಿ ಮೆಹರುನ್ನೀಸಾಳ ಕಡೆ ಪ್ರಶ್ನಾರ್ಥಕವಾಗಿ ನೋಡಿದ. ಅವಳು ಹೌದೆಂದು ತಲೆಯಾಡಿಸಿದಳು.

"ಮಾಫಿ ಮಾಡಬೇಕು ಹುಜೂರ್, ನಿಮ್ಮನ್ನು ಕಾಯಿಸಿ, ಛೇಡಿಸಿ, ನಂತರ ಪತ್ರ ಕೊಡಬೇಕೆಂದಿದ್ದೆ. ಲಾಡ್ಲಿ ಎಲ್ಲವನ್ನೂ ಬಯಲು ಮಾಡಿಬಿಟ್ಟಳು. ಅಬ್ಬು ನಿಮಗೆ ಈ ಪತ್ರವನ್ನು ಬರೆದಿದ್ದಾರೆ ಎಂದು ಬಿಡಿಸದಿದ್ದ ಪತ್ರವನ್ನು ಅಲಿಖುಲಿ ಕೈಗೆ ಕೊಟ್ಟಳು.

ಅಲಿಖುಲಿ ಪತ್ರವನ್ನು ಬಿಡಿಸಿದ. ಗೌರವ ಪೂರ್ವಕ ಒಕ್ಕಣೆಯೊಂದಿಗೆ, ಕುಶಲೋಪರಿ ವಿಚಾರಿಸಿ, ನಂತರ ಮುಖ್ಯ ಸಂಗತಿಗಳನ್ನು ವಿವರಿಸಿ, ಅಸಫ್‌ಖಾನನ ಪರವಾಗಿ, ಅರ್ಜುಮಂದ್ ಬಾನುವಿನ ನಿಶ್ಚಿತಾರ್ಥಕ್ಕೆ ಆಹ್ವಾನಿಸಿದ್ದನ್ನು ಓದಿದ. ಆದರೆ ಅಲಿಖುಲಿಗೆ ಹೋಗುವ ಇಚ್ಛೆ ಇರಲಿಲ್ಲ. ಕರೆದವನು ಮಾವನೇ ಆದರೂ ನಿಶ್ಚಿತಾರ್ಥ ತಾನು ದ್ವೇಷಿಸುತ್ತಿರುವ ಜಹಾಂಗೀರನ ಮಗನೊಂದಿಗೆ! ತಾನು ಬಾರದಿದ್ದ ಪಕ್ಷದಲ್ಲಿ, ತನ್ನ ಹೆಂಡತಿಗೆ ಅಂತಹ ದುಃಖವೇನೂ ಆಗಲಾರದು. ಸ್ವಚ್ಛಂದವಾಗಿ, ಸಂತೋಷವಾಗಿ, ಸ್ವತಂತ್ರವಾಗಿ ತನ್ನವರೊಂದಿಗೆ ಹಾಗೂ ತನ್ನ ಪೂರ್ವ ಪ್ರಿಯತಮನೊಂದಿಗೆ ಸ್ವಲ್ಪ ಸಮಯವಾದರೂ ಕಳೆಯಬಹುದು ಎಂದುಕೊಂಡ. ಎಂದಿನಂತೆ ಈ ಬಾರಿಯೂ ಏನೇನೋ ಸಬೂಬುಗಳನ್ನು ಹೇಳಿ, ತಾನು ತಪ್ಪಿಸಿಕೊಂಡ. ಹೆಂಡತಿ ಮಗಳನ್ನು ಕಳಿಸಿಕೊಡಲು ಮನಸ್ಸು ಒಪ್ಪದಿದ್ದರೂ, ಘಿಯಾಸ್ ಬೇಗರ ಮೇಲಿನ ಗೌರವದಿಂದ ಮತ್ತು ಉನ್ನತ ಅಧಿಕಾರ ಸ್ಥಾನದಲ್ಲಿ ಇದ್ದುದರಿಂದ, ಅವರ ಕೋರಿಕೆಯನ್ನು ಆದೇಶವೆಂದೇ ಭಾವಿಸಿದ.

ಮೆಹರುನ್ನೀಸಾಗೆ, ಗಂಡ ಬಾರದಿದ್ದುದು ಅಲಿ ಭಾವಿಸಿದಂತೆ ಸಂತೋಷವಾಗಲಿಲ್ಲ. ಅವನೂ ಬಂದಿದ್ದರೆ ಚೆನ್ನ ಎಂದು ಅನಿಸಿದರೂ, ಜಹಾಂಗೀರ್ ಎದುರಾದಾಗ ತನ್ನಲ್ಲಾಗುವ ಬದಲಾವಣೆಗಳು ಅವನ ಗಮನಕ್ಕೆ ಬಂದಲ್ಲಿ ಏನೇನು ಅನಾಹುತಗಳಾಗುವುವೋ ಎಂದು ಹೆದರಿದಳು. ತನಗೂ ತನ್ನ ಮೇಲೆ ಭರವಸೆ ಇರಲಿಲ್ಲ. ಜಹಾಂಗೀರನನ್ನು ಈಗಲೂ ಮನಸ್ಸಿನಲ್ಲಿ ಬಯಸುತ್ತಿದ್ದರೂ ತಾನು ಬಯಸುತ್ತಿದ್ದ ಹೆಣ್ಣು ಮಕ್ಕಳ ವಿಚಾರದಲ್ಲಿನ ಸುಧಾರಣೆ ಸ್ವಾತಂತ್ರ್ಯಗಳು ಇನ್ನೂ ಮುಸ್ಲಿಂ ಸಮಾಜದಲ್ಲಿ ಸಾಧ್ಯವಿರಲಿಲ್ಲ. ಅಲ್ಲದೆ ಒಂದಿಷ್ಟು ಕಡಿಮೆಯಾದರೂ ಆಗದವರು ಇಲ್ಲಸಲ್ಲದ್ದನ್ನು ಹಬ್ಬಿಸಿ, ಗುಲ್ಲೆಬ್ಬಿಸುತ್ತಾರೆ. ಹಳೆಯ ಪ್ರೀತಿ ಒಳಗೆ ಗೂಡು ಕಟ್ಟಿದ್ದರೂ, ಗಂಡನಿಗೆ ದ್ರೋಹ ಬಗೆಯುವ ಯೋಚನೆ ಕನಸು ಮನಸಿನಲ್ಲೂ ಇರಲಿಲ್ಲ. ರಾಜಿ ಮಾಡಿಕೊಂಡೇ ಬದುಕುತ್ತಿದ್ದಳು.

ವಿಧಿಯಿಲ್ಲದೆ, ಅಲಿಖುಲಿಯಿಂದ ಬೀಳ್ಕೊಂಡು ಲಾಹೋರಿನ ಕಡೆಗೆ ಪ್ರಯಾಣ ಬೆಳೆಸಿದರು. ಮೆಹರುನ್ನೀಸಾಳ ಬರವಿನಿಂದ ಘಿಯಾಸ್ ಮತ್ತು ಅಸ್ಮತ್ ಬೇಗಂರ ಸಂತೋಷಕ್ಕೆ ಕೊನೆಯೇ ಇರಲಿಲ್ಲ. ಎಲ್ಲರಲ್ಲಿಯೂ ಉತ್ಸಾಹ ಹುಮ್ಮಸ್ಸುಗಳು ಉಕ್ಕಿ ಹರಿದವು. ಮೆಹರುನ್ನೀಸಾ ತನ್ನ ಪರಿವಾರ ಬಂಧುಗಳು, ಸ್ನೇಹಿತರು ಎಲ್ಲರೊಂದಿಗೂ ಪ್ರೀತಿ, ಸ್ನೇಹಗಳಿಂದ ನಡೆದುಕೊಳ್ಳುತ್ತಿದ್ದಳು.

ಪಲ್ಲಕ್ಕಿ ಬಂದು ನಿಂತ ಸೂಚನೆ ದೊರೆಯುತ್ತಿದ್ದಂತೆ ಎಲ್ಲರೂ ಅವಳನ್ನು

ಬರಮಾಡಿಕೊಳ್ಳಲು ಧಾವಿಸಿದರು. ಅಸ್ಮತ್ ಮಗಳನ್ನು ಇಳಿಸಿಕೊಂಡರೆ ಘಿಯಾಸ್ ಮೊಮ್ಮಗಳು ಲಾಡ್ಲಿಯನ್ನು ಇಳಿಸಿಕೊಂಡು ಒಮ್ಮೆಲೇ ಎತ್ತಿ ಮುದ್ದಾಡಿದ, ಲಾಡ್ಲಿಯೂ ಕೂಡಾ ಸುಂದರವಾದ ಹುಡುಗಿಯೇ! ಹೊಳೆವ ಕಣ್ಣುಗಳು, ನುಣುಪಾದ ಚರ್ಮ, ಗುಂಗುರು ಕೂದಲು. ಅವಳನ್ನು ನೋಡಿ ಬಹಳ ದಿನಗಳಾಗಿತ್ತು. ಆದ್ದರಿಂದಲೇ ಅವನಲ್ಲಿ ಪ್ರೀತಿ ಉಕ್ಕಿ ಹರಿಯಿತು. ಅಸ್ಮತ್ ಗಂಡನ ಸಂತೋಷೋದ್ರೇಕವನ್ನು ನೋಡಿದಳು.

"ಘಿಯಾಸ್, ನಿಮಗೆ ಮೊಮ್ಮಗಳೊಬ್ಬಳು ಇದ್ದರೆ ಸಾಕಲ್ಲವೇ? ನಿಮ್ಮ ಮಗಳು ಈಗ ಬೇಡವಾದಳೆ?"

" ಅಸ್ಮತ್ ನನ್ನ ಬಳಿ ಇರುವವಳು ನನ್ನ ಪುಟ್ಟ ನೀಸಾಳೇ! ಎಲ್ಲವೂ ಅಮ್ಮನಂತೆಯೇ! ಎರಕದ ಬೊಂಬೆ!"

ಮೆಹರುನ್ನೀಸ್ಸಾಗೆ, ತಮ್ಮ ಬರವಿನಿಂದ ಮನೆಯವರು ಇಷ್ಟು ಸಂಭ್ರಮಿಸುತ್ತಾರೆಂದು ಭಾವಿಸಿರಲಿಲ್ಲ. ಅಸಫ್, ಮಹಮ್ಮದ್, ಸಲೀಹಾ ಮತ್ತಿತರರೆಲ್ಲ ಅಲ್ಲಿ ಸೇರಿದ್ದರೂ ಅರ್ಜುಮಂದ ಹೊರಗೆ ಬಂದಿರಲಿಲ್ಲ. ಮೆಹರುನ್ನೀಸಾಗೆ ಅವಳನ್ನು ನೋಡುವ ಕುತೂಹಲ. ಶಹಜಾದ ಖುರ್ರಂನ ಪ್ರೀತಿಯ ಸೆಳೆತಕ್ಕೆ ಸಿಕ್ಕ ಈ ಹುಡುಗಿ, ನನಗಿಂತ ಚೆಲುವೆಯೇ? ಎಂದು ಯೋಚಿಸುತ್ತಾ,

'ಅರ್ಜು ಅರ್ಜು' ಎಂದು ಕೂಗುತ್ತಾ ಅವಳಿದ್ದ ಕೋಣೆಯತ್ತ ಹೆಜ್ಜೆ ಹಾಕಿದಳು. ಅರ್ಜುಮಂದ್‌ಬಾನು ಬಾಗಿ ಮರೆಯಲ್ಲಿ ನಿಂತು ಕಳ್ಳನೋಟದಿಂದ ಎಲ್ಲವನ್ನೂ ಗಮನಿಸುತ್ತಿದ್ದವಳನ್ನು ಮೆಹರುನ್ನೀಸಾ ಕಿವಿಹಿಡಿದು ಹೊರಗೆ ಎಳೆದು ತಂದಳು. ಲಾಡ್ಲಿ ಅಮ್ಮ ಮಾಡುತ್ತಿದ್ದ ಕೆಲಸವನ್ನು ಬಿಟ್ಟ ಕಣ್ಣುಗಳಿಂದ ನೋಡುತ್ತಿದ್ದಳು. ಲಾಡ್ಲಿಗಂತೂ ಅವಳ ರೂಪ ಬೆರಗು ಹುಟ್ಟಿಸಿತ್ತು. ಆ ಕ್ಷಣದಲ್ಲಿಯೇ ಅವಳಿಗೆ ತಾನು ಅಷ್ಟು ಚೆಲುವೆಯಾಗಿಲ್ಲವೆಂಬ ಭಾವ ಬಂದದ್ದೇ ಮನಸ್ಸು ಸ್ವಲ್ಪ ಮುದುಡಿತು.

"ಅರ್ಜು ಬಾ ಹೊರಗೆ ನಿನ್ನನ್ನು ನೋಡಬೇಕೆಂದು ಎಷ್ಟು ದೂರದಿಂದ ಬಂದಿದ್ದೀವಿ, ನೀನು ನಮ್ಮನ್ನು ಮಾತಾಡಿಸುವುದಿಲ್ಲವೇನು? ನಿನ್ನ ಬುವಾಳನ್ನು ಮರೆತು ಬಿಟ್ಟೆ ಹೇಗೆ?"

ಅರ್ಜು ಪೂರ್ತಿಯಾಗಿ ನಾಚಿಬಿಟ್ಟಿದ್ದಳು. ಮೆಹ್ರೂ ಅವಳನ್ನು ಹತ್ತಿರ ಕರೆದು ಆಲಂಗಿಸಿದಳು. ನಿನ್ನ ಗೆಳತಿ, ನಿನ್ನ ತಂಗಿ ಲಾಡ್ಲಿಯನ್ನು ಮರೆತು ಬಿಟ್ಟೆಯಾ?....... ಹೋಗಲಿ ಹೇಳು, ನಿನ್ನ ಶಹಜಾದ ಹೇಗಿದ್ದಾನೆ? ಎಂದೆಲ್ಲ ಛೇಡಿಸಿದಳು.

'ನೀಸಾ, ಎಷ್ಟು ದೂರದಿಂದ ಪ್ರಯಾಣ ಮಾಡಿ ಬಂದಿದ್ದೀರಿ, ಮೊದಲು ಎಲ್ಲರೂ ವಿಶ್ರಾಂತಿ ಪಡೆಯಿರಿ. ಒಳ್ಳೆಯ ದಾವತ್ ನಿಮಗಾಗಿ ಎದುರು ನೋಡುತ್ತಿದೆ.'

ಎರಡು ಮೂರು ದಿನಗಳಲ್ಲಿ ನಿಶ್ಚಿತಾರ್ಥದ ಸಮಯ ಬಂದೇ ಬಂತು. ಮನೆತುಂಬ ನೆಂಟರಿಷ್ಟರು. ಶಾಹನ್‌ಶಾಹ್ ಜಹಾಂಗೀರರ ಶಾಹಜಾದಾ ಖುರ್ರಂನೊಂದಿಗೆ ವಿವಾಹ ಸಂಬಂಧ! ಆತಿಥ್ಯ ಭರ್ಜರಿಯಾಗಿತ್ತು. ಹೆಂಗಸರೆಲ್ಲ ಬಾಲ್ಕನಿಯಲ್ಲಿ ಗುಂಪುಗೂಡಿದರು. ಗಂಡಸರೂ ಅಪಾರ ಸಂಖ್ಯೆಯಲ್ಲಿ ಬಂದವರಾದ್ದರಿಂದ ಎಲ್ಲ ಹೆಂಗಸರೂ ಮುಖವನ್ನು ಪರದಾಗಳಿಂದ ಮರೆಮಾಡಿದ್ದರು. ಆಸ್ಥಾನಿಕರು, ಮಂತ್ರಿಗಳು, ಸೇನಾಧಿಕಾರಿಗಳು, ಸೇವಕರು ಹೀಗೆ, ರಾಜ್ಯಕ್ಕೆ ರಾಜಪರಿವಾರಕ್ಕೆ ಸಂಬಂಧಪಟ್ಟವರೆಲ್ಲರೂ ದೊಡ್ಡ ಸಂಖ್ಯೆಯಲ್ಲಿ ಸೇರಿದ್ದರು.

ಬಂದವರೆಲ್ಲರಿಗೂ ಈ ಸಂಬಂಧ ಹುಬ್ಬೇರಿಸುವಂತೆ ಮಾಡಿತ್ತು. ಕೆಲವರು, ಘಿಯಾಸ್‌ನ ಸೇವೆಯ ಪ್ರತೀಕವಾಗಿ ಈ ಸಂಬಂಧವಾಗಿದೆ ಎಂದು ಸಂತೋಷಪಟ್ಟರೆ ಮತ್ತೆ ಕೆಲವರು ಒಳಗೊಳಗೇ ಅಸೂಯೆಪಟ್ಟರು. ಜಹಾಂಗೀರನ ನಂತರ ಸಿಂಹಾಸನದ ಉತ್ತರಾಧಿಕಾರಿ ಖುರ್‍ರಂ ಆಗಿರುವುದರಿಂದ ಅವನೇ ಮುಂದಿನ ಚಕ್ರವರ್ತಿ! ಘಿಯಾಸ್ ಕುಟುಂಬದ ಅಂತಸ್ತು, ಅವರೆಲ್ಲರ ಅಧಿಕಾರವೂ ಬೆಳೆಯುತ್ತದೆ ಎನ್ನುವುದೇ ಅಸೂಯೆಗೆ ಕಾರಣವಾಗಿತ್ತು.

ಮನೆಯವರೆಲ್ಲರೂ ರಾಜೋಚಿತವಾದ ಉಡುಪುಗಳಲ್ಲಿ ಮತ್ತಷ್ಟು ಗಾಂಭೀರ್ಯದಿಂದ ಕಾಣುತ್ತಿದ್ದರು. ಈ ಸಂಬಂಧದಿಂದ ಅಣ್ಣ ಅಸಫ್‌ಖಾನ್ (ಅಬುಲ್ ಹಸನ್)ನಲ್ಲಿ ಏನಾದರೂ ಬದಲಾವಣೆ ಇದೆಯೇನೋ ಎಂದು ಗಮನಿಸಿದಳು. ಆದರೆ ಅವನು ಮೊದಲಿದ್ದಂತೆಯೇ ಗಂಭೀರವಾಗಿ, ಜವಾಬ್ದಾರಿಯುತ ವ್ಯಕ್ತಿಯಾಗಿ ಕಾಣಿಸಿದ. ಅಣ್ಣನ ಅದೃಷ್ಟವನ್ನು ಕೊಂಡಾಡಿ ಶುಭ ಕೋರಿದಳು.

ಅಷ್ಟರಲ್ಲಿ ಹೊರಗಡೆ ಗದ್ದಲ ಕೇಳಿಸಿತು. ಬಹುಶಃ ಬಾದಶಾಹರ ಪರಿವಾರ, ಅಧಿಕಾರಿ ಬಳಗ ಬಂದಿರಬೇಕೆಂದು ಹೊರಗೆ ನಡೆದು ಎದುರುಗೊಳ್ಳಲು ಸಜ್ಜಾದರು.

ತಾಳಮೇಳಗಳೊಂದಿಗೆ, ಕುದುರೆ ಸವಾರರ ಮುಂಭಾಗದಲ್ಲಿ ಜಹಾಂಗೀರ್ ಮತ್ತು ಖುರ್‍ರಂ ಕುದುರೆ ಸವಾರಿ ಮಾಡುತ್ತಾ ಸಾಗಿ ಬಂದರು. ಅಮೂಲ್ಯವಾದ ರತ್ನ ಖಚಿತ ಕಿರೀಟ, ಚಿನ್ನ, ಬೆಳ್ಳಿ, ಹವಳ, ಮುತ್ತುಗಳಿಂದ ಕಸೂತಿ ಮಾಡಿದ ಕಾಬಾ, ಸೊಂಟದಲ್ಲಿ ತಲವಾರು! ಉಡುಪಿನಿಂದ ಬೆಳಕಿನ ಕಿರಣಗಳು ಹೊಮ್ಮುತ್ತಿದ್ದವು. ಇಬ್ಬರಲ್ಲಿಯೂ ಅದ್ಭುತವಾದ ಸೌಂದರ್ಯ ಮಡುಗಟ್ಟಿತ್ತು. ಮೆಹರುನ್ನೀಸಾಳಲ್ಲಿ ಎದೆಯ ಬಡಿತ ಪ್ರಾರಂಭವಾಗಿತ್ತು. ಬಾಲ್ಕನಿಯಲ್ಲಿ, ನೋಡಲು ಅನುಕೂಲವಾಗುವಂತೆ ಮುಂಭಾಗದಲ್ಲಿ ಕುಳಿತಿದ್ದಳು. ಆತುರ ಕಾತುರದ ಕಣ್ಣುಗಳಿಂದ ಸಲೀಮನಾಗಿದ್ದ ಜಹಾಂಗೀರನನ್ನು, ಬಾದಶಾಹ ಸ್ಥಾನದಲ್ಲಿ ನೋಡಲು ಚಡಪಡಿಸಿದಳು. ಇದೆ ಜಹಾಂಗೀರನೇ ತನಗಾಗಿ ಪ್ರಾಣಬಿಡಲೂ ಸಿದ್ಧನಿದ್ದ. ಆದರೆ ಖುದಾ ನನ್ನೆಲ್ಲ ಕನಸುಗಳನ್ನು ಹೊಸಕಿ ಹಾಕಿದ ಎಂದು ನಿಟ್ಟುಸಿರಿಟ್ಟಳು.

ಜಗತ್‌ಗೋಸಿನಿಯೂ ಬಂದಿರುತ್ತಾಳೆ. ನನ್ನನ್ನು ನೋಡಿದರೆ ಹೇಗೆ ವರ್ತಿಸುತ್ತಾಳೆಯೋ, ಅವಳ ಮುಂದೆ ಹೋಗಲೇಬಾರದು. ಈಗ ಪಾದಶಾಹ್‌ಬೇಗಂ ಬೇರೆ ಆಗಿರುವುದರಿಂದ ತನ್ನನ್ನು, ಅವಕಾಶ ಸಿಕ್ಕರೆ ಅವಮಾನಿಸದೆ ಬಿಡುವುದಿಲ್ಲ. ತನ್ನ ದುರದೃಷ್ಟವನ್ನು ವ್ಯಂಗ್ಯದ ಮಾತಿನೊಂದಿಗೆ ತೋರಿಸುತ್ತಾಳೆ. ಆದರೆ ರುಖೈಯ್ಯಾ ಬೇಗಂ ಹಾಗಲ್ಲ. ನನಗಾಗಿ ಮರುಗುವ ಮನಸ್ಸು ಅವರದು. ಆದರೆ ಈಗ ಅವರ ಪರಿಸ್ಥಿತಿಯೂ ದೈನ್ಯತರವಾದದ್ದು. ಜನಾನಾದ ಯಜಮಾನಿಕೆ ಗೋಸಿನಿಯ ಕೈ ಸೇರಿದೆ. ಎಲ್ಲ ನಿಯಂತ್ರಣವೂ ಅವಳ ಕೈಲಿದೆ. ಆದೇಶಗಳು, ನಿರ್ಧಾರಗಳು ಎಲ್ಲವೂ ಅವಳದೇ. ಮೂವತ್ತೈದು, ನಲವತ್ತು ವರ್ಷ ಜನಾನಾವನ್ನು ಆಳಿದವರಿಗೆ, ನಿನ್ನೆ ಮೊನ್ನೆ ಬಂದವರ ಅಡಿಯಾಳತನವೆಂಬುದು ನರಕವೇ ಸರಿ. ಈ ಸಮಾರಂಭ ಮುಗಿದ ಮೇಲೆ ಖಂಡಿತ ಅವರನ್ನು ಹೋಗಿ ಕಾಣಬೇಕು ಎಂದುಕೊಂಡಳು. ನಿಶ್ಚಿತಾರ್ಥದ ಸಂಭ್ರಮದ ನಡುವೆಯೂ ಯೋಚನೆಗಳು, ಕಲ್ಪನೆ, ಕನಸುಗಳು ಅವಳ ಬೆನ್ನು ಬಿಡಲೇ ಇಲ್ಲ.

ಸ್ವಲ್ಪ ಹೊತ್ತಿನಲ್ಲಿಯೇ ಸಾಂಪ್ರದಾಯಿಕ ರೀತಿಯಲ್ಲಿ ನಿಶ್ಚಿತಾರ್ಥದ ಕಾರ್ಯಕ್ರಮ

ಮುಗಿಯಿತು. ಬಂದ ಅತಿಥಿಗಳಿಗೆಲ್ಲ ರುಚಿಕರವಾದ ಮಾಂಸದ ಊಟ, ಒಳ್ಳೆ ಮಸಾಲೆಗಳೊಂದಿಗೆ, ತಯಾರಾದುದನ್ನು ಬಡಿಸಿದರು. ಹಲವು ಬಗೆಯ ಪಲಾವುಗಳು, ಸಿಹಿ ತಿಂಡಿಗಳು, ಮಧ್ಯೆ ಮಧ್ಯೆ ಸೇವಿಸಲು ಸುಗಂಧಯುಕ್ತ ಪಾನೀಯಗಳು, ಔತಣದ ಭಾಗವಾಗಿದ್ದವು. ಒಂದು ಕಡೆ ಹೆಂಗಸರ ಊಟೋಪಚಾರ, ಮತ್ತೊಂದು ಕಡೆ ಗಂಡಸರದು ನಡೆಯುತ್ತಿತ್ತು.

ಹೆಂಗಸರ ನಡುವಿದ್ದ ಜಗತ್‌ಗೋಸಿನಿ ಮೆಹರುನ್ನೀಸಾಳನ್ನು ಗುರುತಿಸಿ, ಮಾತನಾಡಿಸಿ, ವ್ಯಂಗ್ಯದ ದನಿಯಲ್ಲಿ ಅವಮಾನಕರವಾದ ಪ್ರಶ್ನೆಗಳನ್ನು ಕೇಳಿದಳು. ಅವಳ ಸ್ಥಿತಿಗಾಗಿ ಮರುಕ ತೋರಿದಳು. ಇದು ಮೆಹರುನ್ನೀಸಾಳಿಗೆ ತೀರಾ ಅವಮಾನಕರವೆನಿಸಿತು. ಅವಳ ಮನಸ್ಸು ಹೆಡೆಬಿಚ್ಚಿ ಬುಸುಗುಡುತ್ತಿತ್ತು. ಇವಳದೇನು ಮಾತು? ಹಠ ಹಿಡಿದು ಮದುವೆಯಾಗಿದ್ದರೆ, ನಾನೇ ಪಾದಶಾಹ್ ಬೇಗಂ ಆಗಿ ನನ್ನ ಕಾಲಡಿಯಲ್ಲಿ ಬಿದ್ದಿರುತ್ತಿದ್ದಳು. ಆದರೆ ರಾಜಮರ್ಯಾದೆ, ಕುಟುಂಬ ಮರ್ಯಾದೆ ಉಳಿಸುವುದಕ್ಕಾಗಿ ಬಾದಶಾಹ್ ಅಕ್ಬರರ ಮಾತನ್ನು ಮೀರಲಾರದ್ದಕ್ಕಾಗಿ ಅಲಿಖುಲಿಯನ್ನು ಮದುವೆಯಾಗಬೇಕಾಗಿ ಬಂತು.

ಮೆಹರುನ್ನೀಸಾಗೆ ಆ ಪರಿಸರದಲ್ಲಿ ಓಡಾಡಲು ಹಿಂಸೆಯಾಯಿತು. ಸರಸರನೆ ಹೋಗಿ ಕೋಣೆ ಸೇರಿದಳು. ಅಮ್ಮನನ್ನೇ ಗಮನಿಸುತ್ತಿದ್ದ ಲಾಡ್ಲಿ ಅವಳ ಹಿಂದೆ ಹೋಗಿ ನೋಡಿದಾಗ ಅಮ್ಮನ ಕಣ್ಣುಗಳಿಂದ ಹನಿಗಳು ಉದುರುತ್ತಿದ್ದುದನ್ನು ನೋಡಿ,

"ಅಮ್ಮೀ ಜಾನ್, ಅಳುತ್ತಿರುವಿರಾ? ಏನಾಯಿತು ಅಮ್ಮೀಜಾನ್?" ಎಂದು ದುಪಟ್ಟಾ ಎಳೆದು ಕೇಳಿದಳು.

ಮಗಳ ಪ್ರಶ್ನೆಗೆ ಏನೆಂದು ಸಮಾಧಾನ ಹೇಳುವುದು.

"ಏನಿಲ್ಲ ಬೇಟಾ. ನಿನ್ನ ಅಬ್ಬೂ ಕೂಡಾ ನಮ್ಮ ಜೊತೆ ಇದ್ದಿದ್ದರೆ ಚೆನ್ನಾಗಿರುತ್ತಿತ್ತು. ಬರಲಿಲ್ಲವಲ್ಲ ಎಂದು ಚಿಂತಿಸುತ್ತಿದ್ದೆ."

ಲಾಡ್ಲಿ, ಅಮ್ಮನ ಮಾತನ್ನು ನಂಬಲಿಲ್ಲ. ಅವಳೇನೂ ಊಹಿಸಿ ಅರ್ಥಮಾಡಿ ಕೊಳ್ಳಲಾರದಷ್ಟು ದಡ್ಡಿಯಾಗಿ ಇರಲಿಲ್ಲ. ಆದರೆ ಮತ್ತಷ್ಟು ಪೀಡಿಸಿ ಕೇಳುವುದು ಸರಿಯಲ್ಲ ಎನಿಸಿ. 'ಅಮ್ಮೀ, ಅರ್ಜು ಜೊತೆ ಇರುತ್ತೇನೆ. ಬೇಕಾದಲ್ಲಿ ಕರೆಯಿರಿ' ಎಂದು ಹೇಳಿ ಹೊರ ಹೊರಟಳು.

ನಿಶ್ಚಿತಾರ್ಥದ ಸಮಾರಂಭದ ಘಟನೆಗಳನ್ನು ಮೆಲುಕು ಹಾಕುತ್ತಾ ಅಸ್ಮತ್ ಮೈ ಚಾಚಿದ್ದಳು. ಬಂದ ಅತಿಥಿಗಳು, ರಾಜ ಪರಿವಾರದವರೆಲ್ಲ ಹೊರಟು ಹೋದರು. ಒಮ್ಮೆಲೇ ಮನೆಯಲ್ಲಿ ಮೌನ ವಾತಾವರಣ ಕವಿದಿತ್ತು. ಬಹಳವಾಗಿ ದಣಿದಿದ್ದರಿಂದ ಅವರವರ ಕೋಣೆಗಳಿಗೆ ಮರಳಿದ್ದರು. ಪ್ರತಿಯೊಬ್ಬರೂ ತಮ್ಮ ತಮ್ಮ ಆಲೋಚನೆಗಳಲ್ಲಿ ಮುಳುಗಿದ್ದರು.

ತನ್ನ ಮಗಳ ಬಗ್ಗೆ ಕನಸು ಕಂಡಿದ್ದು. ಮೊಮ್ಮಗಳ ಪಾಲಿಗೆ ಬಂದಿದೆ. ಇದೆಂತಹ ವಿಚಿತ್ರ! ಅಲ್ಲಾಹುವಿನ ಕೆಲಸಗಳನ್ನು ಯಾರಿಗೆ ತಾನೇ ಅಳೆಯಲು ಸಾಧ್ಯವಿದೆ! ನನ್ನನ್ನು ಎಂತಹ ಸಂದಿಗ್ಧದಲ್ಲಿ ಇರಿಸಿದ! ಬಾದಶಾಹರ ಆದೇಶವನ್ನು ನಿರಾಕರಿಸುವ ಎದೆಗಾರಿಕೆ ಎಲ್ಲಿತ್ತು. ಅವರ ಮಾತೆಂದರೆ ಶಿಲಾಶಾಸನ. ಅಳಿಸುವದಾಗಲೀ, ತಿದ್ದುವುದಾಗಲೀ

ಸಾಧ್ಯವೇ ಇಲ್ಲ. ಅಷ್ಟೇ ಅಲ್ಲ ಮತ್ತೆ ಮರಳಿ ಮೊದಲಿನ ದರಿದ್ರ ಸ್ಥಿತಿಗೆ, ಅನಾಥ ಸ್ಥಿತಿಗೆ ತಲುಪಿ, ಇಷ್ಟು ವರ್ಷಗಳಿಂದಲೂ ಬದುಕುತ್ತಾ, ಅನುಭವಿಸುತ್ತಾ ಬಂದಿರುವ ಈ ವೈಭೋಗ, ಅಧಿಕಾರ, ಅಂತಸ್ತು, ಸಮಾಜದಲ್ಲಿ ಪ್ರತಿಷ್ಠೆ ಗೌರವಗಳೆಲ್ಲವನ್ನೂ ಕಳೆದುಕೊಳ್ಳಬೇಕಾಗುತ್ತಿತ್ತು. ಒಂದೆರಡು ಕ್ಷಣ ತಡೆದು, ಮೆಹರುನ್ನೀಸಾಳ ಭವಿಷ್ಯ ಹಾಗಾದರೆ ಸುಳ್ಳೇ? ಮದುವೆಯಾಗಿ, ಮಗುವಾಗಿ ಇಷ್ಟು ವರ್ಷಗಳೇ ಕಳೆದ ಮೇಲೆ ಇನ್ನೆಂತಹ ಭರವಸೆ! ಎಂದುಕೊಳ್ಳುತ್ತಾ ಒಂದು ದೊಡ್ಡ ನಿಟ್ಟುಸಿರು ಬಿಟ್ಟಳು.

ಅಸ್ಮತಳಿಗೆ ಮತ್ತೊಂದು ತೆರನಾದ ಆಲೋಚನೆ. ಮೆಹರುನ್ನೀಸಾ ಅತಿಥಿಗಳನ್ನು ಸತ್ಕರಿಸುತ್ತಾ ಲವಲವಿಕೆಯಿಂದ ಓಡಾಡುತ್ತಿದ್ದುದನ್ನು ಜಹಾಂಗೀರ್ ಗಮನಿಸುತ್ತಿದ್ದುದನ್ನು ನೋಡಿದಳು. ಬಹುಶಃ ಅವನಿಗೆ ಏನೋ ಅನುಮಾನ ಉಂಟಾದ ಹಾಗೆ ಕಾಣಿಸಿತು. ಕೂಡಲೇ ಎಲ್ಲಿ ಅವಳನ್ನು ಮಾತನಾಡಿಸಿ ಬಿಡುತ್ತಾನೋ ಎಂದು ಹೆದರಿ, ಮಗಳನ್ನು ಒಳಗೆ ಕರೆದಳು. ಮೆಹರುನ್ನೀಸಾ ಕೂಡಾ, ತನ್ನ ಪೂರ್ವದ ಪ್ರಿಯಕರನನ್ನು ನೋಡಿ ಕಣ್ತುಂಬಿಕೊಳ್ಳಬೇಕೆನಿಸಿದರೂ, ಅಲಿಖುಲಿಯ ನೆನಪಿನ ಜೊತೆಗೆ ಪಾಪ ಪ್ರಜ್ಞೆ ಕಾಡಿತು. ಮುಂದುವರೆದು ಮಾತಾಡಿಸುವ ಸಾಹಸಕ್ಕೆ ಹೋಗಲಿಲ್ಲ. ಜಗತ್‌ಗೋಸಿನಿಯ ಕಣ್ಣು ಬೇರೆ, ತಾನು ಹೋದೆಡೆಯಲ್ಲೆಲ್ಲಾ ತನ್ನನ್ನು ಹಿಂಬಾಲಿಸಿದ್ದವು.

ಈಗಲೂ ಕೂಡಾ ಜಹಾಂಗೀರ್ ತನ್ನನ್ನು ಮದುವೆಯಾಗಲು ಹಿಂಜರಿಯುವುದಿಲ್ಲ. ಆದರೆ ತನ್ನ ನೆನಪು ಇನ್ನೂ ಉಳಿದಿರಬೇಕಲ್ಲವೇ! ಒಂದು ವೇಳೆ ನೆನಪಿದ್ದು ನನ್ನನ್ನು ಮದುವೆಯಾಗಲು ಒತ್ತಾಯಿಸಿದರೆ, ನಾನೇನು ಮಾಡಬೇಕು? ರಾಜಾದೇಶ! ಬಲವಂತದಿಂದ ಮದುವೆಯಾಗುವ ಸಾಧ್ಯತೆಯಿದೆ. ಆದರೆ ಅಲಿಖುಲಿಯ ಗತಿಯೇನು?.....ಅವನೇನೂ ತೀರ ಕೆಟ್ಟವನಲ್ಲ. ಅವನು ಬಯಸಿದಂತೆ ಗಂಡು ಮಗುವನ್ನು ಕೊಡಲಿಲ್ಲ. ಕೊಟ್ಟದ್ದು ಒಂದು ಹೆಣ್ಣು ಮಗು! ಅದೂ ಎಷ್ಟೋ ವರ್ಷಗಳು ಕಳೆದ ಮೇಲೆ! ಇಷ್ಟಾದರೂ ನನ್ನ ಸಂಗಾತಿಯಾಗಿ ಮುಂದುವರೆದನೇ ಹೊರತು, ಬೇರೆ ಇನ್ನೊಂದು ಮದುವೆಯನ್ನು ಮಾಡಿಕೊಳ್ಳಲಿಲ್ಲ. ಪರಿಸ್ಥಿತಿ ಹೀಗಿರುವಾಗ, ಅಂಥ ಗಂಡ ಮತ್ತು ಲಾಡ್ಲಿಯಂತಹ ಮಗಳನ್ನು ಅನಾಥವಾಗಿಸಿ ಅವನ ಪಕ್ಕ ಸೇರಲು ಸಾಧ್ಯವೇ? ಅವರಿಬ್ಬರೂ ನನಗೆ ಬೇಕೇಬೇಕು. ನನ್ನ ಪ್ರೀತಿ ನನಗೆ ಸಿಕ್ಕಿತೆಂದು ಸಂತೋಷಪಡಲೆ?... ವಾಸ್ತವ ಪ್ರಜ್ಞೆಯಲ್ಲಿ ಇಂತಹ ಆಲೋಚನೆಗಳೂ ಪಾಪವೇ ಎನಿಸಿದರೂ, ಚಕ್ರವರ್ತಿನಿಯಾಗಬೇಕೆಂಬ ಸುಪ್ತಾಕಾಂಕ್ಷೆ ಇನ್ನೂ ಜೀವಂತವಾಗಿ ಎಲ್ಲೋ ಆಳದಲ್ಲಿ ನುಸುಳುತ್ತಿರುವಂತೆನಿಸಿತು. ಈ ಯೋಚನೆಗಳಲ್ಲಿಯೇ ಮುಳುಗಿದ್ದವಳಿಗೆ ಬಹಳ ಹೊತ್ತು ನಿದ್ದೆ ಬರಲಿಲ್ಲವಾದರೂ ಬೆಳಗಿನ ಜಾವದ ಹೊತ್ತಿಗೆ ಗಾಢ ನಿದ್ದೆಗೆ ಸರಿದಿದ್ದಳು.

ಮನೆಯವರೆಲ್ಲ ಎದ್ದು ತಮ್ಮ ತಮ್ಮ ಕೆಲಸಗಳಿಗೆ ಹೊರಟರಾದರೂ ಮೆಹರುನ್ನೀಸಾ ಇನ್ನೂ ಏಳದಿದ್ದುದನ್ನು ಗಮನಿಸಿ, ಕೆಲಸದಲ್ಲಿ ತೊಡಗಿದ್ದುದರಿಂದ ಅಸ್ಮತ್ ಲಾಡ್ಲಿಯನ್ನು ಕೂಗಿ ಕರೆದು, ಅಮ್ಮೀ ಇನ್ನೂ ಎದ್ದಿಲ್ಲ ಹೋಗಿ ನೋಡಿ ಎಬ್ಬಿಸಿಕೊಂಡು ಬಾ 'ಬೇಟ' ಎಂದು ಪ್ರೀತಿಯಿಂದ ಹೇಳಿದಳು. ದಾದಿಮಾ ಮಾತನ್ನು ಆಜ್ಞೆಯಂತೆ ಶಿರಸಾವಹಿಸಿ, ಕೈಗೊಳ್ಳಲು ಓಡಿದಳು.

ನಿಶ್ಚಿತಾರ್ಥದಿಂದ ಒಂದಿರುಗಿದ ಮೇಲೆ ಜಹಾಂಗೀರನ ನಡವಳಿಕೆಯೇ

ಬದಲಾಯಿತು. ಯಾವಾಗಲೂ ಮೌನ, ಮತ್ತಿನ ಗುಂಗು. ಒಂದಷ್ಟು ಹೆಂಗಸರನ್ನು ಸುತ್ತಲೂ ನಿಲ್ಲಿಸಿಕೊಂಡು, ಒಬ್ಬೊಬ್ಬರೂ ಬಟ್ಟಲಿಗೆ ಸುರಿಯುತ್ತಿದ್ದ ಮದಿರೆಯನ್ನು ಗಟಗಟ ಕುಡಿದು ಖಾಲಿ ಮಾಡುತ್ತಿದ್ದ. ತೂರಾಡುತ್ತ ಎದ್ದು ಕೈಗೆ ಸಿಕ್ಕಿದ ವಸ್ತುಗಳನ್ನೆಲ್ಲ ಎತ್ತಿ ಬಿಸಾಡುತ್ತಿದ್ದ. ಹೆಂಗಳೆಯರಿಗೆ ಹೆದರಿಕೆಯಾಯಿತು. ಎಲ್ಲಿ ತಲೆ ಒಡೆದು ಬಿಡುತ್ತಾನೋ ಎಂದು ದೂರ ಹೋಗಿ ನಡುಗುತ್ತ ನಿಂತರು.

ಅದೇ ಸಮಯಕ್ಕೆ ಜಗತ್‌ಗೋಸಿನಿಯ ಖಾಸಾ ಸೇವಕ ಜಗತ್‌ಗೋಸಿನಿಯ ಸಂದೇಶವನ್ನು ತಲುಪಿಸಲು ಅಲ್ಲಿಗೆ ಬಂದವ ಅಲ್ಲಿನ ಸ್ಥಿತಿಯನ್ನು ನೋಡಿ ಗಾಬರಿಯಾದ. ನಿಶ್ಚಿತಾರ್ಥದ ಸಂದರ್ಭದಲ್ಲಿ ಗಂಡ ಖಂಡಿತ ಅವಳನ್ನು ಭೇಟಿಯಾಗಿರುತ್ತಾನೆ. ಮತ್ತೆ ಅವನಲ್ಲಿ ಅವಳ ಬಗ್ಗೆ ಮೋಹ ಆವರಿಸಿಕೊಂಡಿರುತ್ತದೆ. ಮನಸ್ಸು ನೆಮ್ಮದಿ ಕಳೆದುಕೊಂಡಿರುತ್ತದೆ. ಅವನನ್ನು ತನ್ನ ಮನೆಗೆ ಕರೆಸಿಕೊಂಡು ರಂಜಿಸಿ, ಅವಳನ್ನು ಮರೆಯುವ ಹಾಗೆ ಮಾಡಬೇಕೆಂಬ ಉದ್ದೇಶದಿಂದ ಹೋಷಿಯಾರನನ್ನು ಜಹಾಂಗೀರನಲ್ಲಿಗೆ ಕಳಿಸಿದ್ದಳು.

ಹೋಷಿಯಾರ್ ಪ್ರವೇಶಿಸುತ್ತಿದ್ದಂತೆ–

"ಅಸ್ಸ್–ಸಲಾಮ್–ಅಲೇಕುಂ" ಎಂದು ಹೇಳಿ ಕೋರ್ನಿಶ್ ಮಾಡಿದ.

"ವಾಲೇಕುಂ–ಅಸ್ಸ್–ಸಲಾಂ ಹೋಷಿಯಾರ್" ಎಂದು ತೇಲುಗಣ್ಣುಗಳಿಂದ ತೂರಾಡುತ್ತಲೇ ಉತ್ತರಿಸಿದ.

"ಜಹಾಂಪನಾಹ್, ಪಾದಶಾಹ್‌ಬೇಗಂ ತಮ್ಮನ್ನು ಕರೆದುಕೊಂಡು ಬರಲು ಆದೇಶಿಸಿದ್ದಾರೆ."

"ಹೋಷಿಯಾರ್, ನಮಗೆ ಈಗ ಬರುವ ಪುರಸೊತ್ತಿಲ್ಲ. ಮತ್ತೆ ಯಾವಾಗಲಾದರೂ ಬರುತ್ತೇವೆ. ನಿಮ್ಮ ಬೇಗಂರಿಗೆ ತಿಳಿಸಿ."

"ಜಹಾಂಪನಾಹ್, ಈ ಗುಲಾಮನನ್ನು ಕ್ಷಮಿಸಿ. ಬೇಗಂರಿಗೆ ಆರೋಗ್ಯ ಸರಿ ಇಲ್ಲ. ನಿಮ್ಮನ್ನು ಕಾಣಲೇಬೇಕೆಂದು ಹಠ ಹಿಡಿದಿದ್ದಾರೆ. ಬನ್ನಿ ನಿಮ್ಮನ್ನು ಕರೆದೊಯ್ಯುತ್ತೇನೆ."

"ಬೇಡ ಹೋಷಿಯಾರ್, ಜನಾನಾಕ್ಕೆ ಬರಲು ನನಗೆ ದಾರಿ ಗೊತ್ತಿದೆ. ಸ್ವಲ್ಪ ಹೊತ್ತು ಬಿಟ್ಟುಕೊಂಡು ನಾನೇ ಬರುತ್ತೇನೆ. ನೀನು ಹೋಗು" ಎಂದು ಹೇಳಿದ. ಹೋಷಿಯಾರ್ ಪ್ರತಿಯಾಡದೆ ಅಲ್ಲಿಂದ ಕುಲುಕುತ್ತ ವಯ್ಯಾರದ ನಡೆಯಿಂದ, ಜನಾನಾ ಕಡೆ ಹೆಜ್ಜೆ ಹಾಕಿದ.

ಈಗ ಜಹಾಂಗೀರ ತನ್ನ ಜನಾನಾಕ್ಕೆ ಬಂದಿದ್ದ. ಹೆದರಿದ ಬೆಕ್ಕುಗಳಂತೆ ನಿಂತಿದ್ದ ಹೆಣ್ಣುಗಳತ್ತ ನೋಡಿದ. ಸ್ವಲ್ಪ ಮತ್ತು ಇಳಿದಿದ್ದರಿಂದ ಅವರ ಮೊಗದಲ್ಲಿನ ಹೆದರಿಕೆಯನ್ನು ಗಮನಿಸಿ, ಕೈ ಸನ್ನೆಯಿಂದ ಹೊರಡುವಂತೆ ಸೂಚಿಸಿದ. ದಿವಾನ್‌ನ ಬೆನ್ನಿಗೆ ಒರಗಿ ಕುಳಿತ. ಹೆಣ್ಣುಗಳ ಒಂದು ದೊಡ್ಡ ಪಡೆಯೇ ಅವನ ಸುತ್ತ, ಅವನ ಆದೇಶಕ್ಕಾಗಿ ಸಿದ್ಧವಾಗಿ ಕಾಯುತ್ತಿದ್ದರು. ಈ ಗುಂಪಿನಲ್ಲಿ ಹೆಂಡತಿಯರು, ಉಪಪತ್ನಿಯರು, ಗುಲಾಮಿ ಹೆಣ್ಣುಗಳು, ಖೋಜಾಗಳು ಎಲ್ಲರೂ ಇದ್ದರು. ನಾಚ್‌ವಾಲಿಗಳು ವಾದ್ಯವೃಂದದ ಸಂಗೀತದ ಹಿಮ್ಮೇಳಕ್ಕೆ ತಕ್ಕಂತೆ ಹೆಜ್ಜೆಹಾಕುತ್ತಾ ಸೊಂಟ ತಿರುಗಿಸುತ್ತಾ ಕುಣಿಯುತ್ತಿದ್ದರು. ಜಹಾಂಗೀರನ ಮದಿರೆಯ ಬಟ್ಟಲು ಖಾಲಿಯಾಗುತ್ತಿದ್ದಂತೆ, ಅಲ್ಲಿನ ಹೆಂಗಸರು ತುಂಬುತ್ತಿದ್ದರು. ಕ್ಷಣದ ಅಂತರವೂ ಇಲ್ಲದೆ

ಮದಿರೆಯನ್ನು ಒಳಗೆ ಸುರಿದುಕೊಳ್ಳುತ್ತಿದ್ದ. ಜಗತ್‌ಗೋಸಿನಿ ಪಕ್ಕದಲ್ಲಿಯೇ ಕುಳಿತಿದ್ದಳು.

"ಜಹಾಂಪನಾಹ್, ಇನ್ನು ಕುಡಿದದ್ದು ಸಾಕು. ತೆಗೆದುಕೊಳ್ಳಿ ಈ ದ್ರಾಕ್ಷಿ ಹಣ್ಣುಗಳು ಬಹಳ ಚೆನ್ನಾಗಿವೆ. ಇವುಗಳ ರುಚಿಯನ್ನು ಸವಿಯಿರಿ" ಎಂದು ಒತ್ತಾಯದಿಂದ ತಿನ್ನಿಸಿದಳು. ಅವನಿಗೆ ಅವು ವಿಷದಂತೆ ಭಾಸವಾಯಿತು. ಹಾಡು, ನೃತ್ಯ, ಸಂಗೀತ ಯಾವುದೂ ಅವನಿಗೆ ರುಚಿಸಲಿಲ್ಲ. ಮದಿರೆಯೊಂದೇ ಅವನ ಬಾಯಿಗೆ ರುಚಿಸುತ್ತಿದ್ದುದು! ಜಗತ್‌ಗೋಸಿನಿಯ ಪ್ರಯತ್ನ ಫಲಿಸಲಿಲ್ಲ. ಅವನ ಮನಸ್ಸನ್ನು ಬದಲಾಯಿಸಲು, ಇಷ್ಟೆಲ್ಲ ಮನೋರಂಜನೆಯ ವ್ಯವಸ್ಥೆ ಮಾಡಿದ್ದಳು. ಜಹಾಂಗೀರನ ಸ್ಥಿತಿಯಲ್ಲಿ ಯಾವ ಸುಧಾರಣೆಯೂ ಕಾಣಿಸಲಿಲ್ಲ.

"ಜಹಾಂಪನಾಹ್...." ಎಂದು ಅವನ ಭುಜದ ಮೇಲೆ ಕೈಯಿರಿಸಿದಳು. ಆದರೆ ಅವನು ಅದನ್ನು ಥಟ್ಟನೆ ತಳ್ಳಿದ. ಅವಳನ್ನೂ ದೂರ ತಳ್ಳಿದ. ಜಗತ್‌ಗೋಸಿನಿಗೆ ಭಯವಾಯಿತು. ಆದರೂ ಗಂಡನನ್ನು ಸಮಾಧಾನಪಡಿಸಬೇಕು ಎಂದು ಎದ್ದು ಬಂದು.

"ಜಹಾಂಪನಾಹ್, ನನಗೆ ಗೊತ್ತು, ನಿಮ್ಮ ಮನಸ್ಸು ಮೆಹರುನ್ನೀಸಾಳ ಮೇಲಿದೆ, ಅದು ತಪ್ಪು. ಅವಳಿಗೆ ಮದುವೆ ಆಗಿದೆ, ಮಗಳಿದ್ದಾಳೆ. ನೀವು ಬಯಸುವುದರಲ್ಲಿ ಅರ್ಥವಿಲ್ಲ. ಕೈಗೆ ಸಿಗಲಾರದ ವಸ್ತುವಿಗಾಗಿ, ಎಲ್ಲ ಜವಾಬ್ದಾರಿಗಳನ್ನು ಮರೆತು ಹೀಗೆ ವರ್ತಿಸಿದರೆ ಪ್ರಜೆಗಳು ಏನೆಂದುಕೊಳ್ಳಬಹುದು. ಆಡಳಿತ ಹೇಗೆ ಆಗಬಹುದು ಅವಳನ್ನು ಮರೆತುಬಿಡಿ."

"ಬೇಗಂ ನಿಮ್ಮ ಉಪದೇಶಗಳು ನನಗೆ ಬೇಕಿಲ್ಲ. ನನ್ನ ಅಬ್ಬಾಜಾನ್‌ರೇ, ನನ್ನ ಈ ಸ್ಥಿತಿಗೆ ಕಾರಣ. ಒಲ್ಲದ ಮದುವೆಗಳನ್ನು ಹೇರಿ, ನನ್ನ ಆಯ್ಕೆಗೆ ಅವಕಾಶವನ್ನೇ ನೀಡಲಿಲ್ಲ. ಎಷ್ಟೋ ಮದುವೆಗಳ ನಂತರ, ನನ್ನೊಳಗಿನ ಪ್ರೀತಿಯನ್ನು ಪ್ರಚೋದಿಸುವ ಸುಂದರ ಯುವತಿ ಕಣ್ಣಿಗೆ ಬಿದ್ದು ಪ್ರೀತಿಸಿದೆ, ಆರಾಧಿಸಿದೆ, ಮದುವೆಯಾಗಲು ಹಠಮಾಡಿದೆ. ಆದರೆ... ಆದರೆ ಅಬ್ಬಾಜಾನ್ ಕುತಂತ್ರದಿಂದ, ಯಾರಿಗೂ ಸೂಚನೆಯಿಲ್ಲದೆಯೇ, ಆ ಒರಟ, ಹೆಣ್ಣಿನ ಚೆಲುವಿನ ಬೆಲೆಯನ್ನೂ ಅರ್ಥಮಾಡಿಕೊಳ್ಳಲಾರದ ಅರಸಿಕ, ಅದೂ ಒಬ್ಬ ಸಾಮಾನ್ಯ ಸೈನಿಕನ ಕುತ್ತಿಗೆಗೆ ಕಟ್ಟಿ, ನಮ್ಮಿಬ್ಬರನ್ನೂ ನರಕಕ್ಕೆ ತಳ್ಳಿದ. ಮೆಹರುನ್ನೀಸಾಳನ್ನು ಹೇಗಾದರೂ ದಕ್ಕಿಸಿಕೊಳ್ಳುತ್ತೇನೆ. ಚಕ್ರವರ್ತಿಯಾಗಿ ಆದೇಶ ನೀಡಲು ನನಗೆ ಹಕ್ಕಿದೆ, ಸ್ವಾತಂತ್ರ್ಯವಿದೆ."

"ಇಲ್ಲವೆಂದು ನಾವೆಲ್ಲಿ ಹೇಳಿದೆವು. ನಿಮ್ಮ ಆಸೆಗೆ ಅಡ್ಡಿ ಬರುವುದಿಲ್ಲ. ನಿಮಗೆಷ್ಟು ಉಪಪತ್ನಿಯರಿಲ್ಲ! ಅವರಲ್ಲಿ ಇವಳೂ ಒಬ್ಬಳು! ಜನಾನಾದಲ್ಲಿ ಹೆಣ್ಣುಗಳಿಗೆ ಎಂದೂ ಕೊರತೆಯಾಗುವುದಿಲ್ಲ."

"ಬೇಗಂ, ಮೆಹರುನ್ನೀಸಾ ಸಾಮಾನ್ಯ ಹೆಣ್ಣಲ್ಲ. ಪಾದಶಾಹ್ ಬೇಗಂ ಆಗಲು ಬೇಕಾದ ಎಲ್ಲ ಗುಣಗಳೂ ಇವೆ. ಅವಳಿಂದ ನನ್ನ ಹೆಸರು ಇನ್ನಷ್ಟು ಪ್ರಕಾಶಮಾನವಾಗುತ್ತದೆ ಎನ್ನುವ ನಂಬಿಕೆ ಇದೆ. ಅವಳನ್ನು ಪಡೆದುಕೊಳ್ಳುವವರೆಗೆ ಸಮಾಧಾನವಿಲ್ಲ" ಎಂದು ತನ್ನ ಮನೋನಿರ್ಧಾರವನ್ನು ಘೋಷಿಸಿಯೇ ಬಿಟ್ಟ.

ಜಗತ್‌ಗೋಸಿನಿ ಭೂಮಿಗೆ ಇಳಿದುಹೋದಳು. ಇಲ್ಲಿಯವರೆಗೆ ಪಾದಶಾಹ್ ಬೇಗಂ ರುಖೈಯ್ಯಾ ತನಗೆ ಮುಳ್ಳಾಗಿದ್ದು! ಈಗಷ್ಟೇ ಜನಾನಾ ಜಗತ್ತನ್ನಾಳುವ ಅಧಿಕಾರ ತನಗೆ

ಬಂದಿದೆ. ಆದರೆ ಮೆಹರುನ್ನೀಸಾಳಿಂದಾಗಿ ಅದೂ ಕೈಜಾರಿ ಹೋಗಬಹುದೇನೋ ಎನ್ನುವ ಭೀತಿ ಆವರಿಸಿಕೊಂಡಿತು. ಈ ನಿರ್ಧಾರದಿಂದ ಕದಲಿಸುವ ಸಾಮರ್ಥ್ಯ ಯಾರಿಗಿರಬಹುದೆಂದು ಯೋಚಿಸಿದಾಗ, ಜಹಾಂಗೀರನ ಬಲಗೈಬಂಟನಾಗಿರುವ ಮಹಬ್ಬತ್‌ಖಾನ್ ನೆನಪಾದ.

ಕೂಡಲೇ ಅವನಿಗೆ ಹೇಳಿಕಳಿಸಿದಳು. ಅವನ ಬರವೂ ತೀರಾ ಗುಟ್ಟಾಗಿ ಇರಬೇಕು. ಜನಾನಾದಲ್ಲಿ ಪರಪುರುಷರಿಗೆ ಪ್ರವೇಶವಿಲ್ಲ. ಪ್ರವೇಶದ ವಿಷಯ ಬಾದಶಾಹರ ಗಮನಕ್ಕೆ ಬಂದಲ್ಲಿ ಕ್ರೂರವಾದ ಶಿಕ್ಷೆಯನ್ನೇ ವಿಧಿಸಲಾಗುತ್ತದೆ. ಆದ್ದರಿಂದ ಗುಪ್ತ ಭೇಟಿಯ ವ್ಯವಸ್ಥೆ ಮಾಡಲು ಹೋಷಿಯಾರನ್ನು ಆದೇಶಿಸಿದಳು.

ಮಹಬ್ಬತ್ ಖಾನ್ ನಿಗದಿಯಾದಂತೆಯೇ ಬಂದು ಪರದೆಯ ಹಿಂದೆ ನಿಂತ. ಜಗತ್ ತನ್ನ ಕೋಣೆಯ ಬಾಗಿಲಲ್ಲಿ ಒಳಗಡೆಗೆ ನಿಂತು, ಜಹಾಂಗೀರನ ವಿಷಯವಾಗಿ ಎಲ್ಲವನ್ನು ವಿವರಿಸಿದಳು. ವಿಶೇಷವಾಗಿ ಅವಳನ್ನು ಮದುವೆಯಾಗಲೇಬೇಕೆಂಬ ಆತನ ನಿರ್ಧಾರವನ್ನೂ ತಿಳಿಸಿದಳು. ಹೇಗಾದರೂ ಮಾಡಿ ಬಾದಶಾಹ್ ಜಹಾಂಗೀರನ ಮನಸ್ಸನ್ನು ಹೊರಳಿಸಿ, ಅವನನ್ನು ಮೆಹರುನ್ನೀಸಾಳ ಮೋಡಿಯಿಂದ, ಮೋಹಬಂಧದಿಂದ ಬಿಡಿಸುವಂತೆ ಕೇಳಿಕೊಂಡಳು. ಅಲ್ಲದೆ ಜಹಾಂಗೀರನನ್ನು ಎಡಬಿಡದೆ ಹಿಂಬಾಲಿಸಿ, ನಡೆಯುವ ಸಂಗತಿಗಳನ್ನೆಲ್ಲ ತನಗೆ ತಿಳಿಸುವಂತೆಯೂ, ಈ ಕಾರ್ಯದಲ್ಲಿ ಯಶಸ್ವಿಯಾದಲ್ಲಿ, ಅವನಿಗೆ ದೊಡ್ಡ ಲಾಭವನ್ನು ಗಳಿಸುವ ವ್ಯವಸ್ಥೆ ಮಾಡುತ್ತೇನೆಂದು ಭರವಸೆ ನೀಡಿದಳು.

ಮಹಬ್ಬತ್‌ಖಾನ್ ಜಹಾಂಗೀರನ ವಿರೋಧಿಯಲ್ಲ, ಶತ್ರುವಲ್ಲ, ಮೋಸಗಾರನೂ ಅಲ್ಲ. ಅವನ ಶ್ರೇಯೋಭಿಲಾಷಿಯೇ ಆದರೂ ಅವನಿಗೂ ಮೆಹರುನ್ನೀಸಾ, ಜಹಾಂಗೀರನ ಕೈ ಸೇರುವುದು ಇಷ್ಟವಿರಲಿಲ್ಲ. ಹಾಗಾದಲ್ಲಿ ಅಧಿಕಾರ ಪದವಿ, ಅಂತಸ್ತುಗಳ ಲಾಭ, ಅವಳ ಕುಟುಂಬಕ್ಕೇ ಸೇರುತ್ತದೆ ಎನ್ನುವ ಅಸೂಯೆಯೂ ಕಾರಣವಾಗಿತ್ತು. ನೇರವಾಗಿ ಮೆಹರುನ್ನೀಸಾಳನ್ನು ಮದುವೆಯಾಗುವುದು ಬೇಡವೆಂದು ಹೇಳುವ ಧೈರ್ಯವಿರಲಿಲ್ಲ. ಆದರೆ ಈಗ ತನ್ನ ಜವಾಬ್ದಾರಿ ಏನಿದ್ದರೂ ನಡೆಯುವ ವಿಷಯಗಳ ಮಾಹಿತಿಯನ್ನು ಜಗತ್‌ಗೋಸಿನಿಗೆ ತಲುಪಿಸುವುದು. ಹಾಗಾಗಿ, ಅವಳಿಗಾಗಿ ಪತ್ತೆದಾರಿಕೆ ಮಾಡಲು ಒಪ್ಪಿಕೊಂಡ. ಅಷ್ಟರಲ್ಲಿ ಯಾರೋ ಬರುವ ಸದ್ದಾದ್ದರಿಂದ, ಇವರಿಗೆ ಕಾವಲಿದ್ದ ಹೋಷಿಯಾರ್ ಅವನನ್ನು ಬೇರೆ ದಾರಿಯಿಂದ ಹೊರಗೆ ಕಳಿಸಿದ.

ಮೆಹರುನ್ನೀಸಾ ಎದ್ದು ಬಂದು ಅಸ್ಮತಳಿಗೆ ಅಡಿಗೆ ಕೆಲಸದಲ್ಲಿ ಸಹಾಯ ಮಾಡಬೇಕೆಂದು ಹೊರಡುತ್ತಿದ್ದಂತೆಯೆ ಘಿಯಾಸ್ ಬೇಗ್ ಆತುರಾತುರವಾಗಿ ಬಂದು ಮೆಹರುನ್ನೀಸಾಳಿಗೆ, ಅಸ್ಮತ್‌ಳನ್ನು ಬರಹೇಳೆಂದು ಹೇಳಿದ.

ಅಸ್ಮತ್ ಬಂದು ಗಂಡ ಆಗಲೇ ಎಲ್ಲಿಗೋ ಹೊರಡಲು ಸಿದ್ಧವಾಗಿರುವುದನ್ನು ನೋಡಿ ಆಶ್ಚರ್ಯಪಟ್ಟಳು.

"ಇದೇನು ಘಿಯಾಸ್ ಇಷ್ಟು ಹೊತ್ತಿಗೇ ಹೊರಡಲು ಅಂತಹ ಖಾಸ್ ಅವಸರವೇನಿದೆ?"

"ಅಸ್ಮತ್ ನನಗೆ ಅವಸರವಿಲ್ಲ. ಜಹಾಂಪನಾಹ್‌ರಿಂದ ಕೂಡಲೇ ತಮ್ಮನ್ನು

ಕಾಣಬೇಕೆಂದು ಆದೇಶಬಂದಿದೆ. ನನಗ್ಯಾಕೋ ಭಯವಾಗುತ್ತಿದೆ. ನಿಶ್ಚಿತಾರ್ಥದಲ್ಲಿ ನಮ್ಮಿಂದ ಏನಾದರೂ ಅಪಚಾರವಾಗಿದೆಯೋ ಹೇಗೆ? ಹಾಗೇನೂ ಇರಲಾರದು. ಜಹಾಂಗೀರನೂ ಸೇರಿದಂತೆ ಬಂದವರೆಲ್ಲರೂ ತುಂಬಾ ತುಂಬಾ ಮೆಚ್ಚಿಕೊಂಡಿದ್ದರು. ನಮ್ಮ ಆತಿಥ್ಯವನ್ನು ಯಾರೂ ಟೀಕಿಸಲಿಲ್ಲ. ಆದರೂ ಈ ಆತುರದ ಕರೆ ಯಾಕೆಂದು ಊಹಿಸಲು ಆಗುತ್ತಿಲ್ಲ."

"ಆದೇಶವೆಂದ ಮೇಲೆ ಪಾಲಿಸಲೇಬೇಕಲ್ಲವೇ. ಕೆಟ್ಟದ್ದಾಗಲಿ, ಒಳ್ಳೆಯದಾಗಲಿ ಒಪ್ಪಿಕೊಂಡು ಮಾಡಲೇಬೇಕೆಂಬುದಂತೂ ಸತ್ಯ. ಹೋಗಿ ಬನ್ನಿ ಒಳ್ಳೆಯದಾಗಲೀ"

ಕೂಡಲೇ ಘಿಯಾಸ್, ಮಗಳಿಗೂ ಸುದ್ದಿ ತಿಳಿಸದೆ ಕುದುರೆಯೇರಿ ವೇಗವಾಗಿ ಓಡಿಸಿದ.

ಸ್ವಾಗತ ಕೊಠಡಿಯಲ್ಲಿ ಜಹಾಂಗೀರ್ ಮೊದಲೇ ಬಂದು ಕುಳಿತಿದ್ದ. ಪಕ್ಕದಲ್ಲಿ ಮಹಬ್ಬತ್‌ಖಾನ್, ಮುಹಬ್ಬತ್ ಷರೀಫ್ ಇಬ್ಬರೂ ನಿಂತಿದ್ದರು.

ಘಿಯಾಸ್ ಪ್ರವೇಶಿಸಿ,

"ಅಸ್ಸ್-ಸಲಾಂ-ಅಲೇಕುಂ ಜಹಾಂಪನಾಹ್"

"ವಾಲೇಕುಂ-ಅಸ್ಸ್-ಸಲಾಂ ಮಿರ್ಜಾಬೇಗ್"

"ನಿನ್ನೆಯ ಸಮಾರಂಭವನ್ನು ಅದ್ಭುತವಾಗಿ ನಡೆಸಿಕೊಟ್ಟಿರಿ. ನಿಮ್ಮ ಜೊತೆಗಿನ ಬಂಧುತ್ವದಿಂದ ನಾವು ಬಹಳ ಸಂತೃಪ್ತರಾಗಿದ್ದೀವಿ."

"ಜಹಾಂಪನಾಹ್, ಈ ಮಾತುಗಳು ತಮ್ಮ ದೊಡ್ಡತನವನ್ನು ತೋರಿಸುತ್ತದೆ. ನಾವೇನಿದ್ದರೂ ಸಾಮ್ರಾಜ್ಯದ ಮತ್ತು ಸಾಮ್ರಾಜ್ಯದ ಬಾದಶಾಹರಾದ ತಮ್ಮ ಗುಲಾಮರು, ಸೇವಕರು. ಹೇಳಿ ಜಹಾಂಪನಾಹ್, ನಮ್ಮಿಂದ ಏನಾಗಬೇಕು. ತಮ್ಮ ಆದೇಶಕ್ಕೆ ಬದ್ಧರಾಗಿ, ತಮ್ಮ ಸೇವೆಯಲ್ಲಿ ಹಾಜರಾಗಿ ಬಿಡುತ್ತೇವೆ."

"ಮಿರ್ಜಾ ಘಿಯಾಸ್ ಬೇಗರೇ ನೀವು ಅಷ್ಟೊಂದು ದೈನ್ಯತೆಯನ್ನು ತೋರಬೇಕಾದ್ದಿಲ್ಲ. ನಿಮ್ಮನ್ನು ಒಂದು ವಿಷಯ ಕೇಳಬೇಕೆಂದು ಬರಮಾಡಿಕೊಂಡೆ. ನಿನ್ನೆಯ ಆತಿಥ್ಯದ ಸಂದರ್ಭದಲ್ಲಿ ಗುಲಾಬಿ ಬಣ್ಣದ ಪರ್ದಾದಲ್ಲಿ ಮರೆಯಾಗಿದ್ದ ಮುಖದ ಝಲಕು ನನ್ನನ್ನು ತಬ್ಬಿಬ್ಬಾಗಿಸಿತು. ಎಲ್ಲಿಯೋ ನೋಡಿದ ನೆನಪು. ತುಂಬ ತುಂಬ ಪರಿಚಿತ ಅನಿಸಿತು. ತಮ್ಮ ಮಕ್ಕಳಲ್ಲಿ ಯಾರಿರಬಹುದು ಎಂದು ಯೋಚಿಸುತ್ತಿದ್ದೆ. ಮೆಹರುನ್ನೀಸಾ ಇರಬಹುದೇನೋ ಎಂದು ಊಹಿಸಿದೆ. ಆದರೆ ಬರ್ದವಾನದಿಂದ ಇಲ್ಲಿಗೆ ಬರಲು ಬಹಳ ಸಮಯ ಹಿಡಿಯುತ್ತದೆ. ಒಂದು ವೇಳೆ ಅವಳು ಬಂದಿದ್ದರೂ ಗಂಡ ಅಲಿಖುಲಿ ಜೊತೆಗೇ ಇರುತ್ತಿದ್ದ. ಖಂಡಿತ ನನ್ನ ಬಳಿ ಬಂದು ಕೋರ್ನಿಶ್ ಹೇಳುತ್ತಿದ್ದ. ಈ ಕಾರಣದಿಂದ ಅವಳು ಮೆಹರುನ್ನೀಸಾ ಇರಲಾರದು ಅಂದುಕೊಳ್ಳುತ್ತಿದ್ದೆ."

"ಜಹಾಂಪನಾಹ್ ತಮ್ಮ ಊಹೆ ಸರಿಯಾದದ್ದೇ. ಆಕೆ ನನ್ನ ಮಗಳು ಮೆಹರುನ್ನೀಸಾಳೇ. ಅಣ್ಣನ ಮಗಳ ನಿಶ್ಚಿತಾರ್ಥಕ್ಕೆ ಬಾರದಿರಲು ಯಾವ ಹೆಣ್ಣು ಮಗಳ ಮನಸ್ಸು ತಾನೇ ಒಪ್ಪುತ್ತದೆ."

"ತುಂಬಾ ಸಂತೋಷವಾಯಿತು. ಘಿಯಾಸ್, ಅವಳ ವಿಷಯದಲ್ಲಿ ನಿಮ್ಮಿಂದ ನನಗೊಂದು ಉಪಕಾರವಾಗಬೇಕು."

"ಹೇಳಿ ಜಹಾಂಪನಾಹ್ ನೀವು ನಮ್ಮ ಪ್ರಭುಗಳು. ನಿಮ್ಮ ಆದೇಶವನ್ನು ಪೂರೈಸುವುದು ನಮ್ಮ ಕರ್ತವ್ಯ."

"ಹಾಗಾದರೆ, ಅವಳನ್ನು ನನ್ನ ಹೆಂಡತಿಯನ್ನಾಗಿ ಮಾಡಿಕೊಳ್ಳಬೇಕೆಂದಿದ್ದೇನೆ."

ಘಿಯಾಸ್ ನಿಬ್ಬೆರಗಾದ ಒಬ್ಬ ತಂದೆಯನ್ನು, ನಿನ್ನ ಮಗಳನ್ನು ತನಗೆ ಹೆಂಡತಿಯಾಗಿ ಕಳಿಸಿಕೊಡು ಎಂದು ಕೇಳುವುದು ಉದ್ಧಟತನವೂ ಹೌದು; ಅಸಭ್ಯತೆಯೂ ಹೌದು. ಈ ಬೇಡಿಕೆಗೆ ಉತ್ತರಕೊಡುವ ಹಕ್ಕು ನನಗೆಲ್ಲಿದೆ? ನನ್ನ ಮಗಳ ಮುಂದೆ ಬಾದಶಾಹರ ಈ ಬೇಡಿಕೆಯನ್ನು ಇಡುವುದಾದರೂ ಹೇಗೆ? ನನ್ನನ್ನು ತರಾಟೆಗೆ ತೆಗೆದುಕೊಂಡು ನೀನೆಂಥ ಅಪ್ಪ! ಎಂದು ಕೇಳಿದರೆ ಏನು ಉತ್ತರ ಕೊಡಬೇಕು? ಅಸ್ಮತ್ ಆದರೂ ಈ ಪ್ರಸ್ತಾಪವನ್ನು ಒಪ್ಪುತ್ತಾಳೆಯೇ? ಎಂದು ಬಹಳ ಹೊತ್ತು ನಿಂತು ಯೋಚಿಸುತ್ತಿದ್ದ, ಘಿಯಾಸ್‌ನನ್ನು ಜಹಾಂಗೀರ್,

"ಯಾಕೆ ಹಾಗೆ ಮಾತಾಡದೆ ನಿಂತುಬಿಟ್ಟಿರಿ ಮಿರ್ಜಾ ಬೇಗರೇ? ನಾನು ಕೇಳಿದ್ದರಲ್ಲಿ ತಪ್ಪೇನಾದರೂ ಇದೆಯೇ?"

"ಜಹಾಂಪನಾಹ್, ಒಂದು ಅವಿವಾಹಿತ ಹೆಣ್ಣನ್ನು ಬಯಸಿ ಬೇಡುವುದರಲ್ಲಿ ಯಾವ ತಪ್ಪನ್ನೂ ಹುಡುಕಲಾರೆ. ಇವಳು ವಿವಾಹಿತಳು. ಗಂಡ ಮತ್ತು ಬೆಳೆಯುತ್ತಿರುವ ಮಗಳಿದ್ದಾಳೆ ಯಾವ ಬಾಯಿಂದ ವಿಷಯ ತಿಳಿಸಲಿ?"

"ಮಿರ್ಜಾ ಅವರೇ, ನಿಮ್ಮ ಮಗಳು ಅಮೂಲ್ಯವಾದ ರತ್ನ. ಬೆಲೆ ಕಟ್ಟುವುದೇ ಕಷ್ಟ. ಜನ್ನತ್‌ನಲ್ಲಿಯೂ ಇವಳಿಗೆ ಸರಿಗಟ್ಟುವ ಸುಂದರಿ ಇರಲಾರಳು. ಅವಳು ಸಾಮಾನ್ಯ ಹೆಣ್ಣಲ್ಲ. ಅನುಪಮ ಸುಂದರಿ. ಅಲಿಖುಲಿಯಂತಹ ಒಬ್ಬ ಸಾಮಾನ್ಯ ವ್ಯಕ್ತಿಯೊಂದಿಗೆ ಮದುವೆ ಮಾಡಿ ಅವಳಿಗೆ ಅನ್ಯಾಯ ಮಾಡಿದಿರಿ. ಮೊಘಲ್ ಸಾಮ್ರಾಜ್ಯದ ಪಾದಶಾಹ್ ಬೇಗಂ ಆಗಿ ಮೆರೆಯುವ ಯೋಗ್ಯತೆಯುಳ್ಳವಳು. ಆ ಅವಕಾಶವೂ ಅವಳಿಗಿತ್ತು. ಆದರೆ ಅವಳನ್ನು ಅಪಾರವಾಗಿ ಪ್ರೀತಿಸಿ ನನ್ನ ಪ್ರಾಣದ ಕುರ್ಬಾನಿಗೂ ಸಿದ್ಧನಾಗಿದ್ದ ನನ್ನಿಂದ ಅವಳನ್ನು ದೂರ ಮಾಡಿದಿರಿ. ಅಬ್ಬುಜಾನ್ ಮತ್ತು ನೀವುಗಳು ಸೇರಿಕೊಂಡು ಪಿತೂರಿ ಮಾಡಿ, ನಮ್ಮನ್ನು ಒಬ್ಬರಿಂದೊಬ್ಬರು ದೂರವಾಗುವಂತೆ ಮಾಡಿದ್ದಲ್ಲದೆ, ನಮ್ಮ ಬದುಕನ್ನು ಜಹನ್ನುಮ್ ಆಗಿಸಿದಿರಿ. ಇದಕ್ಕೆ ನೀವಲ್ಲದೆ ಬೇರೆ ಯಾರು ತಾನೇ ಕಾರಣವಾಗುತ್ತಾರೆ?"

"ಜಹಾಂಪನಾಹ್, ನಾವು ಅನ್ಯಾಯ ಮಾಡಿದೆವೆಂದು ಸಿಟ್ಟಾಗುತ್ತಿದ್ದೀರಿ. ಇದು ನ್ಯಾಯವೇ? ಆದರೆ ಒಂದು ಮಾತು ಹೇಳಿ. ಜಲಾಲುದ್ದೀನ್ ಬಾದಶಾಹ್ ಅಕ್ಬರ್ ಇಡೀ ಹಿಂದೂಸ್ತಾನವನ್ನೇ ತಮ್ಮ ಅಂಕೆಯಲ್ಲಿ ಇರಿಸಿಕೊಂಡಿದ್ದರು. ಅವರೇ ಇಚ್ಛೆಪಟ್ಟು, ಅಲಿಖುಲಿ ಮೇಲಿನ ಪ್ರೀತಿ, ಅಭಿಮಾನಗಳಿಂದ, ಅವನ ಶೌರ್ಯ ಸಾಹಸಗಳಿಗೆ ಮೆಚ್ಚಿ ಉಡುಗೊರೆಯ ರೂಪದಲ್ಲಿ ನನ್ನ ಮಗಳನ್ನು ಆಯ್ಕೆ ಮಾಡಿ ಮದುವೆ ನಿಶ್ಚಯಿಸಿದರೆ ನಾನೇನು ಮಾಡಲಿ ಜಹಾಂಪನಾಹ್? ಅವರ ಆದೇಶಕ್ಕೆ ನಾನು ಆಗುವುದಿಲ್ಲವೆಂದು ಹೇಗೆ ಹೇಳಲಿ? ನನ್ನ ಮಗಳ ಆಸೆ ಆಕಾಂಕ್ಷೆಗಳಾಗಲಿ, ನಮ್ಮ ಆಯ್ಕೆಗೆ ಅವಕಾಶವಾಗಲೀ ಇರಲೇ ಇಲ್ಲ. ಅವಳಿಗೆ ಅನುರೂಪನಾದ ವರನೆಂದು ಘೋಷಿಸಿದಾಗ, ನಾನು ವಿರೋಧಿಸಲೇ?" ಅಲ್ಲದೆ ಅಲಿಖುಲಿ ನಿಮ್ಮೆಲ್ಲರ ಪ್ರೀತಿಗೆ,

ಮೆಚ್ಚುಗೆಗೆ ಪಾತ್ರನಾದವನು. ಮಹಾಶೂರ. ನೋಡಲೂ ಸುಂದರ. ನಿಮ್ಮ ಅಬ್ಬಾಜಾನ್ ದೊಡ್ಡ ಪ್ರಮಾಣದ ಮನಸ್ಸನ್ನೇ ಕೊಟ್ಟಿದ್ದಾರೆ. ಹೀಗಿರುವಾಗ ಮತ್ತು ನಾವು ಯಾವುದೇ ರಾಜವಂಶಕ್ಕೆ ಸೇರಿದವರಲ್ಲದಿರುವಾಗ, ನನ್ನ ಮಗಳ ಮದುವೆ ಸಂಬಂಧ ಹೇಗೆ ಸಾಧ್ಯ? ಸಾಮ್ರಾಜ್ಯದಲ್ಲಿ ಕೆಲ ಅಧಿಕಾರಿಗಳು, ಸ್ವಾರ್ಥಿಗಳು, ಅಸೂಯಾಪರರು, ಪ್ರಜೆಗಳು ಇದನ್ನು ವಿರೋಧಿಸುವ ಸಾಧ್ಯತೆಯೂ ಇತ್ತು. ನಿಮ್ಮ ಜನಾನಾದಲ್ಲಿ ಪ್ರತಿರೋಧವಿರಲಿಕ್ಕೂ ಸಾಕು. ಹೇಳಿ ಜಹಾಂಪನಾಹ್, ಇಷ್ಟೆಲ್ಲಾ ವಿವರಿಸಿದ ಮೇಲೂ ನಿಮಗೆ ನಾವು ತಪ್ಪು ಮಾಡಿದೆವು ಎನಿಸುವುದೇ?"

"ಮಿರ್ಜಾ ಘಿಯಾಸ್ ಬೇಗರೇ ನಿಮ್ಮೆಲ್ಲರನ್ನೇ ಈ ವಿಷಯದಲ್ಲಿ ಅಪರಾಧಿಯಾಗಿ ನಿಲ್ಲಿಸುತ್ತಿಲ್ಲ. ನಮ್ಮ ಪರಿವಾರದವರಿಂದಲೇ ಪ್ರತಿರೋಧವೆಂಬುದು ಗೊತ್ತು. ನನ್ನ ಅಬ್ಬಾಜಾನ್‌ಗೂ ನನಗೂ ಮೊದಲಿನಿಂದಲೇ ಆಗುತ್ತಿಲ್ಲ. ಅವರ ದೃಷ್ಟಿಯಲ್ಲಿ ನನಗೆ ಜವಾಬ್ದಾರಿಯಿಲ್ಲ. ಐಷಾರಾಮಿ ಹುಡುಗ ಎಂದೇ ಭಾವಿಸಿರುವರಾದರೂ, ನನ್ನ ಮೇಲೆ ಹೆಚ್ಚಿನ ಪ್ರೀತಿ. ದಾನಿಯಾಲ್, ಮುರಾದರಿಬ್ಬರೂ ಸಾವನ್ನಪ್ಪಿ ಬಾದಶಾಹರ ಚಿಂತೆಯನ್ನು ಮತ್ತಷ್ಟು ಹೆಚ್ಚಿಸಿದರು. ಅಬ್ಬಾಜಾನ್ ಗಟ್ಟಿಮುಟ್ಟಾಗಿರುವಾಗಲೆ ಗದ್ದುಗೆಯನ್ನು ನಮಗೆ ಒಪ್ಪಿಸಿದ್ದರೆ ಅವರ ಮಾರ್ಗದರ್ಶನದಲ್ಲಿ ಆಡಳಿತ ನಡೆಸುವುದನ್ನು ಕಲಿಯುತ್ತಿದ್ದೆವು. ಕಾಯಿಲೆ ಬಿದ್ದು ಸಾಯುವ ಕ್ಷಣಗಳವರೆಗೆ ಅವರೇ ಐವತ್ತು ವರ್ಷಗಳ ಕಾಲ ಸುದೀರ್ಘವಾಗಿ ಸಾಮ್ರಾಜ್ಯವನ್ನು ಆಳಿದರು.

"ಅದೆಲ್ಲ ಕತೆ ಈಗ ಬೇಡ ಮಿರ್ಜಾ ಅವರೇ. ನಾನು ನಿಮಗೆ ಸಲಹೆಯೊಂದನ್ನು ನೀಡಬೇಕೆಂದಿದ್ದೇನೆ. ಅಲಿಖುಲಿ ಬಂಡು ಕೋರ, ರಾಜದ್ರೋಹಿ, ನನಗೇ ವಿರುದ್ಧವಾಗಿ ನನ್ನ ಮಗ ಖುಸ್ರೋನನ್ನು ಬೆಂಬಲಿಸಿದ. ಅಪರಾಧಿಯಾಗಿ ಸೆರೆಯಾದರೂ ನನ್ನ ಸೇವೆಯಲ್ಲಿದ್ದು, ದಂಡಯಾತ್ರೆಗಳಲ್ಲಿ ಭಾಗವಹಿಸಿ, ತನ್ನ ಪರಾಕ್ರಮ ಮೆರೆದು, ಜಯಗಳಿಸುವಲ್ಲಿ ಸಹಕರಿಸಿದ, ಜೊತೆಗೆ ನನ್ನ ಪ್ರಾಣರಕ್ಷಣೆಯನ್ನೂ ಮಾಡಿದ. ಹುಲಿಯ ಆಕ್ರಮಣವನ್ನು ಎದುರಿಸಿ ಹೋರಾಡಿ ನನ್ನನ್ನು ಉಳಿಸಿದ. ಈ ಎಲ್ಲಾ ಉಪಕಾರಗಳನ್ನು ಸ್ಮರಿಸಿ, ಅವನಿಗೆ ಮೃತ್ಯುದಂಡ ಘೋಷಿಸದೆ ಕ್ಷಮಿಸಿದೆ, ಜೊತೆಗೆ ನಿಮ್ಮ ಅಳಿಯನೆಂಬ ಅಭಿಮಾನದಿಂದ ಬರ್ದವಾನಿನ ಪ್ರಾಂತಾಧಿಕಾರಿ ಆಗಿ ಬಡ್ತಿ ನೀಡಿದೆ. ಆದರೆ ಈಗ ಅವನು ಮಾಡುತ್ತಿರುವುದೇನು? ನನ್ನ ಮೇಲಿನ ದ್ವೇಷಕ್ಕಾಗಿ, ಎರಡನೇ ಬಾರಿಯೂ ಖುಸ್ರೋನ ಜೊತೆ ಕೈ ಜೋಡಿಸಲು ಮುಂದಾಗಿದ್ದಾನೆ. ಒಂದು ದೊಡ್ಡ ಸೇನಾಪಡೆಯನ್ನು ಕಟ್ಟುತ್ತಿದ್ದಾನೆ ಎನ್ನುವ ಸೂಚನೆಗಳು ನಮಗೆ ದೊರೆತಿವೆ. ಸಾಮ್ರಾಜ್ಯ ವಿರೋಧಿ ಕಾರ್ಯ ಚಟುವಟಿಕೆಗಳಲ್ಲಿ ತುಂಬಾ ಗಂಭೀರವಾಗಿ ತೊಡಗಿಸಿಕೊಂಡಿದ್ದಾನೆಂದು ತಿಳಿದುಬಂದಿದೆ. ಯಾವ ಕ್ಷಣದಲ್ಲಾದರೂ ದೇಶ ದ್ರೋಹಿಯಾಗಿ ಸಿಕ್ಕಿ ಬಿದ್ದು ಪ್ರಾಣ ಕಳೆದುಕೊಳ್ಳುತ್ತಾನೆ. ಕ್ಷಣಕ್ಷಣವೂ ಪ್ರಾಣಾಪಾಯವನ್ನು ಎದುರಿಸುತ್ತಿರುವವನ ಜೊತೆಯಲ್ಲಿ ನಿಮ್ಮ ಮಗಳು ಬಾಳುವುದು ನಿಮಗೆ ಇಷ್ಟವೇ?"

"ಜಹಾಂಪನಾಹ್ ಇಷ್ಟಾನಿಷ್ಟಗಳು ನನಗೆ ಸಂಬಂಧಿಸಿದ್ದಲ್ಲ. ಎಲ್ಲವೂ ನನ್ನ ಮಗಳನ್ನು ಅವಲಂಬಿಸಿವೆ."

"ನೀವು ಅವಳಿಗೆ ಬುದ್ಧಿ ಹೇಳಿ ಒಪ್ಪಿಸಿ, ತೈಮೂರಿ ಕಾನೂನಿನಲ್ಲಿರುವ

'ತುರಾ–ಇ–ಚಿಂಗೇಜಿ' ಮೂಲಕ ಮೆಹರುನ್ನೀಸಾಳಿಂದ ವಿಚ್ಛೇದನ ಕೊಡಿಸಿದರೆ ಆಯಿತು. ಅವಳು ವಿವಾಹ ಬಂಧನದಿಂದ ಬಿಡುಗಡೆಯಾಗುತ್ತಾಳೆ. ಆಗ ನಾನು ಅವಳನ್ನು ಮದುವೆಯಾಗಬಹುದು."

ಘಿಯಾಸ್ ಯೋಚಿಸುತ್ತಿದ್ದ. ಯಾವುದೇ ಗಂಡಸನ್ನು ಚಕ್ರವರ್ತಿಯಾದವನು, ತನ್ನ ಹೆಂಡತಿಯನ್ನು, ಈ ರೀತಿ ತುರಾ–ಇ–ಚಿಂಗೇಜಿ ಕಾನೂನಿನ ಪ್ರಕಾರ, ವಿಚ್ಛೇದನ ನೀಡಲು ಕೇಳಿದರೆ, ಅದೂ ಒಬ್ಬ ಬಾದಶಾಹ್, ಬಹಳ ದೊಡ್ಡ ಗೌರವವೆಂದು ಭಾವಿಸಲಾಗುತ್ತಿತ್ತು. ಈ ರೀತಿಯ ವಿಚ್ಛೇದನಗಳು ಆ ಕಾಲದಲ್ಲಿ ಮುಸ್ಲಿಂ ಕಾನೂನಿನಲ್ಲಿ ಸರ್ವೇಸಾಮಾನ್ಯವಾಗಿದ್ದವು. ಬಾದಶಾಹರು ಇಂಥಾದ್ದನ್ನು ಈಗ ನನ್ನ ಮಗಳ ಸಲುವಾಗಿ ಕೇಳುತ್ತಿದ್ದಾರೆ. ಇದರಿಂದ ನಮ್ಮ ಪರಿವಾರಕ್ಕೆ, ಬಹು ದೊಡ್ಡ ಲಾಭ. ಜಹಾಂಪನಾಹರನ್ನು ಅಳಿಯನಾಗಿ ಪಡೆಯುವುದೂ ಹೇಳಿಕೊಳ್ಳುವುದೂ ನನಗೆ ಬಹಳ ದೊಡ್ಡ ಹೆಮ್ಮೆಯ ಸಂಗತಿಯೆ. ರಾಜ ಪರಿವಾರದ ಭಾಗವಾಗುವುದು ಸಾಮಾನ್ಯ ವಿಷಯವಲ್ಲ. ಆದರೂ ನಾನೊಬ್ಬನೇ ಒಪ್ಪಿಗೆ ನೀಡುವಂತಿಲ್ಲ. ಎಲ್ಲರಿಗಿಂತ ಮೆಹರುನ್ನೀಸಾಳ ಅಭಿಪ್ರಾಯ ಮುಖ್ಯ. ಆದರೆ ಅವಳು ಈ ಸಲಹೆಯನ್ನು ಒಪ್ಪುವುದಿಲ್ಲ. ಇಷ್ಟವೋ ಅನಿಷ್ಟವೋ, ಗಂಡನ ಮೇಲಿನ ಅಭಿಮಾನವನ್ನು ಬಿಟ್ಟುಕೊಡುವುದಿಲ್ಲ.

"ಘಿಯಾಸರೇ ಇನ್ನೂ ನಿಮ್ಮ ನಿಲುವೇನೆಂಬುದು ನಮಗೆ ತಿಳಿಯುತ್ತಿಲ್ಲ, ನಾನು ಮನಸ್ಸು ಮಾಡಿದರೆ, ಬಲವಂತದಿಂದ ಒಪ್ಪಿಸಬಲ್ಲೆ. ಬಲಾತ್ಕಾರ ಬೇಡವೆಂದು, ನಿಮ್ಮಲ್ಲಿ ಸೌಜನ್ಯದಿಂದ ಬೇಡುತ್ತಿದ್ದೇನೆ. ಅಲಿಖುಲಿ ತಾನಾಗಿಯೇ ಅಪಾಯಗಳನ್ನು ಮೇಲೆಳೆದು ಕೊಳ್ಳುತ್ತಿದ್ದಾನೆ."

ಜಹಾಂಪನಾಹ್ ಹೇಳುತ್ತಿರುವುದರಲ್ಲಿ ಸತ್ಯವಿದೆ. ಅಲಿಖುಲಿಯ ಪ್ರಾಣಕ್ಕೇ ಸಂಚಕಾರವಿದೆ. ಒಂದು ವೇಳೆ ಹೇಳಿದ್ದೇ ನಿಜವಾದರೆ ಮಗಳನ್ನು ವಿಧವೆಯಾಗಿ ನೋಡುವುದಕ್ಕಿಂತ, ವಿಚ್ಛೇದನ ಕೊಡಿಸಿ, ಬಾದಶಾಹರ ಜೊತೆ ನಿಕಾಹ್ ಮಾಡಿಕೊಂಡರೆ ಒಳಿತಲ್ಲವೆ! ಆಗ......ಆಗ... ಎಂತಹ ಶ್ರೀಮಂತಿಕೆ! ಗೌರವ ಪ್ರತಿಷ್ಠೆಗಳು! ಎಂದು ಮನದಾಸೆ ಚಿಗುರೊಡೆಯುತ್ತಿದ್ದರೂ, ಅಲಿಖುಲಿ ನೆನಪಾಗಿ ಸ್ವಲ್ಪ ಹಿಂಜರಿದ.

"ಜಹಾಂಪನಾಹ ಅಲಿಖುಲಿ ಇದಕ್ಕೆ ಒಪ್ಪದಿದ್ದರೆ?...." ಮೊದಲೇ ಆಲೋಚಿಸಿದ್ದರೆ ಈಗಾಗುತ್ತಿರುವ ತಪ್ಪುಗಳನ್ನು ಸರಿಪಡಿಸಿಕೊಳ್ಳಬಹುದಾಗಿತ್ತು, ಎಂದು ಮನಸ್ಸಿನಲ್ಲಿ ಸಂಕಟಪಡುತ್ತಿದ್ದ.

ಮತ್ತೆ ಮುಂದುವರೆದು ಹೇಳಿದ.

"ಜಹಾಂಪನಾಹ್ ನೀವು ಆಜ್ಞಾಪಿಸಿದ್ದನ್ನು ಮಾಡುವುದಕ್ಕೆ ನಾನು ಶಕ್ತಿ ಮೀರಿ ಪ್ರಯತ್ನಿಸುತ್ತೇನೆ. ನಿಮ್ಮ ಮತ್ತು ನನ್ನ ಮಗಳ ಸಂತೋಷಕ್ಕಾಗಿ ನಾನು ಏನು ಮಾಡಲೂ ಸಿದ್ಧ. ಈಗ ನನಗೆ ಹೋಗಲು ಅನುಮತಿಸಿ ಜಹಾಂಪನಾಹ್" ಜಹಾಂಗೀರ್ ಸಂತೋಷದಿಂದಲೇ ಬೀಳ್ಕೊಟ್ಟ.

ಘಿಯಾಸ್ ಬೇಗ್ ಕಣ್ಮರೆಯಾಗುತ್ತಿದ್ದಂತೆಯೇ ಜಹಾಂಗೀರ್ ಕುಳಿತಲ್ಲಿಂದಲೇ ಕನಸುಗಳನ್ನು ಕಾಣತೊಡಗಿದ. ಮನಸ್ಸು ಪ್ರಫುಲ್ಲವಾಗಿತ್ತು. ಅವಳು ಆಗಲೇ ತನ್ನ ಹಾಸಿಗೆ ಸೇರಿದಂತೆ, ತಾನು ಅವಳ ನುಣುಪು ರೇಶಿಮೆಯ ದೇಹ ಸ್ಪರ್ಶದ ರೋಮಾಂಚನ

ಅನುಭವಿಸಿದಂತೆ, ನೀಲಿ ಕಣ್ಣುಗಳ ಹೊಳಪು ಅವನಲ್ಲಿ ಅಂಗುಲಂಗುಲವಾಗಿ ಇಳಿದಂತೆ, ಅವಳು ಕೈಗಿತ್ತ ಮದಿರೆಯ ಬಟ್ಟಲಿನಲ್ಲಿ ಅವಳ ಚುಂಬನದ ಸವಿ ಬೆರೆತಂತೆ ಮತ್ತು ಇನ್ನೇನೋ ರೀತಿಯ ಪಟ್ಟುಗಳಲ್ಲಿ ಬಂಧಿತನಾದಂತೆ, ಕನಸುಗಳಲ್ಲಿಯೇ, ವಾಸ್ತವಾನುಭೂತಿಗಳಂತೆ ಅನುಭವಿಸಿದ.

ಮಹಬ್ಬತ್ ಖಾನ್, ಅಬುಲ್‌ಹಸನ್ ಒಬ್ಬರ ಮುಖವನ್ನು ಒಬ್ಬರು ನೋಡಿಕೊಂಡರು. ಎಲ್ಲವೂ ಪ್ರತ್ಯಕ್ಷವಾಗಿ ಅವರ ಕಣ್ಣಮುಂದಿದೆ. ಅಬುಲ್ ಏನನ್ನೂ ಮಾತಾಡಲು ಯೋಚಿಸಲಿಲ್ಲ. ಅವನ ದೃಷ್ಟಿಯಲ್ಲಿ ಇದು ಒಪ್ಪಿತ ಪ್ರಸ್ತಾವವೇ! ತನ್ನ ಮಗಳಿಗೆ ಬೇರೆ ಮಾವನಾಗುತ್ತಿದ್ದಾನೆ. ಖುರ್ರಂ ಮುಂದಿನ ಬಾದಶಾಹ್ ಆಗಲಿರುವಾಗ, ಜಹಾಂಗೀರನ ಇಚ್ಛೆಗೆ ವಿರುದ್ಧವಾಗಿ ಏನನ್ನೂ ಹೇಳಲಾರ.

ಮಹಬ್ಬತ್ ಖಾನನ ವಿಚಾರವೇ ಬೇರೆ. ಇವನು ಮತ್ತು ಖುತುಬುದ್ದೀನ್ ಕೋಕಾ ಇಬ್ಬರಿಗೂ, ಸಲೀಂ ಮತ್ತು ಮೆಹರುನ್ನೀಸಾರ ಪ್ರಣಯ ಸಂಬಂಧ ಇಷ್ಟವಾಗಿರಲಿಲ್ಲ. ಜೊತೆಗೆ ಅಲಿಖುಲಿಯನ್ನು ಕಂಡರೆ, ಅವನ ಬಗ್ಗೆ ಕೇಳಿದರೆ, ಕೆಂಡದಂತೆ ಉರಿಯುತ್ತಿದ್ದರು. ಎಲ್ಲಕ್ಕಿಂತ ಹೆಚ್ಚಾಗಿ, ಘಿಯಾಸ್ ಕುಟುಂಬದ ಸ್ಥಾನಮಾನ, ಅಧಿಕಾರಗಳು ಔನ್ನತ್ಯದ ಪರಮಾವಧಿಯನ್ನು ತಲುಪುತ್ತವೆ. ಪಾದಶಾಹ್ ಬೇಗಂ ಜಗತ್‌ಗೋಸಿನಿ ಬೇರೆ ಚಿಂತಿತಳಾಗಿದ್ದಾಳೆ. ನೀಸಾ ಒಂದು ವೇಳೆ ಜಹಾಂಗೀರನ ಹೆಂಡತಿಯಾಗಿ ಬಂದರೆ ಪಟ್ಟದ ಅಧಿಕಾರ, ಜನಾನಾದ ಯಜಮಾನಿಕೆ ಎಲ್ಲವನ್ನೂ ಕಳೆದುಕೊಳ್ಳಬೇಕಾಗುತ್ತದೆ. ಅದಕ್ಕಾಗಿಯೇ ಮಹಬ್ಬತ್ ಖಾನನನ್ನು ತನ್ನ ಪರವಾಗಿ ಗೂಢಚಾರಿಕೆ ಮಾಡಿ ತನಗೆ ತಿಳಿಸುವಂತೆಯೂ ಮತ್ತು ಅವರಿಬ್ಬರ ಮದುವೆಯನ್ನು ಹೇಗಾದರೂ ಮಾಡಿ ತಪ್ಪಿಸುವಂತೆಯೂ, ಹೀಗಾಗದಿದ್ದಲ್ಲಿ ಅವನ ಪದವಿಯೂ ಹೋಗುವುದೆಂದೂ ತಿಳಿಸಿ ಬೆದರಿಕೆ ಒಡ್ಡಿದ್ದಳು.

ಮಹಬ್ಬತ್ ಖಾನ್ ಧೈರ್ಯ ತಂದುಕೊಂಡು ತನ್ನ ಅಭಿಪ್ರಾಯವನ್ನು ಹೇಳಲು ಮುಂದಾದ.

"ಜಹಾಂಪನಾಹ್, ನಿಮ್ಮ ವಿಷಯದಲ್ಲಿ ಮಧ್ಯೆ ಪ್ರವೇಶಿಸಬಾರದು ಎನ್ನುವುದನ್ನು ತಿಳಿದುಕೊಂಡೇ ಹೇಳುತ್ತಿದ್ದೀನಿ. ದಿಢೀರನೆ ತುರಾ–ಇ–ಚಿಂಗೇಜಿಗೆ ಮುಂದಾಗಬಾರದು. ಈ ಸಂಬಂಧದಲ್ಲಿ ಆಸ್ಥಾನದ ಅಧಿಕಾರಿಗಳು, ಜನಾನಾದಲ್ಲಿನ ಬೇಗಂಗಳು ಅಸಮಾಧಾನಗೊಳ್ಳಬಹುದು. ಸ್ವಲ್ಪ ಯೋಚಿಸಿ ಮುಂದುವರೆಯುವುದು ಒಳ್ಳೆಯದು ಎನ್ನುವುದು ನನ್ನ ಭಾವನೆ."

"ಮಹಬ್ಬತ್ ನನ್ನ ಯೋಗಕ್ಷೇಮದ ಬಗ್ಗೆ ನಿನಗಿರುವ ಕಳಕಳಿಯಿಂದ ನನಗೆ ಸಂತೋಷವೇನೋ ಆಗಿದೆ. ಆದರೆ ಮಹಬ್ಬತ್ ಅವಳನ್ನು ನಾನು ಎಷ್ಟು ಗಾಢವಾಗಿ ಪ್ರೀತಿಸುತ್ತಿದ್ದೇನೆ ಎನ್ನುವುದು ನಿನಗೆ ಗೊತ್ತಿಲ್ಲ. ಅವಳು ಮದುವೆಯಾಗಿ ಹೊರಟು ಹೋದ ಮೇಲೂ ಅವಳ ಮುಖ ನನ್ನನ್ನು ಎಷ್ಟು ತೀವ್ರವಾಗಿ ಕಾಡಿದೆ ಎನ್ನುವುದು ನಿನಗೆ ಗೊತ್ತಿಲ್ಲ. ಕಷ್ಟಪಟ್ಟು ಅವಳನ್ನು ಮರೆಯಲು ಪ್ರಯತ್ನಿಸಿದೆ. ಆದರೆ ಮರೆತೆನೆಂದು ಖಚಿತವಾಗಿ ಹೇಳಲಾರೆ. ಆ ಮುಖ ನನ್ನ ಹೃದಯಾಂತರಾಳದಲ್ಲಿ ಕೆತ್ತಿ ಹೋಗಿರಬೇಕು. ಮೊನ್ನೆ ಖುರ್ರಂನ ನಿಶ್ಚಿತಾರ್ಥದಲ್ಲಿ ಆ ಮುಖ ಕಂಡೆ. ಸ್ತಂಭಿಸಿ ಹೋದೆ. ಮದುವೆಯಾಗಿ

ಅಷ್ಟು ವರ್ಷಗಳಾಗಿದ್ದರೂ ಅವಳ ಸೌಂದರ್ಯ ಇಷ್ಟೂ ಮುಕ್ಕಾಗಿರಲಿಲ್ಲ. ನಿಜವಾಗಿಯೂ ಅವಳು ಹೆಂಗಸರ ನಡುವಿನ ಸೂರ್ಯ. ಎಲ್ಲಿದ್ದರೂ ಹೊಡೆದೆದ್ದು ಕಾಣುತ್ತಾಳೆ. ಒಂದು ಕ್ಷಣದ ನೋಟ ಎದೆಯಾಳದ ಸುಪ್ತ ಭಾವನೆಗಳನ್ನು ಎಬ್ಬಿಸಿಬಿಟ್ಟಳು. ಮಹಬ್ಬತ್‌ಖಾನ್ ಅವಳು ಸುಂದರಿಯಷ್ಟೇ ಅಲ್ಲ. ಜಗತ್ತನ್ನೇ ಸಮರ್ಥವಾಗಿ ಆಳಬಲ್ಲಳು ಎನ್ನುವ ನಂಬಿಕೆಯೂ ಅವಳನ್ನು ಮದುವೆಯಾಗಲು ಒತ್ತಾಯಿಸುತ್ತಿದೆ. ನನ್ನ ಜೊತೆ ಚಕ್ರವರ್ತಿನಿಯಾಗಿ ಸಿಂಹಾಸನದಲ್ಲಿ ಕುಳಿತರೆ ಸಾಕು, ಮುಘಲ್ ಸಾಮ್ರಾಜ್ಯ ಸ್ವರ್ಣಯುಗವಾಗಿ ಬಿಡುತ್ತದೆ. ಖಂಡಿತ ಅವಳನ್ನು ನಾನು ಬಿಟ್ಟುಕೊಡಲಾರೆ. ಬಲವಂತ ಮಾಡುವುದಿಲ್ಲ. ನ್ಯಾಯಯುತವಾಗಿಯೇ ತುರಾ–ಇ–ಚಿಂಗೇಜಿ ಮೂಲಕವೇ ಅವಳನ್ನು ಪಡೆಯುತ್ತೇನೆ" ಎಂದು ನಿರ್ಧಾರವನ್ನು ಘೋಷಿಸಿಬಿಟ್ಟ. ಮಹಬ್ಬತ್ ಖಾನನಿಗೆ ಮುಂದೆ ಏನು ಹೇಳಬೇಕೊ ತಿಳಿಯಲಿಲ್ಲ. ಮೆಹರುನ್ನೀಸಾ ನಿಜವಾಗಿಯೂ ಮಾಟಗಾತಿಯೇ! ಅದೇನು ಮೋಡಿ ಮಾಡಿದ್ದಾಳೋ 'ಅಲ್ಲಾಹ್ ಜಾನೆ'. ಇನ್ನು ಮುಂದುವರೆಸಿ ಪ್ರಯೋಜನವಿಲ್ಲ. ಅವಳನ್ನು ತನ್ನವಳನ್ನಾಗಿ ಮಾಡಿಕೊಳ್ಳಲೇಬೇಕೆಂಬ ನಿರ್ಧಾರವನ್ನು ಯಾರಿಂದಲೂ ಸಡಿಲಿಸಲು ಸಾಧ್ಯವಿಲ್ಲ. ಹಾಳು ನಿಶ್ಚಿತಾರ್ಥವೊಂದು ದೊಡ್ಡ ಸಮಸ್ಯೆಯನ್ನು ಸೃಷ್ಟಿಸಿಬಿಟ್ಟಿತು. ಮದುವೆಯಾಗಿ ಹದಿಮೂರು ವರ್ಷಗಳಲ್ಲಿ ಒಮ್ಮೆಯೂ ನೋಡುವ ಅವಕಾಶ ಸಿಕ್ಕಿರಲಿಲ್ಲ. ಅಲಿಖುಲಿಯೂ ಅವಳನ್ನು ತವರಿಗೆ ಕಳಿಸುತ್ತಿರಲಿಲ್ಲ. ಮತ್ತೇನಾದರೂ ಹಳೆಯ ಪ್ರಣಯ ಕತೆ ಮರುಕಳಿಸಬಹುದೆಂದು ಹೆದರಿರಬೇಕು. ಆದರೆ ಈಗ ನಿಶ್ಚಿತಾರ್ಥದಲ್ಲಿ ಅನಿರೀಕ್ಷಿತವಾಗಿ ಕಣ್ಣಿಗೆ ಬಿದ್ದು ಅವನೆದೆಯನ್ನು ತನ್ನ ಸೌಂದರ್ಯದ ಚೂರಿಯಿಂದ ಒಮ್ಮೆಲೇ ಇರಿದು ಬಿಟ್ಟಿದ್ದಾಳೆ. ಮಾಗಿದಗಾಯ ಮತ್ತೆ ಹಸಿಯಾಗಿ ಕಾಡುತ್ತಿದೆ. ಹಾಗಾಗಿ ಅವಳನ್ನು ಮದುವೆಯಾಗುವುದು ಖಂಡಿತ. ಪಾಪ ಜಗತ್‌ಗೋಸಿನಿಯ ಸ್ಥಿತಿ ಹೇಗಾಗುತ್ತದೆಯೋ ಊಹಿಸಲು ಸಾಧ್ಯವಿಲ್ಲ.

ಬೆಳಿಗ್ಗೆ ಏಳುತ್ತಿದ್ದಂತೆ ಅರಮನೆಗೆ ಧಾವಿಸಿದ. ರಹಸ್ಯವಾಗಿ ಗೋಸಿನಿಯನ್ನು ಭೇಟಿಯಾಗಿ ನಡೆದದ್ದೆಲ್ಲವನ್ನೂ ಸವಿಸ್ತಾರವಾಗಿ ವಿವರಿಸಿ ತಿಳಿಸಿದ. ಅಲಿಖುಲಿ ಮತ್ತೆ ಖುಸ್ರೋ ಜೊತೆ ಕೈ ಜೋಡಿಸಿದ್ದ ವಿಷಯವನ್ನೂ ತಿಳಿಸಿದನಾದರೂ, ಅದು ಅವರಿಗೇ ಪ್ರಯೋಜನವಾಯಿತು. ದೇಶದ್ರೋಹದ ಕಾರಣವೂ 'ತುರಾ–ಇ–ಚಿಂಗೇಜಿ', ಅಂದರೆ ವಿಚ್ಛೇದನಕ್ಕೆ ಬಹುದೊಡ್ಡ ಪ್ರಮಾಣ, ಸಾಕ್ಷಿಯಾಗುತ್ತದೆ. ಅಲ್ಲದೆ ಚಕ್ರವರ್ತಿಯಾದವನು, ಯಾವ ಪುರುಷನ ಹೆಂಡತಿಯನ್ನಾದರೂ ಬಯಸಿ, ಈ ಕಾನೂನಿನ ಮೂಲಕ ಬೇಡಿದರೆ, ಅದು ಆಕೆಯ ಗಂಡನಿಗೆ ಗೌರವದ ವಿಷಯವಾಗುತ್ತದೆ. "ಬೇಗಂ ದಯವಿಟ್ಟು ಕ್ಷಮಿಸಿ. ತಮ್ಮ ಕೆಲಸ ಮಾಡಿಕೊಡಲು ಅಸಮರ್ಥನಾಗಿದ್ದೇನೆ." ಜಗತ್‌ಗೋಸಿನಿಯ ಮನಸ್ಸು ಧಸಕ್ ಎಂದಿತು. ಗಂಡ ಇಷ್ಟು ಮುಂದುವರೆದಿದ್ದಾನೆಂದ ಮೇಲೆ ಬೇರೆ ದಾರಿಯೇನು? "ಮಹಬ್ಬತ್ ನೀನೇ ಏನಾದರೂ ದಾರಿ ಹುಡುಕಬೇಕು. ಒಮ್ಮೆ ಒಳಗೆ ಪ್ರವೇಶ ಮಾಡಿದರೆ ಮುಗೀತು ನಾವೇನೂ ಮಾಡುವ ಹಾಗಿಲ್ಲ."

"ಬೇಗಂ, ಬೇರೆಯವರಿಂದ ವಿಷಯ ಅಲಿಖುಲಿಗೆ ತಲುಪುವ ಮೊದಲೇ ನಾವು ಅಲಿಖುಲಿಗೆ ವಿಷಯ ತಿಳಿಸಿ ಹೆಂಡತಿಯನ್ನು ಕೈ ಜಾರಿ ಹೋಗದಂತೆ ನೋಡಿಕೋ

ಎಂದು ಪತ್ರ ತಲುಪಿಸಿದರೆ ಹೇಗೆ? ಜಹಾಂಪನಾಹ್‌ರನ್ನು ಕಂಡರೆ ಅಲಿಖುಲಿಗೆ ಮೊದಲಿನಿಂದಲೂ ಆಗುವುದೇ ಇಲ್ಲ. ಅಂಥಾದ್ದರಲ್ಲಿ ಹೆಂಡತಿಯನ್ನು ಬಿಟ್ಟುಕೊಡು ಎಂದು ಕೇಳಿದಾಗ ಬೆಂಕಿಯಾಗಿಬಿಡುತ್ತಾನೆ. ಎಂತಹ ಸಾಹಸಕ್ಕೂ ಹೆದರುವುದಿಲ್ಲ. ಏನೇ ಆದರೂ ಹೆಂಡತಿಯನ್ನು ಬಿಟ್ಟುಕೊಡುವುದಿಲ್ಲ. ಹದಿಮೂರು ವರ್ಷಗಳೇ ಕಳೆದ ಮೇಲೆ, ಹೆಂಡತಿ ಗಂಡನ ನಡುವೆ ಎಷ್ಟೇ ಭಿನ್ನಾಭಿಪ್ರಾಯ, ಘರ್ಷಣೆಗಳಿದ್ದರೂ, ಒಬ್ಬರನ್ನೊಬ್ಬರು ಬಿಡಲು ಬರುವುದಿಲ್ಲ. ಮದುವೆಯ ಬಂಧನ ಸಾಕಷ್ಟು ಬಿಗಿಯಾಗಿ ಇರುತ್ತದೆ."

"ನೀನು ಹೇಳುವುದು ಸರಿಯೇ. ಈಗ ನನಗೆ ಕಾಣಿಸುವುದು ಒಂದೇ ದಾರಿ. ಜಹಾಂಪನಾಹ್‌ರನ್ನು ಅವರ ದಾರಿಗೇ ಬಿಟ್ಟುಬಿಡುವುದು. ಮದುವೆಯಾದರೆ ಆಗಲಿ. ಕೆಲವು ದಿನ ಕಳೆದ ಮೇಲೆ ಅವರಿಗೇ ಬೇಸರವಾಗುತ್ತದೆ. ಆ ಮೇಲೆ ಅವರನ್ನು ಹೇಗೆ ನಿಯಂತ್ರಿಸಬೇಕೆನ್ನುವುದನ್ನು ನಾನು ಯೋಚಿಸುತ್ತೇನೆ."

"ಬೇಗಂ ಈ ಹೆಣ್ಣು ಅಷ್ಟು ಸುಲಭದ ಹೆಣ್ಣಲ್ಲ. ಜಹಾಂಪನಾಹ್‌ರಿಗೆ ಬೇಸರ ಬರುವುದು ಹಾಗಿರಲಿ, ಒಂದು ಕ್ಷಣವೂ ಅವಳನ್ನು ಅಗಲಿರಲಾರದಷ್ಟು ಹಚ್ಚಿಕೊಂಡು ಹುಚ್ಚನಾಗಿ ಬಿಡುತ್ತಾರೆ. ಅವಳು ಮಹಾಜಾಣೆ, ಮಹತ್ವಾಕಾಂಕ್ಷಿ. ಘಿಯಾಸ್ ಕುಟುಂಬದವರೂ ಸಾಮಾನ್ಯರಲ್ಲ. ಅವರೆಲ್ಲ ಒಟ್ಟುಗೂಡಿ ಪಿತೂರಿ ಮಾಡುತ್ತಾರೆ. ಕ್ರಮೇಣ ಸಾಮ್ರಾಜ್ಯವೇ ಅವಳ ಕೈ ಸೇರುತ್ತದೆ. ಜಹಾಂಪನಾಹ್‌ರೂ ಅವಳ ಕೈ ಗೊಂಬೆ ಆಗುತ್ತಾರೆ" ಈ ಇಬ್ಬರೂ ಎಷ್ಟೋ ಹೊತ್ತು ಆಪ್ತ ಸಮಾಲೋಚನೆ ನಡೆಸಿದರು. ಯಾವ ನಿಟ್ಟಿನಿಂದ ನೋಡಿದರೂ, ಅವರ ಉಪಾಯಗಳು ಫಲಿಸುವ ಸಾಧ್ಯತೆಯೇ ಇಲ್ಲವೆನಿಸಿ, ಸಮಯಕ್ಕಾಗಿ ಕಾಯುವುದು ಒಳ್ಳೆಯದೆನಿಸಿ ಸುಮ್ಮನಾದರೂ ಕಥೆಯ ಬೆಳವಣಿಗೆ ಯಾವ ದಿಕ್ಕಿಗೋ! ಗಮನಿಸುವುದರ ಹೊರತು ಬೇರೆದಾರಿ ಕಾಣಲಿಲ್ಲ.

ಘಿಯಾಸ್ ಬೆಳ್ಳಂಬೆಳಿಗ್ಗೆ ಅಷ್ಟೊಂದು ಆತುರತೆಯಿಂದ ಹೊರಟಿದ್ದು, ಅಸ್ಮತಳಿಗೆ, ಮೆಹರುನ್ನೀಸಾಳಿಗೆ ಕುತೂಹಲ, ಭಯ-ಒಟ್ಟಿಗೆ ಆವರಿಸಿ ಅವನು ಹಿಂತಿರುಗುವುದನ್ನು ಕಾಯುತ್ತಿದ್ದರು.

ಒಳಗೆ ಹೆಜ್ಜೆ ಇಟ್ಟ ಕೂಡಲೇ, ಮೆಹರುನ್ನೀಸಾ ಮೊದಲಿಗೆ ಎದುರಾದಳು. ಮಾತಾಡುವುದಕ್ಕೆ ಮೊದಲು ಒಳಗೆ ಹೋಗಿ ಷರಬತ್ತಿನ ಲೋಟವನ್ನು ಘಿಯಾಸ್ ಮುಂದಿಡುತ್ತಾ,

"ಅಬ್ಬು, ಇಂತಹ ಆತುರದಲ್ಲಿ ಜಹಾಂಪನಾಹ್‌ರನ್ನು ಮತ್ತೆ ಕಾಣಲು ಹೋದದ್ದೇಕೆ? ನಮ್ಮ ಆತಿಥ್ಯ ಮೆಚ್ಚಿಗೆಯಾಗಲಿಲ್ಲವೆಂದೋ, ಇಲ್ಲ ಅಲಿಖುಲಿ ಮತ್ತೆ ಏನಾದರೂ ದುಡುಕು ಕೆಲಸಮಾಡಿ, ಅವರಿಗೆ ಸಿಕ್ಕಿಬಿದ್ದನೇ?"

"ಅದು ಯಾವುದೂ ಇಲ್ಲ ನೀಸಾ. ಜಹಾಂಪನಾಹ್‌ರು ನನ್ನನ್ನು ಒಂದು ದೊಡ್ಡ ಸಮಸ್ಯೆಯಲ್ಲಿ ಸಿಲುಕಿಸಿದ್ದಾರೆ. ಆತಿಥ್ಯದ ವಿಷಯದಲ್ಲಿ ತುಂಬ ಮೆಚ್ಚಿಗೆ ತೋರಿಸಿದ್ದಾರೆ. ಸಮಸ್ಯೆ ನಿನಗೆ ಸಂಬಂಧಪಟ್ಟಿದ್ದೇ."

"ಏನು ನಿಮ್ಮ ಚಿಂತೆಗೆ ಕಾರಣ ನನ್ನ ಸಮಸ್ಯೆಯೇ? ಅಬ್ಬು, ಸಮಸ್ಯೆ ಸೃಷ್ಟಿಸುವಂಥಾದ್ದನ್ನು ನಾನೇನು ಮಾಡಿದೆ?"

"ನೀನೇನೂ ಮಾಡಿಲ್ಲದೆ ಇರಬಹುದು. ನೀನು ಅಲಿಖುಲಿಯನ್ನು ಮದುವೆಯಾದದ್ದೇ

ಸಮಸ್ಯೆ. ಹೇಗಾದರೂ ಅಲಿಖುಲಿಯಿಂದ ನಿನ್ನನ್ನು ಕಿತ್ತುಕೊಳ್ಳುವ ಹುನ್ನಾರವಿದೆ. ಜಹಾಂಪನಾಹ್‌ರು ನಿನ್ನನ್ನು ಮರೆತಿಲ್ಲ. ನಿನ್ನೆಯ ಕಾರ್ಯಕ್ರಮದಲ್ಲಿ ನಿನ್ನನ್ನು ಕಂಡರು. ಗುರುತಿಸಿದರು. ಮರೆತ ನೆನಪುಗಳು ಮರುಕಳಿಸಿದವು. ನಿನ್ನನ್ನು ತನ್ನ ಸಂಗಾತಿಯನ್ನಾಗಿ ಮಾಡಿಕೊಳ್ಳಲೇಬೇಕೆಂಬ ದೃಢ ನಿರ್ಧಾರಕ್ಕೆ ಬಂದು ಬಿಟ್ಟಿದ್ದಾರೆ. ಅಲಿಖುಲಿಯ ಬಗ್ಗೆ ನೂರೆಂಟು ದೂರುಗಳ ಪಟ್ಟಿಯನ್ನು ಹೇಳಿ, ಅವನಿಂದ ನಿನಗೆ ವಿಚ್ಛೇದನ ಕೊಡಿಸಿ, ಮದುವೆಯಾಗಬೇಕೆಂದಿದ್ದಾರೆ. ತೈಮೂರಿ ಕಾನೂನಿನನ್ವಯ ತುರಾ–ಇ–ಚಿಂಗೇಜಿಯ ಮೂಲಕ, ಅವನಿಂದ ಅವನ ಹೆಂಡತಿಯನ್ನು ವಿವಾಹ ಮಾಡಿಕೊಡಲು ಕೇಳುವುದಕ್ಕೆ ಅವಕಾಶವಿದೆ. ಜಹಾಂಪನಾಹ್‌ರು ಆ ಕಾನೂನಿನ ರಕ್ಷಣೆ ಪಡೆಯಲಿದ್ದಾರೆ."

"ಅವರು ಯಾವುದರ ರಕ್ಷಣೆಯನ್ನಾದರೂ ಪಡೆಯಲಿ. ನನ್ನ ಗಂಡ ಅದಕ್ಕೆಲ್ಲ ಒಪ್ಪುವುದಿಲ್ಲ."

"ಗಂಡ ಒಪ್ಪುವುದಿರಲಿ, ಈ ವಿಷಯದಲ್ಲಿ ನಿನ್ನ ಒಪ್ಪಿಗೆಯಿದೆಯೇನು?"

"ಅಬ್ಬು ನಾನೇನನ್ನೂ ಹೇಳಲಾರೆ" ಎಂದಷ್ಟೇ ಹೇಳಿ ಸುಮ್ಮನಾದಳು. ಘಿಯಾಸ್‌ಗೆ ಆ ಒಂದೇ ಒಂದು ವಾಕ್ಯ ಅವಳ ಆಂತರ್ಯದಲ್ಲಿ ಏನಿರಬಹುದೆಂಬುದನ್ನು ಊಹಿಸಲು ಸಾಧ್ಯವಾಯಿತು. ಇಂದಿಗೂ ಅವಳು ಸಲೀಂ ಉರುಫ್ ಜಹಾಂಗೀರ್‌ನನ್ನು ಅಪಾರವಾಗಿ ಪ್ರೀತಿಸುತ್ತಿದ್ದಾಳೆ. ಆದರೆ ಪರಿಸ್ಥಿತಿಗಳು ಅವಳ ವಿರುದ್ಧ ಸೃಷ್ಟಿಯಾಗಿ ತನ್ನ ಆಸೆಯನ್ನು ಚಿವುಟಿ ಹಾಕಿ ಒಲ್ಲದ ಮನಸ್ಸಿನಿಂದಲೇ ಬಾದಶಾಹ್ ಅಕ್ಬರ್ ಮತ್ತು ತಂದೆ ತಾಯಿಗಳ ಒತ್ತಾಯವನ್ನು ನಿರಾಕರಿಸಲಾರದೆ, ಕುಟುಂಬ ಗೌರವ, ಸಾಮಾಜಿಕ ಪ್ರತಿಷ್ಠೆಗಳನ್ನು ಉಳಿಸಿಕೊಳ್ಳುವುದಕ್ಕಾಗಿ ಅಲಿಖುಲಿಯನ್ನು ಮದುವೆಯಾದಳು. ಇನ್ನೊಂದು ರೀತಿಯಿಂದ ಹೇಳುವುದಾದರೆ, ಬದುಕಿನೊಂದಿಗೆ ರಾಜಿ ಮಾಡಿಕೊಂಡಳು. ಅಲಿಖುಲಿಯ ದರ್ಪ, ಯಜಮಾನಶಾಹಿ ನಡವಳಿಕೆ, ಗಂಡ ಎಂಬ ಅಧಿಕಾರ, ಮಕ್ಕಳಾಗಲಿಲ್ಲವೆಂಬ ಅಸಮಾಧಾನ, ಬರಬರುತ್ತಾ ಹೆಚ್ಚಿದ ದಬ್ಬಾಳಿಕೆ – ಎಲ್ಲವನ್ನು ಸಹಿಸಿಕೊಂಡು ತನ್ನ ಪಾಡಿಗೆ ತಾನಿದ್ದುಬಿಟ್ಟಳು. ಗಂಡನ ಕೆಲಸಗಳಲ್ಲಿಯೂ ಸಹಕರಿಸಿದಳು.

ಈಗ ಅವಳು ಕೇಳದೆಯೇ ಅದೃಷ್ಟದ ಬಾಗಿಲು ತೆರೆದುಕೊಂಡಿದೆ. ಒಳಗೆ ಪ್ರವೇಶಿಸಬೇಕು. ಆದರೂ ಯಾವ ನಿರ್ಧಾರವನ್ನೂ ತೆಗೆದುಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಅವಳಿಗೂ ಮನಸ್ಸಿನಾಳದಲ್ಲಿ, ಅವನ ಸುಂದರ ಮುಖ, ರಸಿಕತೆ, ಕವಿಹೃದಯ, ಮೆಲುಮಾತು–ನೆನಪುಗಳಾಗಿ ಪ್ರತಿಫಲಿಸುತ್ತಿವೆ. ಎಲ್ಲಕ್ಕಿಂತ ಅವನ ಮಾದಕ ನಗೆ, ನಿಷ್ಕಲ್ಮಶ ಪ್ರೀತಿ ಸಂಪೂರ್ಣವಾಗಿ ಅವನ ವಶವರ್ತಿಯಾಗುವಂತೆ ಮಾಡಿಬಿಟ್ಟಿತ್ತು. ಮನಸ್ಸಿನ ಮೂಲೆಯಲ್ಲಿ, ಅಲಿಖುಲಿ ಈ ವಿಚ್ಛೇದನಕ್ಕೆ ಒಪ್ಪಿಬಿಟ್ಟರೆ!.... ತನ್ನ ಬದುಕೇ ಬಂಗಾರವಾಗಿ ಬಿಡುತ್ತದೆ. ಬಾಲ್ಯದ ತನ್ನ ಕನಸುಗಳು ತನ್ನ ಮುಂದೆ ಸಾಕ್ಷಾತ್ಕರಿಸಿ ನಿಲ್ಲುತ್ತವೆ ಎಂದೆಲ್ಲ ಯೋಚಿಸುತ್ತಿದ್ದಳು.

ಎಲ್ಲವೂ ಎಲ್ಲರೂ ಬಯಸಿದಂತೆ ಆಗುವುದಿಲ್ಲ. ಮೆಹರುನ್ನೀಸಾಳೂ ಸೇರಿದಂತೆ, ಕುಟುಂಬದವರೆಲ್ಲರೂ ಜಹಾಂಗೀರನ ಕುಟುಂಬ ಸಂಬಂಧಿಗಳಾಗಬೇಕೆಂದೇ ಬಯಸಿದರೂ, ಸಮಾಜದ ಕಣ್ಣಲ್ಲಿ, ಸಾಮಾಜಿಕ ಸಂಪ್ರದಾಯ, ಕಟ್ಟುಪಾಡುಗಳಿಗೆ ಬದ್ಧರಾಗಿರಬೇಕಾದ್ದು

ಧರ್ಮ ಎಂದು ಭಾವಿಸುತ್ತಿದ್ದುದರಿಂದ ತೀರ್ಮಾನ ತೆಗೆದುಕೊಳ್ಳುವುದು ಅವರಿಗೆ ದೊಡ್ಡ ಸವಾಲಾಗಿತ್ತು. ಮೆಹರುನ್ನೀಸಾಳನ್ನು, ಹೆಣ್ಣು ಮಗಳೆಂದು ನಿರ್ಬಂಧಿಸದೆ, ಹಕ್ಕುಗಳಿಂದ ವಂಚಿಸದೆ, ಸಾಕಷ್ಟು ಸ್ವಾತಂತ್ರ್ಯವನ್ನು ಕೊಡುತ್ತಲೇ, ಸಾಹಿತ್ಯ, ಸಂಗೀತ, ಕಲೆ, ಧರ್ಮಶಾಸ್ತ್ರಗಳ ಕಲಿಕೆಯನ್ನು ತಪ್ಪಿಸಲಿಲ್ಲ. ಮದುವೆಯಾದ ಮೇಲೆ ಹೆಣ್ಣಿಗೆ ಗಂಡನ ಮನೆಯೇ ಶಾಶ್ವತ ನೆಲೆ. ಹಾಗೆಂದೇ ತೀರ್ಮಾನವನ್ನು ಅವಳಿಗೆ, ಅವಳ ಗಂಡನಿಗೇ ಬಿಟ್ಟುಬಿಟ್ಟ. ಅಪ್ಪನ ಮಾರ್ಗದರ್ಶನದಲ್ಲಿ ದೊಡ್ಡವಳಾದವಳಿಗೆ, ಗಂಡನ ಇಚ್ಛೆಯಂತೆ ನಡೆಯಬೇಕೆಂದು ನಿರ್ಧಾರ ಮಾಡಿದಳು. ತಾನು ಬರ್ದವಾನಿಗೆ ಹೋದಲ್ಲದೆ ಸಮಸ್ಯೆಗೆ ಪರಿಹಾರ ಸಾಧ್ಯವಿಲ್ಲ ಎಂದು ಯೋಚಿಸಿದಳು.

ಘಿಯಾಸ್, ತನ್ನ ಮತ್ತು ಜಹಾಂಗೀರ್ ನಡುವೆ ನಡೆದ ಮಾತುಕತೆಗಳನ್ನು ವಿಶದವಾಗಿ ವಿವರಿಸಿ, ಬರೆದು, ಬರ್ದವಾನಿಗೆ ಹೊರಟು ನಿಂತಿದ್ದ ಮಗಳ ಕೈಲಿ ಅಲಿಖುಲಿಗೆ ಕೊಟ್ಟು ಕಳಿಸಿದ. ಆದರೆ ಅವನಿಂದ ಬರಬಹುದಾದ ಉತ್ತರವನ್ನೂ ಅರಿತಿದ್ದ. ಖಂಡಿತ ಅಲಿಖುಲಿ ಇದಕ್ಕೆ ಒಪ್ಪುವುದಿಲ್ಲ. ಒಪ್ಪದಿದ್ದರೆ, ಜಹಾಂಗೀರನಿಗೆ ಸಿಟ್ಟು ಬಂದು ತಮ್ಮ ಕುಟುಂಬವನ್ನೆಲ್ಲಾ ಹೇಗೆ ಶಿಕ್ಷಿಸುತ್ತಾನೋ ಎಂದು ಹೆದರಿಕೆಯಿಂದಲೇ ಲೆಕ್ಕಾಚಾರ ಹಾಕುತ್ತಿದ್ದ. ಜೊತೆಗೆ, ತಮ್ಮ ಸೇವೆ, ಪ್ರಾಮಾಣಿಕತೆಗಳಿಂದ ಸಂತೃಪ್ತನಾಗಿರುವುದರಿಂದ ಸದ್ಯಕ್ಕೆ ಯಾವುದೇ ರೀತಿಯ ತೊಂದರೆ ಕೊಡಲಾರ ಎನ್ನುವ ಭರವಸೆಯನ್ನೂ ಇಟ್ಟುಕೊಂಡಿದ್ದ. ಹೇಳಬೇಕಾದ್ದನ್ನೆಲ್ಲ ಬಹಳ ಜಾಣತನದಿಂದ ಮತ್ತು ರಾಜನೀತಿ ತಂತ್ರಗಳಿಂದ ಮನಮುಟ್ಟುವ ಹಾಗೆ ಬರೆದಿದ್ದ. ಆದರೆ ಅಳಿಯನ ಮುಂಗೋಪ, ಉದ್ಧಟತನಗಳ ಪರಿಚಯವಿದ್ದವನಿಗೆ ಯಾವುದೇ ಭರವಸೆ ಇರಲಿಲ್ಲ. ಮಾಡಬೇಕಾದ ಪ್ರಯತ್ನವನ್ನೇನೋ ಮಾಡಿದ.

ಮೆಹರುನ್ನೀಸಾ ಮಗಳೊಂದಿಗೆ ಬರ್ದವಾನ್ ತಲುಪಿದಳು. ಮನೆ ಹತ್ತಿರ ಹೋದಾಗ ಒಂದಷ್ಟು ಮಂದಿ ಗುಲಾಮಿಸೇವಕರು, ಹೆಣ್ಣಾಳು ಫಿರ್‌ದೌಸ್, ಅಹಮದ್ ಎಂಬ ಸೇವಕ ಮಾತ್ರವೆ ಇದ್ದರು. ಅಹಮದ್ ಓಡಿ ಬಂದು ಅವಳ ಸಾಮಾನು ಸರಂಜಾಮುಗಳನ್ನು ತೆಗೆದುಕೊಂಡು ಒಳ ನಡೆದ. ಒಂದು ಕೂಗು ಹಾಕಿ ಫಿರ್‌ದೌಸ್‌ಳನ್ನು ಕೂಗಿ ಕರೆದಳು. ಓಡಿ ಬರುತ್ತಲೇ.

"ಬೇಗಂ ಸಾಹಿಬಾ. ಈಗ ಬಂದಿರೇನು? ಪ್ರಯಾಣ ಹೇಗಿತ್ತು?"

"ಚೆನ್ನಾಗಿಯೇ ಇತ್ತು ಫಿರ್‌ದೌಸ್. ಮಾಲಿಕ್ ಎಲ್ಲಿದ್ದಾರೆ? ಮನೆಯಲ್ಲಂತೂ ಇದ್ದಿರಲಾರರು."

"ಹೌದು ಸಾಹಿಬಾ. ಅವರು ಹೋಗಿ ಈಗಾಗಲೇ ಹದಿನೈದು ದಿವಸವಾಯಿತು."

"ಹೂಂ ಸರಿ ಹೋಗು. ಲಾಡ್ಲಿಯನ್ನು ಜೊತೆಗೆ ಕರೆದುಕೊಂಡು ಹೋಗು. ಅವಳಿಗೆ ತುಂಬ ದಣಿವಾಗಿದೆ. ನೋಡಿಕೋ."

"ಆಗಲಿ ಸಾಹಿಬಾ" ಎಂದದ್ದೇ ಲಾಡ್ಲಿಯನ್ನು ಜೊತೆಯಲ್ಲಿ ಕರೆದೊಯ್ದಳು. ಎಂದಿನಂತೆ ಅಲಿಖುಲಿಯ ನಿರ್ಲಕ್ಷ್ಯ ತಾತ್ಸಾರಗಳು ಅವಳಿಗೆ ಬೇಸರವುಂಟುಮಾಡಿತು. ತಾನು ಬರುವ ವಿಷಯವನ್ನು ಮೊದಲೇ ತಿಳಿಸಿದ್ದಳು. ಆದರೂ ತಾನು ಬಂದಾಗ, ಅವನು ಬಂದು ಎದುರುಗೊಳ್ಳದೆ ಇದ್ದದ್ದು ಮಾತ್ರ ಅವಳಿಗೆ ನೋವೆನಿಸಿತು.

ಇಂಥವನನ್ನು ತನ್ನ ಜೊತೆಗೂಡಿಸಿದ್ದಕ್ಕಾಗಿ ಯಾರನ್ನು ದೂರುವುದು. ಎಂಥ ವ್ಯತ್ಯಾಸ, ಬಾದಶಾಹ್ ಜಹಾಂಗೀರನೆಲ್ಲಿ? ಈ ಒರಟು ಸೈನಿಕ ಅಲಿಖುಲಿಯೆಲ್ಲಿ? ಕ್ಷಣ ಕ್ಷಣದ ಅಗಲಿಕೆಯನ್ನು ಸಹಿಸಲಾರದ ಮನಃಸ್ಥಿತಿ ಜಹಾಂಗೀರನದು. ಆದರೇನು ಮಾಡುವುದು ಎಲ್ಲವೂ ಖುದಾನ ಕರತೂತ್ ಎಂದು ಯೋಚಿಸುತ್ತ ತನ್ನ ಕೋಣೆಯತ್ತ ನಡೆದಳು.

ದಣಿವಾರಿಸಿಕೊಂಡು, ಒಂದಷ್ಟು ಹೊಟ್ಟೆಗೆ ಹಾಕಿಕೊಂಡು, ಗಂಡ ಬರಬಹುದೇನೋ ಎಂದು ಎದುರು ನೋಡುತ್ತಾ ಕಾದಳು. ಮಂಚದಲ್ಲಿ ತನ್ನ ಪಕ್ಕದಲ್ಲಿದ್ದ, ಪತ್ರದ ಪುಟ್ಟ ಚೀಲವನ್ನು ನೋಡಿದಳು. ಅದನ್ನು ಬಿಚ್ಚಿ ಓದುವ ಧೈರ್ಯ ಬರಲಿಲ್ಲ. ಅದರೊಳಗೆ ಇರುವ ಸುದ್ದಿಯ ಸಿಡಿಗುಂಡು ಯಾವಾಗ ಸ್ಫೋಟಿಸುವುದೋ ಎಂದು ಹೆದರುತ್ತಾ ಕುಳಿತಳು. ಆದರೆ ಆದಿನ ಅವನು ಬರಲೇ ಇಲ್ಲ.

ಮರುದಿನ ಬೆಳಿಗ್ಗೆ ಹಿಂತಿರುಗಿದ. ಮೆಹರುನ್ನೀಸಾ ಬಂದಿರುವ ಸುದ್ದಿ ತಿಳಿದು ನೇರವಾಗಿ ಅವಳಿದ್ದ ಮನೆಗೆ ಹೋದ.

ಮೆಹರುನ್ನೀಸಾ ಯೋಚನಾಮಗ್ನಳಾಗಿ ಕುಳಿತಿದ್ದಳು ದಿಢೀರನೆ ಪ್ರವೇಶಿಸಿ,

"ಬೇಗಂ ಯಾವಾಗ ಬಂದಿರಿ? ಬರುವುದಕ್ಕೆ ಮೊದಲು ಒಂದು ಪತ್ರ ಬರೆಯಬಹುದಿತ್ತಲ್ಲ?"

"ನಾಟಕ ಬೇಡ, ನಾನು ಎಷ್ಟೋ ದಿನ ಮೊದಲೇ ನಾನು ಬರುವ ವಿಷಯ ತಿಳಿಸಿದ್ದೆ."

"ಹೌದೇನು? ಬಹುಶಃ ನಾನು ತುಂಬ ಮುಖ್ಯವಾದ ಕೆಲಸಗಳಲ್ಲಿ ತೊಡಗಿದ್ದೆ ಕ್ಷಮಿಸಿ."

"ಇದನ್ನು ನಮ್ಮ ತಂದೆಯವರು ಬರೆದು ಕಳಿಸಿದ್ದಾರೆ" ಎನ್ನುತ್ತಾ ತನ್ನ ಪಕ್ಕದಲ್ಲಿದ್ದ ಚೀಲದಿಂದ ಪತ್ರವನ್ನು ತೆಗೆದು ಕೈಗಿಟ್ಟಳು. ಪತ್ರ ಓದುತ್ತಿದ್ದಂತೆ ಅವನ ಮುಖ ಕೆಂಡವಾಗುತ್ತಿತ್ತು. "ಏನು ಆ ಬದ್ಮಾಷ್ ಬಾದಶಾಹ್‌ಗೆ ನನ್ನ ಹೆಂಡತಿಯನ್ನೇ ಬಿಟ್ಟುಕೊಡಲು ಕೇಳುವಷ್ಟು ಸಾಹಸವೇ? ಅವನು ಕೇಳಿದಾಗ ನೀವೆಲ್ಲರೂ ಖುಷಿ ಪಟ್ಟಿರಬೇಕು. ನೀವು ಹೋಗಿದ್ದು ನಿಶ್ಚಿತಾರ್ಥಕ್ಕೋ ಅಥವಾ ನಿನ್ನ ಮತ್ತು ಅವನ ಹಳೆ ಪ್ರೀತಿಯನ್ನು ಬಲಗೊಳಿಸುವುದಕ್ಕೋ? ಅವನು ಕೇಳಿದರೆ, ನೀವು ಸುಮ್ಮನಿದ್ದಿರಬೇಕಲ್ಲ! "ನನ್ನ ಮಾವ ಘಿಯಾಸ್ ದಿವಾನರು. ನಾನು ಅವರ ಯೋಗ್ಯತೆಗೆ ತಕ್ಕವನಲ್ಲ. ಅದಕ್ಕಾಗಿಯೇ ಈ ಎಲ್ಲ ನಾಟಕ!"

"ದಯವಿಟ್ಟು ಸಿಟ್ಟಾಗಬೇಡಿ. ನಾನು ನಿಮ್ಮ ಹೆಂಡತಿ. ನಿಮ್ಮನ್ನು ಬಿಟ್ಟು ಹೋಗುವುದಾಗಿದ್ದರೆ, ನಿಮ್ಮ ಹಿಂಸೆಯನ್ನೆಲ್ಲ ಸಹಿಸಿಕೊಂಡು ನಿಮ್ಮೊಂದಿಗೆ ಬಾಳುತ್ತಿರಲಿಲ್ಲ. ಕೇಳುವವರು ಕೇಳಿದರೆ ಬಿಡಿ. ಅದನ್ಯಾಕೆ ನಾವು ಅಷ್ಟೊಂದು ತಲೆಗೆ ಹಚ್ಚಿಕೊಳ್ಳಬೇಕು."

"ಆ ಜಹಾಂಗೀರ ಒಬ್ಬ ಹುಚ್ಚ. ಕೇಳಿದ ಕೂಡಲೇ ಹೆಂಡತಿಯನ್ನು ಒಪ್ಪಿಸಿಬಿಡುತ್ತೇನೆಂದು ಭಾವಿಸಿದ್ದಾನೆ. ನಾನು ಚಿಂಗೇಜಿ ಗಿಂಗೇಜಿ ಇತ್ಯಾದಿ ಕಾನೂನುಗಳಿಗೆ ಹೆದರುವುದಿಲ್ಲ. ಎಷ್ಟು ದಿನ ತಾನೇ ಈ ಬಾದಶಾಹತ್ ಅವನಿಗೆ ಉಳಿದಿರುತ್ತದೆ. ಈ ಸಲ ಖುಸ್ರೋ ಖಂಡಿತವಾಗಿ ಗೆಲ್ಲುತ್ತಾನೆ. ಅವನು ಬಾದಶಾಹ್ ಆಗಲಿ ಆಗ ಅವನಿಗೆ ನಾನೇನೆಂದು ತೋರಿಸುತ್ತೇನೆ."

"ನೋಡಿ ಸುಮ್ಮನೆ ಹಾರಾಡಬೇಡಿ. ನಿಮ್ಮ ಪಿತೂರಿಗಳನ್ನು ನಿಲ್ಲಿಸಿ, ದೇಶದ್ರೋಹದ

ಆಲೋಚನೆಗಳನ್ನು ಬಿಡಿ. ಈಗಾಗಲೇ ಒಮ್ಮೆ ಸಿಕ್ಕಿ ಬಿದ್ದು ಮರಣದಂಡನೆಗೆ ಒಳಗಾಗಬೇಕಾಗಿ ಬಂದರೂ ಬಾದಶಾಹರ ಒಳ್ಳೆ ಮನಸ್ಸು, ನಿಮ್ಮ ಉಪಕಾರ ಸ್ಮರಣೆಗಳು ನಿಮ್ಮನ್ನು ಸಾವಿನಿಂದ ಪಾರು ಮಾಡಿವೆ. ಮತ್ತೊಮ್ಮೆ ಇಂತಹ ಸಾಹಸಕ್ಕೆ ಮುಂದಾಗಬೇಡಿ. ಏನಾದರೂ ಆಗಬಾರದ್ದು ಆದರೆ ನನಗೆ, ಲಾಡ್ಲಿಗೆ ಗತಿಯೇನು? ನಾವೆಲ್ಲಿಗೆ ಹೋಗಬೇಕು ನನಗೇನೂ, ಜಹಾಂಗೀರ ಮೋಹವಿಲ್ಲ, ಮೋಜೂ ಇಲ್ಲ. ನಿಮಗೆ ಮೋಸ ಮಾಡಿ ಅವರೊಂದಿಗೆ ಬಾಳಬೇಕೆಂಬ ಆಸೆಯೂ ಇಲ್ಲ. ಸಮಾಜದಲ್ಲಿ, ಗಂಡನ ಸ್ಥಾನವನ್ನು ಅರಿತವಳು. ನನಗೆ ನೀವು ಬೇಕು. ನಿಮ್ಮೊಂದಿಗೆ ಇರುತ್ತೇನೆ. ಬಾದಶಾಹರ ಸಂದೇಶವನ್ನು ನಿಮಗೆ ತಲುಪಿಸಲೇಬೇಕೆಂಬ ಆದೇಶ ಅದಾಗಿತ್ತು. ಒಂದು ವೇಳೆ, ನಿಮಗೆ ಸಂದೇಶವನ್ನು ತಲುಪಿಸಲಿಲ್ಲವೆಂದಾದರೆ, ಅಬ್ಬು, ಬಾದಶಾಹರ ಆಗ್ರಹಕ್ಕೆ ಗುರಿಯಾಗಬೇಕಾಗುತ್ತದೆ ಎಂದು ಹೆದರಿಯೇ ನಿಮಗೆ ಈ ಪತ್ರ ಬರೆದಿದ್ದಾರೆ. ಅಳಿಯನಿಗೆ ಇಂಥ ವಿಷಯ ಬರೆಯಲು ಅವರೂ ಬಹಳವಾಗಿ ಮುಜುಗರಪಟ್ಟಿದ್ದಾರೆ."

"ಇಷ್ಟು ದೂರ ಕತೆ ಬೆಳೆಯುವುದಕ್ಕೆ ಕಾರಣ ನೀನೇ. ಬಾದಶಾಹನ ಮಗನ ಸಮಾರಂಭವೆಂದಾದ ಮೇಲೆ ಅವನು ಬಂದೇ ಬರುತ್ತಾನೆಂದು ತಿಳಿದಿದ್ದೂ ನೀನಲ್ಲಿಗೆ ಯಾಕೆ ಹೋದೆ? ಹೋದ ಮೇಲೆ ಅವನ ಕಣ್ಣಿಗೆ ಬಿದ್ದದ್ದಾದರೂ ಯಾಕೆ? ನಿನ್ನ ಮಾತುಗಳಲ್ಲಿ ನನಗೆ ನಂಬಿಕೆ ಇಲ್ಲ. ನೀನು ಹೋದ ಉದ್ದೇಶ, ಮತ್ತೊಮ್ಮೆ ನಿನ್ನ ಸೌಂದರ್ಯದತ್ತ ಆಕರ್ಷಿಸಿ, ಹಳೆಯ ಪ್ರೀತಿಯನ್ನು ಪ್ರಚೋದಿಸುವುದೇ ಆಗಿತ್ತು. ಮದುವೆಯ ಸಮಯದಲ್ಲಿ ನಿನ್ನ ಬಗೆಗಿನ ವಿವರಗಳೆಲ್ಲ ತಿಳಿದಿತ್ತು. ನಿಮ್ಮ ಪ್ರೀತಿಯ ಬಗ್ಗೆ ಸಾಕಷ್ಟು ವದಂತಿಗಳು ಹರಿದಾಡಿತ್ತು. ಆದರೂ ನಾನು ಬಾದಶಾಹ್ ಅಕ್ಬರರ ಮಾತಿಗೆ, ನಿನ್ನ ತಂದೆಯ ಪ್ರತಿಷ್ಠಿತ ಸ್ಥಾನಮಾನ, ಗೌರವಗಳಿಗೆ ತಲೆಬಾಗಿ ಮದುವೆಯಾದೆ. ಮದುವೆಯ ನಿಶ್ಚಿತಾರ್ಥದ ಸಂದರ್ಭದಲ್ಲಿ ನಿನ್ನ ಸೌಂದರ್ಯ ನನ್ನನ್ನು ಕಟ್ಟಿಹಾಕಿತ್ತು. ನಿನ್ನ ಹಿಂದಿನ ಕತೆಯನ್ನೆಲ್ಲ ಮರೆತುಹೋದೆ. ಮದುವೆಯಾದ ಮೇಲೆ ಗಂಡನ ಪ್ರೀತಿಯಲ್ಲಿ ಎಲ್ಲವನ್ನೂ ಮರೆತು ನನ್ನೊಂದಿಗೆ ನಿಷ್ಠೆಯಿಂದ ಬಾಳುತ್ತೀ ಎಂದುಕೊಂಡೆ. ನಾನೂ ನಿನಗೆ ಕೊಡಬೇಕಾದ್ದನ್ನೆಲ್ಲ ಕೊಟ್ಟೆ. ದೀರ್ಘಕಾಲ ಮಕ್ಕಳನ್ನು ಕೊಡದಿದ್ದರೂ ಸಹಿಸಿಕೊಂಡೆ. ಕಡೆಗೆ ಮಗುವಾದಾಗ, ನನಗೆ ಉತ್ತರಾಧಿಕಾರಿಯಾಗುವ ಮಗನನ್ನು ಕೊಡುತ್ತೀ ಎಂದುಕೊಂಡೆ. ಆದರೆ ಯಾವ ನಿರೀಕ್ಷೆಯೂ ಫಲಿಸಲಿಲ್ಲ. ಇಷ್ಟಾದರೂ ಇನ್ನೊಂದು ಹೆಣ್ಣನ್ನು ಮದುವೆಯಾಗಲಿಲ್ಲ."

ಒಂದು ಗಂಟೆಯ ಕಾಲ ಗಂಡನ ಉಪದೇಶ. ಎಚ್ಚರಿಕೆಗಳನ್ನು ಕೇಳಿಸಿಕೊಂಡಳು. ಅವನು ಹೇಳಿದ ಮಾತುಗಳಲ್ಲಿ ಸತ್ಯವಿತ್ತು. ಆದರೆ ಮೊದಲ ದಿನಗಳಲ್ಲಿ ತೋರಿದ ಪ್ರೀತಿ ಮುಂದುವರೆಯಲಿಲ್ಲ. ಗಂಡಸೆಂಬ ಪುರುಷಾಹಂಕಾರ ಅವನಲ್ಲಿ ತುಂಬಿಕೊಂಡಿತ್ತು. ಎದುರು ಮಾತಾಡುವ ಹಾಗಿರಲಿಲ್ಲ. ನಿರ್ಲಕ್ಷ್ಯ ದಬ್ಬಾಳಿಕೆಗಳು ಮುಂದುವರೆದಿದ್ದವು.

"ನನ್ನ ಅಳಿಯ ನಿಮ್ಮ ಪ್ರಸ್ತಾವವನ್ನು ಬೆಂಬಲಿಸುವುದಿಲ್ಲ ಜಹಾಂಪನಾಹ್ ಎಂದು ಹೇಳಿಯೂ ಇದ್ದಾರೆ. ಇದರಿಂದ ಬಾದಶಾಹರು ಅವರ ಮೇಲೆ ಸಿಟ್ಟಾಗಿ ಏನು ಅನಾಹುತ ಮಾಡಿಯಾರೋ ಎಂದು ಹೆದರುತ್ತಿದ್ದಾರೆ."

"ಬೇಗಂ ಒಂದು ಮಾತು ಎಚ್ಚರವಿರಲಿ. ಯಾವುದೇ ಕಾರಣಕ್ಕೂ, ನಿನ್ನನ್ನು

ಬಿಟ್ಟುಕೊಡುವುದಿಲ್ಲ. ನೆನಪಿರಲಿ, ನೀನೇನಾದರೂ ಆಸೆ ಇರಿಸಿಕೊಂಡಿದ್ದರೆ, ಮರೆತು ಬಿಡು."

"ನನಗೆ ಅಂಥ ಆಲೋಚನೆಗಳಿಲ್ಲ. ಮತ್ತೊಮ್ಮೆ ಜಹಾಂಪನಾಹ್‌ರಿಗೆ, ಇದು ಸಾಧ್ಯವಿಲ್ಲ ಎಂದು ತಿಳಿಸಿ ಬಿಟ್ಟರೆ ಆಯಿತು. ಅಷ್ಟಕ್ಕೆ ಇಷ್ಟೊಂದು ಸಿಟ್ಟೇಕೆ? ನೀವು ಆತುರದಲ್ಲಿ ಏನೂ ಮಾಡಲು ಹೋಗಬೇಡಿ."

"ಓಹೋ! ಆಗಲೇ ನಿಮಗೆ ಭಯ! ನಿಮ್ಮ ಪ್ರಿಯಕರನಿಗೆ ಏನಾದರೂ ಆದೀತೆಂದು ಹೆದರಿಬಿಟ್ಟಿದ್ದೀರಿ? ಅದು ಸಹಜವೇ ಪ್ರಥಮ ಪ್ರೀತಿಗೇ ಬೆಲೆ ಅಲ್ಲವೇ?" ಎಂದು ವ್ಯಂಗ್ಯವಾಗಿ ನಕ್ಕು ಹೇಳಿದ.

ಮೆಹರುನ್ನೀಸಾಗೆ ನೋವಾಯಿತು. ಸಲೀಂ ಆಗಿ ಪ್ರೀತಿಸಿದ್ದು ನಿಜ. ಅದೊಂದು ಕಳೆದ ಇತಿಹಾಸ. ಆದರೆ ಈಗ ಗಂಡನನ್ನು ಬಿಡಬೇಕೆಂಬ ಆಲೋಚನೆಯೂ ನನಗಿಲ್ಲ. ಸಮಾಜದ ಸಂಪ್ರದಾಯ ನನಗೆ ಗೊತ್ತು. ಇವರೇಕೆ ಇಷ್ಟೊಂದು ಅನುಮಾನ ಪಶುವಾಗಿದ್ದಾರೆ ಎಂಬುದು ಅರ್ಥವಾಗುತ್ತಿಲ್ಲ ಎಂದುಕೊಂಡಳು.

ಮೆಹರುನ್ನೀಸಾ ಮತ್ತು ಅವಳ ತಂದೆತಾಯಿಗಳ ಮುಂದೆ ಈ ಸಮಸ್ಯೆ ಬೆಟ್ಟದ ಹಾಗೆ ನಿಂತಿತ್ತು. ಒಳ ಮನಸ್ಸಿನಲ್ಲಿ ಜಹಾಂಗೀರನನ್ನು ಅಳಿಯನಾಗಿ ಸಂಪಾದಿಸಿಕೊಳ್ಳುವ ಆಸೆಯಿತ್ತು. ಮೆಹರುನ್ನೀಸಾಳೂ ಜಹಾಂಗೀರನ ರಾಣಿಯಾಗಿ, ಅಧಿಕಾರವನ್ನು ಹಿಡಿಯಬೇಕೆಂದು ಬಯಸುತ್ತಿದ್ದಳು. ಆದರೆ ಎಲ್ಲರಿಗೂ ಅಲಿಖುಲಿ ಅಡ್ಡವಾಗಿ ನಿಂತಿದ್ದಾನೆ. ಹಾಗೆಂದು ತಮ್ಮ ಸ್ವಾರ್ಥಕ್ಕಾಗಿ ಅವನಿಗೆ ಹಾನಿ ಉಂಟುಮಾಡಬೇಕೆಂಬ ದುರಾಲೋಚನೆ ಇಲ್ಲ.

ಜಹಾಂಗೀರ್ ತನ್ನಲ್ಲಿರುವ ಅಧಿಕಾರದ ಬಲದಿಂದ ಎಲ್ಲವನ್ನೂ ಪಡೆದು ಕೊಳ್ಳಬಲ್ಲೆನೆಂಬ ಅಹಂಕಾರದಿಂದ, ಮೆಹರುನ್ನೀಸಾ ತನ್ನವಳಾಗಿಬಿಟ್ಟಳೆಂದು ಕನಸು ಕಾಣತೊಡಗಿದ.

ಅಲಿಖುಲಿ, ಹೆಂಡತಿಯನ್ನು ತರಾಟೆಗೆ ತೆಗೆದುಕೊಂಡು ಹೊರಟು ಬಿಟ್ಟ. ಅವನು ತಿಳಿದಂತೆ, ಖುಸ್ರೋನ ಪರವಾಗಿ ನಿಂತು, ಗೆದ್ದು, ಅವನನ್ನು ಬಾದಶಾಹ್ ಮಾಡಿ ಗದ್ದುಗೆಯ ಮೇಲೆ ಕೂರಿಸುವುದೊಂದೇ ದಾರಿ. ಅದರ ಸಿದ್ಧತೆಗೆ ಟೊಂಕ ಕಟ್ಟಿ ನಿಂತ. ರಾಜಾ ಮಾನ್‌ಸಿಂಗ್, ಖಾನ್-ಇ- ಖಾನನ್, ಅಬ್ದುರ್ ರಹೀಮ್, ಹುಸೇನ್‌ಬೇಗ್ ಮೊದಲಾದವರನ್ನು ಭೇಟಿಯಾಗಲು ಹೊರಟ. ಶತಾಯಗತಾಯ ಈ ಬಾರಿ ಖುಸ್ರೋನನ್ನು ಗೆಲ್ಲಿಸಿ, ಜಹಾಂಗೀರನ ಅಹಂಕಾರ ಮುರಿಯಲೇಬೇಕೆಂಬ ಭೀಷ್ಮ ಪ್ರತಿಜ್ಞೆ ಮಾಡಿದ.

ಅಲಿಖುಲಿಯ ಮುಖಚರ್ಯೆಯಿಂದಲೇ ಅಲಿಖುಲಿ ಯಾವುದೋ ಅನಾಹುತಕ್ಕೆ ಮುಂದಾಗಿದ್ದಾನೆ ಎಂಬುದನ್ನು ಊಹಿಸಿ, ಮತ್ತೊಮ್ಮೆ ಅವನಿಗೆ ಬುದ್ಧಿ ಹೇಳಿದಳು. ಆದರೆ ಅವನು ಮಾತ್ರ ಅಂಗುಲದಷ್ಟೂ ಕದಲಲಿಲ್ಲ. "ಹೆಂಗಸು, ಹೆಂಗಸಾಗಿ ಬಿದ್ದಿರು. ರಾಜಕೀಯ ವಿಷಯಗಳು ನಿನಗೆ ಸೇರಿದ್ದಲ್ಲ. ನಿನ್ನ ಪ್ರಿಯತಮನನ್ನು ಕಾಣುವುದು ಮುಂದೆ ಸಾಧ್ಯವಾಗಲಾರದು. ಈಗ ನನ್ನ ದಾರಿಗೆ ಅಡ್ಡಬರಬೇಡ" ಎಂದು ಅವಳನ್ನು ದೂಡಿ ಹೊರಟು ಹೋದ.

ಬಂಗಾಳದಲ್ಲಿನ ಗುಪ್ತಚರರಿಂದ ಅಲಿಖುಲಿಯ ಪ್ರಯತ್ನಗಳು ಏನೆಂಬುದು ತಿಳಿಯಿತು. ಕೂಡಲೇ ಸೈನ್ಯವೊಂದನ್ನು ಸಿದ್ಧಪಡಿಸಿ ಬಂಗಾಳದ ಕಡೆಗೆ ಕಳಿಸಿಕೊಟ್ಟ.

ಬಂಗಾಳದ ರಾಜಾ ಮಾನ್‌ಸಿಂಗ್ ಗವರ್ನರ್ ಪದವಿಯನ್ನು ತೆರವುಗೊಳಿಸಿದ್ದರಿಂದ ಜಹಾಂಗೀರನ ದಾಯಾದಿ ಸೋದರ, ಗೆಳೆಯ ಖುತುಬುದ್ದೀನ್ ಕೋಕಾನನ್ನು ಆ ಜಾಗಕ್ಕೆ ಕಳಿಸಿಕೊಟ್ಟಿದ್ದ. ಅವನಿಗೆ ಕೂಡಲೇ ಅಲಿಖುಲಿಯನ್ನು ವಿಚಾರಣೆ ಮಾಡಲು ಲಾಹೋರಿಗೆ ಕಳಿಸಿಕೊಡಬೇಕೆಂಬ ಆದೇಶವೊಂದನ್ನು ಕಳಿಸಿದ.

ಮುಹಮ್ಮದ್ ಷರೀಫ್, ಮಹಬ್ಬತ್ ಖಾನ್ ಇಬ್ಬರಿಗೂ ಮೆಹರುನ್ನೀಸಾಳ ವಿಚಾರದಲ್ಲಿ ಜಹಾಂಗೀರ್ ತೆಗೆದುಕೊಂಡ ನಿರ್ಣಯ ಅವರವರದೇ ಆದ ಕಾರಣಗಳಿಂದ ಸರಿಯಲ್ಲವೆನಿಸಿ, ಅದನ್ನು ಕೈ ಬಿಡುವಂತೆ ಹೇಳಿದರು. ಅವರ ಉದ್ದೇಶದಲ್ಲಿ ಅಲಿಖುಲಿಯನ್ನು ರಕ್ಷಿಸಬೇಕೆಂದೇನೂ ಇಲ್ಲ. ಅವನನ್ನು ಕಂಡರೆ ಇಬ್ಬರಿಗೂ ಆಗುತ್ತಿರಲಿಲ್ಲ.

ಜಹಾಂಗೀರನಿಗೆ ಈ ಬೆಳವಣಿಗೆಗಳಿಂದ ಭಯವಾಗಲೀ, ನಿರಾಶೆಯಾಗಲೀ, ದುಃಖವಾಗಲೀ ಆಗಲಿಲ್ಲ. ಬದಲಾಗಿ ತುಂಬ ಸಂತೋಷವೇ ಆಯಿತು. ಅಲಿಖುಲಿಯನ್ನು ತನ್ನ ದಾರಿಯಿಂದ ತೊಲಗಿಸಲು ಒಳ್ಳೆಯ ಅವಕಾಶವೇ ಬಂದಿದೆ ಎಂದುಕೊಂಡ. ಖುತುಬುದ್ದೀನ್ ಕೋಕಾ ಕೂಡಾ ಅಲಿಖುಲಿಯನ್ನು ದ್ವೇಷಿಸುತ್ತಿದ್ದ. ಅವನೂ ಅವನನ್ನು ಮುಗಿಸುವ ಅವಕಾಶಕ್ಕಾಗಿ ಎದುರುನೋಡುತ್ತಿದ್ದ. ಈಗ ಅವನಿಗೆ ಅಲಿಖುಲಿಯ ಚಟುವಟಿಕೆಗಳೇನೆಂಬುದನ್ನು ತಿಳಿದುಕೊಳ್ಳಬೇಕಿತ್ತು. ಅಲ್ಲಿಯೇ ವಿಚಾರಣೆ ನಡೆಸಿ ತಿಳಿಸುವುದು. ಗುಪ್ತಚರರಿಂದ ತಿಳಿದು ಬಂದ ಸೇನಾಕಾರ್ಯಾಚರಣೆಯ ವಿಷಯ ನಿಜವಾಗಿದ್ದಲ್ಲಿ ಮತ್ತು ಅವನು ಕಾರಣವನ್ನು ಸರಿಯಾಗಿ ವಿವರಿಸದೆ ಉದ್ಧಟತನದಿಂದ ವರ್ತಿಸಿದ ಪಕ್ಷದಲ್ಲಿ ಸ್ವತಃ ತಾನೇ ಏನು ಮಾಡಬೇಕೆಂಬುದನ್ನು ನಿರ್ಧಾರಮಾಡಿ ಅವನನ್ನು ಮುಗಿಸಿಬಿಡಲು ಇಲ್ಲವೆ ತನ್ನಲ್ಲಿಗೆ ಕಳಿಸಿಕೊಡಲು ಪತ್ರ ಬರೆದು ಕಳಿಸಿದ. ಎಲ್ಲವೂ ತನ್ನ ಪ್ರಯೋಜನಕ್ಕಾಗಿಯೇ ನಡೆಯುತ್ತಿವೆ ಎಂದುಕೊಂಡು ಸಮಾಧಾನದ ನಿಟ್ಟುಸಿರು ಬಿಟ್ಟ. ಅವನ ಕತೆ ಮುಗಿಸಲು ಸರಿಯಾದ ಅವಕಾಶ. ಬಂಡಾಯ ಮಾಡಿದನೆಂಬ ಆರೋಪದ ಮೇಲೆ ಅವನನ್ನು ಶಿಕ್ಷೆಗೆ ಒಳಪಡಿಸಿದರೆ, ಪ್ರಜೆಗಳಿಗೆ, ಮೆಹರುನ್ನೀಸಾಳನ್ನು ಮದುವೆಯಾದದ್ದಕ್ಕೆ ಒಳ್ಳೆಯ ಸಮರ್ಥನೆಯಾಗುತ್ತದೆ. ನಾನು ಬಯಸಿದ ಮೆಹರುನ್ನೀಸಾ ಸುಲಭವಾಗಿ ನನ್ನ ಕೈ ಸೇರುತ್ತಾಳೆ. ನನ್ನಷ್ಟೇ ಪ್ರೀತಿ, ಅವಳಿಗೂ ನನ್ನ ಮೇಲಿದೆ ಎಂದು ಆಶಾಗೋಪುರದಲ್ಲಿ ವಿಹರಿಸತೊಡಗಿದ.

ಜಹಾಂಗೀರನ ಆದೇಶದಂತೆ, ಖುತುಬುದ್ದೀನ್ ಕೋಕಾ ಅಲಿಖುಲಿಗೆ ಬಾದಶಾಹರನ್ನು ಹೋಗಿ ಕಾಣಬೇಕೆಂದು ಸುದ್ದಿ ಕಳಿಸಿದ. ಆದರೆ ಅಲಿಖುಲಿಗೆ ಯಾವುದೂ ಲೆಕ್ಕಕ್ಕಿಲ್ಲ. ಅದೂ ಜಹಾಂಗೀರ್ ಈಗ ಅವನಿಗೆ ಬದ್ಧ ಶತ್ರುವಾಗಿದ್ದ. ಅವನ ಆದೇಶಕ್ಕೆ ತಲೆ ಬಾಗುವುದೆಂದರೆ ತನಗೆ ಅವಮಾನ. ತನ್ನ ಧೈರ್ಯ, ಸಾಹಸಗಳಿಂದ ಯಾರ್ಯಾರಿಗೆ ಬುದ್ಧಿ ಕಲಿಸಬೇಕೋ ಕಲಿಸುತ್ತೇನೆಂದು ಮೀಸೆ ತಿರುವಿಕೊಂಡ. ಬಾದಶಾಹರನ್ನು ಕಾಣಲು ನಿರಾಕರಿಸಿದ ವಿಷಯ ತಿಳಿದ ಮೇಲೆ ಖುತುಬುದ್ದೀನ್ ಕೋಕಾ, ತನ್ನ ಸೇನಾಪಡೆಯ ತುಕಡಿಯೊಂದನ್ನು ಬರ್ದ್ವಾನದ ಕಡೆಗೆ ತೆಗೆದುಕೊಂಡು ಹೋದ. ಸೇನೆ ಬರುತ್ತಿರುವ ಸುದ್ದಿ ಅಲಿಖುಲಿಗೆ ತನ್ನ ಸೇವಕನಿಂದ ದೊರೆಯಿತು. ನಿರಾಳವಾಗಿ ನಿದ್ರಿಸುತ್ತಿದ್ದ ಅಲಿಖುಲಿಯನ್ನು ಸೇವಕ, 'ಹುಜೂರ್, ಹುಜೂರ್' ಎಂದು

ಏದುಸಿರುಬಿಡುತ್ತಾ ಕೂಗಿ ಕರೆದು ಎಬ್ಬಿಸಿದ. ಸಕ್ಕರೆ ನಿದ್ದೆಯಲ್ಲಿ ಬೇಗಂ ಮೆಹರುನ್ನೀಸಾಳೊಂದಿಗೆ ಮಲಗಿದ್ದವನು ಗಾಬರಿಯಲ್ಲಿ ಎದ್ದುಬಂದ.

"ಹುಜೂರ್, ಖುತುಬುದ್ದೀನ್ ಕೋಕಾರ ಸೈನ್ಯ ಈ ಕಡೆ ಧಾವಿಸುತ್ತಿದೆ" ಎಂದ.

"ಕೋಕಾನ ಸೈನ್ಯವೇ?... ನನಗೆ ಗೊತ್ತು. ಅವನ ಆದೇಶವನ್ನು ನಿರಾಕರಿಸಿದ್ದಕ್ಕಾಗಿ ಈ ಆಕ್ರಮಣ. ಇರಲಿ ಅವರಿಗೆ ಬುದ್ಧಿ ಕಲಿಸಲು ಇದು ಒಳ್ಳೆಯ ಅವಕಾಶ. ನನ್ನ ಕಡೆಯವರಿಗೆಲ್ಲ ಈ ವಿಷಯವನ್ನು ರವಾನಿಸಿ, ತಮ್ಮ ಸೈನ್ಯದೊಂದಿಗೆ ಬರುವಂತೆ ತಿಳಿಸು. ಈಗ ನೀನು ದೌಡಾಯಿಸು" ಎಂದು ಹೇಳುತ್ತಿರುವಷ್ಟರಲ್ಲಿಯೇ ಅಂಗಳದಲ್ಲಿ ಚಲನವಲನ ಶುರುವಾಯಿತು. ಕತ್ತಲಲ್ಲಿ ಅಷ್ಟಾಗಿ, ಏನೆಂಬುದು ಯಾರೆಂಬುದು ತಿಳಿಯಲಿಲ್ಲ. ಅವನ ಸೇವಕರೆಲ್ಲರೂ ಈ ಗಲಭೆಯಿಂದ ಎಚ್ಚರಗೊಂಡು ಪಂಜುಗಳನ್ನು ಹಚ್ಚಿದರು. ನೋಡಿದರೆ, ಕೋಕಾನ ಸೈನ್ಯ ಬಿಚ್ಚುಗತ್ತಿಗಳಿಂದ ಅಲಿಖುಲಿಯ ಮೇಲೆ ಆಕ್ರಮಣ ಮಾಡಲು ಸಿದ್ಧವಾಗಿ, ಕೋಕಾನ ಆದೇಶಕ್ಕಾಗಿ ಕಾಯುತ್ತ ನಿಂತಿದೆ. ಎಷ್ಟೇ ಧೈರ್ಯ ತಂದುಕೊಂಡರೂ ಅನಿರೀಕ್ಷಿತ ಆಕ್ರಮಣ ಅವನಲ್ಲಿ ಭಯ ಹುಟ್ಟಿಸಿತು. ಆದರೆ ಆ ಭಯ ತನಗಾಗಿ ಅಲ್ಲ. ಮೆಹರುನ್ನೀಸಾ, ಲಾಡ್ಲಿ ಉಳಿದ ಸೇವಕರು, ಇವರೆಲ್ಲರ ಪ್ರಾಣ ಅಪಾಯದಲ್ಲಿದೆ ಎಂದು ಹೆದರಿದ. ಒಳಗೆ ಓಡಿ ಮಲಗಿದ್ದ ಮೆಹರುನ್ನೀಸಾಳನ್ನು, ಅವಳ ಮನೆ ಸೇರಿಕೊಳ್ಳಲು ಆದೇಶಿಸಿದ. ಮೆಹರುನ್ನೀಸಾಗೆ ಯಾವುದೋ ಭಯಂಕರ ಅಪಾಯ ಕಾದಿದೆ ಎನಿಸಿತು. ಅಷ್ಟರಲ್ಲಿ ಲಾಡ್ಲಿಯನ್ನು ಕರೆದುಕೊಂಡು ಬಂದ ಫಿರ್‌ದೌಸ್, 'ಬೇಗಂ ಸಾಹಿಬಾ, ಖುತುಬುದ್ದೀನ್ ಕೋಕಾರ ಸೈನ್ಯ ಆಕ್ರಮಣ ಮಾಡಿದೆ. ಬೇಗ ಇಲ್ಲಿಂದ ತಪ್ಪಿಸಿಕೊಳ್ಳೋಣ ಬನ್ನಿ ಎಂದು ಅವಳನ್ನೂ ಜೊತೆಮಾಡಿಕೊಂಡು ಮರೆಯಾದರು.

ಆದರೆ ಮೆಹರುನ್ನೀಸಾ ಹೋಗುವುದಕ್ಕೆ ಮೊದಲು ತನ್ನ ಗಂಡನಿಗೆ ಬುದ್ಧಿ ಹೇಳುವುದನ್ನು ಮರೆಯಲಿಲ್ಲ. ಯಾವುದೇ ದುಡುಕು ಸಾಹಸಕ್ಕೆ ಮುಂದಾಗಬೇಡಿ. ವಿವೇಕದಿಂದ ನಡೆದುಕೊಳ್ಳಿ. ಗವರ್ನರ್ ಜೊತೆ ಮಾತನಾಡಿ ವಿಷಯ ಏನೆಂದು ತಿಳಿದುಕೊಳ್ಳಿ. ಆತುರದಲ್ಲಿ ಪ್ರಾಣಹಾನಿ, ರಕ್ತಪಾತಗಳಿಗೆ ಅವಕಾಶ ಮಾಡಿಕೊಡಬೇಡಿ ಎಂದು ಅಂಗಲಾಚಿ ಬೇಡಿಕೊಂಡಳು. ಅಂತಹ ತುರ್ತು ಸಮಯದಲ್ಲೂ, 'ತನಗೆ ಯಾರ ಮೇಲೂ ದ್ವೇಷವಿಲ್ಲ. ಆದರೆ ಅವಳ ಪ್ರಿಯತಮ ತನಗೆ ಅಡ್ಡವಾಗಿದ್ದಾನೆ. ಅವನ ಕತೆ ನೋಡಿಕೊಳ್ಳುತ್ತೇನೆ. ನನಗೆ ಏನೂ ಆಗುವುದಿಲ್ಲ. ಇನ್ನೂ ಬಹಳ ವರ್ಷ ಅವಳ ಗಂಡನಾಗಿಯೇ ಮುಂದುವರೆಯುತ್ತೇನೆ' ಎಂದು ವ್ಯಂಗ್ಯವಾಗಿ ಮಾತನಾಡಿ ಅವಳ ಮನಸ್ಸನ್ನು ಚುಚ್ಚಿದ.

ಅಷ್ಟರಲ್ಲಿ ಖುತುಬುದ್ದೀನ್ ಕೋಕಾ ಮತ್ತು ಇನ್ನೊಂದಷ್ಟು ಮಂದಿ ಬಿಚ್ಚುಗತ್ತಿಗಳೊಡನೆ ಅಲಿಖುಲಿಯ ಕಡೆಗೆ ಬಂದರು. ಅಲಿಖುಲಿ ಖುತುಬುದ್ದೀನ್‌ನನ್ನು ಗುರುತಿಸಿದ.

ಕೋಕಾನೇ ಒಂದೆರಡು ಹೆಜ್ಜೆ ಮುಂದೆ ಬಂದು. ತಾನು ಬಾದಶಾಹರ ಪರವಾಗಿ ಶಾಂತಿ ಸಂಧಾನಕ್ಕಾಗಿ ಬಂದಿರುವುದನ್ನು ತಿಳಿಸಿದ. ಆದರೆ ಶಾಂತಿ ಸಂಧಾನಕ್ಕಾಗಿ ಬರುವವರು ಸೈನ್ಯದೊಂದಿಗೆ ಬರುವರೇ ಎಂದು ಯೋಚಿಸಿದ. ಕೋಕಾನ ಉದ್ದೇಶ

ಅರ್ಥವಾಯಿತು. ಶಾಂತಿಯ ನೆಪದಲ್ಲಿ ನಿರಾಯುಧನನ್ನಾಗಿ ಮಾಡಿ, ನಂತರ ತನ್ನ ಮೇಲೆ ಎರಗುವ ಹುನ್ನಾರ ಎಂದು ಅರಿತ. ಅವನಿಗೆ ಜಹಾಂಗೀರನ ಸಂದೇಶದಲ್ಲಿಯಾಗಲಿ, ಕೋಕಾನ ಶಾಂತಿ ಮಾತುಗಳಲ್ಲಾಗಲಿ ನಂಬಿಕೆ ಬರಲಿಲ್ಲ. ಬಲಿ ಕೈಗೆ ಸಿಕ್ಕಿದೆ, ಈ ಅವಕಾಶವನ್ನು ಬಿಟ್ಟುಕೊಡಬಾರದೆಂದು ಪ್ರಚೋದನೆ ಇಲ್ಲದೆಯೇ, 'ಕೋಕಾ ನಿನ್ನ ನರಿ ಬುದ್ಧಿ ನನಗೆ ಅರ್ಥವಾಗಲಿಲ್ಲವೆಂದು ಭಾವಿಸಬೇಡ. ಇಷ್ಟು ವರ್ಷಗಳೂ ಅನುಭವಿಸಿದ ನೋವು ಸಂಕಟಗಳಿಗೆ ಈಗೊಂದು ಪರಿಹಾರ ದೊರೆತಿದೆ. ಕೋಕಾ ನಿನ್ನನ್ನು ಸುಮ್ಮನೆ ಬಿಡುವುದಿಲ್ಲ' ಎನ್ನುತ್ತಾ ಉಗ್ರವಾಗಿ ಕಿರುಚುತ್ತಾ ಅವನ ಮೇಲೆ ಎರಗಿ. ಪಕ್ಕಗಳನ್ನು ಇರಿದ. ಅಷ್ಟೇ ಸಾಲದೆಂಬಂತೆ ಖಡ್ಗವನ್ನೆತ್ತಿ ಮತ್ತೆ ಮತ್ತೆ ಕಂಡಕಂಡ ಕಡೆಯಲ್ಲೆಲ್ಲ ತಿವಿದು ತುಂಡು ಮಾಡಿದ, ಭಯಂಕರ ನೋವಿನಿಂದ ಕಿರುಚುತ್ತಾ ಪ್ರಾಣ ಹೋಗುತ್ತಿರುವ ಅನುಭವ ಹೆಚ್ಚುತ್ತಿದ್ದಂತೆ, ಅಲಿಖುಲಿಯ ಪರಿವಾರ, ಮನೆ ಮಠಗಳಾವುದನ್ನೂ ಬಿಡದೆ ಲೂಟಿ ಮಾಡಿ, ಕೊಚ್ಚಿಹಾಕಿ ಎಂದು ತಡವರಿಸಿ ಮಾತಾಡುತ್ತಲೇ ಕೊನೆಯುಸಿರೆಳೆದ.

ಈ ಬೀಭತ್ಸವನ್ನು ಗಮನಿಸಿದ ಸೈನಿಕರು ಮನೆಯ ಒಳಗೆ ಹೊರಗೆ ಓಡಾಡಿದರು. ಅವರಲ್ಲಿಬ್ಬರು ಅಲಿಖುಲಿಯನ್ನು ನಿರ್ದಾಕ್ಷಿಣ್ಯವಾಗಿ ಇರಿದಿರಿದು ಕೊಂದರು. ಒಳಗಿದ್ದ ಮೆಹರುನ್ನೀಸಾ, ಸೈನಿಕರ ದಾಂಧಲೆ, ವಿಜಯೋತ್ಸಾಹ, ರಣೋತ್ಸಾಹದ ಕೂಗುಗಳು ಹತ್ತಿರ ಬರುತ್ತಿದ್ದುದನ್ನು ಗಮನಿಸಿ ಕಂಪಿಸಿದಳು. ಮಗಳನ್ನು ಎಬ್ಬಿಸಿ ಮನೆಯಿಂದ ತಪ್ಪಿಸಿಕೊಂಡು ಓಡಿದಳು. ಅವಳು ಓಡುತಿದ್ದುದನ್ನು ಗಮನಿಸಿ, ಅಟ್ಟಹಾಸದಿಂದ ಸೈನಿಕರು, ಹಿಡಿಯಿರಿ ಅವಳನ್ನು–ಬಹುಶಃ ಅವಳು ಆ ದುಷ್ಟನ ಹೆಂಡತಿಯಿರಬೇಕು; ಎಂದು ಬೊಬ್ಬೆ ಹಾಕಿ ಹಿಂಬಾಲಿಸಿದರು. ಮೆಹರುನ್ನೀಸಾ ಅವರು ಬರುತ್ತಿದ್ದ ದಿಕ್ಕಿಗೆ ವಿರುದ್ಧವಾಗಿ ಇದ್ದ ಕೊಠಡಿಯೊಂದರಲ್ಲಿ ತಲೆ ಮರೆಸಿಕೊಳ್ಳಲು ಪ್ರಯತ್ನಿಸಿದಳು. ಆದರೆ ಅವಳಿಗೂ ಮೊದಲೇ ಒಬ್ಬ ವ್ಯಕ್ತಿ ಅಡಗಿ ಕುಳಿತಿದ್ದ, ಭಯದಿಂದ ತತ್ತರಿಸಿದಳು. ತನ್ನನ್ನು ಏನೂ ಮಾಡಬೇಡವೆಂದು ಸನ್ನೆ ಮಾಡಿದ. ಅವರಿಬ್ಬರೂ ತನ್ನನ್ನು ಹಿಂಬಾಲಿಸುವಂತೆ ಸನ್ನೆಯಿಂದ ಹೇಳಿದ. ಅವನ ಚಲನವಲನ ಶತ್ರು ಸೈನಿಕರಿಗಿಂತ ಭಿನ್ನವಾಗಿತ್ತು. ಅವನ ಮುಖದಲ್ಲಿ ಸೌಮ್ಯತೆ, ದಯೆ, ಮರುಕಗಳು ಎದ್ದು ಕಾಣುತ್ತಿದ್ದವು. ಮೆಹರುನ್ನೀಸಾಗೆ ಅವನು ಆಪದ್ರಕ್ಷಕನಂತೆ ಕಾಣಿಸಿದ. ಅವನ ಹಿಂದೆ, ಅವನು ಹೇಳಿದಂತೆ ಹಿಂಬಾಲಿಸುವುದರ ಹೊರತು ಬೇರೆ ದಾರಿಯಿರಲಿಲ್ಲ. ಮೌನವಾಗಿ ತಾಯಿ ಮಗಳು ಭಯದಿಂದ ನಡುಗುತ್ತಲೇ, ಅಪಾಯದ ನಿರೀಕ್ಷೆಯಲ್ಲಿಯೇ ಹೆಜ್ಜೆಹಾಕುತ್ತಾ ಸಾಗಿದರು.

ಅಷ್ಟರಲ್ಲಿಯೇ ರಕ್ತ ಪಿಪಾಸಿಗಳಂತೆ ಕಾಣುತ್ತಿದ್ದವರು ತಮ್ಮೆಡೆಗೆ ಬರುತ್ತಿದ್ದುದನ್ನು ಆ ವ್ಯಕ್ತಿ ಗಮನಿಸಿ, ತೀರಾ ಕತ್ತಲ ಗೂಡಿನಂತೆ ಕಾಣುತ್ತಿದ್ದ ಮೂಲೆಯೊಂದರಲ್ಲಿ ಅಡಗಿ ಕುಳಿತಿರುವಂತೆ ಹೇಳಿದ. ಎಲ್ಲಿ ಆ ದುಷ್ಟನ ಹೆಂಡತಿ ಎಲ್ಲಿ? ಈ ಕೂಡಲೇ ಅವಳನ್ನು ಮುಗಿಸಿಬಿಡಬೇಕು ಎಂದು ಆವೇಶದಿಂದ ಎಲ್ಲ ಜಾಗಗಳನ್ನು ಹುಡುಕಿ ನೋಡಿದರು. ಅಲ್ಲಿಯೇ ನಿಂತಿದ್ದ ವ್ಯಕ್ತಿಯನ್ನು, ಮೆಹರುನ್ನೀಸಾಳ ಬಗ್ಗೆ ವಿಚಾರಿಸಿದಾಗ, "ತಪ್ಪಿಸಿಕೊಂಡು ಓಡಿಹೋದಳು. ಬಹಳ ದೂರ ಹೋಗಿರಲಾರಳು. ನಾನೂ ಅವಳನ್ನೇ ಹುಡುಕುತ್ತಾ ಬಂದಿದ್ದೆ. ನಾನೂ ಕೂಡಾ ಖುತುಬುದ್ದೀನ್ ಕೋಕಾರ ಕಡೆಯವನೇ.

ಬೇಗ ಹಿಂಬಾಲಿಸಿ ಸಿಗಬಹುದು" ಎಂದು ಅವರ ಗಮನವನ್ನು ಬೇರೆ ದಿಕ್ಕಿನೆಡೆಗೆ ತಿರುಗಿಸಿದ. ಮೆಹರುನ್ನೀಸಾಳನ್ನು, ಮಗಳನ್ನು ಕಾಪಾಡಿದವನು ಹೈದರ್ ಮಲಿಕ್. ಅವನೂ ಕೂಡಾ ಖುತುಬುದ್ದೀನ್ ಕಡೆಯವನೇ ಯಾರಿಗೂ ಮೆಹರುನ್ನೀಸಾಳಿಗೆ ಹಾನಿ ಮಾಡಬೇಕೆಂಬ ಉದ್ದೇಶವಿರಲಿಲ್ಲ. ಜೊತೆಗೆ ಹಾಗಾಗಬಾರದೆಂದು ಜಹಾಂಗೀರನೂ ತಾಕೀತು ಮಾಡಿದ್ದ. ಒಂದು ವೇಳೆ ಅವಳನ್ನು ಕಾಪಾಡಲಾಗದೆ ಹೋದಲ್ಲಿ ಪ್ರಾಣಕ್ಕೇ ಸಂಚಕಾರವೆಂದು ಬೇರೆ ಬೆದರಿಕೆ ಹಾಕಿದ್ದ.

ಹೈದರ್ ಮಲಿಕ್‌ನ ಕಣ್ಗಾವಲಿನಲ್ಲಿ, ಜೊತೆಯಲ್ಲಿ ಯಾವುದೇ ತೊಂದರೆಯಿಲ್ಲದೆ, ಬರ್ದವಾನಿನ ನಿರ್ಜನ ಬೀದಿಗಳನ್ನು ಹಾಯುತ್ತಾ, ಬೆಳಗಿನ ಸಮಯಕ್ಕೆ ಮಲಿಕ್‌ನ ಶಿಬಿರವನ್ನು ತಲುಪಿದರು. ಅವರನ್ನು ಶಿಬಿರದಲ್ಲಿರಿಸಿ, ತಾನು ಆದಷ್ಟು ಬೇಗ ಹಿಂತಿರುಗಿ ಬರುವೆನೆಂದು ಹೇಳಿ ಮತ್ತೆ ಅಲಿಖುಲಿ ಮನೆಯ ಕಡೆ ಹೊರಟ. ಮೈ ತುಂಬ ಖಡ್ಗದ ಇರಿತಗಳೊಂದಿಗೆ ಬಿದ್ದಿದ್ದ ಖುತುಬುದ್ದೀನ್ ಇನ್ನೂ ಪ್ರಾಣದಿಂದ ಇದ್ದರೆ, ಅವನಿಗೆ ಚಿಕಿತ್ಸೆ ನೀಡಿ ಬದುಕಿಸಬೇಕೆಂಬ ಆಲೋಚನೆಯಿಂದ ಅಲ್ಲಿಗೆ ಬಂದು ನೋಡಿದ. ಉಸಿರಾಟವಿದೆಯೇನೋ ಎಂದು ಪರೀಕ್ಷಿಸಿದ. ಏನೂ ಪ್ರಯೋಜನವಿಲ್ಲವೆನಿಸಿತು. ಮನೆಯ ಒಳಗೆ, ಹೊರಗೆ ಒಂದು ಸುತ್ತು ಸುತ್ತಿ ಬಂದರೆ ಎಲ್ಲೆಲ್ಲೂ ಹೆಣಗಳು. ಮನೆಯ ಒಳಗಿನ ಪೀಠೋಪಕರಣಗಳು ಗಾಜಿನ ವಸ್ತುಗಳು, ಬೀರುಗಳಲ್ಲಿನ ಅಮೂಲ್ಯವಾದ ಆಭರಣಗಳು, ಗೋಡೆಗೆ ತೂಗುಹಾಕಿದ್ದ ಭಾವಚಿತ್ರಗಳು, ಮಂಚದ ಮೇಲಿನ ಹಾಸಿಗೆಗಳನ್ನೆಲ್ಲ ಛಿದ್ರಗೊಳಿಸಿ, ಚೆಲ್ಲಿದ್ದ ಚಿಂದಿಗಳು, ಹರಿದ ಬಟ್ಟೆಗಳಲ್ಲಿ ಅರೆನಗ್ನರಾಗಿ, ಬಿಕ್ಕಿ ಬಿಕ್ಕಿ ಅಳುತ್ತಾ, ಬೆದರಿದ ಬೆಕ್ಕುಗಳಂತೆ ಮುದುಡಿ ಕುಳಿತಿದ್ದ ಅತ್ಯಾಚಾರಕ್ಕೆ ಒಳಗಾಗಿದ್ದ, ಅಲಿಖುಲಿಯ ಮನೆಯ ಸೇವಕಿಯರು! ಅಲ್ಲಿನ ಭಯಾನಕ ಪರಿಸ್ಥಿತಿಯಿಂದ ಮೂಕವಿಸ್ಮಿತನೂ, ದುಃಖಿತನೂ ಆಗಿದ್ದ ಹೈದರ್ ಮಲಿಕ್‌ಗೆ ಜಿಗುಪ್ಸೆಯಾಯಿತು. ಮನುಷ್ಯರೂ ಕೂಡಾ ಇಂತಹ ರಾಕ್ಷಸರಾಗುತ್ತಾರೆಯೇ! ಅಲ್ಲಾಹ್ ಕರುಣಿಸಿದ ಅಲಿಖುಲಿಯ ಬೇಗಂರನ್ನು ಸುರಕ್ಷಿತವಾಗಿ ಪ್ರಾಣ ಉಳಿಸಿದ್ದೇನೋ ಆಯಿತು. ಮುಂದೆ? ಅವಳನ್ನು ಸುರಕ್ಷಿತವಾಗಿ ಲಾಹೋರಿನವರೆಗೆ ತಲುಪಿಸಬೇಕಲ್ಲ. ಹೇಗೆ ಮಾಡುವುದೆಂದು ಯೋಚಿಸಿದ. ಕಡೆಗೆ ಮಿರ್ಜಾ ಘಿಯಾಸ್ ಬೇಗ್‌ಗೆ ವೇಗ ಸಂದೇಶವಾಹಿಯೊಬ್ಬನ ಕೈಲಿ ಇಲ್ಲಿ ನಡೆದದ್ದೆಲ್ಲವನ್ನು ವಿವರವಾಗಿ ಬರೆದು ಕಳಿಸಲಾಯಿತು.

ಪತ್ರ ಕೈಗೆ ಸಿಕ್ಕಿದ್ದೇ ಮಿರ್ಜಾ ಬೇಗ್‌ಗೆ ತಲೆಸುತ್ತಿದಂತಾಯಿತು. ಅಲಿಖುಲಿ ಖುತುಬುದ್ದೀನರ ಸಾವು ಒಂದು ಕಡೆ ಆಘಾತ ಉಂಟುಮಾಡಿದ್ದರೆ, ಮಲಿಕ್‌ನ ಶಿಬಿರದಲ್ಲಿ ಮಗಳು, ಮೊಮ್ಮಗಳು ಸುರಕ್ಷಿತವಾಗಿದ್ದಾರೆ ಎಂಬ ಸುದ್ದಿ ಸ್ವಲ್ಪ ಮಟ್ಟಿಗೆ ಸಮಾಧಾನ ತಂದಿತ್ತು. ಪತ್ರದಲ್ಲಿನ ವಿವರಗಳನ್ನು ತಿಳಿಯಲು ಅಸ್ಮತ್ ತುಂಬಾ ಕಾತರಳಾಗಿದ್ದಳು.

ಘಿಯಾಸ್ ಅವಳಿಗೆ ಪ್ರತಿಯೊಂದನ್ನೂ ವಿವರಿಸಿದ. ಅಲಿಖುಲಿಯ ಸಾವು ಬಹಳ ನೋವಿಗೆ ಕಾರಣವಾಯಿತಾದರೂ, ಅವನಿಗಾಗಿ ಮುಂದುವರೆದು ಕೋಕಾನನ್ನು ಪ್ರಚೋದಿಸಿ, ವಿಷಯವನ್ನು ತಿಳಿಯುವ ಮೊದಲೇ ಅವನನ್ನು ಕೊಂದದ್ದು ತೀರಾ

ಕೆಡುಕೆನಿಸಿ ಅಸಮಾಧಾನಗೊಂಡಿದ್ದ. ಹಾಗೆ ಮಾಡಿದ್ದು ಅಕ್ಷಮ್ಯ ಅಪರಾಧವೆನಿಸಿತು. ಅವನಲ್ಲಿನ ದೌರ್ಬಲ್ಯವೆಂದರೆ ಆತುರಬುದ್ಧಿ! ಸ್ವಲ್ಪವೂ ತಾಳ್ಮೆಯಿಲ್ಲ. ಇಂತಹ ನಡವಳಿಕೆಯಿಂದಲೇ ಅಪಾಯಗಳನ್ನು ತಾನಾಗಿಯೇ ತನ್ನ ಮೇಲೆಳೆದುಕೊಳ್ಳುತ್ತಾನೆ. 'ಈಗೇನೋ ನಮ್ಮ ಮಗಳು ಹೈದರ್ ಮಲಿಕ್‌ನ ರಕ್ಷಣೆಯಲ್ಲಿದ್ದಾಳೆ. ಮುಂದೇನೋ ನನಗೆ ಅರ್ಥವಾಗುತ್ತಿಲ್ಲ' ಎಂದು ಸುಮ್ಮನಾದ.

ಯಾರಿಗೂ ಭವಿಷ್ಯದ ಕಲ್ಪನೆ ಮಾಡಲು ಸಾಧ್ಯವಿರಲಿಲ್ಲ. ಹಾಗೆಯೇ ನಿಜವಾದ ಅಪರಾಧಿ ಯಾರೆಂದು ತೀರ್ಮಾನಿಸಲೂ ಆಗುವುದಿಲ್ಲ. ಅಲಿಖುಲಿ ಮತ್ತು ಖುತುಬುದ್ದೀನ್ ಇಬ್ಬರೂ ಒಬ್ಬರನ್ನೊಬ್ಬರು ದ್ವೇಷಿಸುತ್ತಿದ್ದರು. ಒಬ್ಬರನ್ನೊಬ್ಬರು ಮುಗಿಸಿಬಿಡಲೂ ಹಾತೊರೆಯುತ್ತಿದ್ದರು. ಹೀಗಾಗಿ ಯಾರಿಂದ ಯಾರು ಮೊದಲು ಸತ್ತರು ಎನ್ನುವ ಪ್ರಶ್ನೆ ಮುಖ್ಯವಾಗುವುದಿಲ್ಲ. ಖುತುಬುದ್ದೀನನನ್ನು ಮೊದಲು ಘಾತಿಸಿದ್ದು ಅಲಿಖುಲಿಯೇ! ನಂತರವೇ ಕೋಕಾನ ಕಡೆಯವರು, ಅವನ ಪರವಾಗಿ ಅಲಿಖುಲಿಯ ಮೇಲೆ ಆಕ್ರಮಣ ಮಾಡಿ ಕೊಂದರು. ಅಲ್ಲಿಗೆ ಇಬ್ಬರ ಲೆಕ್ಕ ತೀರಿತು. ಆದರೆ ಈಗ ನಮ್ಮ ಮುಂದಿನ ಪ್ರಶ್ನೆ, ಜಹಾಂಪನಾಹ್‌ರು ಇದನ್ನು ಯಾವ ರೀತಿ ವಿಶ್ಲೇಷಿಸಿ, ತೀರ್ಮಾನ ತೆಗೆದುಕೊಳ್ಳುತ್ತಾರೋ ಗೊತ್ತಿಲ್ಲ. ಅಲಿಖುಲಿಯೇ ಕೋಕಾನ ಸಾವಿಗೆ ಕಾರಣವೆಂದು ತಿಳಿದಿರುವುದರಿಂದ, ಅಲಿಖುಲಿಯ ಮೇಲಿನ ಸೇಡು, ನಮ್ಮ ಮೆಹರುನ್ನೀಸಾ ಮತ್ತು ಲಾಡ್ಲಿಯ ಮೇಲೆ ತಿರುಗಬಹುದು. ಆದ್ದರಿಂದ ಅವರನ್ನು ಸುರಕ್ಷಿತವಾಗಿ ಇಲ್ಲಿಗೆ ಕರೆತರುವ ವ್ಯವಸ್ಥೆ ಮಾಡಬೇಕು. ಜಹಾಂಗೀರನನ್ನು ಸಹಾಯ ಕೇಳುವ ಹಾಗಿಲ್ಲ. ಸಾಮ್ರಾಜ್ಯದಲ್ಲೆಲ್ಲಾ ಇಲ್ಲ ಸಲ್ಲದ ವದಂತಿಗಳು ಹಾರಾಡಿ, ಜಹಾಂಪನಾಹ್‌ರ ಗೌರವಕ್ಕೂ ಚ್ಯುತಿ ಬರುತ್ತದೆ. ಇದರಲ್ಲಿ ಬಾದಶಾಹರ ಕೈವಾಡವಿದೆಯೆಂದೇ ಜನರು ಭಾವಿಸುತ್ತಾರೆ. ಈಗ ದಾರಿ ಸುಗಮವಾಗಿದೆ. ಮದುವೆಯಾಗಬಹುದು ಎಂದುಕೊಂಡರೆ ಮೆಹರುನ್ನೀಸಾ ಸಿಟ್ಟಾಗುತ್ತಾಳೆ. ಗಂಡನನ್ನು ಕಳೆದುಕೊಂಡು ದುಃಖದಲ್ಲಿ ಇದ್ದಾಳೆ. ಅವಳ ಮುಂದೆ ಯಾವುದೇ ವಿಷಯದ ಬಗ್ಗೆ ಚರ್ಚೆಮಾಡಬಾರದು. ನಮ್ಮ ಮಗಳನ್ನು ನಾವೇ ಕರೆಸಿಕೊಳ್ಳೋಣ ಎಂದು ಘಿಯಾಸ್ ಯೋಚಿಸಿದ. ಆದರೆ ಅವಳನ್ನು ಕರೆತರಲು ಯಾರು ಹೋಗಬೇಕು ಎಂದುಕೊಂಡಾಗ ಅಬುಲ್‌ಹಸನ್ ನೆನಪಾದ. ಕೂಡಲೇ ಅವನಿಗೆ ಹೇಳಿ ಕಳಿಸಿದ.

"ಅಬುಲ್ ಬೇಟಾ ನಿನಗೆ ಈಗಾಗಲೇ ನಡೆದ ವಿಷಯಗಳೆಲ್ಲ ತಿಳಿದಿರಬೇಕೆಂದು ಭಾವಿಸುತ್ತೇನೆ. ನಮ್ಮ ನೀಸಾ ಬಹಳ ಸಂಕಷ್ಟದಲ್ಲಿ ಇದ್ದಾಳೆ. ಅವಳನ್ನು ಹೇಗಾದರೂ ಬರ್ದವಾನದಿಂದ ಕರೆದುಕೊಂಡು ಬರಬೇಕು. ಜಹಾಂಪನಾಹ್‌ರಿಗೆ ವಿಷಯ ತಿಳಿಸಿ ನೀನು ಹೊರಡಲು ಸಿದ್ಧನಾಗು. ಅವಳಿಗೆ ಸಾಂತ್ವನ ಹೇಳುವುದಕ್ಕಾದರೂ ನಾವು ಜೊತೆ ಇರಬೇಕಲ್ಲವೇ?"

'ಅಬ್ಬು ಈಗಲೇ ಜಹಾಂಪನಾಹ್‌ರನ್ನು ಕಂಡು ವಿಷಯ ತಿಳಿಸಿ ಹೊರಡುತ್ತೇನೆ' ಎಂದು ಒಂದು ಕ್ಷಣವೂ ಅಲ್ಲಿ ನಿಲ್ಲದೆ ಸಿದ್ಧತೆ ಮಾಡಿಕೊಳ್ಳಲು ಹೊರಟ.

ಮೆಹರುನ್ನೀಸಾಳಿಗೆ ತನ್ನ ಬದುಕಿನ ಬಗ್ಗೆ ಚಿಂತೆಯಾಯಿತು. ಬದುಕುವುದಕ್ಕೆ ದಾರಿ ಇರಲಿಲ್ಲ. ಅಲಿಖುಲಿ ಅಥವಾ ಷೇರ್ ಆಫ್ಘನ್‌ನ ಆಸ್ತಿಪಾಸ್ತಿ ಎಲ್ಲವೂ ಸಾಮ್ರಾಜ್ಯದ

ಸ್ವತ್ತಾಯಿತು. ಅವನಿಗೆ ಅಕ್ಬರ್ ನೀಡಿದ್ದ ಜಾಗೀರುಗಳು. ಮನಸಾಬ್‌ದಾರಿಕೆ ಮತ್ತೆ ಮರಳಿ ಬಾದಶಾಹರ ವಶಕ್ಕೆ ಹೋಯಿತು. ಒಂದು ವೇಳೆ ಬಾದಶಾಹರು ಕರುಣಿಸಿ ಒಂದಷ್ಟು ಹಣವನ್ನು ಜೀವನೋಪಾಯಕ್ಕೆಂದು ಕೊಟ್ಟರೆ ಉಂಟು, ಇಲ್ಲವಾದಲ್ಲಿ ಅವರ ಹಣೆಬರಹ? ಮೆಹರುನ್ನೀಸಾ ಅತಂತ್ರ ಸ್ಥಿತಿಯಲ್ಲಿದ್ದು, ಮುಂದೆ ಹೇಗೆಂದು ಯೋಚಿಸುತ್ತಿರುವಾಗಲೇ ಕೆಲಸದ ಹುಡುಗ 'ಬೇಗಂ ಸಾಹಿಬಾ ತಮ್ಮನ್ನು ಕೇಳಿಕೊಂಡು ಯಾರೋ ಬಂದಿದ್ದಾರೆ' ಎನ್ನುವ ಮಾತುಗಳನ್ನು ಕೇಳಿಸಿಕೊಂಡು ಕಂಪಿಸಿದಳು.

ಅಪರಿಚಿತರು ಯಾರೇ ಬಂದರೂ ಅವರನ್ನು ಕಾಣುವುದೆಂದರೆ ಹೆದರಿಕೆ. ಆದರೂ ಯಾರೆಂದು ತಿಳಿಯದೆ ಹೋಗುವುದೂ ಸರಿಯಲ್ಲ. ತನ್ನ ನೆರವಿಗೆಂದು ಯಾರಾದರೂ ಬಂದಿರಲೂ ಬಹುದು ಎಂದು ಸ್ವತಃ ತಾನೇ ಎದ್ದು ಧೈರ್ಯ ತಂದುಕೊಂಡು, ಸಣ್ಣದಾಗಿ ಬಾಗಿಲು ತೆಗೆದು ಸಂದಿಯಿಂದ ನೋಡಿದಳು. ಚಕ್ಕನೆ ಬೆರಗಾದಳು. ಅನಿರೀಕ್ಷಿತ ಸಂತೋಷ ಉಕ್ಕಿ ಬಂತು. ದೊಡ್ಡದಾಗಿ ಬಾಗಿಲು ತೆರೆದು "ಭಾಯಿಜಾನ್" ಎಂದು ಉಚ್ಚರಿಸುತ್ತಾ ಹೋಗಿ ಅವನ ಕೊರಳಿಗೆ ತೆಕ್ಕೆ ಹಾಕಿಕೊಂಡಳು. ಅಣ್ಣ ತಂಗಿಯರು ಎಷ್ಟು ಹೊತ್ತು ಅಪ್ಪಿಕೊಂಡು ನಿಂತಿದ್ದರೊ, ಅವರ ಅರಿವಿಗೇ ಬರಲಿಲ್ಲ. ಮೆಹರುನ್ನೀಸಾ ಲಾಡ್ಲಿಯನ್ನು ಹತ್ತಿರಕ್ಕೆ ಕರೆದು "ಲಾಡ್ಲಿ ಬೇಟಾ ನಮ್ಮ ಕಷ್ಟಗಳು ಇವತ್ತಿಗೆ ಮುಗಿದವು. ನಾವು ಕೂಡಲೇ, ನಾನಿ, ನಾನಾ ಮನೆಗೆ ಹೋಗೋಣ. ಅಲ್ಲಿ ಯಾರೂ ನಮಗೆ ತೊಂದರೆ ಕೊಡುವುದಿಲ್ಲ" ಎಂದು, ಲಾಡ್ಲಿಯನ್ನು ಅಬುಲ್ ವಶಕ್ಕೆ ಒಪ್ಪಿಸಿದಳು.

"ನೀಸಾ, ಬೇಗ ಹೊರಡು. ಇಲ್ಲವಾದಲ್ಲಿ ತೊಂದರೆಗೆ ಸಿಕ್ಕಿ ಹಾಕಿಕೊಳ್ಳುತ್ತೇವೆ. ನನ್ನ ಜೊತೆ ನೀನು ಬರುತ್ತಿರುವ ವಿಷಯ ಯಾರಿಗೂ ತಿಳಯಬಾರದು" ಎಂದು ಹೇಳಿ ಆತುರಪಡಿಸಿದ. ಸಿದ್ಧವಾಗಲು ಸಾಮಾನು ಸರಂಜಾಮು ಏನೂ ಇರಲಿಲ್ಲ. ಇದ್ದ ಬದ್ದ ಒಂದೆರಡು ಬಟ್ಟೆ, ಒಡವೆಗಳನ್ನು ಮೂಟೆ ಕಟ್ಟಿದಳು. ಫಿರ್‌ದೌಸ್ ಅಹಮದ್ ಬಶೀರ್ ಎಲ್ಲರಿಗೂ ಹೇಳಿ ಬೀಳ್ಕೊಂಡಳು.

* * *

## ವೈಧವ್ಯದ ಕುಲುಮೆಯಲ್ಲಿ

ಆಗ್ರಾಗೆ ಹೋಗುತ್ತಿರುವುದು ಅವಳಿಗೆ ಸಂತೋಷದ ವಿಷಯವಾಗಿತ್ತು. ಪ್ರಯಾಣದ ಹಾದಿಯಲ್ಲಿನ ಸುಂದರ ದೃಶ್ಯಗಳು ಕಣ್ಣಿಗೆ ಬೀಳುತ್ತಿದ್ದಂತೆ ಮನಸ್ಸಿಗೆ ಹಗುರವೆನಿಸಿತು. ತುಂಬಾ ದೂರದ ಪ್ರಯಾಣ. ಬಹಳ ದಣಿವಾಗಿತ್ತು. ಮಧ್ಯೆ ಎಲ್ಲಿಯಾದರೂ ಒಂದು ರಾತ್ರಿ ಉಳಿದುಕೊಂಡು ಮುಂದುವರೆಸೋಣವೆಂದು ಅಣ್ಣನಿಗೆ ಸೂಚಿಸಿದಳು. ಅಬುಲ್ ಒಪ್ಪಿದ.

ಆಗ್ರಾ ಕಡೆ ಬರುವಾಗ ಬಿಹಾರದ ಹೊರವಲಯದಲ್ಲಿ ಒಬ್ಬ ಸಂತನ ಆಶ್ರಮವಿದ್ದುದರಿಂದ, ಮೆಹರುನ್ನೀಸಾ ಅವರಿಗೆ ಗೌರವ ಸೂಚಿಸುವ, ಪ್ರಾರ್ಥಿಸುವ ಆಸೆಯನ್ನು ವ್ಯಕ್ತಪಡಿಸಿದಳು. ಇವಳ ಮುಖವನ್ನು ಆ ಬಾಬಾ ತದೇಕಚಿತ್ತದಿಂದ ನೋಡಿದ. ಪರಿಚಯ ಕೇಳಿದ. ಮೆಹರುನ್ನೀಸಾ ಭಕ್ತಿಯಿಂದ ತನ್ನ ತೊಂದರೆಗಳನ್ನೆಲ್ಲ ನಿವೇದಿಸಿಕೊಂಡಳು.

"ಬೇಟಿ ನಿನ್ನ ಭವಿಷ್ಯ ಬಹಳ ಉಜ್ವಲವಾಗಿದೆ. ಇಲ್ಲೀವರೆಗೆ ಅನುಭವಿಸಿದ್ದಕ್ಕಿಂತ

ನೂರು ಪಟ್ಟು ಹೆಚ್ಚಿನ ಸುಖ ನೀನು ಅನುಭವಿಸಲಿರುವೆ. ಚಕ್ರವರ್ತಿನಿಯಾಗುವ ಎಲ್ಲ ಲಕ್ಷಣಗಳೂ ನಿನ್ನಲ್ಲಿ ಕಾಣಿಸುತ್ತಿವೆ. ಅದ್ಭುತವಾಗಿ ರಾಜ್ಯವಾಳುತ್ತೀಯೆ, ಆದರೆ ಜೊತೆಗೇ ಒಂದು ದುಃಖದ ವಿಷಯವೂ ಇದೆ. ಅಧಿಕಾರ ಲಾಲಸೆ, ಮಹತ್ವಾಕಾಂಕ್ಷೆಗಳೆ ನಿನ್ನ ಪತನಕ್ಕೆ, ದುಃಖಕ್ಕೆ ಕಾರಣವಾಗುತ್ತವೆ."

"ಇವುಗಳಿಂದ ಪಾರಾಗಲು ಏನು ಮಾಡಬೇಕು?" "ದುರಾಸೆಯೇ ನಿನ್ನ ಜೀವನದ ಗುರಿಯಾಗಿರುವಾಗ ನೀನು ಹೇಗೆ ತಾನೇ, ನಿನ್ನ ಅವನತಿಯನ್ನು ತಪ್ಪಿಸಬಲ್ಲೆ?... ಸಾಕು. ಇನ್ನೇನೂ ಪ್ರಶ್ನೆ ಕೇಳಬೇಡ" ಎಂದು ಅಲ್ಲಿಂದ ಎದ್ದು ನಡೆದುಬಿಟ್ಟ.

ಅಬುಲ್ ಅವಳನ್ನು ಹೊರಡಲು ಆತುರಪಡಿಸಿದ. ಭವಿಷ್ಯವನ್ನು ಕೇಳಿದ ಮೆಹರುನ್ನೀಸಾಳ ಮುಖ ಗಂಭೀರವಾಯಿತು. ದುಃಖವೂ ಇದೆ; ಸುಖವೂ ಇದೆ. ಯಾವುದು ಎಷ್ಟೆಷ್ಟು ಕಾಲವೆಂದು ನಾವು ಹೇಳಲು ಸಾಧ್ಯವೇ? ಅಲ್ಲಾಹ್‌ನ ಯೋಜನೆಗಳು ಏನಿವೆಯೋ, ಅವನ್ನು ಸ್ವೀಕರಿಸಿ ಅದರಂತೆ ನಡೆಯಬೇಕಾದ್ದಷ್ಟೇ ನಮ್ಮ ಧರ್ಮ ಎಂದು ಭಾವಿಸಿ ಸುಮ್ಮನಾದಳು.

ಮೂವರೂ, ಅಲ್ಲಲ್ಲಿ ಸರಾಯ್‌ಗಳಲ್ಲಿ ಸ್ವಲ್ಪ ವಿಶ್ರಮಿಸುತ್ತಾ ಪ್ರಯಾಣ ಮುಂದುವರೆಸಿದರು. ಪ್ರಯಾಣ ಬಹಳ ತ್ರಾಸದಾಯಕವಾಗಿತ್ತು. ಆಗ್ರಾ ಸಮೀಪಿಸುತ್ತಿದ್ದಂತೆ ಮೆಹರುನ್ನೀಸಾಳಿಗೆ ಒಂದು ಬಗೆಯ ರೋಮಾಂಚನ. ತನ್ನ ಮಗಳಿಗೆ ಇದೆಲ್ಲವನ್ನು ತೋರಿಸಿ ವಿವರಿಸಬೇಕು. ಆಗ್ರಾ ಪಟ್ಟಣ ತೀರಾ ಹತ್ತಿರವಾದಂತೆ ಉದ್ದಕ್ಕೂ, ಬೀದಿ ಬೀದಿಗೂ ಅಂಗಡಿ ಸಾಲುಗಳು. ಪ್ರತಿಯೊಂದು ಅಂಗಡಿಯಲ್ಲೂ ಗಿರಾಕಿಗಳು ತುಂಬಿದ್ದರು. ಬಗೆಬಗೆಯ ವಸ್ತುಗಳು, ಎಲ್ಲ ಅಗತ್ಯಗಳಿಗೂ ಬೇಕಾದ್ದೆಲ್ಲವೂ ಸಿಗುತ್ತಿತ್ತು. ವ್ಯವಸ್ಥಿತವಾಗಿ ಅಂಗಡಿ ಸಾಲುಗಳು ಕಾಣಿಸಿದವು. ಹಣ್ಣಿನಂಗಡಿಗಳು, ಸಿಹಿ ಪದಾರ್ಥಗಳು, ಒಣಹಣ್ಣುಗಳು, ಸುಗಂಧದ್ರವ್ಯಗಳು, ಹೆಂಗಸರಿಗೆ ಬೇಕಾದ ಅಲಂಕಾರ ವಸ್ತುಗಳು, ಮಸ್ಲಿನ್ ವೆಲ್ವೆಟ್, ರೇಶಿಮೆ, ಉಣ್ಣೆಬಟ್ಟೆಗಳು, ಸಿದ್ಧ ಉಡುಪುಗಳು, ಅತ್ಯಂತ ನವಿರಾದ ಕಲೆಗಾರಿಕೆಯ ಆಭರಣಗಳು (ಬಳೆ, ಕಾಲುಸರ, ಮೂಗುತಿ, ವಾಲೆ, ವಿವಿಧ ಬಗೆಯ, ವೈವಿಧ್ಯಮಯ ಸೂಕ್ಷ್ಮ ಕುಸುರಿಕೆಲಸದ...) ಇತ್ಯಾದಿ ಇತ್ಯಾದಿ ವಸ್ತುಗಳು ಪ್ರತ್ಯೇಕ ಪ್ರತ್ಯೇಕವಾಗಿ ಸಾಲು ಸಾಲುಗಳಲ್ಲಿ ಕಾಣಿಸಿಕೊಂಡು, ನೋಡಿದವರ ಮನಸ್ಸನ್ನು ಆಕರ್ಷಿಸುತ್ತಿದ್ದವು. ನಿಜವಾಗಿಯೂ ಆಗ್ರಾ ಮುಘಲ್ ಸಾಮ್ರಾಜ್ಯದ ಹೃದಯ ಕೇಂದ್ರವಾಗಿತ್ತು.

ಮೊದಲ ಬಾರಿಗೆ ಆಗ್ರಾದ ವೈಭವವನ್ನು ಕಣ್ಣು ತುಂಬಿಕೊಂಡ ಲಾಡ್ಲಿ, "ಅಮ್ಮಿ ಜಾನ್ ಇನ್ನು ಮುಂದೆ ನಾವಿಲ್ಲಿಯೇ ಇರುತ್ತೇವಲ್ಲ!"

"ಹೌದು ಬೇಟಾ ಇದೇ ನಮ್ಮ ಕಡೆಯ ನಿಶಾನಿ."

"ನೀಸಾ ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ನಾವು ಆಗ್ರಾದ ಕೋಟೆ ತಲುಪುತ್ತೇವೆ."

"ಯಾಕೆ ಭಾಯಿಜಾನ್ ನೇರವಾಗಿ ನಮ್ಮ ಮನೆಗೇ ಹೋಗಬಹುದಲ್ಲ?"

"ಇಲ್ಲ ನೀಸಾ, ನಮ್ಮ ಮನೆ ನಿನಗೆ ಸುರಕ್ಷಿತವಲ್ಲ. ಅಲ್ಲದೆ ಜಹಾಂಪನಾಹ್‌ರು ನಿನ್ನನ್ನು ಜನಾನಾಕ್ಕೆ ತಲುಪಿಸಲು ಆದೇಶಿಸಿದ್ದಾರೆ."

"ಏನು! ಜಹಾಂಪನಾಹ್‌ರು ಆದೇಶಿಸಿದ್ದಾರೆಯೇ? ನನ್ನ ನಿರಪರಾಧಿ ಗಂಡನನ್ನು

ಕೊಂದು, ಮಾಡುವುದನ್ನೆಲ್ಲ ಮಾಡಿ ಈಗ ಕರುಣೆ ತೋರಿಸುತ್ತಿದ್ದಾರೆಯೇ? ನಾನೇನೂ ರಾಜ ಪರಿವಾರಕ್ಕೆ ಸೇರಿದವಳಲ್ಲ." ಎಂದು ಸ್ವಲ್ಪ ಸಿಟ್ಟಿನಿಂದಲೇ ಹೇಳಿದಳು "ಸಿಟ್ಟಾಗುವುದರಲ್ಲಿ ಅರ್ಥವಿಲ್ಲ. ನಿನ್ನ ಪ್ರಾಣಕ್ಕೆ ಅಪಾಯವಿದೆ. ಖುತುಬುದ್ದೀನ್ ಕೋಕಾನ ಪರಿವಾರ ಮತ್ತು ಅವನ ಕಡೆಯವರು ಯಾವ ಕ್ಷಣದಲ್ಲಾದರೂ ನಿನ್ನ ಮತ್ತು ನಿನ್ನ ಮಗಳ ಮೇಲೆ ಹಲ್ಲೆಮಾಡಬಹುದು. ಜನಾನಾ ಅತ್ಯಂತ ಸುರಕ್ಷಿತ ಸ್ಥಳ. ರುಖೈಯ್ಯಾ ಬೇಗಂ, ಸಲೀಮಾ ಸುಲ್ತಾನ್ ಬೇಗಂರ ಸುಪರ್ದಿಯಲ್ಲಿರುವ ವ್ಯವಸ್ಥೆ ಮಾಡಲಾಗಿದೆ."

ಅಷ್ಟರಲ್ಲಿ ಸೈನಿಕರು ಬಂದು ಮತ್ತೊಮ್ಮೆ ಜಹಾಂಪನಾಹ್‌ರ ಆದೇಶವನ್ನು ತಿಳಿಸಿ ಜನಾನಾದೊಳಕ್ಕೆ ಕರೆದೊಯ್ಯಬೇಕೆಂದು ಅಬುಲ್ ಹಸನ್ ಉರುಫ್ ಅಸಫ್‌ಖಾನನಿಗೆ ತಿಳಿಸಿದರು.

ಜನಾನಾ ಪ್ರವೇಶಿಸಲು ಮೆಹರುನ್ನೀಸಾ ನಿರಾಕರಿಸಿದಳು. "ಆ ಕಟುಕನ ಆಶ್ರಯದಲ್ಲಿ ಮತ್ತೊಮ್ಮೆ ಬಂದಿಯಾಗಿ ಇರಲು ನನಗೆ ಇಷ್ಟವಿಲ್ಲ. ಪ್ರತಿಕ್ಷಣವೂ ಜಹಾಂಗೀರನ ನೆನಪಾಗಿ, ನನ್ನ ನೆಮ್ಮದಿಯೇ ಹಾಳಾಗುತ್ತದೆ. ಆದ್ದರಿಂದ ಭಾಯಿಜಾನ್ ದಯವಿಟ್ಟು ನೀವು ಹೋಗಿ, ನನ್ನ ತಂದೆ ತಾಯಿಗಳ ಜೊತೆ ಇರಲು ಅನುಮತಿಸುವಂತೆ ಕೇಳಿಕೊಂಡು ಬನ್ನಿ."

"ನೀಸಾ ಇದಕ್ಕೆಲ್ಲ ಸಮಯ ಹಿಡಿಯುತ್ತದೆ. ಸದ್ಯಕ್ಕೆ ಜನಾನಾದಲ್ಲಿ ಇರು. ನಂತರ ನಿನ್ನನ್ನು ಮನೆಗೆ ಕರೆದೊಯ್ಯಲು ಬರುತ್ತೇನೆ" ಎಂದು ಭರವಸೆ ನೀಡಿದ ಮೇಲೆ, ಬೇರೆ ದಾರಿ ಇಲ್ಲದೆ ಅಸಹಾಯಕ ಭಾವದೊಂದಿಗೆ ಜನಾನಾ ಪ್ರವೇಶಿಸಿದಳು.

ಮೆಹರುನ್ನೀಸಾ ಜನಾನಾಕ್ಕೆ ಬರುವ ಸುದ್ದಿ ಆಗಲೇ ಜನಾನಾ ಹೆಂಗಸರಿಗೆಲ್ಲ ತಿಳಿದಿತ್ತು. ರುಖೈಯ್ಯಾ ಬೇಗಂ ನೋವು, ಸಂಕಟ, ಕರುಣೆ, ಸಂತಸಗಳ ಮಿಶ್ರಭಾವದೊಂದಿಗೆ ಮೆಹರುನ್ನೀಸಾಳನ್ನು ಬರಮಾಡಿಕೊಳ್ಳಲು ಎದುರು ನೋಡುತ್ತಿದ್ದಳು. ಮಿಕ್ಕ ಹೆಂಗಸರಲ್ಲಿ ಗುಸುಗುಸು ಶುರುವಾಯಿತು. ಅವಳ ಸ್ಥಿತಿಗೆ ಮರುಗುವವರು ಕೆಲವರು, ಅಸೂಯೆ ಇರಿಸಿಕೊಂಡು ಒಳಗೊಳಗೇ ಖುಷಿಪಡುತ್ತಿದ್ದವರು ಮತ್ತೂ ಕೆಲವರು.

ಅಸಮಾಧಾನದಿಂದಲೇ, ನೀಸಾ ಮಗಳೊಂದಿಗೆ ಪ್ರವೇಶಿಸಿದಳು.

ಅರಮನೆಯ ಮೆಟ್ಟಿಲುಗಳನ್ನು ಹತ್ತಿದರೆ, ಹೆಂಗಸರಿಗಾಗಿಯೇ ಪ್ರತ್ಯೇಕವಾಗಿ ಒಂದು ಭಾಗವಿದ್ದು, ಅಲ್ಲಿದ್ದ ಹೆಂಗಸರ ಸ್ಥಾನಮಾನಗಳಿಗೆ ಅನುಗುಣವಾಗಿ, ವಸತಿ ಮನೆಗಳ ವ್ಯವಸ್ಥೆ ಇತ್ತು. ಇಲ್ಲಿ ವಾಸಿಸುತ್ತಿದ್ದವರು ಚಕ್ರವರ್ತಿಗಳ ಹೆಂಡತಿಯರು, ಮಂತ್ರಿಗಳ ಹಿರಿಯ ಆಸ್ಥಾನಿಕರ, ಅಧಿಕಾರಿಗಳ ಹೆಂಡತಿಯರಲ್ಲದೆ, ನಪುಂಸಕ ಸೇವಕರು ಮೊದಲಾದವರಾಗಿದ್ದರು.

ಈ ಜನಾನಾಕ್ಕೆ ಸರ್ಪಕಾವಲು ವ್ಯವಸ್ಥೆ ಇತ್ತು. ಆ ಹೆಂಗಸರಿಗೆ ಸಂಬಂಧಪಟ್ಟ ಗಂಡಸರಲ್ಲದೆ, ಬೇರೆ ಯಾವ ಗಂಡಿಗೂ ಪ್ರವೇಶವಿರಲಿಲ್ಲ. ಅಪ್ಪಿ ತಪ್ಪಿ ಯಾರಾದರೂ ಪ್ರವೇಶಿಸುವ ಸಾಹಸ ಮಾಡಿದ ಪಕ್ಷದಲ್ಲಿ ಅತ್ಯಂತ ಕ್ರೂರವಾದ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಆ ಹೆಂಗಸರೂ ಕೂಡಾ ಒಂದು ರೀತಿಯಲ್ಲಿ ಗೃಹ ಬಂದಿಗಳಾಗಿಯೇ ಬದುಕುತ್ತಿದ್ದರು. ಆದರೆ ಅವರಿಗೆ ಬೇಕಾದ್ದೆಲ್ಲವನ್ನೂ ಒದಗಿಸಲಾಗಿತ್ತು. ಮನರಂಜನೆ,

ಕಲಿಕೆ, ಜನಾನಾದ ಸುತ್ತಲಿನ ಪರಿಸರದಲ್ಲಿಯೇ ಉದ್ಯಾನಗಳು, ಕೊಳಗಳು, ವಿಶ್ರಾಂತಿಗಾಗಿ ಅಲ್ಲಲ್ಲಿ ಕಲ್ಲು ಬೆಂಚುಗಳು, ನೌಕಾ ವಿಹಾರಕ್ಕೂ ವ್ಯವಸ್ಥೆ ಇತ್ತು. ಮನರಂಜನೆಗೆ ನೃತ್ಯ ಸಂಗೀತ ವ್ಯವಸ್ಥೆ ಇತ್ತು. ಒಂದು ರೀತಿಯಿಂದ ಅದೊಂದು ಸ್ವಯಂಪೂರ್ಣ ಜಗತ್ತಾಗಿತ್ತು.

ಪ್ರವೇಶ ದ್ವಾರದಲ್ಲಿ ನಿಂತಿದ್ದ ರಾಜಭಟರು, ಒಂದು ಬಗೆಯ ಸಂದೇಹ ನೋಟದಿಂದ ಅವರನ್ನು ಒಳಗೆ ಬಿಟ್ಟರು. ಜನಾನಾದ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದ ಹೆಣ್ಣೊಬ್ಬಳು ಇವಳನ್ನು ಕರೆದೊಯ್ದು, ಅವಳು ಇರಬೇಕಾದ ಮನೆಯನ್ನು ತೋರಿಸಿದಳು. ಅದನ್ನು ನೋಡುತ್ತಿದ್ದಂತೆ ಮೂಗು ಮುಚ್ಚಿದಳು. ಅಸಹ್ಯವಾಯಿತು. ಈಗ ಭವ್ಯವಾದ ಬಂಗಲೆಯ ನಿರೀಕ್ಷೆ ಸಾಧ್ಯವಿಲ್ಲವಾದರೂ, ಸ್ವಲ್ಪ ವಾಸಯೋಗ್ಯವಾದ ಮನೆಯನ್ನು ಕೊಡಬಹುದಾಗಿತ್ತು. ಆದರೆ ತಾನೀಗ ಕೇವಲ ಒಬ್ಬ ಸೇವಕಿ. ಅವರವರ ಅಂತಸ್ತುಗಳಿಗೆ ತಕ್ಕದ್ದನ್ನೇ ನೀಡಲಾಗುತ್ತದೆ. ಸೇವಕಿಯರಿಗೆ, ಸಂಗೀತಗಾರರಿಗೆ, ಕಲಾವಿದರಿಗೆ, ನಾಚ್‌ವಾಲಿಗಳಿಗೆ ಗುಲಾಮರ ಹೆಂಡತಿಯರಿಗೆ ಇಕ್ಕಟ್ಟಾದ ಮನೆಗಳು ಇಲ್ಲವೆ ವರಾಂಡಾಗಳು, ಬೇಸಗೆಯ ಮಂಟಪಗಳು, ವಿದ್ಯಾ ಶಾಲೆಗಳು, ಗುಡಿಸಲುಗಳು!

ಮೆಹರುನ್ನೀಸಾಗೆ ತಾನು ಹಿಂದೆ ಕಳೆದ ದಿನಗಳ ನೆನಪಾಯಿತು. ಆಗ ರಾಜಸಂಸಾರಕ್ಕೆ ಬಹಳ ಹತ್ತಿರದವಳಾಗಿ ಇದ್ದುದೆ ಅಲ್ಲದೆ ರುಖೈಯ್ಯಾ ಬೇಗಂರ ಆಪ್ತ ಸೇವಕಿಯಾಗಿದ್ದರಿಂದ, ಪೂರ್ಣ ಸ್ವಾತಂತ್ರ್ಯವಿತ್ತು. ಎಲ್ಲಿ ಬೇಕಾದರೂ ಓಡಾಡ ಬಹುದಾಗಿತ್ತು. ಜನಾನಾದ ಮೂಲೆ ಮೂಲೆಗಳನ್ನು, ಅಲ್ಲಿನ ವ್ಯವಸ್ಥೆಯನ್ನು ಹೆಂಗಸರ ಸ್ವಭಾವವನ್ನು ಅವರ ನಡುವಿನ ಅಂತಃಕಲಹಗಳನ್ನು, ರಾಜಕೀಯವನ್ನು ಮತ್ತು ಇನ್ನೂ ಅನೇಕ ಸಂಗತಿಗಳನ್ನು ಬಲ್ಲವಳಾಗಿದ್ದಳು. ಆದರೆ ಈಗ ತಾನು ಪರಕೀಯಳು ಅಸಹಾಯಕಳು, ಜಹಾಂಗೀರನ ದಯಾಭಿಕ್ಷೆಯಲ್ಲಿ ಬದುಕಬೇಕಾದವಳು. ತನ್ನ ವಸತಿ ಗೃಹ ಇಷ್ಟವೋ ಅನಿಷ್ಟವೋ ಅದರಲ್ಲಿಯೇ ಉಳಿಯಬೇಕಾದ ಅನಿವಾರ್ಯತೆ ಇದೆ.

ಜನಾನಾ ಪ್ರವೇಶಿಸುತ್ತಿದ್ದಂತೆ ಮೊದಲಿಗೆ ನೆನಪಾದದ್ದು, ತನ್ನ ಪ್ರೀತಿಯ ಯಜಮಾನಿ ರುಖೈಯ್ಯಾ ಬೇಗಂ. ಅವರೊಂದಿಗೆ ಮೆಹರುನ್ನೀಸಾ ಬಹಳ ಸಲುಗೆಯಿಂದ ಇರುತ್ತಿದ್ದಳು. ರುಖೈಯ್ಯಾ ಬೇಗಂರೇ ಜನಾನಾದ ಯಜಮಾನಿಯಾಗಿದ್ದರು. ಅಂದರೆ ಜನಾನಾವನ್ನು ಆಳುತ್ತಿದ್ದರು. ತುಂಬ ಶಿಸ್ತಿನಿಂದ ನಡೆಸುತ್ತಿದ್ದರು. ಅಲ್ಲಿನ ಹೆಂಗಸರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು. ಜನಾನಾದ ಖರ್ಚುವೆಚ್ಚಗಳ ಲೆಕ್ಕಾಚಾರದ ಜವಾಬ್ದಾರಿಯೂ ಅವರದೆ ಆಗಿತ್ತು.

ತಾನು ಹೋಗಿ ಮೊದಲು ಅವರನ್ನು ಭೇಟಿಯಾಗಬೇಕೆಂದುಕೊಂಡಳು.

ಮಗಳನ್ನು ಕರೆದುಕೊಂಡು ರುಖೈಯ್ಯಾರ ಮನೆ ಪ್ರವೇಶಿಸುತ್ತಿದ್ದಂತೆ ಲಾಡ್ಲಿ, ಅಲ್ಲಿನ ವೈಭವವನ್ನು ನೋಡಿ ದಂಗಾದಳು. ಅಮೂಲ್ಯವಾದ ಮುತ್ತು ರತ್ನಗಳಿಂದ ಹೆಣೆದ ಪರದೆಗಳು, ಬೆಳ್ಳಿ ದೀಪದಾನಿಗಳು, ಪಚ್ಚೆ ಕಲ್ಲಿನಿಂದ ಮಾಡಿದ ಮಧುಪಾತ್ರೆಗಳು! ಗೋಡೆಗಳನ್ನು ಅಲಂಕರಿಸಿದ್ದ ಭಿತ್ತಿ ಚಿತ್ರಗಳು, ಅಲ್ಲಲ್ಲಿ ಅತ್ಯಂತ ಕುಶಲಕಲೆಗಾರಿಕೆಯಿಂದ ಮಾಡಿದ ಮೇಜು, ಮಂಚಗಳು, ಮೇಜುಗಳ ಮೇಲೆ ಸುಂದರ ಶಿಲ್ಪಕಲಾ ಕೃತಿಗಳು,

ನೆಲಕ್ಕೆ ಹಾಸಿದ ರತ್ನಗಂಬಳಿಗಳು... ಹೀಗೆ ನೋಡುತ್ತಾ ಹೋದಂತೆ ಲಾಡ್ಲಿ ತಾನೆಲ್ಲಿದ್ದೇನೆಂಬುದನ್ನೇ ಮರೆತುಬಿಟ್ಟಳು.

ಮೆಹರುನ್ನೀಸಾ ಬಂದದ್ದನ್ನು ನೋಡಿದ್ದೇ ರುಖೈಯ್ಯಾ ಬೇಗಂ ಎದ್ದು ಬಂದು "ಓಹ್ ನೀಸಾ, ಬಾ ಮಗು. ನಿನ್ನನ್ನು ನೋಡಿ ಎಷ್ಟು ದಿನವಾಯಿತು. ನೀನು ಹೋದದ್ದೆ, ಬೇಸರವೊಂದನ್ನು ಬಿಟ್ಟರೆ ಸಂತೋಷವೆಂಬುದು ಅಣುವಿನಷ್ಟೂ ನನಗೆ ಇಲ್ಲವಾಗಿದೆ. ನನ್ನ ಯಜಮಾನಿಕೆಯೂ ಇಲ್ಲ. ಮಾಡುವುದಕ್ಕೆ ಕೆಲಸವೂ ಇಲ್ಲ. ಒಮ್ಮೆಲೇ ಈಗ ನಿನ್ನನ್ನು ನೋಡಿ ಸಂತೋಷ ಉಕ್ಕಿಬರುತ್ತಿದೆ. ಅರೆ ಈ ಹುಡುಗಿ ನಿನ್ನ ಮಗಳೇ ಇರಬಹುದಲ್ಲ!" ಎಂದು ಉದ್ಗರಿಸಿದಳು.

ಮೆಹರುನ್ನೀಸಾ ಹೌದೆಂದು ತಲೆಯಾಡಿಸಿ, ಲಾಡ್ಲಿ ಬೇಟಾ ಪಾದಶಾಹ್ ಬೇಗಂರಿಗೆ ಸಲಾಮ್ ಹೇಳುವುದಿಲ್ಲವೆ? ಎಂದಾಗ, ಲಾಡ್ಲಿ ಸಲಾಂ ಹೇಳಿದಳು.

ರುಖೈಯ್ಯಾ ಅವಳನ್ನು ಹತ್ತಿರಕ್ಕೆ ಬರಸೆಳೆದುಕೊಂಡು ಮುದ್ದಾಡಿದಳು. ತನ್ನ ಹಿಂದೆ ಗಾಳಿ ಬೀಸುತ್ತಿದ್ದ ಸೇವಕಿಗೆ ಒಣ ಹಣ್ಣುಗಳನ್ನು ಲಾಡ್ಲಿಗೆ ತಂದುಕೊಡುವಂತೆ ಹೇಳಿದಳು.

ಹಣ್ಣುಗಳನ್ನು ತನ್ನ ಮುಂದಿಟ್ಟಾಗ ಲಾಡ್ಲಿ ಸಂಕೋಚದಿಂದ ಹಿಂದೆ ಸರಿದಳು.

"ತಗೋ ಬೇಟಾ. ಇವೆಲ್ಲಾ ನಿನಗಾಗಿ. ಸಂಕೋಚಬೇಡ. ನಿನ್ನ ಅಮ್ಮಿಜಾನ್‌ಳನ್ನು ಕಂಡರೆ ನನಗೆ ತುಂಬಾ ಪ್ರೀತಿ. ಈಗ ನೀನೂ ನನಗೆ ಪ್ರಿಯವಾಗಿದ್ದಿ" ಎಂದು ಮತ್ತೊಮ್ಮೆ ಅವಳ ಕೆನ್ನೆ ಚಿವುಟಿದಳು. ದೊಡ್ಡವರ ನಡುವೆ ತನ್ನದೇನು ಕೆಲಸ ಎಂದು ಲಾಡ್ಲಿ ಮೆಲ್ಲಗೆ ಅಲ್ಲಿಂದ ನುಸುಳಿ, ಅಂಗಳದತ್ತ ಓಡಿದಳು. ಅಂಗಳದ ತುಂಬೆಲ್ಲಾ ಅಡ್ಡಾಡಿದಳು. ಅಲ್ಲಲ್ಲಿ ಕಾಣುತ್ತಿದ್ದ ಮರಗಳು, ಸಣ್ಣ ಸಣ್ಣ ಕೊಳಗಳನ್ನು ನೋಡಿ ಬಂದಳು. ಒಂದು ದೊಡ್ಡ ಮರದ ಕಟ್ಟೆಯ ಮೇಲೆ ಬಿಳಿ ಬೂದು ಬಣ್ಣದ ಪಾರಿವಾಳಗಳು ಕಾಣಿಸಿದವು. ಅವುಗಳತ್ತ ಓಡಿದಳು.

ಮೆಹರುನ್ನೀಸಾಗೆ, ಅವಳ ಜೊತೆ ಲಾಡ್ಲಿ ಇಲ್ಲದ್ದು ಗಮನಕ್ಕೆ ಬಂದಿರಲಿಲ್ಲ.

"ನೀಸಾ ನಿನ್ನ ಕತೆ ಕೇಳಿ ನನಗೆ ತುಂಬಾ ಸಂಕಟವಾಗುತ್ತೆ. ಒಮ್ಮೊಮ್ಮೆ ನಿನ್ನ ಈ ಸ್ಥಿತಿಗೆ ಪರೋಕ್ಷವಾಗಿ ನಾನೂ ಕಾರಣವೇನೋ ಎನಿಸುತ್ತದೆ. ಆದರೆ ಬಾದಶಾಹರ ಮಾತಿಗೆ ಪ್ರತಿ ಹೇಳುವ ಹಾಗಿರಲಿಲ್ಲ. ಸಲೀಂ ಕೂಡಾ ಎಷ್ಟೋ ಬಾರಿ ಬಂದು, ಬಾದಶಾಹರಲ್ಲಿ ತನ್ನ ಪರವಾಗಿ ಮಾತನಾಡುವಂತೆ ಒತ್ತಾಯಿಸಿದ. ನಿನಗೆ ಗೊತ್ತಿಲ್ಲ. ರಾಜಕೀಯದಲ್ಲಿ ಪ್ರೀತಿಯೊಂದೇ ಕೆಲಸ ಮಾಡುವುದಿಲ್ಲ. ರಾಜಕೀಯ ಸಂಬಂಧಗಳ ಕಡೆಗೇ ಒಲಿಯುವುದು ಸರ್ವೇಸಾಮಾನ್ಯ. ನಿಮ್ಮಿಬ್ಬರ ಪ್ರೀತಿಯ ವದಂತಿಗಳು ಟೀಕೆ ಟಿಪ್ಪಣಿಗಳು ಅದರ ಪರಿಣಾಮಗಳು ಏನಾಗಬಹುದೋ ಎಂದು ಹೇಳಿ ಆತುರಾತುರದಲ್ಲಿ ನಿನ್ನ ಮದುವೆ ಮಾಡಬೇಕಾಗಿ ಬಂತು. ನನಗೆ ಗೊತ್ತು. ಈಗಲೂ ಜಹಾಂಗೀರ್ ನಿನ್ನನ್ನು ಪ್ರೀತಿಸುತ್ತಿದ್ದಾನೆ. ಆದರೆ..... ಆದರೆ... ಸಾಮ್ರಾಜ್ಯದ ಹೊಣೆಗಾರಿಕೆಯಿಂದ ಮೊದಲಿನ ಹುಡುಗಾಟಿಕೆ ಸಾಧ್ಯವಿಲ್ಲ.

"ಬೇಗಂ ಸಾಹಿಬಾ ನನ್ನ ಹಣೆಯಲ್ಲಿ ಹೇಗೆ ಬರೆದಿದ್ದರೆ ಹಾಗಾಗಲಿ. ಸ್ವತಂತ್ರವಾಗಿ, ಸ್ವಚ್ಛಂದವಾಗಿ ತಿರುಗಾಡುತ್ತಿದ್ದ ನಾನು ಇಂದು ಸಂಕೋಲೆಗಳಲ್ಲಿ, ಹಂಗಿನಲ್ಲಿ ಬದುಕ ಬೇಕಾದ ದುರ್ದೈವ ನನ್ನದಾಗಿದೆ. ಆದರೆ ನೀವಿದ್ದೀರೆನ್ನುವುದೇ ನನ್ನ ಸಂತೋಷ. ನಿಮ್ಮ ಮತ್ತು ಸಲೀಮಾ ಸುಲ್ತಾನ್ ಬೇಗಂರ ಸೇವೆಯಲ್ಲಿ ನಮ್ಮ ಸಮಯ ಕಳೆಯುತ್ತೇವೆ.

ನನ್ನನ್ನು ಕೊಲ್ಲುತ್ತಿರುವ ಚಿಂತೆಯೆಂದರೆ, ನನ್ನ ಗಂಡನ ಕೊಲೆಗಾರನ ಆಶ್ರಯದಲ್ಲಿ ಜೀವಿಸಬೇಕಾದ ದುರಂತ ನನ್ನದಾಯಿತಲ್ಲ ಎಂಬುದು."

"ಮೆಹರುನ್ನೀಸಾ ಮನಸ್ಸನ್ನು ಇಷ್ಟು ಚಿಕ್ಕದು ಮಾಡಿಕೊಳ್ಳಬೇಡ. ಅಲ್ಲಾಹ್‌ನ ದಯೆಯಿದ್ದರೆ ಎಲ್ಲವೂ ಸುಸೂತ್ರವಾಗಿ ನಿನ್ನ ಆಸೆಗಳೆಲ್ಲ ನೇರವೇರುತ್ತದೆ. ನಾವೆಲ್ಲ ನಿನ್ನ ಕಷ್ಟಕ್ಕೆ ಇರುತ್ತೇವೆ."

"ಬೇಗಂ ಸಾಹಿಬಾ. ನಾನು ಈ ಸ್ಥಿತಿಯಲ್ಲಿ ಜನಾನಾದಲ್ಲಿ ಇರಲು ಇಷ್ಟಪಡುವುದಿಲ್ಲ. ನನ್ನನ್ನು ನನ್ನ ಮಗಳನ್ನು ನಮ್ಮ ಮನೆಗೆ ಕಳುಹಿಸಿಕೊಡುವಂತೆ ಬಾದಶಾಹರಿಗೆ ಒಂದು ಮಾತು ಹೇಳಿ, ಸಾಕು."

"ಮಗು ಜನಾನಾದಲ್ಲಿ ಇರಿಸಲು ಏನೋ ಕಾರಣವಿದೆ. ನಿನಗೆ ಹಾನಿಯಾಗ ಬಾರದೆಂದೇ ಈ ಭದ್ರಕೋಟೆಯಲ್ಲಿರಲು ಆದೇಶಿಸಿರಬೇಕು. ಯೋಚನೆ ಮಾಡದೆ, ನಿಶ್ಚಿಂತೆಯಿಂದ ಇರು. ನಿನ್ನ ವಸತಿಯನ್ನು ಇನ್ನೂ ಮೇಲ್ದರ್ಜೆಯದಕ್ಕೆ ಬದಲಾಯಿಸುವಂತೆ ಹೇಳುತ್ತೇನೆ."

"ಅದಕ್ಕೂ ಮೊದಲು ನನ್ನ ಕೈಗೆ ಕೆಲಸ ಕೊಡಿ. ಸುಮ್ಮನೆ ಕುಳಿತು ತಿನ್ನುವುದು, ಅದೂ ಹಂಗಿನಲ್ಲಿ, ನನ್ನ ಮನಸಾಕ್ಷಿಗೆ ಒಪ್ಪುವುದಿಲ್ಲ. ನನ್ನ ಗಂಡನ ದುರಂತ ಸಾವನ್ನು ನನಗೆ ಮರೆಯಲು ಸಾಧ್ಯವಾಗುತ್ತಿಲ್ಲ. ಪದೇ ಪದೇ ಆ ಭಯಾನಕ ದೃಶ್ಯ ಕಣ್ಮುಂದೆ ಬರುತ್ತದೆ. ನನ್ನ ಮಗಳು ಎಷ್ಟು ಹೆದರಿದ್ದಾಳೆಂದರೆ, ನಿದ್ದೆಯಲ್ಲೂ ಕಿರುಚಿಕೊಂಡು ಎದ್ದು ಬಿಡುತ್ತಾಳೆ. ಎಲ್ಲವನ್ನೂ ಮರೆಯಲು ನಾನೇನಾದರೂ ಕೆಲಸಮಾಡಿ ನನ್ನ ಅನ್ನವನ್ನು ನಾನು ಸಂಪಾದಿಸಿಕೊಳ್ಳುತ್ತೇನೆ. ನನಗೆ ಕಸೂತಿ, ಹೊಲಿಗೆ, ಉಡುಪು ವಿನ್ಯಾಸ ಎಲ್ಲವೂ ಗೊತ್ತಿದೆ. ಜನಾನಾದ ಹೆಂಗಸರ ಬಟ್ಟೆ ಬರೆ, ಕಸೂತಿ ಇತ್ಯಾದಿಗಳಲ್ಲಿ ತೊಡಗಿಸಿಕೊಂಡು ಹಣ ಸಂಪಾದಿಸಿ, ಅದರಿಂದ ಬದುಕುತ್ತೇನೆ. ಇದಕ್ಕೆ ವ್ಯವಸ್ಥೆ ಮಾಡಿದರೆ ಬಹಳ ಉಪಕಾರವಾಗುತ್ತದೆ" ಎಂದು ಹೇಳಿ ಸುಮ್ಮನಾದಳು.

ರುಖೈಯ್ಯಾ ಸೇವಕಿಯನ್ನು ಕರೆದು, ಚೆನ್ನಾಗಿ, ವ್ಯವಸ್ಥಿತವಾಗಿ ಇರುವ ವಸತಿಗೆ ಸ್ಥಳಾಂತರಿಸುವಂತೆ ಆದೇಶಿಸಿದಳು.

"ನೀಸಾ ಈಗ ತಕ್ಷಣಕ್ಕೊಂದು ಕೆಲಸಕೊಡುತ್ತೇನೆ. ನನ್ನಿಂದಲೆ ನಿನ್ನ ಕೆಲಸ ಆರಂಭವಾಗಲಿ. ಬಟ್ಟೆಹೊಲಿಯುವುದರಲ್ಲಿ ನಿನಗಿರುವ ಕೈಚಳಕ ನನಗೆ ಗೊತ್ತು. ಆದರೆ ಬಾಯಲ್ಲಿ ಹೇಳಿದರೆ ಯಾರಿಗೂ ನಂಬಿಕೆ ಬರುವುದಿಲ್ಲ. ಹೇಗಿದ್ದರೂ ಇನ್ನೇನು 'ಅಬೇ ಪಾಷಾನ್' ಹಬ್ಬ (ಮುಂಗಾರು ಮಳೆ ಬರುವ ದಿನಗಳಲ್ಲಿ ಬರುವಂಥಾ ಹಬ್ಬ) ಹತ್ತಿರದಲ್ಲಿಯೆ ಇದೆ. ಪ್ರತಿಯೊಬ್ಬರೂ ಹೊಸ ಬಟ್ಟೆಯನ್ನು ತಪ್ಪದೆ ಹೊಲಿಸಿಕೊಳ್ಳುತ್ತಾರೆ. ನನಗೆ ನೀನೊಂದು ಹೊಸ ವಿನ್ಯಾಸದಲ್ಲಿ ಎಲ್ಲರ ಕಣ್ಣುಕುಕ್ಕುವಂತೆ ಹೊಲಿದುಕೊಡು."

"ಬೇಗಂ ಸಾಹಿಬಾ ನಾನೂ ಅದನ್ನೇ ಹೇಳಬೇಕೆಂದಿದ್ದೆ. ಆ ಹಬ್ಬವನ್ನು ತುಂಬ ಸಂಭ್ರಮದಿಂದ ಅರಮನೆಯಲ್ಲಿ ಆಚರಿಸುತ್ತಾರೆ. ನಿಮಗಾಗಿ ನಾನು ಒಂದು ಹೊಸ ರೀತಿಯ ಉಡುಪನ್ನು ಹೊಲಿದುಕೊಡುತ್ತೇನೆ. ನಿಮಗೆ ಇಷ್ಟವಾಗಬಹುದು ಎನಿಸುತ್ತದೆ."

"ಹಾಗೆಯೇ ಮಾಡು, ನನಗಷ್ಟೇ ಅಲ್ಲ. ನಿಮಗೂ ಬೇಕಾದ ಬಟ್ಟೆ ಹೊಲಿದುಕೊಳ್ಳಿ."

"ಬೇಗಂ ಸಾಹಿಬಾ, ಈಗ ನಾನು ಶೋಕಾಚರಣೆಯಲ್ಲಿ ಇದ್ದೀನಿ. ಇನ್ನು ಮುಂದೆ

ನಾನು ಯಾವುದೇ ಬಣ್ಣದ ಬಟ್ಟೆಗಳನ್ನು ಉಡುವುದಿಲ್ಲ. ದಯವಿಟ್ಟು ನನಗೆ ಬಿಳಿಯ ಬಟ್ಟೆಗಳನ್ನು ತರಿಸಿಕೊಡಿ. ನನ್ನ ಮಗಳಿಗೆ ಬೇಕಾದರೆ ಹೊಲಿದು ಕೊಡುತ್ತೇನೆ."

"ಎಷ್ಟು ದಿನಾಂತ ಹೀಗೆ ಅಳುತ್ತಾ ಕುಳಿತುಕೊಳ್ಳುತ್ತಿ?"

"ದಿನಗಳೇನು ಬಂತು? ನನ್ನ ಮುಂದಿನ ಬದುಕಿನ ಹಣೇಬರಹವೇ ಹಾಗಾಗಿದೆ."

"ಆ ಮಾತು ಬಿಡು. ಈಗ ನಿನ್ನ ವೃತ್ತಿ ಆರಂಭಿಸು. ನನ್ನ ದಾಯಾದಿ ಬಂಧುಗಳಲ್ಲಿ, ಕೆಲವರು ಹೆಣ್ಣು ಮಕ್ಕಳಿದ್ದಾರೆ. ಅವರದನ್ನೂ ನೀನು ಹೊಲಿದು ಕೊಡು. ಈಗ ನೀನು ನಿನ್ನ ಮನೆಗೆ ಹೋಗಿ, ವ್ಯವಸ್ಥೆ ಮಾಡಿಕೋ, ನಿನಗೆ ಬೇಕಾದ ವಸ್ತುಗಳನ್ನೆಲ್ಲ ಕಳಿಸಿಕೊಡುತ್ತೇನೆ."

ಜನಾನಾದಲ್ಲಿ ಹಬ್ಬದ ಸಂಭ್ರಮ ಶುರುವಾಯಿತು. ಇಲ್ಲಿನ ಹೆಣ್ಣುಮಕ್ಕಳಿಗೆ, ಇಂಥ ಹಬ್ಬಗಳೇ, ತಮ್ಮ ಉಡುಪು, ಒಡವೆಗಳ ಪ್ರದರ್ಶನಕ್ಕೆ ವೇದಿಕೆಗಳು. ತಮ್ಮದನ್ನು ನೋಡಿದವರೆಲ್ಲ ಮೆಚ್ಚಬೇಕು ಎನ್ನುವ ಉದ್ದೇಶದಿಂದ ಹೊಸ ಹೊಸ ವಸ್ತ್ರಾಭರಣಗಳನ್ನು ಧರಿಸಿ ಅಡ್ಡಾಡುತ್ತಿದ್ದರು. ಅಲ್ಲಿನವರಿಗಾಗಿ ಸಂಗೀತ ಸ್ಪರ್ಧೆ, ಕಾವ್ಯ ಸ್ಪರ್ಧೆಗಳು ಇರುತ್ತಿದ್ದವು. ರುಖೈಯ್ಯಾ ಬೇಗಂ ಮತ್ತು ಆಕೆಯ ಸಂಬಂಧಿ ಹೆಣ್ಣುಮಗಳು ಧರಿಸಿದ್ದ ಪರದೆ, ಕಾಬಾಗಳಂತೂ ಮುತ್ತುಗಳಿಂದ, ಚಿನ್ನದ ಎಳೆಗಳಿಂದ ಕಸೂತಿ ಮಾಡಿದ್ದ ವಿನ್ಯಾಸ, ಸರಿಹೊಂದುವ ರೇಶಿಮೆ, ವೆಲ್ವೆಟ್, ಬಟ್ಟೆಗಳ ಬಣ್ಣಗಳಿಂದ ದೂಡಿದ್ದವು. ಅವರು ಪ್ರವೇಶಿಸುತ್ತಿದ್ದಂತೆಯೇ ಎಲ್ಲರ ಗಮನ ಅತ್ತಕಡೆ ಹರಿಯಿತು. ಎಂದೂ ಕಾಣದಿದ್ದ ವಿನ್ಯಾಸ, ಅತ್ಯಂತ ಸೂಕ್ಷ್ಮವಾದ ಕಸೂತಿ ಕೈಚಳಕ. ಮನಸ್ಸಿನಲ್ಲಿ ವಾರೆವ್ವಾ ಎಂದುಕೊಂಡರು. ಇಂತಹ ವಿಭಿನ್ನ ರೀತಿಯ ಉಡುಪನ್ನು ಸಿದ್ಧಪಡಿಸಿದ ಕೈಗಳು ಯಾರದೆಂಬ ಜಿಜ್ಞಾಸೆ ಶುರುವಾಯಿತು.

ಮೆಹರುನ್ನೀಸಾ ತಾನೆಂದುಕೊಂಡಂತೆ, ಅತ್ಯಂತ ಸರಳವಾದರೂ ಮೋಹಕವಾದ, ಪಾರದರ್ಶಕ ಕಾಬಾದೊಂದಿಗೆ ಪ್ರವೇಶಿಸಿದಳು. ಸ್ಯಾಟಿನ್ ಚೂಡಿದಾರವನ್ನು ಧರಿಸಿದ್ದಳು. ತುಂಬಾ ನವಿರಾದ ಬಿಳಿಯ ಪಾದರಕ್ಷೆಗಳನ್ನು ಧರಿಸಿದ್ದಳು.

ವಿಚಿತ್ರವಾದ ಎಲ್ಲರ ನೋಟ ಅವಳತ್ತ ಹರಿಯಿತು. ಕೆಲವರು ಹಿರಿಯರು, ಮೆಹರುನ್ನೀಸಾಳನ್ನು ಗುರುತಿಸಿದರು. ಅವಳನ್ನು ಕುರಿತ ಸುದ್ದಿಗಳು ಒಬ್ಬರಿಂದೊಬ್ಬರಿಗೆ ಮುಟ್ಟಿದ್ದವು. ಇಂಥ ಪ್ರತಿಭಾವಂತ ಹೆಣ್ಣುಮಗಳಿಗೆ ಒದಗಿದ್ದ ಸ್ಥಿತಿಗಾಗಿ ಮರುಗಿದರು. ಇಂದು ಅವಳು ವಿನ್ಯಾಸಗೊಳಿಸಿದ್ದ ಉಡುಪಿನ ಬಗ್ಗೆಯಂತೂ ದಿಗ್ಭ್ರಮಿತರಾಗಿದ್ದರು. ಅಷ್ಟೇ ಅಲ್ಲ, ಮುಂದೆಲ್ಲ ತಮ್ಮ ಉಡುಪುಗಳನ್ನು ಅವಳಿಂದಲೇ ಹೊಲಿಸಿಕೊಳ್ಳಬೇಕೆಂಬ ತೀರ್ಮಾನಕ್ಕೆ ಬಂದರು.

ಮೆಹರುನ್ನೀಸಾಳಿಗೆ ನಿರೀಕ್ಷಿಸಲಾಗದಷ್ಟು ಬೇಡಿಕೆ ಬಂತು. ಸುದ್ದಿ ಜನಾನಾದ ಆಚೆಗೂ ಹಬ್ಬಿತು. ಹೊರಗಡೆಯಿಂದಲೂ ದೊಡ್ಡ ಪ್ರಮಾಣದಲ್ಲಿ ಬೇಡಿಕೆ ಬಂದದ್ದಕ್ಕಾಗಿ ಜನಾನಾದ ಕೆಲ ಹೆಣ್ಣು ಮಕ್ಕಳಿಗೆ ತರಬೇತಿ ಕೊಟ್ಟು ತನ್ನ ಸಹಾಯಕ್ಕೆ ನೇಮಿಸಿಕೊಂಡಳು.

ಅವಳ ಜೊತೆಗೂಡಿ, ತಾವೂ ಅವಳ ಸಹಾಯಕ್ಕೆ ನಿಲ್ಲಬೇಕು. ಅವಳಿಂದ ಕಲಿಯಬೇಕೆನ್ನುವ ಉತ್ಸಾಹಿ ಹೆಣ್ಣುಗಳು ನಾನು ತಾನು ಎಂದು ಮುಗಿಬಿದ್ದರು. ಮೆಹರುನ್ನೀಸಾ ಯಾರನ್ನೂ ನಿರಾಕರಿಸಲಿಲ್ಲ. ಅವರ ಉತ್ಸಾಹ, ಆಸಕ್ತಿಗಳು ಅವಳಿಗೆ

ದೊಡ್ಡ ಪ್ರಚೋದನೆಯಾಯಿತು. ಎಲ್ಲರಿಗೂ ಒಂದೇ ರೀತಿಯ ಕೆಲಸ ಕೊಡುವುದಕ್ಕಿಂತ ಬೇರೆಬೇರೆ ರೀತಿಯ ಕೆಲಸಗಳಿಗೆ ಹಚ್ಚಿದಳು. ಕಸೂತಿ, ಹೆಣಿಗೆ, ಮಣಿ ಪರದೆಗಳು ಇತ್ಯಾದಿಗಳ ತಯಾರಿಕೆಗೆ ಬೇರೆ ಬೇರೆ ಹೆಂಗಸರನ್ನು ತೊಡಗಿಸಿದಳು.

ಬೇಡಿಕೆಯ ಒತ್ತಡ ದಿನೇ ದಿನೇ ಹೆಚ್ಚುತ್ತಿದ್ದುದರಿಂದ, ಒಂದು ಉದ್ಯಮ ರೀತಿಯಲ್ಲಿ ಪರಿವರ್ತಿಸಿದಳು. ಇಲ್ಲಿ ತಯಾರಾದ ವಸ್ತುಗಳು, ಉಡುಪುಗಳು, ಪರದೆಗಳು, ರತ್ನಗಂಬಳಿಗಳು, ಅಮೂಲ್ಯ ರತ್ನಗಳಿಂದ ತಯಾರಿಸಿದ ಹೂದಾನಿಗಳು, ದೀಪದಾನಿಗಳು, ತೂಗು ದೀಪಗಳು... ಇತ್ಯಾದಿ ಒಂದೊಂದಾಗಿ ಉತ್ಪನ್ನಗಳ ಸಂಖ್ಯೆ ಮೀರಿತು. ಆಕರ್ಷಕವಾದ ಕಸೂತಿಯಿಂದ ಕೂಡಿದ ವಸ್ತ್ರಗಳಂತೂ ಮುಘಲ ಸಾಮ್ರಾಜ್ಯದಲ್ಲೆಲ್ಲ ಪ್ರಚಲಿತವಾದವು. ಅವಳ ತಯಾರಿಕೆಯ ವಸ್ತುಗಳಲ್ಲಿ ಅವಳ ಛಾಪು ಇರುತ್ತಿತ್ತು. ಅವಳ ಕಲಾದೃಷ್ಟಿ, ಅಭಿರುಚಿಗಳು ಅತ್ಯುತ್ತಮ ಮಟ್ಟದ್ದಾಗಿದ್ದವು. ಸಾಮ್ರಾಜ್ಯದಲ್ಲಿನ ಹೆಸರಾಂತ ಉಡುಪು ತಯಾರಕರನ್ನೂ ಮೀರಿಸುವಂತಾದವು. ಅವಳ ಮೇಲ್ವಿಚಾರಣೆಯಲ್ಲಿ, ಯಾಜಮಾನ್ಯದಡಿಯಲ್ಲಿ ತಯಾರಾದ ಅತ್ಯಂತ ಕಲಾತ್ಮಕವಾದ, ಮೇಲ್ಮಟ್ಟದ ವಸ್ತುಗಳಿಗೆ, ಶ್ರೀಮಂತ ವರ್ಗದವರಿಂದ, ವ್ಯಾಪಾರ, ವಾಣಿಜ್ಯೋದ್ಯಮಿಗಳಿಂದ ಬಹಳವಾಗಿ ಬೇಡಿಕೆಯಿತ್ತು. ತನ್ನ ಪ್ರತಿಭೆ, ಕೌಶಲ್ಯಗಳಿಂದ ಸಾಮ್ರಾಜ್ಯದಲ್ಲಿ ಬಹಳವಾಗಿ ಗುರುತಿಸಿಕೊಂಡಳು.

ಆಸ್ಥಾನಿಕರ, ಅಧಿಕಾರಿಗಳ, ಶ್ರೀಮಂತವರ್ಗದ ಹೆಂಗಸರು ಹಬ್ಬ ಹರಿದಿನಗಳಲ್ಲಿ ಅವಳಿಂದ ತಯಾರಾದ ವಸ್ತುಗಳಿಲ್ಲದೆ, ಉಡುಪುಗಳಿಲ್ಲದೆ ಕಾಣಿಸಿಕೊಳ್ಳುತ್ತಿರಲಿಲ್ಲ. ಅದ್ಭುತ ವಸ್ತ್ರವಿನ್ಯಾಸಕಳು, ಅನನ್ಯ ಅಭಿರುಚಿಯುಳ್ಳವಳೆಂದು ಇಡೀ ಸಾಮ್ರಾಜ್ಯದಲ್ಲಿ ಪ್ರಖ್ಯಾತಳಾದಳು. ಜನಾನಾದ ಹೆಂಗಸರ ಸಹಕಾರ, ಪರಿಶ್ರಮಗಳಿಂದ ಬಹುದೊಡ್ಡ ಉದ್ಯಮ ಸಂಸ್ಥೆಯನ್ನೇ ಹುಟ್ಟುಹಾಕಿದಳು. ಹಗಲು ರಾತ್ರಿ ತಾನೂ ದುಡಿಯುತ್ತಿದ್ದುದಲ್ಲದೆ, ಅವಳಂತೆಯೇ ದುಡಿಯಬೇಕೆನ್ನುವ ಮನಃಸ್ಥಿತಿಯನ್ನು ಎಲ್ಲರಲ್ಲಿಯೂ ಸೃಷ್ಟಿಸಿದಳು. ಬೇಸರದ ಸಂದರ್ಭಗಳಲ್ಲಿ ಮುಷಾಯಿರ ಕಾರ್ಯಕ್ರಮಗಳನ್ನು ಏರ್ಪಡಿಸಿದಳು.

ಮಧ್ಯೆ ಮಧ್ಯೆ ಹೆಂಗಸರ ಶಿಕ್ಷಣ ಶಿಬಿರಗಳನ್ನು, ಧಾರ್ಮಿಕ ವಿಷಯ ಸಂಬಂಧವಾದ ಶಿಬಿರಗಳನ್ನು ಕೌಶಲ್ಯ ಕಲಿಕಾ ಶಿಬಿರಗಳನ್ನು ಏರ್ಪಡಿಸುತ್ತಿದ್ದಳು. ಹೊಸ ವಿಚಾರಗಳತ್ತ ಅಲ್ಲಿನ ಹೆಂಗಸರ ಮನಸ್ಸುಗಳನ್ನು ತಿರುಗಿಸಿದಳು. ಹೆಣ್ಣಿನ ಮಹತ್ವ, ಸ್ವಾತಂತ್ರ್ಯ, ಸ್ವಾವಲಂಬನೆಗಳ ಬಗ್ಗೆ ಅರಿವು ಮೂಡುವಂತೆ ಮಾಡಿದಳು. ಜಗತ್ತಿನಲ್ಲಿ ಹೆಣ್ಣಿಗೂ ತನ್ನದೇ ಆದ ಅಸ್ತಿತ್ವವಿದೆ; ಅರ್ಥವಿದೆ; ಅನನ್ಯತೆಯಿದೆ. ಗಂಡಿನ ಮೋಜಿಗೇ ತಮ್ಮನ್ನು ಮೀಸಲಿರಿಸಿಕೊಂಡು ಬದುಕುವುದಲ್ಲ, ತನ್ನ ಆತ್ಮಗೌರವ, ಅನನ್ಯತೆ, ಪ್ರತಿಷ್ಠೆಗಳನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸಬೇಕು. ತಮ್ಮಲ್ಲಿರುವ ಪ್ರತಿಭೆ, ಸಾಮರ್ಥ್ಯಗಳು ಜಗತ್ತಿನ ಕಣ್ಣಿಗೆ ಬೀಳುವಂತಾಗಬೇಕು. ಕೇವಲ ಖೈದಿಗಳಂತೆ, ಗುಲಾಮರಂತೆ, ನಿಟ್ಟುಸಿರಿಡುತ್ತಾ ಬದುಕುವ ಹಣೆಬರಹವನ್ನು ಅಳಿಸಿಹಾಕುವ ಪ್ರಯತ್ನಕ್ಕೆ ಮುಂದಾಗಬೇಕು ಎನ್ನುವುದು ಅವಳ ಬಹುದೊಡ್ಡ ಆಶಯ ಮತ್ತು ಕನಸಾಗಿತ್ತು.

ಜನಾನಾದಲ್ಲಿನ ಹೆಂಗಸರ ದಾರುಣ ಬದುಕನ್ನು ಗಮನಿಸಿದಳು. ಅದರಲ್ಲಿಯೂ ನಾಚ್‌ವಾಲಿಗಳ ಮತ್ತು ಉಪಪತ್ನಿಯರ ಸ್ಥಿತಿಯಂತೂ ಅತ್ಯಂತ ಘೋರವಾಗಿತ್ತು.

ವಯಸ್ಸಾದ ಮೇಲಂತೂ ಇನ್ನೂ ಭಯಾನಕ ಸ್ಥಿತಿ ತಲುಪುತ್ತಿದ್ದರು. ರಸಹೀರಿಕೊಂಡು ತಿಪ್ಪೆಗೆಸೆಯಬಹುದಾದ ಸಿಪ್ಪೆಯಂತಿರುತ್ತಿದ್ದರು. ಅಂತಹವರಿಗೆಲ್ಲ ಹೊಸ ಬದುಕನ್ನು ಕಲ್ಪಿಸಿದಳು. ಅಂತಹ ಹೆಂಗಸರ ಪಾಲಿಗೆ ಮೆಹರುನ್ನೀಸಾ ದೇವದೂತಳಂತೆ ಕಂಡು ಬಂದಳು. ದುಃಖ ದುಗುಡಗಳನ್ನು ಬದಿಗೆ ಸರಿಸಿ ಪುನಃಶ್ಚೇತನಗೊಂಡ ಆತ್ಮಗಳಂತೆ, ಉತ್ಸಾಹ, ಹುಮ್ಮಸ್ಸುಗಳಿಂದ, ತಮ್ಮ ತಮ್ಮ ಅಭಿರುಚಿ, ಸಾಮರ್ಥ್ಯಗಳಿಗೆ ಅನುಗುಣವಾಗಿ, ನೂರಾರು ಹೆಂಗಸರು, ಬಾಡಿಹೋದ ಗುಲಾಬಿಗಳಂತೆ ಇದ್ದವರು, ತಮ್ಮ ತಮ್ಮ ಕ್ರಿಯಾಶೀಲತೆ, ಅಭಿರುಚಿ, ಆಸಕ್ತಿಗಳ ಅಭಿವ್ಯಕ್ತಿಗೆ ದಾರಿ ಕಂಡುಕೊಂಡು ಮತ್ತೆ ನಳನಳಿಸತೊಡಗಿದರು.

ಕಸೂತಿ, ಚಿತ್ರಕಲೆ, ವಸ್ತ್ರವಿನ್ಯಾಸ, ಹೊಲಿಗೆ, ಕುಸುರಿ ಕೆಲಸ ಇತ್ಯಾದಿಗಳ ತಯಾರಿಕಾ ಘಟಕಗಳನ್ನು ಹುಟ್ಟುಹಾಕಿದಳು. ನೂರಾರು, ಸಾವಿರಾರು ಹೆಂಗಸರು ಅದರ ಭಾಗವಾಗಿ, ಮುಘಲ್ ಸಾಮ್ರಾಜ್ಯದಲ್ಲಿ ಸದ್ದಿಲ್ಲದ ಕ್ರಾಂತಿಯೊಂದು ಕಾಣಿಸಿಕೊಂಡಿತು.

ಇದೆಲ್ಲ ವ್ಯವಸ್ಥೆಗೆ ಮೊದಲು ಜನಾನಾ ಬದುಕು ಒಂದು ರೀತಿಯಲ್ಲಿ ನರಕ ಸದೃಶವಾಗಿತ್ತು. ಮೋಸ, ಅತ್ಯಾಚಾರ, ಅವಮಾನ, ಸುಲಿಗೆಗಳಿಗೆ ಒಳಗಾಗುತ್ತಿದ್ದವರಿಗೆ ನಿರಾಳವಾಗಿ ಉಸಿರಾಡುವಂತಾಗಿತ್ತು. ಗೌರವದಿಂದ ಬದುಕಲು ಸಾಧ್ಯವಾಯಿತು. ಕೆಲವರಂತೂ ಅಲ್ಲಿ ನರಕ ಸದೃಶ ಬದುಕಿನ ಒತ್ತಡದಿಂದ ಹುಚ್ಚರಾಗುತ್ತಿದ್ದುದೂ ಉಂಟು.

ಮೆಹರುನ್ನೀಸಾ ತಾನೇ ತನ್ನ ಗಂಡನ ಸಾವಿನ ದುರಂತದಿಂದ ದುಃಖಿತಳಾಗಿದ್ದರೂ ಆ ದುಃಖವನ್ನು ಶಮನಮಾಡಿಕೊಳ್ಳಲು ಇಂತಹ ಕೆಲಸಗಳಿಗೆ ಕೈ ಹಚ್ಚಿದ್ದರ ಜೊತೆಗೆ ಅಲ್ಲಿನ ಹೆಣ್ಣುಗಳ ಕಣ್ಣೀರನ್ನೂ ಒರೆಸಿ, ಪ್ರತಿಯೊಬ್ಬರ ಬದುಕಿಗೂ ಒಂದು ಅರ್ಥವಿದೆ; ಗೌರವವಿದೆ; ಅನನ್ಯತೆಯಿದೆ ಎಂಬುದನ್ನು ತೋರಿಸಿಕೊಟ್ಟಳು. ಎಲ್ಲರ ಮನಸ್ಸುಗಳಲ್ಲಿ ಅವರವರ ಭಾಗ್ಯ ದೇವತೆಯಾಗಿ ನೆಲೆಗೊಂಡು ನಿಂತಳು.

ಮೆಹರುನ್ನೀಸಾಳ ಈ ಪ್ರಯತ್ನಗಳು, ಸಾಧನೆಗಳು ಅವಳು ಜನಾನಾದೊಳಗಿನ ಬದುಕನ್ನೇ ಬದಲಾಯಿಸಿದ ಸಾಹಸದ ಕತೆಗಳು ಮುಘಲ್ ಸಾಮ್ರಾಜ್ಯದ ಗಡಿಗಳನ್ನೇ ದಾಟಿ ಪ್ರಸಾರವಾಗುತ್ತಿರುವಾಗ, ಜಹಾಂಗೀರನ ಕಿವಿಗೆ ಬಿದ್ದಿದ್ದು ಸಹಜವೇ ಆಗಿತ್ತು. ಜನಾನಾ ಸೇರಿದ ಮೇಲೆ, ಒಮ್ಮೆಯೂ ಬಂದು ಅವಳನ್ನು ಮಾತಾಡಿಸಿರಲಿಲ್ಲ. ಗಂಡನ ಸಾವಿನ ದುಃಖ ಒಂದು ಕಡೆಯಾದರೆ, ತಾನೇ ಅವನ ಕೊಲೆಗಾರ ಎಂಬ ಭಾವನೆ ಮತ್ತೊಂದು ಕಡೆ. ಅವಳನ್ನು ಮುಖಾಮುಖಿಯಾಗಿ ಕಾಣುವ ಧೈರ್ಯ ಅವನಲ್ಲಿ ಇರಲಿಲ್ಲ. ಜೊತೆಗೆ ರಾಜಕಾರ್ಯಗಳ ಒತ್ತಡ ಬೇರೆ ಅವನಿಗೆ ಸಮಯ ಸಿಗದಂತೆ ಮಾಡಿತ್ತು.

ತನ್ನ ತಂದೆತಾಯಿಗಳನ್ನು ಒಮ್ಮೆಯಾದರೂ ನೋಡಿಬರಬೇಕೆಂದು ಎಷ್ಟೋ ದಿನಗಳಿಂದ ಯೋಚಿಸುತ್ತಿದ್ದಳು. ಬಾದಶಾಹ್ ಜಹಾಂಗೀರನ ಅನುಮತಿಯಿಲ್ಲದೆ ಜನಾನಾದ ಹೊರಗೆ ಹೆಜ್ಜೆಯಿಡಲೂ ಸಾಧ್ಯವಿಲ್ಲ. ಆದರೆ ತಾನು ಬೇಡುವುದಿಲ್ಲ. ರುಖೈಯ್ಯಾ ಬೇಗಂರನ್ನು ಕಂಡು ತನ್ನಾಸೆಯನ್ನು ತಿಳಿಸಬೇಕೆಂದುಕೊಂಡಳು.

ಲಾಡ್ಲಿಗೆ ಅಲ್ಲಿನ ವಾತಾವರಣವೇ ಹಿಡಿಸಲಿಲ್ಲ. ಅಮ್ಮನಿಗೆ ಬಿಡುವೇ ಸಿಗುತ್ತಿರಲಿಲ್ಲ. ಬೇಸರವಾದಾಗಲೆಲ್ಲ, ಹೊರಗಡೆ ಅಡ್ಡಾಡಿ ಬರುತ್ತಿದ್ದಳು. ಅಮ್ಮ ಮಗಳ ವಿದ್ಯಾಭ್ಯಾಸವನ್ನು

ತಾನೇ ಮಾಡಿಸುತ್ತಿದ್ದಳು. ಅಮ್ಮನಂತೆ ಅವಳೂ ತುಂಬಾ ಜಾಣೆಯಾಗಿದ್ದಳು. ದೊಡ್ಡವರು ಮಾಡುತ್ತಿದ್ದ ಕೆಲಸಗಳಲ್ಲಿ, ಸಣ್ಣ ಪುಟ್ಟ ರೀತಿಯಲ್ಲಿ ಸಹಕರಿಸುತ್ತಿದ್ದಳು. ರಾತ್ರಿ ಮಲಗುವಾಗಷ್ಟೇ ಅಮ್ಮನ ಜೊತೆ ಮಾತು ಕತೆ.

ಒಂದು ರಾತ್ರಿ ಮಲಗಿದ್ದಾಗ ಲಾಡ್ಲಿ ಹಾಸಿಗೆ ಮೇಲೆ ಹೊರಳಾಡುತ್ತಿದ್ದಳು. ಮೆಹರುನ್ನೀಸಾ ಪ್ರೀತಿಯಿಂದ ಪಕ್ಕಕ್ಕೆಳೆದುಕೊಂಡು,

"ಬೇಟಾ ಯಾಕೆ ನಿದ್ದೆ ಬರುತ್ತಿಲ್ಲವೇ?"

"ಅಮ್ಮೀ ಜಾನ್ ನಾವು ಯಾವಾಗ ಇಲ್ಲಿಂದ ಹೋಗೋದು?"

"ಗೊತ್ತಿಲ್ಲ ಬೇಟಾ ಅಲ್ಲಾಹ್ ಕಳಿಸಿಕೊಟ್ಟಾಗ."

"ಅಮ್ಮೀ ಜಾನ್ ನಾವು ನಾನಾ – ನಾನಿ ಮನೆಗೆ ಹೋಗೋಣ. ಅಲ್ಲಿ ಅರ್ಜುಮಂದ್ ಷೇಕು ರಜಿಯಾ ಎಷ್ಟೊಂದು ಮಂದಿ ಜೊತೆಗಿರುತ್ತಾರೆ."

"ಗೊತ್ತು ಬೇಟಾ ಜಹಾಂಪನಾಹ್‌ರು ಒಪ್ಪಿ ಕಳಿಸಬೇಕಲ್ಲ."

"ನೀವು ಕೇಳಬಾರದೇಕೆ?"

"ಗೊತ್ತಿಲ್ಲ"

"ರುಖೈಯ್ಯಾ ನಾನಿಯನ್ನೇಕೆ ಕೇಳಬಾರದು. ಅವರಿಗೆ ನೀನೆಂದರೆ ತುಂಬಾ ಇಷ್ಟ. ಅವರು ಒಪ್ಪಿಯೇ ಒಪ್ಪುತ್ತಾರೆ."

"ಆಯ್ತು ಬೇಟಾ. ನೀನೀಗ ನೆಮ್ಮದಿಯಾಗಿ ಮಲಗು. ಹೇಗಿದ್ದರೂ ಬೆಳಿಗ್ಗೆ ಅವರಲ್ಲಿಗೆ ಹೋಗಲೇಬೇಕು. ಆಗ ಮಾತಾಡಿ, ನಿನ್ನಾಸೆಯನ್ನು ತಿಳಿಸುತ್ತೇನೆ."

ಅಮ್ಮನ ಸಾಂತ್ವನ, ಭರವಸೆ, ಪ್ರೀತಿಯ ಬೆಚ್ಚನೆಯ ಅಪ್ಪುಗೆ ಸ್ವಲ್ಪಹೊತ್ತಿನಲ್ಲಿಯೇ ಅವಳನ್ನು ನಿದ್ರೆಗೆ ದೂಡಿತು.

* * *

ಮೆಹರುನ್ನೀಸಾ ತನ್ನ ಭವಿಷ್ಯದ ಬಗ್ಗೆ ಚಿಂತಿತಳಾದಳು. ಜನಾನಾದಲ್ಲಿಯೇ ನನ್ನ ಅಂತಿಮ ಸಮಾಧಿಯಾದೀತೇ ಹೇಗೆ? ನನ್ನ ಕನಸುಗಳೆಲ್ಲ ಕಾಲು ಮುರಿದುಕೊಂಡು ಬಿದ್ದಿವೆ. ಈಗ ಬಾದಶಾಹರಿಗೆ ಯಾವ ಅಡ್ಡಿಯೂ ಇಲ್ಲ. ನನಗಾಗಿ ಕಾಡಿ ಬೇಡಿದವರಿಗೆ, ನಾನಿಲ್ಲಿದ್ದರೂ ಬಂದು ಮಾತನಾಡಿಸುವ, ನನ್ನ ಬದುಕು, ಭಾವನೆಗಳು ಹೇಗೆ ಏನು ತಿಳಿಯುವ ಸೌಜನ್ಯ ಸಜ್ಜನಿಕೆಗಳೂ ಇಲ್ಲವೇ? ನನ್ನ ಬಗೆಗಿನ ಅಷ್ಟು ಗಾಢವಾದ ಪ್ರೀತಿ ಈಗ ಮುದುಡಿ ಹೋಯಿತೇ? ಇಲ್ಲವೇ ಹಿಂದೆ ಕಾಣಿಸಿದ ಪ್ರೀತಿ ಕೇವಲ ಬೂಟಾಟಿಕೆಯೇ? ನಾಟಕವೇ?... ಎಂದು ಯೋಚಿಸಿ ಮರುಕ್ಷಣದಲ್ಲಿಯೇ, ಛೀ! ಇದೇನು ಯೋಚಿಸುತ್ತಿದ್ದೇನೆ. ಗಂಡನ ಬದ್ಧ ಶತ್ರು, ಕೊಲೆಗಾರನ ಬಗ್ಗೆ ಆಲೋಚಿಸುವುದು ಮತ್ತು ಅವನನ್ನು ಬಯಸುವುದು; ನಿರೀಕ್ಷಿಸುವುದು ತಪ್ಪಲ್ಲವೇ? ಸಂಪ್ರದಾಯಬದ್ಧವಾಗಿ ಮದುವೆಯಾದ ಹೆಂಡತಿ, ಅವನು ಬದುಕಿರುವಾಗಲೂ ಸತ್ತಮೇಲೂ ನಿಷ್ಠೆಯಿಂದ ಅವನಿಗೆ ಬದ್ಧವಾಗಿ ಇರಬೇಕಲ್ಲವೇ?" ಎಂದು ತನ್ನೊಳಗೆ ತಾನೇ ಪ್ರಶ್ನಿಸಿಕೊಳ್ಳುತ್ತಿರುವಾಗ –

"ಮೆಹರುನ್ನೀಸಾ ಸಾಕು ಮಾಡು ನಿನ್ನ ನಟನೆ. ಆತ್ಮಸಾಕ್ಷಿಯಾಗಿ ಹೇಳು. ನಿನ್ನ ಸಲೀಂನನ್ನು ಖಂಡಿತವಾಗಿಯೂ ಮರೆತಿರುವೆಯೇನು? ಬಾಲ್ಯದಲ್ಲಿಯೇ ಅವನಿಗೆ

ಮನಸು ಕೊಟ್ಟವಳು. ಅವನನ್ನು ಮದುವೆಯಾದರೆ? ಎಂದು ಯೋಚಿಸಿದವಳು, ಚಕ್ರವರ್ತಿನಿಯಾಗಿ ಮುಘಲ್ ಸಲ್ತನತ್ತನ್ನು ಆಳಬೇಕೆಂದು ಕನಸು ಕಂಡವಳು. ಅದೆಲ್ಲವನ್ನು ಮರೆತು ಆತ್ಮಾನುಕಂಪ, ಪತಿನಿಷ್ಠೆಗಳ ಬಗ್ಗೆ ಯೋಚಿಸುತ್ತಿದ್ದೀಯ.....ನಿನ್ನ ಭವಿಷ್ಯವನ್ನು ಮರೆತುಬಿಟ್ಟೆಯಾ? ಹುಟ್ಟಿದಾಗ ಮತ್ತು ಇಲ್ಲಿಗೆ ಬರುವಾಗ ಬಾಬಾ ಅವರು ನುಡಿದ ಭವ್ಯ ಭವಿಷ್ಯವನ್ನು ಮರೆತೆಯಾ? ಧೈರ್ಯ ಕಳೆದುಕೊಳ್ಳಬೇಡ. ನಿನ್ನ ಭಾಗ್ಯದ ಬಾಗಿಲನ್ನು ತೆರೆಸುವ ಪ್ರಯತ್ನಮಾಡು"– ಎಂದು ಹೇಳಿ ಮಾತು ಸ್ಥಗಿತಗೊಂಡಿತು. ಕಣ್ಣು ಬಿಟ್ಟು ಯಾರೆಂದು ಸುತ್ತಲೂ ನೋಡಿದಳು. ಯಾರೂ ಇಲ್ಲ. ಅದು ತನ್ನದೇ ಧ್ವನಿ ಕನಸಿನಲ್ಲಿ ಮಾತಾಡಿರಬೇಕು. ಹೌದು, ಆತ್ಮಗ್ಲಾನಿ, ಆತ್ಮಾನುಕಂಪಗಳನ್ನು ಕಿತ್ತೊಗೆಯಬೇಕು ನಿಜ. ಆದರೆ ಅಂತಃಸಾಕ್ಷಿ ಎಂಬುದೊಂದು ಇದೆಯಲ್ಲ! ಅಲಿಖುಲಿ ಎಲ್ಲಿಯೇ ಇರಲಿ ಹೇಗೆಯೇ ಇರಲಿ ನೀಸಾ ಜಹಾಂಗೀರನ ಹೆಂಡತಿಯಾಗುವುದನ್ನು ಸ್ವೀಕರಿಸುವುದಿಲ್ಲ. ...ನೋಡೋಣ ಪರಿಸ್ಥಿತಿಗಳು ಹೇಗೆ ಬದಲಾಗುತ್ತವೆಯೋ ಎಂದು ಎದ್ದು, ಲಾಡ್ಲಿಯನ್ನೂ ಎಬ್ಬಿಸಿ, ತನ್ನ ಜೊತೆಗೇ ಕರೆತಂದಿದ್ದ ಫಿರ್‌ದೌಸ್‌ಳನ್ನು ಎಬ್ಬಿಸಿ, ಲಾಡ್ಲಿಯನ್ನು ಅವಳ ವಶದಲ್ಲಿರಿಸಿ ತಾನು ಸಿದ್ಧವಾಗಿ ಮಾಜಿಯಾದ ಪಾದಶಾಹ್ ಬೇಗಂ ರುಖೈಯ್ಯಾರನ್ನು ಕಾಣಲು ಹೋದಳು.

"ಓಹ್ ಮೆಹರುನ್ನೀಸಾ! ಬಾ! ಬಾ! ಏನು ಇವತ್ತು? ಈ ಬೇಗಂಳನ್ನು ಮರೆತು ಬಿಟ್ಟೆಯಾ?"

"ಮಾಫಿ ಮಾಡಬೇಕು ಪಾದಶಾಹ್ ಬೇಗಂ, ಯಾಕೋ ಮನಸ್ಸು ಸರಿಯಿರಲಿಲ್ಲ. ಲಾಡ್ಲಿಯನ್ನು ಸಮಾಧಾನಪಡಿಸುವುದೇ ನನಗೆ ಸಮಸ್ಯೆಯಾಗಿದೆ. ಜನಾನಾದಲ್ಲಿ ಇರಲು ಅವಳಿಗೆ ತುಂಬಾ ಬೇಸರವಾಗಿದೆ. ನನ್ನ ತಂದೆ ಮನೆಗೆ ಹೋಗೋಣ ಎಂದು ಹಠ ಮಾಡುತ್ತಿದ್ದಾಳೆ. ಅವಳನ್ನು ಸಮಾಧಾನಪಡಿಸಿ ನಿದ್ದೆ ಮಾಡುವಷ್ಟರಲ್ಲಿ ತುಂಬಾ ತಡವಾಗಿತ್ತು."

"ಹೌದೌದು, ನಿದ್ದೆ ಮನುಷ್ಯನಿಗೆ ಅನಿವಾರ್ಯ, ಅದೊಂದು ರೀತಿಯಲ್ಲಿ ಪುನಃಶ್ಚೇತನ ಕೊಡುವಂತಹ ಶರಬತ್."

"ಬೇಗಂ ಹುಜೂರ್, ನಿಮ್ಮಲ್ಲಿ ನಾನೊಂದು ವಿಷಯವನ್ನು ನಿವೇದಿಸಿ ಕೊಳ್ಳಬೇಕೆಂದಿದ್ದೇನೆ."

"ಹೇಳು ನೀಸಾ, ನನ್ನೊಂದಿಗೆ ಹೇಳಿಕೊಳ್ಳಲು ನಿನಗೇನು ಸಂಕೋಚ. ನಿನಗೆ ಇಲ್ಲಿ ಎಲ್ಲ ಅನುಕೂಲವಾಗಿದೆ ತಾನೇ? ಯಾವುದೇ ಅಗತ್ಯ ಬಿದ್ದರೂ ಸಂಕೋಚವಿಲ್ಲದೆ ಹೇಳು."

"ನಿಮ್ಮ ಮಗನಿಗೆ ಹೇಳಿ, ನಾವು ನಮ್ಮ ತಾಯಿ ತಂದೆಯರ ಜೊತೆಯಲ್ಲಿ ಇರಲು ಪರವಾನಗಿಕೊಡಿಸಿ ಹುಜೂರ್ ಬೇಗಂ"

"ಇಲ್ಲಿರಲು ಈಗ ನಿನಗೇನು ತೊಂದರೆ? ಹಂಗಿನ ಸಹಾಯ ಬೇಡವೆಂದು ನಿನ್ನ ಕಾಲ ಮೇಲೆ ನಿಂತು ಜೀವನೋಪಾಯ ಹುಡುಕಿಕೊಂಡಿದ್ದಿ. ಅಲ್ಲದೆ ನೂರಾರು ಮಂದಿಗೆ ಹೊಸ ಬದುಕನ್ನು ಕೊಡುತ್ತಲೇ ಮುಘಲ್ ಸಾಮ್ರಾಜ್ಯದಲ್ಲಿ ಎಲ್ಲೆಲ್ಲೂ ನೀನು ಮಾಡುತ್ತಿರುವ ಕೆಲಸದ ಬಗ್ಗೆ ಹೊಗಳಿಸಿಕೊಳ್ಳುತ್ತಿದ್ದೀ!"

"ಅಂದರೆ ಜೀವನ ಪರ್ಯಂತ ಹೀಗೆಯೇ ನನ್ನ ಬದುಕು ಕಳೆಯಬೇಕೇನು?"

"ಅವಳು ಕೇಳಿದ ಪ್ರಶ್ನೆಗೆ ಉತ್ತರ ಹೇಳುವಷ್ಟರಲ್ಲಿ, 'ದಾದಿಮಾ' ಎಂದು ಕೂಗುತ್ತಾ ಖುರ್ರಂ ಒಳಗೆ ಬಂದು ಬೇಗಂ ಪಕ್ಕದಲ್ಲಿ ಕುಳಿತು ಅವಳ ಕೆನ್ನೆಗೆ ಮುತ್ತಿಟ್ಟ. ರುಖೈಯ್ಯಾ ನಗುತ್ತಾ. 'ಖುರ್ರಂ ಬೇಟಾ, ಈ ಮುತ್ತುಗಳನ್ನೆಲ್ಲ ನಿನ್ನ ಅರ್ಜುಮಂದ್ ಬಾನುಗಾಗಿ ಉಳಿಸಿಕೊ."

"ಹೋಗಿ ದಾದಿಮಾ ನಿಮಗೆ ಯಾವಾಗಲೂ ತಮಾಶೆ" ಎಂದ ಮುನಿಸಿನಿಂದ.

"ಖುರ್ರಂ, ಇಲ್ಲಿ ನೋಡು ಇವರ್ಯಾರು ನಿನಗೆ ನೆನಪಿದೆಯೇ!" ಅಷ್ಟರಲ್ಲಿ ಮೆಹರುನ್ನೀಸಾ.

"ಶಹಜಾದೆ, ಹೇಳಿ ನಾನು ಯಾರೆಂದು?" ನಕ್ಕು ಕೇಳಿದಳು.

"ನಾನು ಹೇಗೆ ಮರೆಯಲಿ ನೀವು ನನ್ನ ಜೊತೆ ಎಷ್ಟು ಸಲ ಆಟವಾಡಿದ್ದೀರಿ. ಆದರೆ ನೀವೇ ನನ್ನನ್ನು ಮರೆತು ಬಿಟ್ಟಿರಿ. ಜನಾನಾದಲ್ಲಿ ಇಷ್ಟು ದಿವಸದಿಂದ ಇದ್ದೀರಿ. ನಮ್ಮ ನೆನಪೂ ಕೂಡಾ ನಿಮಗೆ ಆಗಲಿಲ್ಲವೇ?... ಎಲ್ಲಿ ನಿಮ್ಮ ಲಾಡ್ಲಿ? ನೋಡಿ ಬಹಳ ದಿವಸವಾಗಿತ್ತು....ನೀಸಾ ಈ ಬಾರಿ ನವರೋಜ್‌ಗೆ ನೀವೂ ಬರುತ್ತೀರಿ ತಾನೇ?

"ಏನು ಖುರ್ರಂ ಮಹಾಶಯರೇ, ನೀಸಾಳಲ್ಲಿ ಇಷ್ಟೊಂದು ಆಸಕ್ತಿ! ನಿಮ್ಮ ಕಣ್ಣು ಲಾಡ್ಲಿ ದಾದಿಮಾ ಕೇಳಿದಳು. ಮೇಲೇನಾದರೂ ಹರಿದಿದೆಯೆ?"

"ನನಗೇನೂ ಅಂತಹ ಆಸಕ್ತಿ ಇಲ್ಲ. ನನಗೆ ಅರ್ಜುಮಂದ್ ಬಾನು ಇದ್ದಾಳೆ. ಅಷ್ಟೇ ಸಾಕು" ಎಂದು ಅಲ್ಲಿಯೇ ನಿಂತಿದ್ದ ಲಾಡ್ಲಿಯನ್ನು ಗಮನಿಸಿದ. ಮೆಹರುನ್ನೀಸಾಳ ಸೌಂದರ್ಯಕ್ಕೆ ಸಮವಲ್ಲ ಎಂದುಕೊಂಡ.

ಈ ಮಾತು ಕೇಳುತ್ತಿದ್ದಂತೆ ಲಾಡ್ಲಿಯ ಮುಖ ಅರಳಿತು. ಬೇಸರ ಕಳೆಯಲು ಒಬ್ಬರು ಸಿಕ್ಕರಲ್ಲ ಅಂದುಕೊಂಡಳು.

"ಖುರ್ರಂ ಬೇಟಾ, ಹೋಗಿ ಬನ್ನಿ. ಆದರೆ ಜನಾನಾದ ಪರಿಸರದಲ್ಲಿ ನೀವಿಬ್ಬರೂ ಓಡಾಡುವುದನ್ನು ಯಾರಾದರೂ ನೋಡಿಯಾರು ಸ್ವಲ್ಪ ಹುಷಾರಾಗಿರಿ."

ಅವರಿಬ್ಬರೂ ಹೊರ ನಡೆದ ನಂತರ, ರುಖೈಯ್ಯಾ ಒಂದು ದೊಡ್ಡ ನಿಟ್ಟುಸಿರು ಬಿಟ್ಟಳು. ಅವಳಿಗೆ ತನ್ನ ಮತ್ತು ಜಗತ್‌ಗೋಸಿನಿ ನಡುವಿನ ಶೀತಲ ಸಮರದ ವಿಚಾರವನ್ನು ಹೇಳಿಕೊಳ್ಳಬೇಕೆಂಬ ಆತುರ.

"ನೀಸಾ, ನೀನು ಇಲ್ಲಿಂದ ಹೋದ ಮೇಲೆ ಏನೆಲ್ಲ ಆಗಿದೆ ತಿಳಿದಿದೆಯೇನು. ಅಕ್ಬರ್ ಬಾದಶಾಹರ ಸಾವಿನ ಜೊತೆ ನನ್ನ ಅಧಿಕಾರ, ಸುಖ, ಶಾಂತಿಗಳೆಲ್ಲ ಹೊರಟು ಹೋದವು. ಜಗತ್‌ಗೋಸಿನಿ ಬಯಸಿದ ಪಾದಶಾಹ್ ಬೇಗಂ ಪಟ್ಟ ಸಿಕ್ಕಿದ್ದೇ ತನ್ನ ಅಧಿಕಾರ ಚಲಾಯಿಸಲು ಆರಂಭಿಸಿದಳು. ಜನಾನಾದ ಒಳಗೆ ಹೊರಗೆ ಅವಳದೇ ಸಾರ್ವಭೌಮತ್ವ, ನನ್ನನ್ನು ಸರಿಯಾಗಿ ಮಾತಾಡಿಸುವುದೇ ಇಲ್ಲ. ಎದುರಾದಾಗ ತಣ್ಣನೆಯ ಸಲಾಮೊಂದು ಮಾತ್ರವೇ ನನ್ನ ಪಾಲಿಗೆ. ಜಹಾಂಗೀರನನ್ನು ಕುಣಿಸಲು ಪ್ರಯತ್ನಿಸುತ್ತಿದ್ದಾಳೆ. ಆದರೆ ಜಹಾಂಗೀರ್ ಬಾದಶಾಹ್ ಅನೇಕ ಬಗೆಯ ಸಮಸ್ಯೆಗಳಿಂದ ಚಿಂತಿತನಾಗಿದ್ದಾನೆ. ಖುಸ್ರೋನ ಬಂಡಾಯದ ಜೊತೆ ನಿನ್ನ ಸಮಸ್ಯೆಯೂ ಸೇರಿದೆ. ದೇಶದ್ರೋಹದ ಆರೋಪದ ಮೇಲೆ, ಖುಸ್ರೋನ ಕಣ್ಣುಗಳನ್ನೇನೋ ಕೀಳಿಸಿದನಾದರೂ

ಒಳಗಿಂದೊಳಗೇ ಸಂಕಟಪಡುತ್ತಿದ್ದಾನೆ. ಎಷ್ಟಾದರೂ ಮಗನಲ್ಲವೇ? ಒಮ್ಮೊಮ್ಮೆ ನಿನ್ನ ಬಗ್ಗೆ ವಿಚಾರಿಸುತ್ತಾನೆ."

"ಏನು ನನ್ನ ಬಗ್ಗೆ ವಿಚಾರಿಸುತ್ತಾರೆಯೇ? ಅಷ್ಟೊಂದು ಚಿಂತೆಯಿದ್ದಲ್ಲಿ, ಬಂದು ಮಾತನಾಡಿಸಿ ಸಾಂತ್ವನ ಹೇಳಬಹುದಿತ್ತಲ್ಲ."

"ನೀನು ನಿರೀಕ್ಷಿಸುವುದರಲ್ಲಿ ಅರ್ಥವಿದೆ. ಆದರೆ ಅವನನ್ನು ಅಪರಾಧಿ ಪ್ರಜ್ಞೆ ಕಾಡುತ್ತಿದೆ. ನಿನ್ನ ಗಂಡನನ್ನು ಕೊಲ್ಲುವ ಉದ್ದೇಶವಿರಲಿಲ್ಲ. ಅಲಿಖುಲಿಯೇ ಮುಂದಾಗಿ ಸಾವನ್ನು ಬರಮಾಡಿಕೊಂಡ. ಆದರೆ ಪ್ರಜೆಗಳ ದೃಷ್ಟಿಯಲ್ಲಿ ಬಾದಶಾಹರೇ ಕೊಲೆಗಾರರು ಎಂಬ ನಂಬಿಕೆ. ಅತಿಯಾಗಿ ಪ್ರೀತಿಸುತ್ತಿದ್ದ ಮಾನ್‌ಬಾಯಿಯ ಆತ್ಮಹತ್ಯೆ. ಸ್ವಂತ ಸೋದರನಿಗಿಂತಲೂ ಹೆಚ್ಚಾಗಿದ್ದ ಖುತುಬುದ್ದೀನ್ ಕೋಕಾನ ಸಾವು ಅವನನ್ನು ಮಾನಸಿಕವಾಗಿ ದುರ್ಬಲಗೊಳಿಸಿದೆ. ಇದೆಲ್ಲದರಿಂದ ಬಿಡುಗಡೆಯಾಗಬೇಕಾದರೆ ಅವನಿಗೆ ನಿನ್ನ ಸಾಥ್ ಬೇಕು."

ಥಟ್ಟನೆ ಮೆಹರುನ್ನೀಸಾ ರುಖೈಯ್ಯಾಳತ್ತ ತೀಕ್ಷ್ಣ ನೋಟ ಬೀರಿದಳು. ಮತ್ತೆ ಹಳೆಕತೆಯ ಪುನರಾವರ್ತನೆಯೇ! ಎಂದುಕೊಂಡಳು.

"ನೋಡು ನಿನ್ನ ಸಂಕಟದ ದಿನಗಳು ಕಳೆದುಹೋದವು. ಇನ್ನೂ ಹಳೆಯದನ್ನು ನೆನಪಿಸಿಕೊಳ್ಳುವುದರಲ್ಲಿ ಅರ್ಥವಿಲ್ಲ. ಹೇಗಿದ್ದರೂ ನೀನು ಮೀನಾ ಬಜಾರ್‌ಗೆ ನನ್ನ ಜೊತೆ ಬಂದೇ ಬರಬೇಕು. ಎಷ್ಟೋ ಮಂದಿ ರಾಜ ಪರಿವಾರದ ಗಂಡಸರು ಬರುತ್ತಾರೆ. ಜಹಾಂಗೀರ್ ಬಾದಶಾಹ್ ಕೂಡಾ ಬಂದೇ ಬರುತ್ತಾರೆ. ನೀನು ಅವರ ಕಣ್ಣಿಗೆ ಬಿದ್ದರೂ ಬೀಳಬಹುದು. ನೀಸಾ, ನಿನಗೆ ನಿನ್ನ ಸೌಂದರ್ಯದ ಬೆಲೆ ಗೊತ್ತಿಲ್ಲ; ಇಷ್ಟೆಲ್ಲ ಸಮಸ್ಯೆಗಳ ನಡುವೆಯೂ ಅದು ಬಾಡದೆ ತನ್ನ ತಾಜಾತನವನ್ನು ಉಳಿಸಿಕೊಂಡಿದೆ. ಅದು ವ್ಯರ್ಥವಾಗಬಾರದು, ಕಾಡ ಬೆಳದಿಂಗಳಾಗಬಾರದು."

ರುಖೈಯ್ಯಾಳ ಮಾತುಗಳನ್ನು ಕೇಳಿಸಿಕೊಂಡಳು. ಧ್ಯಾನಮಗ್ನಳಾದಳು. ಹೌದು ಮತ್ತೆ ಜಹಾಂಗೀರ್ ಬಾದಶಾಹ್ ತನ್ನ ಪಾಲಿಗೆ ಸಿಗುವುದಾದರೆ, ತಾನು ನಿರಾಕರಿಸುವುದು ಎಷ್ಟು ಸಮಂಜಸ. ನಿಜ ಅಲಿಖುಲಿ ನನ್ನ ಗಂಡ. ನಿಜವಾಗಿಯೂ ಪ್ರಾಮಾಣಿಕವಾಗಿಯೂ ಅಲಿಖುಲಿಯನ್ನು 'ಸಲೀಂ'ನನ್ನು ಪ್ರೀತಿಸಿದಷ್ಟು ಗಾಢವಾಗಿ ಪ್ರೀತಿಸಿದೆನೇ? ಇಲ್ಲ! ಗಂಡನೆಂಬ ಅಧಿಕಾರಶಾಹಿ ಅಡಿಯಲ್ಲಿ, ಅವನಿಂದ ಎಷ್ಟು ಹಿಂಸೆ, ಅವಮಾನ, ದಬ್ಬಾಳಿಕೆಗಳನ್ನು ಅನುಭವಿಸಲಿಲ್ಲ! ನನ್ನ ಪ್ರೀತಿ, ಮತ್ತೆ ನನಗೆ ಸಿಗುವುದಾದರೆ, ಬೇಡವೆನ್ನುವ ಮೂರ್ಖತನಕ್ಕೆ ಒಳಗಾದರೆ, ನನ್ನ ಕನಸುಗಳು ಏನಾಗಬೇಕು. ಅರ್ಜುಮಂದ್ ಬಾನುವಿಗೆ ದೊರೆತ ಅದೃಷ್ಟ ನನ್ನ ಪಾಲಿಗೂ ಯಾಕೆ ಸಾಧ್ಯವಾಗಬಾರದು. ಅದೃಷ್ಟ ನನಗೆ ಮಾತ್ರವೇ ಅಲ್ಲ ನನ್ನ ಮಗಳಿಗೂ ಸಾಧ್ಯವಾಗುವುದಲ್ಲ! ಎಂದು ಲೆಕ್ಕಾಚಾರ ಹಾಕುವುದರಲ್ಲಿ ಮಗ್ನಳಾದಳು.

"ನೀಸಾ ಏನು ಯೋಚನೆ ಮಾಡುತ್ತಿದ್ದಿ? ಅವಕಾಶ ಸಿಕ್ಕಾಗ ಅದರ ಸದುಪಯೋಗ ಮಾಡಿಕೊಳ್ಳಬೇಕು. ನನಗೆ ಭರವಸೆಯಿದೆ, ಇಂದಿಗೂ ಜಹಾಂಗೀರ್ ನಿನ್ನನ್ನು ಅತಿಯಾಗಿ ಪ್ರೀತಿಸುತ್ತಿದ್ದಾನೆ. ನಿನ್ನ ರೂಪ, ಬುದ್ಧಿವಂತಿಕೆಗಳು, ಸಾಮ್ರಾಜ್ಯದ ಸಕ್ಷಮ ಆಡಳಿತಕ್ಕೆ ತುಂಬ ಪ್ರಯೋಜನಕಾರಿಯಾಗುತ್ತವೆ. ನನ್ನ ಮಾತನ್ನು ಗಂಭೀರವಾಗಿ

ಯೋಚಿಸಿ ಅರ್ಥಮಾಡಿಕೋ. ಮೊದಲೂ ಕೂಡಾ ನಿನ್ನ ಮದುವೆಗೆ ನನ್ನ ವಿರೋಧವಿರಲಿಲ್ಲ. ಆದರೆ ಬಾದಶಾಹ್ ಅಕ್ಬರರ ನಿರ್ಧಾರವನ್ನು ವಿರೋಧಿಸುವ ಧೈರ್ಯವಾಗಲಿ, ಹಕ್ಕಾಗಲಿ ಯಾರಿಗೂ ಇರಲಿಲ್ಲ."

ರುಖೈಯ್ಯಾಳ ಈ ಸಲಹೆಯ ಹಿಂದೆ ಒಳ್ಳೆಯ ಉದ್ದೇಶವೂ ಇತ್ತು. ಜೊತೆಗೆ, ಮೆಹರುನ್ನೀಸಾಳ ಸೌಂದರ್ಯ ಜಾಣ್ಮೆಗಳಿಗೆ ಪೂರ್ತಿ ವಶವರ್ತಿಯಾಗಿ, ಜಗತ್‌ಗೋಸಿನಿಯ ಗರ್ವಭಂಗ ಮಾಡುತ್ತಾನೆ. ನಾಳೆ ಒಂದು ವೇಳೆ ನಾನು ಭಾವಿಸಿದಂತೆ ಜಹಾಂಗೀರನ ಕೈಹಿಡಿದು ಅವಳೇ ಪಾದಶಾಹ್ ಬೇಗಂ ಪಟ್ಟಕ್ಕೆ ಬಂದರೆ, ಜಗತ್‌ಗೋಸಿನಿಯ ಅಧಿಕಾರಗಳು ಕಳಚಿ ಬೀಳುತ್ತವೆ; ತಾನೇ ಸುಂದರಿಯೆಂಬ ಅಹಂಕಾರವೂ ಕರಗಿ ಹೋಗುತ್ತದೆ. ನೀಸಾಳ ಅಧಿಕಾರ ನನಗೆ ಭದ್ರ ಕವಚವಾಗುತ್ತದೆ, ಎನ್ನುವ ಸ್ವಾರ್ಥವೂ ಇತ್ತು. ಹೀಗೆಲ್ಲ ಯೋಚಿಸುತ್ತಾ, ಅವಳನ್ನು ಅಡಿಯಿಂದ ಮುಡಿವರೆಗೂ ಅವಳ ದೇಹಶಿಲ್ಪದ ವಕ್ರ ರೇಖೆಗಳನ್ನು ಗಮನಿಸುತ್ತಾ ಮುಗುಳ್ನಕ್ಕಳು. ಮೊದಲಿಂದಲೂ ಅವರಿಬ್ಬರೂ ಅನನ್ಯ ಪ್ರೇಮಿಗಳು. ಆದರೆ ಇಬ್ಬರೂ ಮನಸ್ಸಿನಲ್ಲಿ ಒಬ್ಬರಿಗಾಗಿ ಒಬ್ಬರು ಯೋಚಿಸುತ್ತಿರಬಹುದು. ಗಂಡನ ಕೊಲೆಗಾರನೆಂದು ಮೆಹರುನ್ನೀಸಾ ಜಹಾಂಗೀರನ ಬಗ್ಗೆ ಆಕ್ರೋಶ, ಅಸಹನೆ ತೋರುತ್ತಿದ್ದಾಳಾದರೂ, ಎದೆಯಾಳದಲ್ಲಿ ಆ ಜಹಾಂಗೀರನ ಬಗ್ಗೆ ಇನ್ನೂ ಪ್ರೀತಿಯಿದೆ ಎಂದು ನಾನು ಬಲ್ಲೆ. ಆದ್ದರಿಂದ ಅವರಿಬ್ಬರನ್ನೂ ಅವರವರ ಮನಃಸ್ಥಿತಿಗಳನ್ನು ಅರಿತು ಒಂದು ಮಾಡಬೇಕು. ಇಬ್ಬರ ಬದುಕೂ ಹಸನಾಗುತ್ತದೆ. ನಾನೇ ಈ ಕೆಲಸಕ್ಕೆ ಮುಂದಾಗಬೇಕು ಎಂದುಕೊಂಡಳು. ಥಟ್ಟನೆ ನವರೋಜ್ ಹಬ್ಬ, ಮೀನಾ ಬಜಾರ್– ಒಳ್ಳೆಯ ಅವಕಾಶ ಕಲ್ಪಿಸಬಹುದು ಎಂದು ಅವರಿಬ್ಬರ ಪ್ರೀತಿಯ ನಾಟಕಕ್ಕೆ ಪ್ರಸ್ತಾವನೆ ಸಿದ್ಧಪಡಿಸುವತ್ತ ಯೋಚಿಸಿದಳು.

ಜಗತ್‌ಗೋಸಿನಿಗೆ ತನ್ನ ಗುಪ್ತಚರಸೇವಕ ಮತ್ತು ಮಹಬ್ಬತ್ ಖಾನ್‌ನಿಂದ, ವಿಷಯಗಳು ತಿಳಿಯುತ್ತಿದ್ದವು. ಮೀನಾ ಬಜಾರ್‌ನಲ್ಲಿ ಖಂಡಿತವಾಗಿಯೂ, ಆ ಮಾಟಗಾತಿ ಮೆಹರುನ್ನೀಸಾ, ಜಹಾಂಗೀರ್‌ನನ್ನು ತಪ್ಪದೆ ಭೇಟಿಯಾಗುತ್ತಾಳೆ. ಮಲಗಿದ್ದ ಪ್ರೀತಿಯನ್ನು ಹೊಡೆದೆಬ್ಬಿಸುತ್ತಾಳೆ. ಅದಕ್ಕೆ ಅವಕಾಶ ಕೊಡಬಾರದು ಎಂದುಕೊಂಡಳು.

ಆಗ್ರಾ ಕೋಟೆಯಲ್ಲಿ, ಮೀನಾ ಮಸಜಿದ್ ಪಕ್ಕದಲ್ಲಿಯೇ ಮೀನಾಬಜಾರ್ ಶುರುವಾಗಿತ್ತು. ಸಾಲುಸಾಲಾದ ಅಂಗಡಿಗಳು ಅದ್ದೂರಿಯಾಗಿ ಸಜ್ಜುಗೊಂಡಿದ್ದವು. ಹೂವು, ಹಣ್ಣು, ಬಟ್ಟೆ ಬರೆ, ರೇಶಿಮೆ, ವೆಲ್ವೆಟ್, ಸ್ಯಾಟಿನ್‌ನ ವೈವಿಧ್ಯಮಯ ವಿನ್ಯಾಸಗಳಿಂದ ಸಿದ್ಧವಾದ ಹೆಂಗಸರ ಉಡುಪುಗಳು, ಆಭರಣಗಳು. ಇಷ್ಟೇ ಅಲ್ಲದೆ ತಿಂಡಿ ಪದಾರ್ಥಗಳು, ದಿನಸಿಗಳು, ಸಂಬಾರ ಪದಾರ್ಥಗಳು ಕೂಡಾ ಮಾರಾಟಕ್ಕೆ ಲಭ್ಯವಿದ್ದವು. ಜೊತೆಗೆ ತರಕಾರಿ ಮಳಿಗೆಗಳು, ವಿವಿಧ ಬಣ್ಣ, ಆಕಾರದ ತರಕಾರಿಗಳಿಂದ ವರ್ಣಮಯವಾಗಿ ಕಾಣುತ್ತಿದ್ದವು.

ಜನಾನಾದ ಹೆಂಗಸರಿಗೆ ಈ ಸಂದರ್ಭದಲ್ಲಿ ಪೂರ್ಣ ಸ್ವಾತಂತ್ರ್ಯವಿತ್ತು. ತಾಜಾ ಗಾಳಿ, ಮುಕ್ತ ಸ್ವಾತಂತ್ರ್ಯಗಳು ಮತ್ತೊಂದು ಸಲ ಬಜಾರ್ ಸೇರುವವರೆಗೂ, ಅನುಭವದ ಮೆಲುಕನ್ನು ಉಳಿಸಿಕೊಳ್ಳಬಹುದಾಗಿತ್ತು. ಜಹಾಂಗೀರನ ಬಳಗದ ಹೆಂಗಸರ ಸಂಖ್ಯೆ ಮುನ್ನೂರಕ್ಕೂ ಹೆಚ್ಚಾಗಿಯೇ ಇತ್ತು. ಪತ್ನಿಯರು, ಉಪಪತ್ನಿಯರು, ಎಲ್ಲರಿಗೂ ಪ್ರತ್ಯೇಕ

ಪ್ರತ್ಯೇಕ ಮನೆಗಳು! ಪತ್ನಿಯರು, ಉಪಪತ್ನಿಯರು ಹೆಸರಿಗಷ್ಟೆ. ಅವರ ಜೀವಮಾನದಲ್ಲಿ ತಮ್ಮ ಗಂಡನನ್ನು ಕಾಣಲು ಒಂದೆರಡು ಅವಕಾಶಗಳು ಸಿಕ್ಕರೆ ಅದೇ ದೊಡ್ಡದು. ಇಂತಹ ಸಮಯಗಳಲ್ಲಿ ಎಲ್ಲರೂ ಸೇರುವುದರಿಂದ, ಆಕಸ್ಮಿಕವಾಗಿಯಾದರೂ ಗಂಡನ ಒಂದು ಝಲಕಾದರೂ ಸಿಗಬಹುದೆನ್ನುವ ಆಸೆ. ಜನಾನಾದಲ್ಲಿ ಎಲ್ಲ ಸೌಲಭ್ಯಗಳು ದೊರೆಯುತ್ತಿದ್ದುವಾದರೂ, ವಿವಾಹಿತ ಕುಮಾರಿಯರಾಗಿಯೇ ಬದುಕಬೇಕಿತ್ತು. ಮೂವತ್ತು ವರ್ಷದೊಳಗಿನವರಿಗಾದರೂ ಅಪರೂಪಕ್ಕೆ ಅವಕಾಶವಾದರೂ ಸಿಗುತ್ತಿತ್ತು. ಅವರಿಗೂ ಆಕಸ್ಮಿಕವಾಗಿ ಮಕ್ಕಳ ಭಾಗ್ಯ ಲಭಿಸುತ್ತಿತ್ತು. ಆದರೆ ಆ ವಯಸ್ಸು ಮೀರಿದವರನ್ನು ಬಾದಶಾಹರುಗಳು ಮೂಸಿಯೂ ನೋಡುತ್ತಿರಲಿಲ್ಲ.

ಮೆಹರುನ್ನೀಸಾಗೆ ಜನಾನಾದ ಒಳಗೆಲ್ಲ ಮೊದಲೇ ತಿಳಿದಿತ್ತಾದರೂ ಈ ನಾಲ್ಕು ವರ್ಷಗಳಲ್ಲಿ ಅದರ ಭಾಗವಾಗಿ ಬದುಕುತ್ತಿರುವಾಗ ಇನ್ನೂ ಹತ್ತಿರದ ಅನುಭವವಾಯಿತು. ರುಖೈಯ್ಯಾ ಬೇಗಂರಂಥವರ ಸೇವೆಯಲ್ಲಿ ಸ್ವಾತಂತ್ರ್ಯವೂ ಸಮ್ಮಾನವೂ ಇತ್ತು.

ಈ ಮೀನಾಬಜಾರ್ ಎಲ್ಲ ವರ್ಗದ ಹೆಂಗಸರ ಮತ್ತು ರಾಜ ಪರಿವಾರದ ಗಂಡಸರ ಸಂಗಮ ಕ್ಷೇತ್ರ. ಯುವತಿಯರಿಗೂ ಯುವಕರಿಗೂ ಮುಕ್ತ ಅವಕಾಶ. ತಮ್ಮ ತಮ್ಮ ಜೀವನ ಸಂಗಾತಿಗಳನ್ನು ಆರಿಸಿಕೊಳ್ಳಲು ವಿಶೇಷ ಅವಕಾಶ.

ಮೆಹರುನ್ನೀಸಾ ಕೂಡಾ ಮೊದಲಿಗೆ ಸಲೀಂನನ್ನು ಭೇಟಿಯಾಗಿದ್ದು ಇಂತಹ ಪರಿಸರದಲ್ಲಿಯೇ. ಅದಕ್ಕೆಂದೇ ರುಖೈಯ್ಯಾ ಬೇಗಂ ಕೂಡಾ ಇದೇ ಉಪಾಯವನ್ನು ಯೋಚಿಸಿದಳು. ಅದಕ್ಕೆಂದೇ ಚೆನ್ನಾಗಿ ಅಲಂಕರಿಸಿಕೊಳ್ಳಲು ಆದೇಶಿಸಿದಳು. ಆದರೆ ಮೆಹರುನ್ನೀಸಾಗೆ ಇಷ್ಟವಿರಲಿಲ್ಲ. ಇದ್ದುದರಲ್ಲಿ ಸಾದಾ ಮತ್ತು ಸುಂದರವಾದ ಉಡುಪನ್ನು ಆಯ್ದುಕೊಂಡಳು. ಚಿನ್ನದ ಎಳೆಗಳಿಂದ ಕಸೂತಿ ಮಾಡಿದ್ದ ಗಾಗರ, ಚೋಲಿ, ತೆಳುವಾದ ಮುಖ ಪರದೆಯನ್ನು ಧರಿಸಿದಳು. ಅವಳ ನೀಲಿ ಕಣ್ಣುಗಳ ಹೊಳಪು ನೋಡಿದವರ ಕಣ್ಣುಗಳನ್ನು ತಿವಿಯುವ ಹಾಗಿತ್ತು.

ಎಷ್ಟೋ ದಿನಗಳ ನಂತರ ಈ ಅಲಂಕಾರ! ಇದಕ್ಕೆ ಕಾರಣ ಇತ್ತು. ರುಖೈಯ್ಯಾ ಬೇಗಂರ ಆದೇಶ! ......ಎಷ್ಟೇ ತನ್ನ ಬಗ್ಗೆ, ತನ್ನ ಅಲಂಕಾರದ ಬಗ್ಗೆ ಆಸಕ್ತಿ ಕಳೆದುಕೊಂಡಿದ್ದರೂ ಒಮ್ಮೆ ಕನ್ನಡಿಯಲ್ಲಿ ನೋಡಿಕೊಳ್ಳಬೇಕೆನಿಸಿತ್ತು. ನೋಡಿಕೊಂಡಾಗ ತನಗೆ ತಾನೇ ಗರ್ವಿಸಿದಳು. ರುಖೈಯ್ಯಾ ಆಗಲೇ ಬಜಾರಿನ ಒಂದು ಅಂಗಡಿ ಮುಂದೆ, ಒಂದಷ್ಟು ಮಹಿಳೆಯರ ಗುಂಪಿನ ಜೊತೆ ನಿಂತಿದ್ದಳು. ನೇರವಾಗಿ ಅಲ್ಲಿಗೇ ಹೋಗಿ 'ಬೇಗಂ ಸಾಹಿಬಾ, ಇಗೋ ಬಂದಿದ್ದೇನೆ. ಅಪ್ಪಣೆ ಕೊಡಿಸಿ' ಎಂದಾಗ ರುಖೈಯ್ಯಾ ತಿರುಗಿ ಅವಳತ್ತ ನೋಡಿದಳು! ವಾಹ್ ಖುದಾ, ಕ್ಯಾ ಹುಸ್ನತಲಬ್ ಹೈ! ಎಂದು ತನ್ನಲ್ಲೇ ಉದ್ಗರಿಸಿದಳು. "ನೀಸಾ, ಆ ಕಡೆ ನೋಡು" ಎಂದು ಒಂದು ದಿಕ್ಕಿಗೆ ಬೆರಳು ತೋರಿಸಿದಳು.

ಆಶ್ಚರ್ಯ! ಜಹಾಂಗೀರ್ ಒಂದು ಗುಂಪು ಹೆಂಗಸರ ನಡುವೆ ಆಭರಣಗಳ ಅಂಗಡಿ ಮುಂದೆ ನಿಂತಿದ್ದಾನೆ. ಕೆಲವು ಸುಂದರ ಯುವತಿಯರು ಅವನಿಗೆ ಒತ್ತಿಕೊಂಡೇ, ತಮ ತಮಗೆ ಬೇಕಾದ ಆಭರಣಗಳನ್ನು ಎತ್ತಿಕೊಂಡು ಪರೀಕ್ಷಿಸುತ್ತಿದ್ದಾರೆ. ಜಹಾಂಗೀರನೂ ಬಹಳ ಸಂತೋಷದ ಲಹರಿಯಲ್ಲಿ ಇದ್ದಂತೆ ಕಾಣಿಸಿದ.

"ನೀಸಾ ನೀನು ಹೋಗಿ, ಜಹಾಂಗೀರನನ್ನು ನಾನು ಕರೆದೆನೆಂದು ತಿಳಿಸು."

"ಬೇಗಂ ಸಾಹಿಬಾ, ನಾನು ....ನಾನು ಹೋಗಬೇಕೇ?" – ಎಂದು ಅನುಮಾನದಿಂದ, ಒಲ್ಲೆನೆಂಬ ಭಾವದಿಂದ ಹೇಳಿದಳು.

"ನೀಸಾ, ಇದು ಮಾಜಿ ಪಾದಶಾಹ್ ಬೇಗಂ ಆದೇಶ" – ಎಂದು ಕಠೋರ ದನಿಯಲ್ಲಿ ಹೇಳಿದಳು.

ಮೆಹರುನ್ನಿಸಾಗೆ ಆ ಆದೇಶವನ್ನು ನಿರಾಕರಿಸಲು ಆಗಲಿಲ್ಲ. ಅಳುಕು, ಜಿಗುಪ್ಸೆ, ಆಕ್ರೋಶಗಳಿಂದ, ಒಲ್ಲದ ಮನಸ್ಸಿನಿಂದ ಜಹಾಂಗೀರ್ ನಿಂತಿದ್ದ ದಿಕ್ಕಿಗೆ ನಡೆದಳು.

ಅವನ ಸುತ್ತಲೂ ನಿಂತಿದ್ದ ಹೆಂಗಸರ ಗುಂಪು. ತಮ್ಮ ತಮ್ಮ ಆಯ್ಕೆಯ ಆಭರಣಗಳನ್ನು ಜಹಾಂಗೀರನಿಗೆ ತೋರಿಸುತ್ತಿದ್ದರು. ಅದರಲ್ಲಿ ಮಗ್ನನಾಗಿದ್ದ ಜಹಾಂಗೀರನ ಗಮನ ಸೆಳೆಯುವುದು ಹೇಗೆಂದು ಯೋಚಿಸುತ್ತಿದ್ದಳು. ಒಂದು ವೇಳೆ ನಾನು ಕರೆದರೂ ಕೇಳಿಸಿಕೊಳ್ಳದಿದ್ದರೆ? ಎಂಬ ಅನುಮಾನ ಬಂತು. ಥಟ್ಟನೆ ಗುರುತಿಸದೆ ಹೋದರೆ?–ಕೂಡಲೇ ರುಖೈಯ್ಯಾ ಬೇಗಂ, ಪರದೆಯಿಂದ ಮುಖ ಮರೆಮಾಡಬೇಡ ಎಂದು ಎಚ್ಚರಿಸಿದ್ದು ನೆನಪಾಗಿ, ಪರದೆಯನ್ನು ಸ್ವಲ್ಪ ಹಿಂದಕ್ಕೆ ಸರಿಸಿದಳು.

ಮೂವತ್ನಾಲ್ಕರ ಪ್ರಾಯದವಳನ್ನು ಮೆಚ್ಚುವನಾದರೂ ಹೇಗೆ? ಎಂದುಕೊಂಡು, ಮರುಕ್ಷಣವೇ, ಮೆಚ್ಚಲಿ, ಬಿಡಲಿ ಅದರಿಂದ ನನಗೇನಾಗಬೇಕು! ಎಂದು ತನ್ನಲ್ಲೇ ಹೇಳಿಕೊಂಡಳು. ಅವನನ್ನು ಸುತ್ತುವರಿದಿದ್ದ ಗುಂಪಿನ ಹಿಂದೆ ನಿಂತು ಮಧುರವಾದ ದನಿಯಲ್ಲಿ. "ಜಹಾಂಪನಾಹ್!" ಎಂದು ಕೂಗಿದಳು. ಆ ಗದ್ದಲದ ನಡುವೆಯೂ ಆ ಕೂಗು ಅವನಿಗೆ ವಿಶೇಷವೆನಿಸಿತು. ಯಾರಿರಬಹುದೆಂದು ಅಚ್ಚರಿಯಿಂದ ಆ ಕೂಗು ಬಂದ ಕಡೆ ನೋಡಿದ. ಆ ನೀಲಿ ಕಣ್ಣುಗಳು!......ಅವನಿಗೆ ದಿಗ್ಭ್ರಮೆಯಾಯಿತು. ಕಣ್ಣುಗಳ ಜೊತೆ ಜೊತೆಗೇ ಇಡೀ ದೇಹದ ಆಕಾರ, ಅವನ ನೆನಪಿನಾಳದಿಂದ ಆವಿರ್ಭವಿಸಿತು. 'ಮೆಹರುನ್ನಿಸಾ!' ಉದ್ಗರಿಸಿದ. ಅಲ್ಲಿ ನಿಂತಿದ್ದ ಹೆಂಗಸರೆಲ್ಲ ಸುಮ್ಮನಾದರು. ಆ ಕೂಗಿನ ಕಡೆಗೆ, ಗುಂಪನ್ನು ಸೀಳಿಕೊಂಡು ಹೆಜ್ಜೆ ಹಾಕಿದ. ಹೆಂಗಸರು ಅಲ್ಲಿಂದ ಮೆಲ್ಲನೆ ಜಾರಿ ಬೇರೆ ಬೇರೆ ಅಂಗಡಿಗಳನ್ನು ನೋಡಲು ಹೋದರು.

"ಮೆಹರುನ್ನಿಸಾ!...... ಏನಿದು? ದಿಢೀರನೆ ಪ್ರತ್ಯಕ್ಷ! ನಾನು ನೋಡುತ್ತಿರುವುದು ನಿಜವೋ ಕನಸೋ!"

"ಜಹಾಂಪನಾಹ್, ರುಖೈಯ್ಯಾ ಬಾನು ಬೇಗಂರು ತಮ್ಮನ್ನು ಕರೆಯುತ್ತಿದ್ದಾರೆ. ಕರೆತರಬೇಕೆಂದು ನನಗೆ ಆದೇಶಿಸಿದ್ದಾರೆ. ದಯವಿಟ್ಟು ಬನ್ನಿ ಎಂದು, ಹೋಗಬೇಕಾದ ಕಡೆಗೆ ದಾರಿ ತೋರಿಸಿದಳು."

ಜಹಾಂಗೀರ್ ಅವಳು ತೋರಿದ ದಾರಿಯಲ್ಲಿ ನಡೆಯತೊಡಗಿದ. ಅವಳು ಮುಂದೆ, ಅವನು ಹಿಂದೆ. ಹೆಜ್ಜೆ ಹಾಕುತ್ತಲೇ ಹಳೆಯ ನೆನಪುಗಳು ಮರುಕಳಿಸಿದವು. ನಾಲ್ಕು ವರ್ಷಗಳೇ ಆದವು ಅವಳನ್ನು ನೋಡಿ. ನೋಡಬೇಕೆಂದು ಎಷ್ಟೋ ಸಲ ಎನಿಸಿದರೂ ಈಗ ಅವನು ಪರಪುರುಷ. ಜನಾನಾಕ್ಕೆ ಯಾವಾಗೆಂದರೆ ಆಗ, ಹೋಗಲು ಪರವಾನಗಿ ಇಲ್ಲ. ತನ್ನ ಪರಿವಾರದ, ಒಂದು ವೇಳೆ ಬೇರೆ ರೀತಿಯಿಂದ, ಬೇರೆ ಕಾರಣಗಳಿಂದ ಅವಳನ್ನು ನೋಡಲು ಪ್ರಯತ್ನಿಸಿದರೆ ನೋಡಿದವರು, ಕೇಳಿದವರು ಏನೆಂದುಕೊಳ್ಳುತ್ತಾರೆ

ಎಂದು ಯೋಚಿಸುವುದರ ಜೊತೆಗೆ ವಿಪರೀತವಾದ ರಾಜಕಾರ್ಯಗಳು! ಸಲ್ತನತ್‌ನ ಹೊಸ ಬಾದಶಾಹ್. ಅನುಭವವಿಲ್ಲದವನು ಎಂದು ಸುತ್ತಮುತ್ತಲ ರಾಜ್ಯದವರು, ಇದರ ಲಾಭ ಪಡೆಯಲು ಕಾಯುತ್ತಿದ್ದರು ಬೇರೆ. ಹೀಗಾಗಿ ಮೆಹರುನ್ನೀಸಾ ಅಳಿಸಲಾಗದ ನೆನಪಾಗಿ ಅಚ್ಚೊತ್ತಿ ಉಳಿದಿದ್ದರೂ, ಅವಳನ್ನು ಭೇಟಿಯಾಗಿ, ಕಷ್ಟ ಸುಖಗಳನ್ನು ವಿಚಾರಿಸಲು ಆಗಿರಲಿಲ್ಲ. ಈಗ ಇದೊಳ್ಳೆ ಅವಕಾಶ. ಅಮ್ಮಿಜಾನ್‌ರೇ ಹೇಳಿ ಕಳಿಸಿದ್ದಾರೆ. ಅದೂ ಮೆಹರುನ್ನೀಸಾ ಮೂಲಕ! ಏನಿರಬಹುದು ವಿಷಯ ಎಂದು ತಲೆಕೆಡಿಸಿಕೊಳ್ಳತೊಡಗಿದ. ರುಖೈಯ್ಯಾಳಿದ್ದ ಜಾಗ ತಲುಪಿದ ಮೇಲೆ, ಮೆಹರುನ್ನೀಸಾ ಮೆಲ್ಲನೆ ಅಲ್ಲಿಂದ ಜಾರಿಕೊಂಡಳು.

"ಅಮ್ಮಿಜಾನ್ ಇದ್ದಕ್ಕಿದಂತೆ ನಮ್ಮನ್ನು ಬರಹೇಳಿದ ಕಾರಣ ಅರ್ಥವಾಗಲಿಲ್ಲ."

"ಇದರಲ್ಲಿ ಅರ್ಥವಾಗುವಂಥದ್ದೇನಿದೆ ಬೇಟಾ! ಈಗ ನಾವು ಯಾವುದಕ್ಕೂ ಬಾರದವರು. ಯಜಮಾನಿಕೆ, ಅಧಿಕಾರಗಳನ್ನು ಕಳೆದುಕೊಂಡೂ ಬದುಕಬೇಕೆಂದು ಬದುಕುತ್ತಿರುವ ಅಸಹಾಯಕರು. ಎಷ್ಟೋ ಸಲ ನಿನ್ನನ್ನು ನೋಡಬೇಕು, ಮಾತಾಡಿಸಬೇಕು ಎಂದುಕೊಳ್ಳುತ್ತೇನೆ. ಆದರೆ ನಿನಗೆ ನಿನ್ನದೇ ರಾಜಕೀಯ ಸಮಸ್ಯೆಗಳು, ಕೌಟುಂಬಿಕ ಸಮಸ್ಯೆಗಳು ಇರುತ್ತವೆ. ಅವುಗಳಿಗೆ ಅಡ್ಡಿಮಾಡಲು ಇಷ್ಟವಾಗುವುದಿಲ್ಲ. ಬೇಟಾ ಖುಸ್ರೋ ಈಗ ಹೇಗಿದ್ದಾನೆ? ಹುಡುಗ ತಪ್ಪು ಮಾಡಿದ್ದಾನೆ. ಅದಕ್ಕೆ ಶಿಕ್ಷೆಯೂ ಆಗಿದೆ. ಅವನ ಕಡೆ ಗಮನವಿರಲಿ. ಎಷ್ಟಾದರೂ ಅವನು ನಮ್ಮವನೇ ಅಲ್ಲವೇ?"

"ಅಮ್ಮೀಜಾನ್ ಅವನು ನನ್ನ ಬೇಟಾ ಇರಬಹುದು. ಆದರೆ ನ್ಯಾಯ ಎಲ್ಲರಿಗೂ ಒಂದೇ! ....ಆದ್ದರಿಂದ ಅವನಿಗೆ ಶಿಕ್ಷೆ ಅನಿವಾರ್ಯವಾಯಿತು. ಅವನಿಗೆ ಯಾವುದೇ ಕೊರತೆಯಿಲ್ಲದಂತೆ ವ್ಯವಸ್ಥೆ ಮಾಡಿದ್ದೀನಿ. ನಿಮಗೆ ಚಿಂತೆ ಬೇಡ."

"ನನಗೆ ಗೊತ್ತು ಬೇಟಾ, ನಿನ್ನ ಹೃದಯದಲ್ಲಿ ಸಹಜವಾಗಿ ಕರುಣೆ ತುಂಬಿಕೊಂಡಿದೆ. ಆದರೆ ಸಲ್ತನತ್ ನಿರ್ವಹಣೆಯಲ್ಲಿ ಹಲವು ಬಾರಿ ಕಠಿಣ ನಿರ್ಣಯಗಳೂ, ಕ್ರೂರ ತೀರ್ಪುಗಳೂ ಅನಿವಾರ್ಯವೆಂಬುದು, ನಿನ್ನ ಅಬ್ಬುವಿನ ಸಾಂಗತ್ಯದಲ್ಲಿ ನಾನು ಕಲಿತ ಪಾಠವೇ ಆಗಿದೆ. ನಾನು ನಿನ್ನನ್ನು ಇಲ್ಲಿಗೆ ಕರೆಸಿದ್ದು ಕೃತಜ್ಞತೆ ಹೇಳಲು. ಮೆಹರುನ್ನೀಸಾಳಂತಹ ನಿಷ್ಠಾವಂತಳನ್ನು ನನ್ನ ಸಹಾಯಕ್ಕೆ ಇರಿಸಿದ್ದು ನನಗೆ ತುಂಬ ಸಂತೋಷವಾಗಿದೆ. ಸ್ವಂತ ಮಗಳಿಗಿಂತಲೂ ಹೆಚ್ಚು ಕಾಳಜಿವಹಿಸಿ ನನ್ನನ್ನು ನೋಡಿಕೊಳ್ಳುತ್ತಾಳೆ. ನನಗೆ ಬೇಕಾದ ಬಟ್ಟೆ, ಬರೆ, ಊಟ, ತಿಂಡಿಗಳ ಆಯ್ಕೆ, ಪೂರೈಕೆಯಲ್ಲಿ ಅವಳ ಅಭಿರುಚಿ ಎಂಥಾದ್ದೆಂದು ಅಚ್ಚರಿಪಡುತ್ತೇನೆ. ಪಾಪದ ಹೆಣ್ಣು! ಅನಾಥವಾಗಿ ಈ ಜನಾನಾದಲ್ಲಿ ಕೊಳೆಯಬೇಕಾಗಿ ಬಂದಿದೆ. ಬಾದಶಾಹರ ಕಿರೀಟದ ತಲೆಮಣಿಯಾಗಿ ಮೆರೆಯಬೇಕಾದವಳು. ಇನ್ನೂ ಎಷ್ಟೋ ಕಾಲ ಜೀವಿಸಬೇಕಾದವಳ ಅನಾಥ ಸ್ಥಿತಿಯನ್ನು ನೋಡಿದಾಗ ನನ್ನ ಕರುಳು ಹಿಂಡಿದಂತಾಗುತ್ತದೆ. ಅವಳಿಗೊಂದು ಬದುಕನ್ನು ಕಲ್ಪಿಸಬೇಕು. ಯೋಗ್ಯವಾದ, ಉನ್ನತ ಅಧಿಕಾರ ಸ್ಥಾನಗಳಲ್ಲಿ ಇರುವ ವರಿಷ್ಠರಲ್ಲಿ, ಶ್ರೀಮಂತರಲ್ಲಿ ಯಾರನ್ನಾದರೂ ಹುಡುಕಿ ಮದುವೆ ಮಾಡಬೇಕು. ನೀನೂ ಅವಳನ್ನು ನಿರ್ಲಕ್ಷಿಸಿಬಿಟ್ಟೆ. ನನ್ನ ಚಿಂತೆಯೆಲ್ಲ ಅಮೂಲ್ಯ ರತ್ನವೊಂದು ಯಾರದೋ ಕೈ ಸೇರಿಬಿಟ್ಟರೆ? ಎನ್ನುವುದಾಗಿದೆ."

"ಅಮ್ಮೀಜಾನ್ ನೀವೇನು ಹೇಳುತ್ತಿರುವುದು? ನಾನು ಅವಳನ್ನು ನಿರ್ಲಕ್ಷಿಸಿ ಬಿಟ್ಟೆನೇ? ಆ ದಿನಗಳಿಂದ ಈ ಕ್ಷಣದವರೆಗೆ ಅವಳನ್ನು ನಾನು ಮರೆತಿಲ್ಲ. ದೇಶದ್ರೋಹಿ, ಬಂಡುಕೋರ ಅಲಿಖುಲಿಯಿಂದ ತುರಾ-ಇ-ಚಿಂಗೀಜಿ ಕೊಡಿಸಿ ನಿಕಾಹ್‌ಗೂ ಪ್ರಯತ್ನಿಸಿದೆ. ಅಂದುಕೊಳ್ಳುತ್ತಿದ್ದಂತೆ ಏನೇನೋ ಆಗಿಹೋಯಿತು. ಅಲಿಖುಲಿ ಆವೇಶಕ್ಕೆ ಒಳಗಾಗಿ, ತನ್ನ ಸಾವನ್ನು ತಂದುಕೊಂಡ. ಆದರೆ ನೀಸಾಳಿಗೆ, ನಾನು ಕೊಲೆಗಾರ, ನಾನಾಗಿ ಅವನನ್ನು ಕೊಲ್ಲಿಸಿದೆ ಎನ್ನುವ ಭಾವನೆಯಿದೆ."

"ಮುಂದಾದರೂ ವಿವೇಕದಿಂದ ವರ್ತಿಸು. ಅವಳು ನನಗೊಂದು ಅಮೂಲ್ಯ ರತ್ನ. ಜನಾನಾದಲ್ಲಿ ಅವಳು ತಂದ ಸುಧಾರಣೆ, ಶಿಸ್ತು ನೀನು ಗಮನಿಸಬೇಕು."

"ಎಲ್ಲ ವಿಷಯಗಳೂ ನನ್ನ ಗಮನಕ್ಕೆ ಬರುತ್ತದೆ. ಆದರೆ ಜನಕ್ಕೆ ಹೆದರಬೇಕಾಗಿದೆ."

"ಹಾಗಾದರೆ ಈಗ ನಿನ್ನ ಆಲೋಚನೆಯೇನು?"

"ಅಮ್ಮಿ ನಾನೊಮ್ಮೆ ಅವಳನ್ನು ಮಾತಾಡಿಸಬೇಕು."

"ಬೇಟಾ, ನಿಮ್ಮಿಬ್ಬರ ಭೇಟಿಗೆ ನಾನು ವ್ಯವಸ್ಥೆಮಾಡುತ್ತೇನೆ. ಆದರೆ ಈ ವಿಷಯ ಜಗತ್‌ಗೋಸಿನಿಗೆ ತಿಳಿದರೆ ಏನು ರಂಪ ಮಾಡುತ್ತಾಳೋ."

ಜಹಾಂಗೀರ್ ಇಲ್ಲಿ ಮಾತಾಡುವಷ್ಟರಲ್ಲಿ, ಜಗತ್‌ಗೋಸಿನಿ ಇನ್ನೊಂದೆರಡು ಅಂಗಡಿಗಳನ್ನು ಸುತ್ತಿ, ಅವನು ತನ್ನ ಹೆಂಗಸರಿಂದ ಸುತ್ತುವರಿದು ನಿಂತಿದ್ದ ಅಂಗಡಿ ಬಳಿಗೆ, ಹೋಷಿಯಾರನೊಂದಿಗೆ ಬಂದಳು. ಅಲ್ಲಿ ಜಹಾಂಗೀರನಾಗಲಿ, ಅವನ ಹೆಂಗಸರಾಗಲಿ ಯಾರೂ ಇರಲಿಲ್ಲ. ಅಂಗಡಿಯಲ್ಲಿನವಳನ್ನು ವಿಚಾರಿಸಿದಾಗ, ಬಿಳಿ ಉಡುಪು ಧರಿಸಿದ್ದ ಹೆಂಗಸೊಬ್ಬಳು ಅವರನ್ನು ಕರೆದೊಯ್ದಳೆಂದು ಹೇಳಿದಳು.

ಜಗತ್‌ಗೋಸಿನಿ, ಆಕೆ ಯಾರಿರಬಹುದೆಂದು ಯೋಚಿಸುತ್ತಿದ್ದಳು. ಮೆಹರುನ್ನೀಸಾ ಇರಬಹುದೇ ಎನಿಸಿದರೂ ದುಃಖದಲ್ಲಿರುವವಳು ಹೀಗೆ ಬಹಿರಂಗವಾಗಿ ಸುತ್ತಾಡಲು ಬರಲಾರಳು ಎಂದುಕೊಂಡಳು. ಆದರೂ ಬಾದಶಾಹರು ಎಲ್ಲಿ, ಯಾರ ಜೊತೆ ಇರಬಹುದೆಂಬುದನ್ನು ಪತ್ತೆ ಹಚ್ಚುವಂತೆ ಹೋಷಿಯಾರನಿಗೆ ಹೇಳಿದಳು. ಹೋಷಿಯಾರ್‌ಗೆ ಹೇಳಿದರೆ ಸಾಕು. ಮೈಯೆಲ್ಲಾ ಕಣ್ಣು. ಪತ್ತೆದಾರಿ ಕೆಲಸಕ್ಕೆ ಹೇಳಿ ಮಾಡಿಸಿದಂತಿದ್ದ. ಒಂದು ಸುತ್ತು ಸುತ್ತಿಬರುವಷ್ಟರಲ್ಲಿ, ಅಲ್ಲಲ್ಲಿ ಕೆಲ ಹೆಂಗಸರು, ಗುಂಪುಗುಂಪಾಗಿ ಜಹಾಂಗೀರ್ ಮತ್ತು ಮೆಹರುನ್ನೀಸಾ ಬಗ್ಗೆ ಪಿಸುದನಿಯಲ್ಲಿ ಮಾತಾಡಿಕೊಳ್ಳುತ್ತಿದ್ದರು. ಅವರನ್ನೆಲ್ಲಾ ಹಾದು ಹೋಗುತ್ತಿರುವಾಗ, ರುಖೈಯ್ಯಾ ಬೇಗಂರೊಂದಿಗೆ ಜಹಾಂಗೀರ್ ಮಾತಾಡುತ್ತಿದ್ದುದನ್ನು ನೋಡಿದನು. ನೀಸಾ ಅಲ್ಲಿ ಕಾಣಿಸಲಿಲ್ಲ. ಆದರೆ ಅವರಿಂದ ಒಂದೆರಡು ಅಂಗಡಿಗಳ ದೂರದಲ್ಲಿ, ಮಗಳು ಲಾಡ್ಲಿಯೊಂದಿಗೆ, ಒಂದು ಅಂಗಡಿಯಲ್ಲಿನ ಆಭರಣಗಳನ್ನು ಒಂದೊಂದಾಗಿ ಕೇಳಿ, ಕೈಲಿ ಹಿಡಿದು ಪರೀಕ್ಷಿಸಿ, ಮಗಳನ್ನು ಅದರ ಬಗ್ಗೆ ಅಭಿಪ್ರಾಯ ಕೇಳುತ್ತಿದ್ದಳು.

ಹೋಷಿಯಾರ್ ಬೇಗ ಬೇಗ ಹೆಜ್ಜೆ ಹಾಕಿ, ಅವರನ್ನು ಸಮೀಪಿಸಿ, ರುಖೈಯ್ಯಾ ಬೇಗಂ ಮತ್ತು ಜಹಾಂಗೀರನಿಗೆ ಸಲಾಂ ಹೇಳಿ,

"ಜಹಾಂಪನಾಹ್, ಮಧ್ಯೆ ಪ್ರವೇಶಿಸಿದ್ದಕ್ಕೆ 'ಮಾಫಿ' ಬಯಸುತ್ತೇನೆ. ಪಾದಶಾಹ್ ಬೇಗಂ ನಿಮಗಾಗಿ ಎದುರು ನೋಡುತ್ತಿದ್ದಾರೆ."

"ನೀನು ಹೊರಡು ಹೋಷಿಯಾರ್, ನಾನೀಗಲೇ ಒಂದೆರಡು ನಿಮಿಷಗಳಲ್ಲಿ ಬರುತ್ತೇನೆ."

ಹೋಷಿಯಾರ್ ಮತ್ತೆ ಬಾಗಿ (ಸಲಾಂ) ಹೇಳಿ ಜಗತ್‌ಗೋಸಿನಿ ಇದ್ದೆಡೆಗೆ ವೇಗದ ಹೆಜ್ಜೆ ಹಾಕಿದ.

"ಬೇಟಾ, ನಾನು ಹೇಳಿದ ವಿಷಯದ ಬಗ್ಗೆ ಆಲೋಚಿಸು, ನಿಮ್ಮಿಬ್ಬರ ಮದುವೆ ತಪ್ಪಿ ಹೋಗಲೂ ಒಂದಲ್ಲ ಒಂದು ರೀತಿಯಿಂದ ನಾನು ಕಾರಣವಾದೆ. ಆ ಹುಡುಗಿಯನ್ನು ನೆನೆಸಿಕೊಂಡರೆ ಮರುಕವೆನಿಸುತ್ತದೆ. ಅವಳು ಅಸಾಧಾರಣ ಹೆಣ್ಣು. ಅಂಥವಳಿಗೆ ನಿನ್ನ ಜೊತೆ ಸಿಕ್ಕರೆ, ಹೊಸ ಚರಿತ್ರೆಯನ್ನೇ ಸೃಷ್ಟಿಸುತ್ತಾಳೆ. ಖಂಡಿತ ಅವಳನ್ನು ಬಿಡಬೇಡ. ನಿಮ್ಮಿಬ್ಬರನ್ನು ಭೇಟಿಮಾಡಿಸುತ್ತೇನೆ. ನೀನೀಗ ಹೋಗು."

ಜಹಾಂಗೀರ್ ರುಖೈಯ್ಯಾಳನ್ನು ಬೀಳ್ಕೊಟ್ಟು ಹೊರಟ. ರುಖೈಯ್ಯಾ ಬೇಗಂ ಮುಂದಿನ ಹೆಜ್ಜೆಯ ಬಗ್ಗೆ ಚಿಂತಿಸಲು ಆರಂಭಿಸಿದಳು. ಜಗತ್‌ಗೋಸಿನಿಗೆ ಮತ್ತೆ ತಲೆನೋವು ಶುರುವಾಯಿತು. ಬಾದಶಾಹ್ ಅವಳ ಹಿಂದೇಕೆ ಬೀಳುತ್ತಿದ್ದಾರೆ. ತನ್ನಲ್ಲಿ ಇಲ್ಲದ್ದು ಅವಳಲ್ಲೇನಿದೆ. ತಾನೂ ಅನುಪಮ ಸುಂದರಿಯೆಂದೇ ಮದುವೆಯಾಗಿ, ತನ್ನನ್ನೇ ಹೆಚ್ಚಾಗಿ ಪ್ರೀತಿಸುತ್ತಿದ್ದವನಿಗೆ, ಈಗೇಕೆ ಬೇಡವಾದೆ. ತನ್ನಲ್ಲೂ ಅಷ್ಟೇ ಸೌಂದರ್ಯವಿದೆ. ಆದರೆ ಅವಳಷ್ಟು ಜಾಣ್ಮೆ, ಬುದ್ಧಿ, ಪ್ರತಿಭೆಗಳು ಇಲ್ಲದಿರಬಹುದು. ಹಾಗೆಂದು ಕೀಳು ಬುದ್ಧಿಯ, ಗುಳ್ಳೆ ನರಿಯಂತಹ ಮಾಟಗಾತಿಯಾಗಿರುವ, ಅಲಿಖುಲಿಯಂತಹ ಒಬ್ಬ ಒರಟು ಸೈನಿಕನ ಹೆಂಡತಿಯಾಗಿದ್ದು, ದಿಕ್ಕಿಲ್ಲದೆ ವೈಧವ್ಯದ ಪಟ್ಟ ಕಟ್ಟಿಕೊಂಡು ಬಂದವಳ ಹಿಂದೆ ಹೋದರೆ, ಬಾದಶಾಹರ ಮರ್ಯಾದೆ ಏನಾಗಬಹುದು. ಜನ ಏನು ಮಾತಾಡಿಕೊಳ್ಳಬಹುದು. ಹೇಗಾದರೂ ಅವರಿಬ್ಬರ ಸಂಬಂಧ ಪೂರ್ತಿಯಾಗಿ ಮುರಿಯಬೇಕು. ಮಹಬ್ಬತ್ ಖಾನ್‌ಗೆ ಏನಾದರೂ ಯೋಚಿಸುವಂತೆ ಹೇಳಬೇಕು. ಹೋಷಿಯಾರ್ ಖಾನ್, ನಡೆಯುವುದನ್ನು ತಿಳಿಸಬಲ್ಲನೆ ಹೊರತು, ಬುದ್ಧಿವಾದ ಹೇಳುವಷ್ಟು ಅಧಿಕಾರವಿಲ್ಲ. ಎಂದೆಲ್ಲಾ ಯೋಚಿಸುವಾಗ ಜಹಾಂಗೀರ್‌ನ ಆಸಕ್ತಿ ವಯಸ್ಸಾದ ಹೆಣ್ಣುಗಳ ಬಗ್ಗೆ ಕರಗಿ ಹೋಗುತ್ತದೆ. ತಾನು ಹೆಂಡತಿಯೇ ಇರಬಹುದು. ಆದರೆ ಮೆಹರುನ್ನೀಸಾಳ ಪ್ರಾಯವಾಗಲೀ ತನ್ನಲ್ಲಿ ಇಲ್ಲ. ಆಕರ್ಷಿಸಲು ಮಾಡುವ ಪ್ರಯತ್ನಗಳು ಯಾವುದೂ ಸಫಲವಾಗುವುದಿಲ್ಲ. –ಎನ್ನುವ ಸತ್ಯ ಹೊಳೆಯುತ್ತಿತ್ತು.

## ಮೊಘಲ್ ಸಾಮ್ರಾಜ್ಯದಲ್ಲಿ ಮೂಡುತಿದೆ ಸೂರ್ಯ ಪ್ರಭೆ

ಮೆಹರುನ್ನೀಸಾಳ ಪ್ರಭಾವ ವರ್ಚಸ್ಸುಗಳಿಂದ ಬಾದಶಾಹರನ್ನು ಕಾಪಾಡಿಕೊಳ್ಳುವುದು ಹೇಗೆಂದು ಜಗತ್‌ಗೋಸಿನಿ ಚಿಂತಿಸತೊಡಗಿದಳು. ಅವಳ ಮೈಮಾಟಗಳಿಗೆ, ಮಂತ್ರ ತಂತ್ರಗಳಿಗೆ ಒಳಗಾಗಿ, ಅವಳ ಗುಲಾಮನಾಗಿ ಬಿಟ್ಟರೆ, ನಾಳೆ ನನ್ನ ಮಕ್ಕಳಿಗೆ ಗದ್ದುಗೆ ತಪ್ಪಿ ಹೋದರೆ, ಅವರ ಪಾಡೇನು? ನನ್ನ ಪಾಡೇನು? ಒಂದು ವೇಳೆ ಈಗ ನೋಡಿದ್ದೆಲ್ಲವೂ, ಊಹಿಸುತ್ತಿರುವುದೆಲ್ಲವೂ ನಿಜವಾದಲ್ಲಿ 'ಪಾದಶಾಹ್‌ಬೇಗಂ' ಬಿರುದು, ಜನಾನಾದ ಅಧಿಕಾರ, ಯಜಮಾನಿಕೆಗಳೆಲ್ಲವೂ ಕೈ ಬಿಟ್ಟು ಹೋಗುತ್ತವೆ. ಬಾದಶಾಹರ ನೂರಾರು,

ಅಲಕ್ಷಿತ ಪತ್ನಿಯರ, ಉಪಪತ್ನಿಯರ ಗುಂಪಿನಲ್ಲಿ ನಾನೂ ಒಬ್ಬಳಾಗುತ್ತೇನೆ. ಇಲ್ಲಿವರೆಗೆ ತನ್ನ ಸ್ಥಾನ ಭದ್ರವಾಗಿತ್ತು. ಅತ್ಯಂತ ರೂಪವತಿಯರು, ಅನುಪಮ ಸುಂದರಿಯರು ಇದ್ದರೂ ತನ್ನ ಸ್ಥಾನಕ್ಕೆ ಅಭದ್ರತೆಯ ಭೀತಿ ಎಂದೂ ಕಾಣಿಸಲಿಲ್ಲ. ಮೆಹರುನ್ನೀಸಾಳನ್ನು ಪ್ರೀತಿಸುವಷ್ಟೇ ಪ್ರಮಾಣದಲ್ಲಿ ತನ್ನನ್ನು ಪ್ರೀತಿಸುತ್ತಿದ್ದ. ಯೋಚಿಸುತ್ತಾ ಹೋದಂತೆ, ಮೆಹರುನ್ನೀಸಾ ತನ್ನ ಪಾಲಿಗೆ ಭಯಂಕರವಾದ ಬೆದರಿಕೆಯಾಗಿ ಕಾಣಿಸಿಕೊಳ್ಳುತ್ತಿದ್ದಾಳೆ. ಬಾದಶಾಹ್ ಅವರನ್ನು ಅವಳ ಕಪಿಮುಷ್ಟಿಯಿಂದ ತಪ್ಪಿಸುವುದು ಹೇಗೆ? ಮಹಬ್ಬತ್‌ಖಾನ್ ಮತ್ತು ಹೋಷಿಯಾರ್ ಇಬ್ಬರೂ ಕೈಚೆಲ್ಲಿ ಕೂತಿದ್ದಾರೆ. ಮಹಬ್ಬತ್‌ಖಾನ್‌ಗೂ ಭಯವಿದೆ. ಆ ಹೆಣ್ಣು ಗೆರಿಲ್ಲಾ ಸಮರನೀತಿ ಬಲ್ಲವಳು. ಎಲ್ಲಿಂದ ಯಾವಾಗ ಹೇಗೆ ಆಕ್ರಮಣ ಮಾಡುತ್ತಾಳೊ ಗೊತ್ತಿಲ್ಲ. ಮದುವೆಗೆ ಮೊದಲೇ ಜಹಾಂಗೀರ್ ಮಹಬ್ಬತ್‌ಖಾನ್‌ಗೆ ತನ್ನ ಜೊತೆ ಮಾತಾಡಲು ಅವಕಾಶವೆ ಕೊಡುತ್ತಿರಲಿಲ್ಲ. ಹಾಗಾಗಿ ಆತ್ಮ ರಕ್ಷಣೆಗಾದರೂ ಗುರಾಣಿಯಾಗಿ ಕೆಲಸಮಾಡಲು ದಾರಿಗಳೇ ತೋರುತ್ತಿರಲಿಲ್ಲ. ಜಗತ್‌ಗೋಸಿನಿಗೆ ಖಾತ್ರಿಯಾಯಿತು. ಅಧಿಕಾರ ಕಳೆದುಕೊಂಡ ರುಖೈಯ್ಯಾ ಬೇಗಂ ತನ್ನನ್ನು ನಿಕೃಷ್ಟವಾಗಿಸಲು, ದೂರವಿರಿಸಲು ಹಾಗೂ ಜಹಾಂಗೀರ್ ಮತ್ತು ಮೆಹರುನ್ನೀಸಾಳ ಆಪ್ತ ವಲಯದಲ್ಲಿ ವಿಜೃಂಭಿಸಲು ಈ ಪಿತೂರಿ ಮಾಡುತ್ತಿದ್ದಾಳೆ ಎಂದೇ ಭಾವಿಸಿದಳು. ಆದರೆ ವಾಸ್ತವದಲ್ಲಿ ರುಖೈಯ್ಯಾಳ ಆಲೋಚನೆ ಅದಾಗಿರಲಿಲ್ಲ. ತನ್ನ ಸ್ವಂತ ಮಗನಲ್ಲದಿದ್ದರೂ ತಾನು ಮತ್ತು ತನ್ನ ಬಾದಶಾಹ್ ಅಕ್ಬರ್ ಇಬ್ಬರೂ ಅವನನ್ನು ಬಹಳವಾಗಿ ಪ್ರೀತಿಸುತ್ತಿದ್ದರು. ಅಕ್ಬರನ ಭರವಸೆ ಇದ್ದದ್ದೂ ಕೂಡಾ ಅವನಲ್ಲಿಯೆ! ಆದರೆ ಅವನ ಹುಡುಗಾಟಿಕೆ, ವಿಲಾಸಿ ಜೀವನ, ಮದ್ಯವ್ಯಸನ ಇವುಗಳಿಂದ ಸ್ವಲ್ಪ ಅಸಮಾಧಾನಗೊಂಡಿದ್ದ ಜಹಾಂಗೀರ್ ತಾವು ಹೇಳಿದ್ದನ್ನು ಕೇಳಿಸಿಕೊಂಡರೆ, ಸಾಮ್ರಾಜ್ಯವನ್ನು ಸಮರ್ಥವಾಗಿ ಆಳಬಲ್ಲ ಎನ್ನುವ ಪೂರ್ಣಭರವಸೆಯಿದ್ದುದರಿಂದಲೇ ಸಾವಿನ ಕ್ಷಣಗಳಲ್ಲಿ ಅವನನ್ನು ಕರೆದು ಆಪ್ತರ, ಅಧಿಕಾರಿಗಳ ಎದುರು ಚಕ್ರವರ್ತಿ ಸಂಕೇತವಾದ ಪೇಟವನ್ನು ತಲೆಯ ಮೇಲೆ ಇರಿಸಿದ. ಹಾಗಾಗಿ ರುಖೈಯ್ಯಾ ಬೇಗಂ ಸಾಮ್ರಾಜ್ಯದ ಹಿತದೃಷ್ಟಿಯಿಂದಲೂ, ಮೆಹರುನ್ನೀಸಾಳನ್ನು, ಮತ್ತೆಯಾದರೂ ಜಹಾಂಗೀರನಿಗೆ ಹೆಂಡತಿಯಾಗಿ ಬರಲೆಂದು ಪ್ರಯತ್ನಿಸುತ್ತಿದ್ದಳು. ಮೇಲು ನೋಟಕ್ಕೆ ಜಹಾಂಗೀರನ ಬಗ್ಗೆ ತಿರಸ್ಕಾರ ತೋರಿದರೂ ಮೆಹರುನ್ನೀಸಾಳ ಅಂತರಂಗದಾಳದಲ್ಲಿ ಜಹಾಂಗೀರನ ಬಗ್ಗೆ ಪ್ರೀತಿ ಮತ್ತು ಮುಘಲ್ ಸಾಮ್ರಾಜ್ಯದ ಸಾಮ್ರಾಜ್ಞಿಯಾಗಬೇಕೆಂಬ ಮಹತ್ವಾಕಾಂಕ್ಷೆ ಇನ್ನೂ ಅಚ್ಚ ಹಸಿರಾಗಿಯೇ ಇತ್ತು.

ಈ ಮಧ್ಯೆ ಮೆಹರುನ್ನೀಸಾ ಮತ್ತು ಜಹಾಂಗೀರ್ ಎರಡು ಮೂರು ಬಾರಿ ಭೇಟಿಯಾಗಿದ್ದರು. ಅವರ ಮಧ್ಯೆ ಇದ್ದ ತಪ್ಪು ಕಲ್ಪನೆಗಳು ದೂರವಾಗಿದ್ದವು. ಎಷ್ಟೇ ಗುಟ್ಟಾಗಿ ಇರಿಸುವ ಪ್ರಯತ್ನಗಳು ನಡೆದುವಾದರೂ ಜನಾನಾದ ಮಂದಿಗೆ ಮತ್ತು ಅಲ್ಲಿಂದ ಮುಂದೆ ಮಹಲುಗಳ ಹೊರಗೂ ಸುದ್ದಿ ಪ್ರಚಾರವಾಯಿತು. ಕಡೆಗೂ ಆ ಮಾಟಗಾತಿ ಜಹಾಂಗೀರನನ್ನು ಬೀಳಿಸಿಕೊಂಡಳಲ್ಲ! ಎಂದು ಅಚ್ಚರಿಯಿಂದ ಬಾಯಿ ಬಿಟ್ಟವರು ಕೆಲವರಾದರೆ, ಮುಂದಿನ ಅವರ ಏಳ್ಗೆ, ಅವರ ಅಧಿಕಾರ ಅಂತಸ್ತುಗಳ ಕಲ್ಪನೆಯಿಂದ ಅಸೂಯೆಪಟ್ಟವರು ಇನ್ನೂ ಕೆಲವರು!!

ಮೊದಲಿನಿಂದಲೂ ಜನಾನಾದ ಬದುಕಿಗೆ ಬೇಸತ್ತು. ತಂದೆಯ ಮನೆಗೆ ಕಳಿಸಿಕೊಡಲು ಬೇಡಿಕೊಂಡರೂ, ಏನೇನೋ ನೆಪಗಳಿಂದ ಇಲ್ಲಿಯೇ ಉಳಿಯಬೇಕಾಗಿ ಬಂತು. ಈಗ ಜಹಾಂಗೀರ್ ಅವಳ ಬಯಕೆಗಳನ್ನೆಲ್ಲಾ ಪೂರೈಸಲು ಕಾತರನಾಗಿದ್ದ.

ಒಂದು ದಿನ ಇದ್ದಕ್ಕಿದ್ದಂತೆ, ಮೆಹರುನ್ನೀಸಾ ಜನಾನಾ ಬಿಟ್ಟು ತಂದೆಯ ಮನೆಗೆ ಹೊರಡಲಿರುವ ಸುದ್ದಿ ರುಖೈಯ್ಯಾ ಬೇಗಂ ಒಳಗೊಂಡು ಎಲ್ಲರಿಗೂ ತಿಳಿದು ಹೋಯಿತು. ಮೆಹರುನ್ನೀಸಾ ಬಾದಶಾಹರನ್ನು ಮದುವೆಯಾಗಲಿದ್ದಾರೆ ಎಂಬ ವದಂತಿ ಘೋಷಣೆಗೂ ಮೊದಲು ಪ್ರಚಾರವಾಯಿತು. ಇದು ಸತ್ಯಕ್ಕೆ ಹತ್ತಿರವಾದದ್ದೆಂದು ತಿಳಿದು ಬರುತ್ತಲೇ ಜನಾನಾದ ಹೆಂಗಸರು ಸೇವಕರು ಎಲ್ಲರೂ ಅವಳನ್ನು ನೋಡುವ ದೃಷ್ಟಿಯನ್ನು ಬದಲಾಯಿಸಿಕೊಂಡರು. ಗೌರವದಿಂದ ನಡೆದುಕೊಂಡರು. ಜಹಾಂಗೀರನನ್ನೂ ಕರೆದು ಸಂತೋಷಕೂಟವನ್ನು ಏರ್ಪಡಿಸುವ ಪ್ರಯತ್ನ ಮಾಡಿದರು. ಅವಳಿಗೆ ರಾಶಿರಾಶಿ ಉಡುಗೊರೆಗಳನ್ನು ತಂದುಕೊಟ್ಟರಾದರೂ ಸೌಜನ್ಯದಿಂದ ನಿರಾಕರಿಸಿದಳು.

ಈಗ ಅವಳಿಗೆ ನೋವಿಲ್ಲ ಸಂಕಟವಿಲ್ಲ. ತಾನು ಬಯಸಿದ್ದು ನಿರಾಯಾಸವಾಗಿ ದೊರೆಯುತ್ತಿರುವಾಗ ಪಾಪ ಪ್ರಜ್ಞೆ, ಸಮಾಜ ಯಾವುದೂ ಮುಖ್ಯವೆನಿಸಲಿಲ್ಲ. ಎಳೆಯ ಹೃದಯದಲ್ಲಿ ಕೆತ್ತಿ ಇರಿಸಿಕೊಂಡ ಪ್ರೀತಿ ಮೂವತ್ನಾಲ್ಕನೆ ವಯಸ್ಸಿನಲ್ಲಾದರೂ ಸಾಧ್ಯವಾಗಲಿದೆ ಎನ್ನುವುದೇ ಸಮಾಧಾನ. ಬಾಯಿಬಿಟ್ಟು ತನ್ನ ಒಪ್ಪಿಗೆಯನ್ನು ಘೋಷಿಸಲಿಲ್ಲವಾದರೂ, ಆತ್ಮ ಗೌರವವನ್ನು ಉಳಿಸಿಕೊಂಡೇ ಅವನನ್ನು ಗೆದ್ದುಕೊಳ್ಳುತ್ತಿದ್ದಾಳೆ. ಎಂದೆಂದಿಗೂ ಅವನು ತನ್ನವನಾಗಿಯೇ ಉಳಿದು ಮುಘಲ್ ಚರಿತ್ರೆಯಲ್ಲಿ ಹೊಸ ಅಧ್ಯಾಯವನ್ನು ಸೇರಿಸುತ್ತಾನೆ. ಈ ಅವಕಾಶದಿಂದ ನಾನೂ ಸ್ತ್ರೀ ಜಗತ್ತಿನಲ್ಲಿ ಹೊಸ ಪರಂಪರೆಯನ್ನು ಸೃಷ್ಟಿಸುತ್ತೇನೆ. ಹೆಣ್ಣು ಕೇವಲ ಅಡಿಗೆ ಮನೆಗೇ ಸೀಮಿತವಾಗಿ, ಗಂಡನ ಗುಲಾಮಗಿರಿಯನ್ನು ದಬ್ಬಾಳಿಕೆ, ದೌರ್ಜನ್ಯಗಳನ್ನು ಸಹಿಸಿಕೊಂಡು, ಸಂತಾನ ಕುಟುಂಬ ಕ್ಷೇಮಗಳಲ್ಲಿಯೆ ಸೀಮಿತವಾಗಿರಬೇಕೆನ್ನುವ ಪುರುಷ ಸಿದ್ಧಾಂತಕ್ಕೆ ಹೊಸಭಾಷ್ಯ ಬರೆಯುತ್ತೇನೆ. ಹೆಣ್ಣು ಬಯಸಿದಲ್ಲಿ ಪ್ರಚಂಡ ಬಿರುಗಾಳಿಯಾಗುತ್ತಾಳೆ. ಜಗತ್ತಿನ ಚಹರೆಯನ್ನೇ ಬದಲಿಸುತ್ತಾಳೆ ಎನ್ನುವುದನ್ನು ಸಾಕ್ಷಾತ್ಕರಿಸಿ ತೋರಿಸುತ್ತೇನೆ ಎಂದು ಗಟ್ಟಿಯಾದ ಆತ್ಮವಿಶ್ವಾಸದೊಂದಿಗೆ ಹೇಳಿಕೊಂಡಳು. ಮನಸ್ಸನ್ನು ಒಪ್ಪಿಸಿದಳು.

ಜೊತೆ ಜೊತೆಯಲ್ಲಿಯೇ ಮಾನವೀಯತೆ, ಮನುಷ್ಯ ಸಂಬಂಧಗಳನ್ನು ಗೌರವಿಸುತ್ತೇನೆ. ಜಹಾಂಗೀರನಿಗೆ ಇರುವ ನೂರಾರು ಹೆಂಗಸರು ಈಗ ಸುಧಾರಿಸಿದ್ದಾರೆ ಅವರನ್ನು ನಿಕೃಷ್ಟವಾಗಿ ಕಾಣುವಂತಾಗಬಾರದು. ಅವರ ಕಷ್ಟಗಳಿಗೆ ಸ್ಪಂದಿಸಿ ಉದಾರತೆಯನ್ನು ತೋರುವಂತಾಗಬೇಕು. ....ಎಂದು ಯೋಚಿಸುತ್ತಲೇ ಹೋದವಳಿಗೆ, ಥಟ್ಟನೆ ರುಖೈಯ್ಯಾ ಬೇಗಂಳ ಮಾತು ನೆನಪಾಯಿತು. ಈ ಗಂಡಸರ ಪ್ರೀತಿಯನ್ನು ನಂಬುವಂತಿಲ್ಲ. ಒಬ್ಬಳು ಬೇಜಾರಾದರೆ ಮತ್ತೊಬ್ಬಳನ್ನು ಹುಡುಕಿಕೊಳ್ಳುತ್ತಾನೆ ಎಂದು! ಒಂದು ವೇಳೆ ಹಾಗಾದ ಪಕ್ಷದಲ್ಲಿ ನನ್ನ ಭವಿಷ್ಯವೇನು?........ ಹೀಗೆ ಬರೀ ಯೋಚನೆಗಳಲ್ಲೇ ಹೊತ್ತು ಕಳೆಯುತ್ತಿದ್ದಳು.

ಘಿಯಾಸ್ ಮತ್ತು ಅಸ್ಮತ್‌ಗೆ ಮಗಳು, ಮೊಮ್ಮಗಳು ಮನೆಗೆ ಬಂದದ್ದು ಬಹಳ ಸಂತೋಷವೂ ಆಯಿತು ನಿರಾಳವೂ ಆಯಿತು.

ಘಿಯಾಸ್‌ಗೆ ಮೀನಾ ಬಜಾರಿನಲ್ಲಿ, ಜಹಾಂಗೀರ್ ಭೇಟಿಯಾದ ಸುದ್ದಿ ಮೊದಲೇ ತಲುಪಿತ್ತು. ಈ ಸುದ್ದಿಯೇ ಅವನ ಸಂತಸ, ಸಂಭ್ರಮದ ಮೊದಲ ಹೆಜ್ಜೆಯಾಗಿತ್ತು. ಇದು ಅವನಲ್ಲಿ ಒಂದು ರೀತಿಯ ಭರವಸೆ ಮೂಡಿಸಿತು. ಬಾದಶಾಹರನ್ನು ಮದುವೆಯಾಗಲು ಅವಳನ್ನು ಈಗ ಒತ್ತಾಯಿಸಬೇಕಿಲ್ಲ. ಪ್ರಯೋಜನಗಳ ಬಗ್ಗೆ ಪ್ರವರ ನೀಡಬೇಕಾದ್ದಿಲ್ಲ. ವರ್ಷಗಳಿಂದ ಕಂಡ ಕನಸು ಈಗ ಹೊಸ್ತಿಲಲ್ಲಿ ನಿಂತಿದೆ. ತನ್ನ ಮಗಳ ಪ್ರೀತಿ ಜಹಾಂಗೀರನ ಬಗ್ಗೆ ಎಷ್ಟು ದಟ್ಟವಾಗಿದೆ ಎಂಬುದು ತಿಳಿದಿದೆ. ಅವನ ಮದುವೆಯ ಪ್ರಸ್ತಾವವನ್ನು ಖಂಡಿತ ನೀಸಾ ನಿರಾಕರಿಸುವುದಿಲ್ಲ ಎನ್ನುವ ಭರವಸೆಯಿದೆ ಆದರೆ ನೇರವಾಗಿ ಅವಳ ಬಾಯಿಂದ ಕೇಳಿದರೆ ಸಮಾಧಾನ ಎನಿಸಿ,

"ಬೇಟಾ ನೀಸಾ, ಈಗ ನಿನ್ನ ಅಂತಿಮ ನಿರ್ಧಾರವೇನು? ನಿರ್ಧಾರವನ್ನು ತೆಗೆದುಕೊಳ್ಳುವ ಮೊದಲು ಪೂರ್ವಾಪರಗಳನ್ನು ಸಮಚಿತ್ತದಿಂದ ಯೋಚಿಸು. ಯೋಚಿಸುವ ಸಮಯದಲ್ಲಿ ಸಿಟ್ಟು, ಸೆಡವು, ದ್ವೇಷ, ಪ್ರತೀಕಾರ, ಅಹಂಕಾರಗಳನ್ನು ಬದಿಗಿಡು. ತಪ್ಪು ನಿರ್ಧಾರಗಳಿಂದ ಒಮ್ಮೆ ಕಳೆದುಕೊಂಡದ್ದನ್ನು ಮತ್ತೆ ಪಡೆಯಲು ಮಾಡುವ ಪ್ರಯತ್ನಗಳೊಂದೂ ಸಫಲವಾಗುವುದಿಲ್ಲ. ಜಹಾಂಗೀರ್ ನಿನ್ನನ್ನು ಆರಾಧಿಸುತ್ತಾನೆ. ನಿನ್ನ ಹೊರತು ಯಾವುದನ್ನೂ, ಯಾರನ್ನೂ ಮುಖ್ಯವೆಂದು ಪರಿಗಣಿಸುವುದಿಲ್ಲ."

"ಅಬ್ಬಾಜಾನ್ ನೀವು ಹೇಳುತ್ತಿರುವ ಒಂದೊಂದು ಮಾತೂ ಅನುಸರಣೀಯವೇ! ಆದರೆ ನಾನು ಬಾದಶಾಹರಿಗೆ ನನ್ನ ಅಂತಿಮ ನಿರ್ಧಾರವನ್ನು ತಿಳಿಸಿಲ್ಲ. ಆತುರತೆ ಬೇಡವೆಂಬುದು ನನ್ನ ಅಭಿಪ್ರಾಯ."

"ಹಾಗಾದರೆ ನೀನು ಅಭಿಪ್ರಾಯ ಮೂಡಿಸಿಕೊಳ್ಳುವ ಮೊದಲು ಷರೀಫನ ಕೈಲಿ ನಿನಗಾಗಿ ಕಳಿಸಿರುವ ಈ ಪತ್ರವನ್ನು ಓದು" ಎಂದು ತನ್ನ ಜೇಬಿನಿಂದ ಪತ್ರವನ್ನು ಹೊರತೆಗೆದು ಅವಳ ಕೈಗಿತ್ತ. ನಿಜ! ಅದರ ಮೇಲೆ ಜಹಾಂಗೀರನ ರಾಜಮುದ್ರೆ ಇತ್ತು. ತಾನಿಲ್ಲಿಗೆ ಬಂದು ಎರಡು ದಿನವೂ ಕಳೆದಿಲ್ಲ. ಆಗಲೇ ಪತ್ರವೇ, ಇಷ್ಟೊಂದು ಆತುರವೇ! ಈ ಆತುರ ಕಾತುರಗಳು ಕಡೆತನಕ ಮುಂದುವರೆಯಲು ಸಾಧ್ಯವೇ! ಮಾತುಗಳಲ್ಲಿ ಹೇಳಿಕೊಳ್ಳುವಷ್ಟು ಪ್ರೀತಿ ನಿಜವಾಗಿಯೂ ಅವನಲ್ಲಿ ಇದೆಯೇ?... ಓದುವುದಕ್ಕೆ ಮೊದಲೇ ಅನುಮಾನಗಳು1 ಸಂದೇಹಗಳು ಛಿ! ನಾನು ಮಾಡುತ್ತಿರುವುದು ಸರಿಯಲ್ಲ ಎನಿಸಿತು.

ಮಗಳು ಏಕಾಂತವಾಗಿ ಆಲೋಚಿಸಿ ನಿರ್ಧಾರಕ್ಕೆ ಬರಲಿ ಎಂದು ಘಿಯಾಸ್ ಮೆಲ್ಲನೆ ಅಲ್ಲಿಂದ ಹೊರಟ.

ಮೆಹರುನ್ನೀಸಾ ಬಹಳ ಜಾಗರೂಕತೆಯಿಂದ ಪತ್ರದ ಮುದ್ರೆಯೊಡೆದಳು. ಒಂದೊಂದು ಅಕ್ಷರವನ್ನೂ ಓದಿದಳು. ಅವನ ಕವಿ ಹೃದಯ ತೊಟ್ಟಿಡುತ್ತಿತ್ತು. ತುಟಿಯಂಚಿನಲ್ಲಿ ನಗು ಇಣುಕುತ್ತಿತ್ತು.

ಜಹಾಂಗೀರನ ಸ್ಥಿತಿಯೂ ಹಾಗೆಯೇ ಇತ್ತು. ಊಟ, ತಿಂಡಿ, ನಿದ್ದೆ, ಪ್ರಾರ್ಥನೆ ಎಲ್ಲವೂ ಕಾಟಾಚಾರಕ್ಕೆ. ಆಡಳಿತದ ವಿಷಯದಲ್ಲಿಯೂ ಅವಜ್ಞೆ ತೋರುತ್ತಿದ್ದ. ಮಹಬ್ಬತ್

ಖಾನ್ ಮತ್ತು ಅಸಫ್‌ಖಾನ್ ಇವರಿಬ್ಬರಿಗೇ ಒಪ್ಪಿಸಿ ಇನ್ನೂ ಕೆಲವು ದಿನ ತನಗೆ ತೊಂದರೆ ಕೊಡದೆ ಗಂಭೀರ ಸಮಸ್ಯೆಗಳನ್ನು ಹೊರತುಪಡಿಸಿ, ಅವರನ್ನೇ ಎಲ್ಲ ನಿರ್ವಹಿಸುವಂತೆ ಆದೇಶಿಸಿದ.

ಜಗತ್‌ಗೋಸಿನಿಯ ವಸತಿಗೂ ಹೋಗಲಿಲ್ಲ. ಅವನ ಹೃದಯವನ್ನೆಲ್ಲ ಮೆಹರುನ್ನೀಸಾ ತುಂಬಿಬಿಟ್ಟಿದ್ದಳು. ಅವನ ದೃಷ್ಟಿಯಲ್ಲಿ ಜಗತ್ತಿನ ಯಾವ ಹೆಣ್ಣೂ ಇಷ್ಟು ಸುಂದರಿಯಾಗಿರಲು ಸಾಧ್ಯವೇ ಇಲ್ಲ. ಹಿಂದಿನ ದಿನಗಳ ನೆನಪುಗಳೆಲ್ಲ ಮರುಕಳಿಸಿದವು. ಜನಾನಾದ ಉದ್ಯಾನಗಳಲ್ಲಿ, ಅರಮನೆಯ ಸ್ತಂಭಗಳ ಮರೆಯಲ್ಲಿ ಕಳೆಯುತ್ತಿದ್ದ ರಸನಿಮಿಷಗಳು ಅವಳೊಡನೆ ಮಾತಾಡುವುದಕ್ಕಿಂತ ಅವಳ ದೇಹದ ಅಂಗುಲಂಗುಲವೂ ಹೊಮ್ಮಿಸುತ್ತಿದ್ದ ಕಾಂತಿಯನ್ನು ಸವಿಯುತ್ತಿದ್ದುದು, ಕೆಂದುಟಿಗಳ ಮೇಲೆ ಫಳಕ್ಕನೆ ಹಾದು ಮರೆಯಾಗುವ ಮುಗುಳು ನಗೆ. ತಣ್ಣನೆ ತಿವಿದ ನೀಲಿಕಣ್ಣುಗಳ ಚೆಲುವು! .....ಓಹ್ ಅಲ್ಲಾಹ್ ಇಂತಹ ಸೌಂದರ್ಯ ಮನುಷ್ಯರಲ್ಲಿ ಸಾಧ್ಯವಾಗಿಸಿ ನನ್ನ ಮುಂದೆ ನಿಲ್ಲಿಸಿದ ನಿನಗೆ ನೂರೆಂಟು ಸಲಾಮುಗಳು ಎಂದುಕೊಳ್ಳುತ್ತಾ, ತನ್ನಲ್ಲಿ ತಾನೇ ಲೀನವಾದ.

ಜಗತ್‌ಗೋಸಿನಿಗೆ ಪ್ರಾಣವೇ ಹೋದಂತಾಯಿತು. ತನ್ನ ವಿಚಾರದಲ್ಲಿ ಆಗಲಿರುವ ಅನಾಹುತ ತಪ್ಪುವುದು ಸಾಧ್ಯವೇ ಇಲ್ಲ. ತಾನೇ ಏನಾದರೂ ಉಪಾಯ ಯೋಚಿಸಬೇಕು, ಬುದ್ಧಿ ಹೇಳಬೇಕು. ಮೆಹರುನ್ನೀಸಾಳಿಂದ ವಿಮುಖವಾಗುವಂತೆ, ಅವರೆಲ್ಲರ ದುಷ್ಟ ಬುದ್ಧಿಯನ್ನು ಬಯಲು ಮಾಡಬೇಕೆಂದು ತೀರ್ಮಾನಿಸಿದಳು.

ಹೋಷಿಯಾರನ ಮೂಲಕ ಸಂಜೆಗೆ ಜನಾನಾದ ಉದ್ಯಾನದಲ್ಲಿ ತನ್ನನ್ನು ಭೇಟಿಯಾಗಬೇಕೆಂದು ಬಾದಶಾಹನಿಗೆ ಸಂದೇಶ ಕಳಿಸಿದಳು.

ಜಹಾಂಗೀರನಿಗೆ ಹೋಗುವ ಮನಸ್ಸು ಇಲ್ಲದಿದ್ದರೂ ಒಂದಿಷ್ಟು ಹೊತ್ತು ಮೆಹರುನ್ನೀಸಾಳ ನೆನಪಿನ ಭೂತದಿಂದ ಬಿಡುಗಡೆಗಾಗಿ ಅವಳು ಹೇಳಿಕಳಿಸಿದ್ದ ಜಾಗಕ್ಕೆ ಬಂದ. ಆದಷ್ಟು ಬೇಗ ಮೆಹರುನ್ನೀಸಾಳನ್ನು ಮದುವೆಯಾಗಿ ಈ ಹೆಂಗಸರ ಕಾಟದಿಂದ ತಪ್ಪಿಸಿಕೊಳ್ಳಬೇಕೆಂದು ಕಾಯುತ್ತಿದ್ದ. ಮಹಬ್ಬತ್‌ಖಾನ್‌ನನ್ನು ಘಿಯಾಸ್ ಬಳಿಗೆ ಪದೇ ಪದೇ ಕಳಿಸಿ ಮೆಹರುನ್ನೀಸಾಳ ಅಭಿಪ್ರಾಯ ತಿಳಿಸುವಂತೆ ಕೇಳಿಕೊಂಡಿದ್ದ. ತನ್ನ ಬಗ್ಗೆ ಪ್ರೀತಿಯಿರುವುದಂತೂ ಖಾತ್ರಿಯಾಗಿತ್ತು. ಆದರೂ ಅವಳೇಕೆ ಮದುವೆ ಮುಂದೂಡುತ್ತಿದ್ದಾಳೆ. ಅಲಿಖುಲಿ ಸತ್ತು ಆಗಲೇ ನಾಲ್ಕು ವರ್ಷವಾಗಿದೆ ಇನ್ನೂ ಯಾಕೆ ಹಿಂದು ಮುಂದೂ! ತನ್ನ ಬಗ್ಗೆ ಇಷ್ಟವಿದ್ದರೂ, ಮದುವೆಗೆ ಹಿಂಜರಿಕೆ ಯಾಕೆ? ಅಲಿಖುಲಿ ನೆನಪಿನಿಂದ ಬಿಡಿಸಿಕೊಳ್ಳಲು ಆಗುತ್ತಿಲ್ಲವೆ? ಮೀನಾ ಬಜಾರ್, ಉದ್ಯಾನ, ಅಲ್ಲಿ ಇಲ್ಲಿ ಓಡಾಡಿದ್ದೇವೆ. ಸೇವಕರು ಜನಾನಾ ಹೆಂಗಸರು, ಗುಲಾಮಿ ಹುಡುಗಿಯರು, ನಪುಂಸಕರು, ಗುಟ್ಟುಗುಟ್ಟಾಗಿ ನಮ್ಮನ್ನು ಹಿಂಬಾಲಿಸಿ ಗೂಢಚಾರಿಕೆ ಮಾಡುತ್ತಿದ್ದಾರೆ. ಮಾಡಲಿ ಈಗ ನಾನು ಬಾದಶಾಹ್! ಯಾರ ಹೆದರಿಕೆಯೂ ಇಲ್ಲ. ನನ್ನ ಇಷ್ಟ ಬಂದ ಹಾಗೆ ಮಾಡುವ ಅಧಿಕಾರ ಇದೆ. ಬಯಸಿದಲ್ಲಿ ಮದುವೆಯನ್ನೂ ಕೂಡಾ ಬಲವಂತದಿಂದ ಮಾಡಿಕೊಳ್ಳಬಹುದು. ಆದರೆ ಬಲವಂತದ ಮದುವೆ, ಪ್ರೀತಿಗಳು, ಕೆಲಸ ಕೆಡಿಸುತ್ತವೆ. ಇಚ್ಛೆಗೆ ವಿರುದ್ಧವಾಗಿ ಬಲವಂತ ಮಾಡಿದೆನೆಂಬ ಕಾರಣಕ್ಕೆ ಮತ್ತೆ ನನ್ನಿಂದ ದೂರವಾಗಬಹುದು.

ಜಗತ್‌ಗೋಸಿನಿ ಅವನಿಗಾಗಿ ಕಾಯುತ್ತಿದ್ದಳು. ಅವನು ಬರುತ್ತಿದ್ದಂತೆ, ಗೋಸಿನಿ ನಗುಮುಖದಿಂದ ಸ್ವಾಗತಿಸಿದಳು. ತಾನು ಕರೆದ ಕೂಡಲೇ ಬಂದುದೇ ಜಗತ್‌ಗೋಸಿನಿಗೆ, ಇನ್ನೂ ಜಹಾಂಗೀರ್ ತನ್ನ ಪ್ರೀತಿಯ ಸೆಳೆತದಲ್ಲಿ ಇದ್ದಾನೆ ಎಂದು ಭಾವಿಸಿದಳು. ಸೇವಕರಿಗೆ ಹೇಳಿ ಬಗೆಬಗೆಯ ಆಹಾರ ಪದಾರ್ಥಗಳನ್ನು ತರಿಸಿ ಅವನ ಮುಂದೆ ಇರಿಸಿದಳು. ಆದರೆ ಜಹಾಂಗೀರ್ ಅವುಗಳ ಕಡೆ ಕಣ್ಣೆತ್ತಿಯೂ ನೋಡಲಿಲ್ಲ. ಬದಲಾಗಿ ಗೋಸಿನಿಯನ್ನೇ ನೋಡುತ್ತಾ, "ಬೇಗಂ ನಮ್ಮನ್ನು ಕರೆಸಿದ ಕಾರಣ ಏನೆಂದು ತಿಳಿಯಬಹುದೇ?"

ಜಹಾಂಪನಾಹ್ ತಾವು ಮೊಘಲ್ ಸಾಮ್ರಾಜ್ಯದ ಬಾದಶಾಹರು, ಸಾಮ್ರಾಜ್ಯದ ಪ್ರತಿಯೊಬ್ಬ ಪ್ರಜೆಯ ಕಣ್ಣು ತಮ್ಮ ಅಂದರೆ ನಡೆನುಡಿಗಳನ್ನು ಗಮನಿಸುತ್ತಲೇ ಇರುತ್ತವೆ. ಬಾಯಿಗೆ ಬಂದದ್ದನ್ನು ಮಾತಾಡುತ್ತಲೇ ಇರುತ್ತಾರೆ. ಈಗಾಗಲೇ ಅಲಿಖುಲಿಯನ್ನು ಕೊಲ್ಲಿಸಿದ್ದು, ಅವನ ಹೆಂಡತಿಯನ್ನು ಅಪಹರಿಸಿ ನಿಮ್ಮವಳನ್ನಾಗಿಸಿಕೊಳ್ಳಲು ಪ್ರಯತ್ನಿಸಿದ್ದು ನೀವೇ ಎಂದು ಮಾತಾಡುತ್ತಿದ್ದಾರೆ. ಅವರ ಅನುಮಾನ ಸತ್ಯವೆಂಬಂತೆ ಮೀನಾ ಬಜಾರಿನಲ್ಲಿ ಜನಾನಾದ ಉದ್ಯಾನಗಳಲ್ಲಿ ಯಾವ ಹಿಂಜರಿಕೆಯೂ ಇಲ್ಲದೆ ನೀವಿಬ್ಬರೂ ಸುತ್ತಾಡುವುದನ್ನು ನೋಡಿದ್ದಾರೆ. ಜಹಾಂಪನಾಹ್ ನಿಮಗಿರುವ ಎಷ್ಟೋ ಹೆಂಡತಿಯರಲ್ಲಿ ಇವಳೂ ಒಬ್ಬಳಾಗಿ ಜನಾನಾದಲ್ಲಿ ಸೇರಿದರೆ ನಮ್ಮ ಅಭ್ಯಂತರವಿಲ್ಲ. ಆದರೆ ಆ ಹೆಣ್ಣು, ಅವಳ ಕುಟುಂಬ, ನಿಮ್ಮ ಜೊತೆ ಮದುವೆ ಮಾಡುವುದನ್ನು ಸಂತೋಷದಿಂದಲೇ ಸ್ವೀಕರಿಸುತ್ತಾರೆ. ಈಗಾಗಲೇ ಮೊಘಲ್ ಆಸ್ಥಾನದಲ್ಲಿ, ಅವರೆಲ್ಲರೂ ಉನ್ನತ ಅಧಿಕಾರ ಸ್ಥಾನಗಳಲ್ಲಿ ಇದ್ದಾರೆ. ಮೆಹರುನ್ನೀಸಾಳು ಬಾದಶಾಹರ ಬೇಗಂ ಆದರೆ ಇನ್ನಷ್ಟು ರಾಜಕೀಯ ಲಾಭಗಳ ನಿರೀಕ್ಷೆ ಸಾಧ್ಯವಿದೆಯೆಂದು ಯೋಚಿಸುತ್ತಿದ್ದಾರೆ" ಎಂದು ಒಂದೇ ಸಮನೆ, ಜಹಾಂಗೀರನ ಪರಮ ಹಿತೈಷಿ ಎಂಬಂತೆ ಅವನಿಗೆ ಮುನ್ನೆಚ್ಚರಿಕೆ ನೀಡುತ್ತಿರುವಂತೆ ಕಾಣಿಸಿಕೊಂಡಳು.

ಜಹಾಂಗೀರ್ ಈಗಲೇ ಮೆಹರುನ್ನೀಸಾಳ ಪ್ರೀತಿಯಲ್ಲಿ ಹುಚ್ಚನಂತಾಗಿದ್ದ. ಈಗ ಹೆಂಡತಿಯ ಮಾತುಗಳಿಂದ ಮತ್ತಷ್ಟು ಉದ್ರಿಕ್ತನಾದ.

"ಜಹಾಂಪನಾಹ್ ನಾನು ಹೇಳುವ ಮಾತುಗಳು ನಿಮಗೆ ರುಚಿಸದೆ ಇರಬಹುದು. ಈಗಾಗಲೇ ಮೆಹರುನ್ನೀಸಾಳ ಕುಟುಂಬದಿಂದ ಒಂದು ಅಪಾಯವನ್ನು ಎದುರಿಸಿದ್ದೀರಿ. ಮಿರ್ಜಾ ಘಿಯಾಸ್‌ರ ಮಗ, ನಿಮ್ಮ ಪ್ರಾಣಕ್ಕೇ ಸಂಚಕಾರ ತರುವವನಿದ್ದ. ಘಿಯಾಸ್‌ರ ಲಂಚ ಪ್ರಕರಣವು ತಮ್ಮ ಗಮನಕ್ಕೆ ಬಂದಿರಬಹುದು. ಮೆಹರುನ್ನೀಸಾ ಅತ್ಯಂತ ಚೆಲುವೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಆದರೆ ಬಹಳ ಚಾಣಾಕ್ಷೆ. ರಾಜಕೀಯ ತಂತ್ರಗಳನ್ನು ಬಲ್ಲವಳು. ಅವಕಾಶವಾದಿ ಬೇರೆ! ಸಾಧ್ಯವಾದರೆ ತಮ್ಮನ್ನು, ತನ್ನ ಸೌಂದರ್ಯ, ಮೋಹಪಾಶಗಳಿಂದ ಬಂಧಿಸಿ, ಪಕ್ಕಕ್ಕೆ ಸರಿಸಿ, ಮೊಘಲ ಸಾಮ್ರಾಜ್ಯದ ಸಿಂಹಾಸನವನ್ನೇರಿದರೂ ಆಶ್ಚರ್ಯವಿಲ್ಲ. ಆಕೆ ನಿಮ್ಮನ್ನು ನಿಕಾಹ್ ಮಾಡಿಕೊಳ್ಳಬಹುದೆಂದಲ್ಲ, ನಿಮ್ಮ ಸುರಕ್ಷಿತತೆ ನನಗೆ ಮುಖ್ಯ."

ಇದೆಲ್ಲವನ್ನೂ ಕೇಳಿಸಿಕೊಂಡ ಜಹಾಂಗೀರನಿಗೆ ಗೋಸಿನಿಯ ಉದ್ದೇಶ ಅರ್ಥವಾಗಲಿಲ್ಲ. ಹೊಟ್ಟೆ ಕಿಚ್ಚಿನಿಂದ ಹೇಳುತ್ತಿಲ್ಲ ತಾನೇ? ಇಲ್ಲೀವರೆಗೆ ಬೇರೆ ಯಾವ

ಹೆಂಡತಿಯ ಬಗ್ಗೆಯೂ ಕೆಟ್ಟದ್ದನ್ನು ಹೇಳಿಲ್ಲ; ದ್ವೇಷಿಸಿಲ್ಲ, ಈಗ ಮಾತ್ರ, ನನಗೆ ಎಚ್ಚರಿಕೆಯಿಂದಿರಲು ಸೂಚಿಸುತ್ತಿದ್ದಾಳೆ! ನಿಜವಾಗಿಯೂ ಹೇಳುತ್ತಿದ್ದಾಳೆಯೇ? ತನ್ನ ಮಗನ ಹಿತರಕ್ಷಣೆಯೂ ಇದರ ಆಳದಲ್ಲಿ ಇರಬಹುದೆಂದು ಸೂಚಿಸುತ್ತಿದ್ದಾಳೆಯೇ? ರಾಜಕುಮಾರಿಯಾದವಳಿಗೆ, ರಾಜಕೀಯ ಮದುವೆಗಳ ಹಣೆಬರಹ ಗೊತ್ತಿದೆ. ಮೆಹರುನ್ನೀಸಾ ರಾಜವಂಶದವಳಲ್ಲ. ಅವಳಿಂದ ಅವಳ ಮದುವೆಯಿಂದ ಯಾವುದೇ ಬೆದರಿಕೆ ಸಾಧ್ಯವಿಲ್ಲ. ಗಂಭೀರವಾಗಿ ಆಲೋಚಿಸಿದ, ಇದೆಲ್ಲವೂ ಅವಳ ಕಲ್ಪನೆ, ಅವಳ ಒಳಗಿನ ಅಸೂಯೆ. ನಾನು ಮೆಹರುನ್ನೀಸಾಳನ್ನು ಎಷ್ಟು ಗಾಢವಾಗಿ ಪ್ರೀತಿಸುತ್ತಿದ್ದೇನೆ ಎಂದು ಗೊತ್ತು. ನಾಳೆ ನಾನು ಮದುವೆಯಾಗಿ, ಅವಳು ಚಕ್ರವರ್ತಿನಿಯಾದರೆ ತನ್ನ ಅಧಿಕಾರ, ಯಜಮಾನಿಕೆ, ಬಿರುದುಗಳಿಗೆ ಎಲ್ಲಿ ಸಂಚಕಾರ ಬರುವುದೋ ಎನ್ನುವ ದೂರಾಲೋಚನೆ, ದುರಾಲೋಚನೆಯಾಗಿ ಪರಿವರ್ತಿತವಾಗಿರಬಹುದೇ? ಇರಲಿ, ಈಗಲೇ ಇದರಿಂದ ತಲೆಕೆಡಿಸಿಕೊಳ್ಳುವುದು ಬೇಡ, ಅವಳಿಗೆ ಆಗಲೇ ಪತ್ರ ಬರೆದಿದ್ದೇನೆ. ನನ್ನ ಪ್ರೀತಿಯೆಲ್ಲವನ್ನೂ ತೋಡಿಕೊಂಡಿದ್ದೇನೆ. ನನಗೆ ಗೊತ್ತು, ಈಗಲೂ ಅವಳು ನನ್ನನ್ನು ತುಂಬ ಪ್ರೀತಿಸುತ್ತಾಳೆ. ಅವಳ ಪ್ರೀತಿಗಾಗಿ ನಾನು ಏನನ್ನಾದರೂ ತ್ಯಾಗ ಮಾಡಬಲ್ಲೆ ಎಂದುಕೊಂಡ.

"ಬೇಗಂ ನೀವು ಇಲ್ಲ ಸಲ್ಲದ ಆಲೋಚನೆಗಳಿಂದ ಹೆದರಿದ್ದೀರಿ. ಅಸಫ್ ಖಾನ್ ಮತ್ತು ಘಿಯಾಸ್ ಬೇಗ್ ಸದಾ ನನ್ನ ರಕ್ಷಣೆಯ, ಸಾಮ್ರಾಜ್ಯದ ಸ್ಥಿತಿಗತಿಯ ಬಗ್ಗೆ ತುಂಬಾ ಕಾಳಜಿ ತೋರಿಸುತ್ತಿದ್ದಾರೆ. ಅಬ್ಬಾಜಾನ್ ಈ ಕುಟುಂಬದ ಬಗ್ಗೆ ಅಪಾರ ಪ್ರೀತಿ, ಮೆಚ್ಚುಗೆಯನ್ನು ಇರಿಸಿಕೊಂಡಿದ್ದರು. ಅಷ್ಟು ದೀರ್ಘಕಾಲದ ಸೇವೆಯಲ್ಲಿ ನಿಷ್ಠೆಯನ್ನು, ಪ್ರಾಮಾಣಿಕತೆಯನ್ನು ತೋರಿಸಿದವರು. ಈಗೇಕೆ ನನಗೆ ಹಾನಿ ಮಾಡುತ್ತಾರೆ. ಸುಮ್ಮನೆ ನಮ್ಮಿಬ್ಬರ ವಿಚಾರದಲ್ಲಿ ಚಿಂತೆ ಮಾಡುವುದನ್ನು ಬಿಟ್ಟು, ಜನಾನಾವನ್ನು ನೋಡಿಕೊಳ್ಳಿ. ಮೆಹರುನ್ನೀಸಾಳ ಬುದ್ಧಿಶಕ್ತಿ, ರಾಜನೀತಿಯ ಜ್ಞಾನ, ಕಲೆ, ಸಾಹಿತ್ಯಗಳಲ್ಲಿನ ಅಭಿರುಚಿ, ಸಮಾಜದ ಒಳಿತಿನ ಬಗ್ಗೆ ಯೋಚಿಸುವ ಪರಿ ನೋಡಿದರೆ, ನನ್ನ ಸಾಮ್ರಾಜ್ಯದ ಬಗ್ಗೆ ನಿಶ್ಚಿಂತೆಯಿಂದ ಇರಬಹುದೆನಿಸುತ್ತದೆ. ಇಂತಹ ಗುಣಗಳಿಂದ ರೂಪದಿಂದ ಕೂಡಿರುವ ಮೆಹರುನ್ನೀಸಾಳಿಗಾಗಿ, ಸಾಮ್ರಾಜ್ಯವನ್ನೇ ಪಣವಾಗಿ ಇಡಲೂ ಸಿದ್ಧ" ಎಂದು ಹೇಳಿ ಹೊರಡಲು ಎದ್ದುನಿಂತ. ಅಷ್ಟರಲ್ಲಿ ಜಗತ್‌ಗೋಸಿನಿಯ ಸೇವಕ ಹೋಷಿಯಾರ್ ಒಂದು ಟ್ರೇನಲ್ಲಿ ಸುಂದರ ಹಾಳೆಯಲ್ಲಿ ಕಲಾತ್ಮಕವಾದ ಅಕ್ಷರಗಳಲ್ಲಿ, ಮೆಹರುನ್ನೀಸಾಳ ಸಂದೇಶವಿದ್ದ ಪತ್ರವನ್ನು ಜಹಾಂಗೀರನ ಮುಂದಿರಿಸಿದ. ಅದನ್ನು ಕೈಗೆತ್ತಿಕೊಂಡು ಬಿಡಿಸಿ ನೋಡಿದ. ಅದರಲ್ಲಿ ಅವಳು ತನ್ನನ್ನು ಭೇಟಿಯಾಗಲು ಆಹ್ವಾನಿಸಿದ್ದಳು.

ಜಹಾಂಗೀರ್ ಘಿಯಾಸ್ ಮನೆಯ ಅಂಗಳದಲ್ಲಿನ ಒಂದು ಪ್ರಶಾಂತವಾದ ಸ್ಥಳದಲ್ಲಿ ನಿಂತ. ಮೆಹರುನ್ನೀಸಾ ತನಗೂ ಮೊದಲೇ ಅಲ್ಲಿಗೆ ಬಂದು ಕುಳಿತಿದ್ದಳು. ಒಬ್ಬರನ್ನೊಬ್ಬರು ನೋಡಿ ರೋಮಾಂಚಗೊಳ್ಳುತ್ತಿದ್ದರು. ಪರಸ್ಪರ ಸ್ಪರ್ಶಕ್ಕಾಗಿ ಕಾಯುತ್ತಿದ್ದರು. ತಮ್ಮ ಸುತ್ತಲೂ ಯಾರೂ ಇಲ್ಲದ್ದನ್ನು ಗಮನಿಸಿ, ಜಹಾಂಗೀರ್ ನೇರವಾಗಿ ಅವಳ ಪಕ್ಕ ಬಂದು ಕುಳಿತ, ಅಚ್ಚಬಿಳಿಯ, ಮೃದು ರೇಶಿಮೆಯ ನುಣುಪಿನ

ಅವಳ ಕೈಯನ್ನು ಹಿಡಿದೆತ್ತಿ ತನ್ನ ತುಟಿಗಳ ಮೇಲಿರಿಸಿದ. ಮೆಹರುನ್ನೀಸಾ ಥಟ್ಟನೆ ಎದ್ದಳು. ಜಹಾಂಗೀರ್, ಅವಳನ್ನು ಸಂಕೋಚಪಡದೆ ಕುಳಿತುಕೊಳ್ಳುವಂತೆ ಹೇಳಿದರೂ ಕುಳಿತುಕೊಳ್ಳಲಿಲ್ಲ.

"ಮೆಹರುನ್ನೀಸಾ, ನಿನಗೆ ನನ್ನ ಮೇಲೆ ಸಿಟ್ಟಿದೆ ಎಂದು ಭಾವಿಸುತ್ತೇನೆ."

"ಸಿಟ್ಟೇಕೆ ಜಹಾಂಪನಾಹ್? ನನ್ನ ಬದುಕು ಮೂರಾಬಟ್ಟೆಯಾದರೂ ಇನ್ನೂ ನನ್ನನ್ನು ಪ್ರೀತಿಸುತ್ತಿದ್ದೀರಿ ಎನ್ನುವುದೇ ದೊಡ್ಡ ವಿಷಯ. ನನಗಾಗಿ ಇನ್ನೂ ಎದುರು ನೋಡುತ್ತಿದ್ದೀರಿ ಎನ್ನುವ ಸತ್ಯವೇ ನನ್ನನ್ನು ಕೃತಾರ್ಥಳಾಗಿಸಿದೆ. ಆದರೆ ವಿವಾಹದ ವಿಷಯಕ್ಕೆ ಬಂದಾಗ........"

"ಬಂದಾಗ? ಹೇಳು ಯಾಕೆ ನಿಲ್ಲಿಸಿದೆ?"

"ಜಹಾಂಪನಾಹ್ ನಾನು ವಿಧವೆ. ನನಗೆ ಬೆಳೆದ ಮಗಳಿದ್ದಾಳೆ. ಮೊಘಲ್ ಸಾಮ್ರಾಜ್ಯದ ವರಿಷ್ಠರು, ನಮ್ಮ ಸಂಬಂಧವನ್ನು ವಿರೋಧಿಸಬಹುದು. ಮೊದಲಿಗೆ ನನಗೆ ನಿಮ್ಮ ಮೇಲೆ ಸೇಡಿನ ಭಾವವಿತ್ತು. ನನ್ನ ಒಪ್ಪಿಗೆಯಿಲ್ಲದೆಯೇ ಅಲಿಖುಲಿಯನ್ನು ಗಂಡನಾಗಿ ಸ್ವೀಕರಿಸಬೇಕಾಗಿ ಬಂತು. ಅಲಿ ನನ್ನ ಗಂಡ. ನನ್ನ ಸಂಬಂಧದಲ್ಲಿ ಹೇಗೆ ನಡೆದುಕೊಂಡರೂ ಹೆಂಡತಿಯಾಗಿ ಸಹಿಸಿಕೊಂಡು ಬದುಕುವುದು ಅನಿವಾರ್ಯವಾಗಿತ್ತು. ವರ್ಷಗಳ ದಾಂಪತ್ಯದಲ್ಲಿ ಅಲಿಯನ್ನು ಗಾಢವಾಗಿ ಪ್ರೀತಿಸದಿದ್ದರೂ ಅವನ ಬಗ್ಗೆ ಗೌರವವಿತ್ತು. ಶೌರ್ಯ, ಸಾಹಸಗಳ ಬಗ್ಗೆ ಹೆಮ್ಮೆಯಿತ್ತು ಮೊದಮೊದಲು ನಿಮ್ಮಷ್ಟೇ ಗಾಢವಾಗಿ ಪ್ರೀತಿಸಿದ. ಆದರೆ ಆ ಪ್ರೀತಿಯಷ್ಟೇ ಪ್ರಮಾಣದಲ್ಲಿ, ನನ್ನ ಪ್ರೀತಿಯನ್ನು ಕೊಡಲಾರದೆ ಹೋದೆ. ಆದರೂ ಅವನು ನನ್ನ ಪತಿ. ನನ್ನ ಮಗಳ ತಂದೆ. ಅವನನ್ನು ಕೊಲ್ಲಿಸಿದ್ದು ನೀವೇ ಎಂದು ಭಾವಿಸಿ, ದ್ವೇಷಿಸಿದೆ. ಆದರೆ ಅಲಿಯ ದುಡುಕುತನವೇ ಆತನನ್ನು ಬಲಿ ತೆಗೆದುಕೊಂಡಿತು ಎನ್ನುವ ಸತ್ಯ ತಿಳಿದುಕೊಂಡೆ. ಆದ್ದರಿಂದಲೇ ನಾಲ್ಕು ವರ್ಷಗಳು ನಿಮ್ಮ ಮುಖ ಕೂಡಾ ನೋಡಬಾರದೆಂದು ತೀರ್ಮಾನಿಸಿದೆ. ನೀವೂ ಕೂಡಾ ಜನಾನಾದಲ್ಲಿದ್ದ ನನ್ನನ್ನು ಎಂದಾದರೂ ಗಮನಿಸಿದ್ದೀರಾ? ನನ್ನ ಮನಃ ಸ್ಥಿತಿಯನ್ನು ತಿಳಿಯಬೇಕೆಂದಾಗಲೀ, ಸಾಂತ್ವನ ನೀಡಬೇಕೆಂದಾಗಲೀ ಬಂದಿದ್ದೀರಾ? ಅಷ್ಟೂ ವರ್ಷ ಸತ್ತು ಹೋಗಿದ್ದ ಪ್ರೀತಿ, ಕಾಳಜಿಗಳು ಈಗೇಕೆ ಹುಟ್ಟಿಕೊಂಡಿವೆ?"

ಇಷ್ಟೆಲ್ಲಾ ಪ್ರಶ್ನೆಗಳು ಬಂದರೂ ಅವು ಅಂತರಾಳದಿಂದ ಬಂದದ್ದಲ್ಲ. ಖಂಡಿತ ಅವಳಿಗೆ ಜಹಾಂಗೀರ್ ಅಥವಾ ಹಳೆಯ ಸಲೀಂ ಬೇಕೇ ಬೇಕೆಂದು ಅವಳ ಅಂತರಾತ್ಮ ಚೀರುತ್ತಿತ್ತು. ತಾನು ಬಾಲ್ಯದಿಂದಲೂ ಚಕ್ರವರ್ತಿನಿಯಾಗಬೇಕೆಂದು ಕಂಡಿದ್ದ ಕನಸು ಸಾಕ್ಷಾತ್ಕಾರವಾಗಬೇಕಾದರೆ, ತನ್ನ ಭವಿಷ್ಯ ನಿಜವಾಗಬೇಕಾದರೆ, ಬಿಹಾರದ ಬಾಬಾ ಹೇಳಿದ್ದೂ ಸತ್ಯವಾಗಬೇಕಾದರೆ ಈ ಮದುವೆಯನ್ನು ನಾನು ಒಪ್ಪಿಕೊಳ್ಳಲೇಬೇಕು. ತನ್ನ ಮಗಳ ಭವಿಷ್ಯವೂ ತನ್ನ ಜೊತೆಗೆ ಹೆಣೆದುಕೊಂಡಿದೆ. ಜಹಾಂಗೀರನನ್ನು ನೋಡಿದಷ್ಟೂ ನೋಡಬೇಕೆನಿಸುತ್ತದೆ. ಈಗಷ್ಟೇ ಅವನ ಕೂದಲು ಬೂದು ಬಣ್ಣಕ್ಕೆ ತಿರುಗುತ್ತಿತ್ತು. ಗಲ್ಲದ ಮೇಲೆ ಪುಟ್ಟ ಗಡ್ಡ, ತಲೆ ಮೇಲೆ ಮೊಘಲ ಪೇಟ, ಮೊದಲಿನ ತುಂಟತನದ ನಗೆ. ಅಪ್ರಬುದ್ಧತೆಗಳು ಮಾಯವಾಗಿ, ಗಂಭೀರತೆ, ಪ್ರಬುದ್ಧತೆಗಳು ಇಣುಕಿದ್ದವು. ತನ್ನಲ್ಲಿಯೂ

ವಯಸ್ಸಿನಿಂದ ಬದಲಾವಣೆಗಳಾಗಿರಬಹುದಲ್ಲವೇ? ದೇಹದಾರ್ಢ್ಯ ಒಬ್ಬ ವೀರಯೋಧನಿಗೆ ಇರಬೇಕಾದ ಲಕ್ಷಣವಾಗಿ ಕಾಣಿಸಿತು, ಇಬ್ಬರೂ ಎಷ್ಟೋ ಹೊತ್ತು ತಮ್ಮಿಬ್ಬರ ಗತಕಾಲದ ನೆನಪುಗಳನ್ನು ಮೆಲುಕು ಹಾಕುತ್ತಿದ್ದರು. ಮೆಹರುನ್ನೀಸಾ ತನ್ನ ಅಂತರಾತ್ಮವನ್ನು ತಡವಿಕೊಂಡು ಮೊದಲಿದ್ದಷ್ಟೇ ಪ್ರೀತಿ ಇನ್ನೂ ಉಳಿದಿದೆಯೇ ಎಂದು ನೋಡಿಕೊಂಡಳು. ಖಂಡಿತವಾಗಿ, ಅದಕ್ಕಿಂತಲೂ ಹೆಚ್ಚಾಗಿಯೇ ಇತ್ತು. ಈಗ ಮುಕ್ತವಾಗಿ ಅವನನ್ನು ಪ್ರೀತಿಸಬಹುದು. ಅವನು ಬಾದಶಾಹ್, ಯಾರಿಗೂ ಹೆದರಬೇಕಿಲ್ಲ. ಸಮಾಜದ, ಅಧಿಕಾರಿಗಳ, ಧರ್ಮಗುರುಗಳ ನಿಷೇಧವೂ ಇರುವುದಿಲ್ಲ. ಮುಸ್ಲಿಂ ಪುರುಷರು ಎಷ್ಟು ಮಂದಿ ಹೆಂಡಿರನ್ನಾದರೂ ಕರೆಸಿಕೊಂಡು ಮದುವೆಯಾಗಲೂಬಹುದು, ಇಟ್ಟುಕೊಳ್ಳಲೂಬಹುದು. ಆ ವಿಷಯದಲ್ಲಿ ಇಸ್ಲಾಂ ಬಹಳ ಉದಾರವಾಗಿದೆ. ವಯಸ್ಸು? ....ವಯಸ್ಸು ಏನು ಮಾಡುತ್ತೆ. ನನಗೆ 34 ಅವನಿಗೆ 42ವಯಸ್ಸಾಗಿದೆ. ಆದರೆ ಮನಸ್ಸು ಇನ್ನೂ ಹದಿಹರೆಯದ ಕನಸುಗಳನ್ನು ಹಚ್ಚಹಸುರಾಗಿಯೇ ಉಳಿಸಿಕೊಟ್ಟಿದೆ.–ಎಂದೆಲ್ಲಾ ಯೋಚಿಸುತ್ತಾ ಮೈಮರೆತಿರುವ ಸಮಯದಲ್ಲಿ ಥಟ್ಟನೆ ತನ್ನ ಖಾಬಾ ಒಳಗಿನಿಂದ ಚಿನ್ನದ ಅಂಚು ಹೊಂದಿದ್ದ ಹಾಳೆಗಳಿಂದ ಕೂಡಿದ ಒಂದು ಪುಸ್ತಕವನ್ನು ಹೊರ ತೆಗೆದು ಅದನ್ನು ಕೈಲಿ ಹಿಡಿದು ಮೆಹರುನ್ನೀಸಾಳ ಮುಂದೆ ಚಾಚಿದ.

"ಏನಿದು ಜಹಾಂಪನಾಹ್"

"ನೀನೇ ನೋಡು"

ಅದನ್ನು ಕೈಗೆ ತೆಗೆದುಕೊಂಡು ಹಿಂದು ಮುಂದು ತಿರುಗಿಸಿ ಅಚ್ಚರಿಯ ಸಂತೋಷವನ್ನು ಮೊಗದ ಮೇಲೆ ತಂದುಕೊಂಡು.

"ಜಹಾಂಪನಾಹ್, ಇದು ಫಿರ್‌ದೌಸಿಯ ಕವಿತೆಗಳ ಸಂಗ್ರಹ. ಫಿರ್‌ದೌಸ್ ನನ್ನ ಅತ್ಯಂತ ಪ್ರೀತಿಯ ಕವಿ. ಇದು ನಿಮಗೆಲ್ಲಿ ಸಿಕ್ಕಿತು?" ಉದ್ಗಾರದ ಧ್ವನಿಯಲ್ಲಿ ಕೇಳಿದಳು.

"ನನ್ನ ತಂದೆ ಅಕ್ಬರ್ ಬಾದಶಾಹರಲ್ಲಿ ಅಮೂಲ್ಯವಾದ ಗ್ರಂಥ ಭಂಡಾರವಿದೆ. ಎಲ್ಲ ಧರ್ಮಗಳಲ್ಲಿನ ಮಹಾಕೃತಿಗಳನ್ನು ಪರ್ಷಿಯನ್ ಭಾಷೆಗೆ ತರ್ಜುಮೆ ಮಾಡಿಸಿ ಇರಿಸಿದ್ದಾರೆ. ಫಿರ್‌ದೌಸಿ ಅವರ ಪ್ರೀತಿಯ ಕವಿ. ಬಹಳ ಗೌರವ. ಮನಸ್ಸು ಬಂದಾಗಲೆಲ್ಲ ಅವರ ಕವಿತೆಗಳನ್ನು ಓದಿಸಿದ್ದಾರೆ. ನೀನೂ ಇದನ್ನು ಓದಲೇಬೇಕು."

"ಜಹಾಂಪನಾಹ್ ನಾನು ಫಿರ್‌ದೌಸಿಯನ್ನು ಹಲವು ಬಾರಿ ಓದಿದ್ದೀನಿ. ನಿಮಗೂ ಕಾವ್ಯಾಸಕ್ತಿ ಅಪಾರವಾಗಿ ಇರುವುದನ್ನು ನಾನು ಬಲ್ಲೆ."

"ನೀಸಾ, ಅದರಲ್ಲಿ ರುಸ್ತುಂನ ಕತೆಯಿದೆ. ಹಾಗೆಯೇ ಜಾಲ್‌ನ ಮಡದಿ ರುಡಾಬಾಹ್ ಕುರಿತ ಒಂದು ಕವಿತೆಯಿದೆ. ಅದು ನೀನೇ ಆಗಿರುವಂತಿದೆ. ಬಣ್ಣಿಸಲೇ ನೀಸಾ?" ಎಂದು ಆ ಕವಿತೆಯನ್ನು ಅವಳ ಮುಂದೆ ಓದಲು ಆರಂಭಿಸಿದ.

**"ಪರದೆಯ ಹಿಂದೆ ಒಂದು। ಹೆಣ್ಣು ಮುಖವಿದೆ**
**ಆ ಮುಖ ಸೂರ್ಯಕಾಂತಿಗಿಂತ। ಮಿಗಿಲಾಗಿದೆ**
**ನಖ ಶಿಖಾಂತ ದಂತದ। ಪುತ್ಥಳಿಯಂತೆ**
**ಮ್ಲಾಟದಲಿ ವಸಂತದಂತೆ। ನಿಲುವಿನಲಿ ಎಲ್ ಮರದಂತೆ**
**ಬೆಳ್ಳಿಯ ಭುಜಗಳ ಮೇಲೆ। ಕಸ್ತೂರಿ ಕುಣಿಕೆಗಳೆರಡು**

ಕೂದಲೋ ಸರಪಳಿಯ ಕೊಂಡಿಗಳೋ!
ದಾಳಿಂಬೆ ಹೂಗೆನ್ನೆ; ಬೆಂಕಿ ತುಟಿ!
ಅಚ್ಚ ಬಿಳುಪಿನೆದೆಯಿಂದ। ಒಗೆದ ದಾಳಿಂಬೆ ಮೊಗ್ಗೆರಡು
ಕಣ್ಣೆರಡು ತೋಟದಲಿ। ಅರಳಿನಿಂತ ನಾರ್ಸಿಸಸ್‌ಗಳು
ಕಾಗೆ ಕಪ್ಪನು ಕದ್ದ ಕಣ್ಣೆವೆಗಳು
ಪಪೈರಸ್‌ನ ತೊಗಟೆ ಬಿಲ್ಲಿನ ಮೇಲೆ
ತರಾಜ್ ಬಿಲ್ಲಿನಂತಹ ಹುಬ್ಬುಗಳು
ಚಂದ್ರನ ನೀ ಬಯಸುವಿಯಾದರೆ
ಅವಳ ಮುಖವಿದೆ.
ಕಸ್ತೂರಿ ಗಂಧ ಬಯಸುವಿಯಾದರೆ
ಅವಳ ಸೊಗದ ಮೈ ಕಂಪಿದೆ
ಇಳಿಬಿದ್ದ ಜಡೆಮುಂಗುರುಳು
ಒಂದರೊಡನೊಂದು ಹೆಣೆದುಕೊಂಡು
ಸುಗಂಧ ಸುರಿವ ಕೊಂಡಿಗಳಾಗಿವೆ
ಕಲಾತ್ಮಕ ಕೈ ಬೆರಳುಗಳೋ! ಕಸ್ತೂರಿ ಲೇಪಿತ
ಬೆಳ್ಳಿ ಲೇಖನಿಗಳಾಗಿವೆ
ಸೂಸುವ ಸುಗಂಧದ ಮೈಯವಳು
ಉಡುಗೆ ತೊಡುಗೆ ಹೊಳಪಿನಲಿ
ಹೊಳೆ ಹೊಳೆವ ಕಾಂತಿ ಕೆನ್ನೆ
ಅಪ್ಸರಸ್ತ್ರೀರನ್ನೆ ಚೆನ್ನೆ!!

ಅವನ ಕವಿತಾ ವಾಚನಕ್ಕೆ ಮಾರು ಹೋದ ಮೆಹರುನ್ನೀಸಾ ಒಮ್ಮೆಲೇ "ವಾಹ್ ಜಹಾಂಪನಾಹ್. ತಾವೇ ಫಿರ್‌ದೌಸಿಯಂತೆ ಕಂಡಿರಿ."

"ನಾನು ಫಿರ್‌ದೌಸಿಯಾದರೆ, ಆ ಕವಿತೆಯ ಹೆಣ್ಣು ನೀನೇ ನೀಸಾ! ನನ್ನ ಪರವಾಗಿ ಫಿರ್‌ದೌಸಿ ನಿನ್ನನ್ನೇ ಅಕ್ಷರಗಳಲ್ಲಿ ಕೆತ್ತಿ ಇರಿಸಿದ್ದಾನೆ. ಈ ಹೆಣ್ಣು ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ನನ್ನ ಜನಾನಾದ ರಾಣಿಯಾಗಿ ಪ್ರವೇಶಿಸುವುದನ್ನೇ ಕಾಯುತ್ತಿದ್ದೇನೆ. ನೀಸಾ, ದಯವಿಟ್ಟು ಇನ್ನಷ್ಟು ಕಾಯಿಸಬೇಡ, ಪ್ರಾರ್ಥಿಸುತ್ತೇನೆ. ಬಾಯಿಬಿಟ್ಟು ಒಪ್ಪಿಗೆ ಹೇಳು."

"ಜಹಾಂಪನಾಹ್ ಒಪ್ಪಿಗೆಯಿಲ್ಲದಿದ್ದರೆ ಇಷ್ಟು ಧೈರ್ಯವಾಗಿ ನಿಮ್ಮ ಒಡನಾಟದಲ್ಲಿ ಭಾಗವಹಿಸುತ್ತಿದ್ದೆನೆ? ಎಷ್ಟೋ ಸಲ ಮನಸ್ಸಿನಲ್ಲಿನ ಭಾವನೆಗಳನ್ನು ಮಾತುಗಳಲ್ಲಿ ಹೇಳಲಾಗುವುದಿಲ್ಲ."

"ನಿನಗೆ ಇಷ್ಟೊಂದು ಹತ್ತಿರವಾಗಿರುವ ನನ್ನಲ್ಲೂ ಹೇಳಿಕೊಳ್ಳಲಾರೆಯಾ?"

"ಹಾಗೇನಿಲ್ಲ ಜಹಾಂಪನಾಹ್, ನಾನೂ ಮನುಷ್ಯಳೇ! ಪಾಪ ಪುಣ್ಯಗಳ ಹೆದರಿಕೆ ಇದ್ದೇ ಇರುತ್ತದೆ. ನಿಮಗೇ ಗೊತ್ತಿದೆ. ಅಲಿಖುಲಿಯ ಸಾವಿನ ಆ ದೃಶ್ಯ ಇನ್ನೂ ನನ್ನನ್ನು ಕಾಡುತ್ತಿದೆ. ಇನ್ನೂ ನನ್ನ ಮಗಳು ಅದನ್ನು ನೆನಸಿಕೊಂಡು ಬೆಚ್ಚಿ ಬೀಳುತ್ತಾಳೆ. ಮೊದಲಿನಿಂದಲೂ ಬಾದಶಾಹರು ಕೊಲೆಗಡುಕರು ಎನ್ನುವ ಭಾವನೆ ಬೇರೂರಿಬಿಟ್ಟಿದೆ.

ಅಲ್ಲದೆ ನನಗೂ ನನ್ನ ಮನಸ್ಸಿನ ಮೂಲೆಯಲ್ಲಿ, ತೀರಿಕೊಂಡ ಗಂಡನಿಗೆ ಅನ್ಯಾಯ ಮಾಡುತ್ತಿರುವೆನೇ? ಎನ್ನುವ ಪಾಪ ಪ್ರಜ್ಞೆ ಕಾಡುತ್ತಿದೆ. ನನ್ನ ಮಗಳು ಅಪ್ಪನನ್ನು ತೀರಾ ಹಚ್ಚಿಕೊಂಡು ಇದ್ದಳು. ಬಹುಶಃ ಅವಳಿಗೆ ಈ ಮದುವೆ ಇಷ್ಟವಾಗುವುದಿಲ್ಲ. ಇದೆಲ್ಲ ಅಮ್ಮಿಯ ದುರಾಸೆ ಎಂದುಕೊಳ್ಳುತ್ತಾಳೆ. ನನ್ನ ಬಗ್ಗೆ ಅಸಮಾಧಾನಗೊಳ್ಳಬಹುದು. ಮತ್ತೂ ಒಂದು ಪ್ರಶ್ನೆ, ನಡುವಯಸ್ಸಿನ ಹೆಣ್ಣು ನಾನು. ಎಷ್ಟೋ ಕಾಲ ಮಕ್ಕಳನ್ನು ಪಡೆಯದೆ ಕಡೆಗೆ ಲಾಡ್ಲಿಯನ್ನು ಪಡೆದೆ. ನನಗೆ ಅವಳು ಅಪರೂಪದ ಮಗಳು."

"ಮೆಹರುನ್ನೀಸಾ, ನಿನ್ನ ಭಾವನೆಗಳನ್ನು ಅರ್ಥಮಾಡಿಕೊಳ್ಳಬಲ್ಲೆ. ಯಾವುದೇ ಆದರೂ ಎಂಥದ್ದೇ ಆದರೂ, ನಿನ್ನ ಸಮಸ್ಯೆಗಳೆಲ್ಲ ನನ್ನ ಸಮಸ್ಯೆಗಳೇ! ನಿನ್ನ ಮೋಹದಲ್ಲಿ ನಾನೆಷ್ಟು ದುರ್ಬಲನಾಗುತ್ತಿದ್ದೇನೆಂಬುದು ನಿನಗೆ ಅರ್ಥವಾಗಿಲ್ಲ. ರಾಜ್ಯಭಾರದಲ್ಲಿ, ರಾಜಕೀಯ ವಿಷಯಗಳಲ್ಲಿ ಮನಸ್ಸನ್ನು ತೊಡಗಿಸಿಕೊಳ್ಳಲೂ ನನಗೆ ಸಾಧ್ಯವಾಗುತ್ತಿಲ್ಲ. ಮಹಬ್ಬತ್‌ಖಾನ್, ಅಸಫ್‌ಖಾನ್‌ರು ನನ್ನ ಬೆಂಗಾವಲಿಗೆ ಇದ್ದು ನನ್ನ ದುಃಖಕ್ಕೆ ಮರುಗಿ ಸಿಂಹಾಸನವನ್ನು ರಕ್ಷಿಸಿಕೊಳ್ಳುತ್ತಿದ್ದಾರೆ. ನೀನು ಆದಷ್ಟು ಬೇಗ ನನ್ನ ಜನಾನಾಗೆ ಬಂದುಬಿಡು." ಎಂದು ದೈನ್ಯವಾಗಿ ಬೇಡಿಕೊಂಡ.

"ಜಹಾಂಪನಾಹ್ ಅಪಾರ್ಥ ಮಾಡಿಕೊಳ್ಳಬೇಡಿ. ಜನಾನಾ ಪದ ಯಾಕೋ ತುಂಬ ಮುಜುಗರ ಉಂಟುಮಾಡುತ್ತದೆ. ಯಾವುದೇ ಕಾರಣಕ್ಕೂ ನನ್ನ ಆತ್ಮಗೌರವವನ್ನು ಬಿಟ್ಟು ಕೊಡಲಾರೆ. ನನ್ನ ಸ್ಥಾನ ಅಲ್ಲಿ ಹೇಗಿರುತ್ತದೆ ಅನ್ನುವುದು ಮುಖ್ಯ. ನಿಮ್ಮ ಮದುವೆಗಳೆಲ್ಲಾ ರಾಜಕೀಯ ಮದುವೆಗಳು. ನಾನೇನು ಯಾವ ರಾಜ್ಯದ ರಾಜಕುಮಾರಿಯೂ ಅಲ್ಲ. ನನ್ನಿಂದ ತಮಗೆ ತಮ್ಮ ರಾಜ್ಯಕ್ಕೆ ಯಾವುದೇ ಪ್ರಯೋಜನವಿಲ್ಲ. ಯಾವುದೋ ಕಾಲದಲ್ಲಿ ನಿರ್ಗತಿಕರಾಗಿ ಬಂದು ನಿಮ್ಮ ಆಶ್ರಯದಲ್ಲಿ ನಿಮ್ಮ ದಯಾಭಿಕ್ಷೆಯಿಂದ ಬದುಕುತ್ತಿರುವವರು. ಅಂತಹವರ ಮಗಳನ್ನು ಮದುವೆಯಾಗುತ್ತಿದ್ದರೆ, ಅಧಿಕಾರಿವರ್ಗದಲ್ಲಿ ಪ್ರಜೆಗಳಲ್ಲಿ ಅಸಮಾಧಾನ ಉಂಟಾಗಬಹುದು. ಜನಾನಾದಲ್ಲಿಯೂ ಗಲಿಬಿಲಿ ಉಂಟಾಗಬಹುದು."

"ನೀಸಾ ನಿನಗೆ ಅಂಥದ್ದ್ಯಾವುದೂ ಭಯಬೇಕಿಲ್ಲ. ನಿನ್ನ ಬುದ್ಧಿಶಕ್ತಿ, ಚಾಣಾಕ್ಷತೆ, ರೂಪ ಸೌಂದರ್ಯಗಳಿಗಾಗಿ ನೂರು ಸಾಮ್ರಾಜ್ಯಗಳನ್ನಾದರೂ ನಿರಾಕರಿಸಬಲ್ಲೆ. ದಯವಿಟ್ಟು ಒಪ್ಪಿಗೆ ಕೊಡು. ಇಲ್ಲವಾದಲ್ಲಿ ನಾನು ಸಾಯುತ್ತೇನೆ."

"ಛೆ! ಛೆ! ಒಂದು ಹೆಣ್ಣಿಗಾಗಿ, ಇಂಥ ಮಾತುಗಳೇ! ನನಗಿಂತ ನೂರು ಪಟ್ಟು ಹೆಚ್ಚು ಸುಂದರಿಯರಿದ್ದಾರೆ."

"ಇರಬಹುದು ಆದರೆ ಅವರು ನೀನಲ್ಲವಲ್ಲ?"

"ಜಹಾಂಪನಾಹ್ ಇಷ್ಟೊಂದು ಗಾಢವಾಗಿ, ಪ್ರಾಮಾಣಿಕವಾಗಿ ನನ್ನನ್ನು ಪ್ರೀತಿಸುತ್ತಿರುವಿರಿ ಎಂದಾದರೆ, ಖಂಡಿತ ನನ್ನ ಭಾವನೆಗಳನ್ನೆಲ್ಲವನ್ನೂ ನನ್ನ ದುಃಖವನ್ನು ಹತ್ತಿಕ್ಕಿಕೊಂಡು ಒಪ್ಪಿಕೊಳ್ಳುತ್ತೇನೆ. ಆದರೆ ನೀವು ನನಗೊಂದು ಮಾತು ಕೊಡಬೇಕು. ನಾನೆಂದಿಗೂ ನಿಮಗಿರುವ ನೂರಾರು ಉಪಪತ್ನಿಯರ ಜೊತೆ ಒಬ್ಬ ಉಪಪತ್ನಿಯಾಗಿ ಇರಲಾರೆ. ನೀವು ಸಂಪೂರ್ಣವಾಗಿ ನನಗೆ ದಕ್ಕಬೇಕು. ನನಗೆ ಪ್ರಧಾನ

ರಾಣಿ ಪಟ್ಟ ಕೊಡಬೇಕು. ಆದರೆ ಇದರಿಂದ ಜನಾನಾದಲ್ಲಿ ಜಗತ್‌ಗೋಸಿನಿ ಮತ್ತು ಇತರ ಬೇಗಂರಿಂದ ಪ್ರತಿಭಟನೆ ಬರಬಹುದು."

"ನೀಸಾ ಜಗತ್‌ಗೋಸಿನಿ ನನ್ನ ಪಾದಶಾಹ್ ಬೇಗಂ. ಅವಳನ್ನು ನಾನು ಹೇಗೆ ತಾನೇ ನಿರ್ಲಕ್ಷಿಸಲಿ? ನೀನು ಇಷ್ಟು ನಿಷ್ಠುರವಾದ ಷರತ್ತನ್ನೇಕೆ ಇಡುತ್ತಿದ್ದೀ. ಇಬ್ಬರೂ ಹೊಂದಿಕೊಂಡು ಹೋಗಬಹುದಲ್ಲ!"

"ಜಹಾಂಪನಾಹ್, ಹೊಂದಿಕೊಂಡು ಹೋಗುವ ಸ್ವಭಾವ ನನ್ನದಲ್ಲ. ಯಾವಾಗಲೂ ನನಗೆ ನಾನೇ! ಸ್ವತಂತ್ರವಾಗಿ ಬದುಕಬೇಕು. ನನ್ನ ಕನಸುಗಳನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು ಎನ್ನುವುದು ನನ್ನ ಬದುಕಿನ ಚಿರಂತನ ಗುರಿಯಾಗಿದೆ. ಇದೆಲ್ಲವೂ ತಮಗೆ ನನ್ನ ಅತಿರೇಕದ ದುರಾಸೆ ಎನಿಸಬಹುದು. ಆದರೆ ನಾನೇನು ಮಾಡಲಿ? ಯಾವುದೋ ಮೂಲೆಯಲ್ಲಿ ಅನಾಥವಾಗಿ ಯಾರಿಗೂ ಬೇಡವಾಗಿ, ಕೇವಲ ನೀವು ಕೊಡುವ ರಾಜಭೋಗ, ಸೀಮಿತ ಸವಲತ್ತುಗಳಿಂದ ಜೀವಿಸುವುದು ನನಗಿಷ್ಟವಿಲ್ಲ."

ಜಹಾಂಗೀರನಿಗೆ ಮೆಹರುನ್ನೀಸಾಳ ಷರತ್ತುಗಳು ಅತಿಯಾಯಿತು ಎನಿಸಿದರೂ ಅವಳ ಆ ರೂಪ, ಸೌಂದರ್ಯಗಳ ಮುಂದೆ ಕೇವಲ ಕನಿಷ್ಠ ಕ್ಷುಲ್ಲಕ ಎನಿಸಿದವು. ಅದೇ ಸಮಯಕ್ಕೆ ಲಾಡ್ಲಿ ಓಡಿ ಬಂದು "ಅಮ್ಮೀ ಜಾನ್ ನೀವು ಇಲ್ಲಿದ್ದೀರಾ?" ಎಂದು ಪಕ್ಕದಲ್ಲಿ ಕುಳಿತಿದ್ದ ಜಹಾಂಗೀರನನ್ನು ನೋಡಿ ಮುಖ ಕಿವುಚಿಕೊಂಡಳು. ಅವಳ ಬೇಸರ ಅರ್ಥವಾಯಿತು. ಆದರೆ ಜಹಾಂಗೀರನೇ ಅವಳನ್ನು ಹತ್ತಿರ ಕರೆದು "ಲಾಡ್ಲಿ, ನನಗೆ ಸಲಾಂ ಹೇಳುವುದಿಲ್ಲವೇ? ಇನ್ನು ಮುಂದೆ ನಾನೇ ನಿನಗೆ ಅಬ್ಬಾಜಾನ್! ತಿಳಿಯತೇ? ನೀನೂ ಅರಮನೆಗೆ ಬರುತ್ತೀಯಲ್ಲ!" ಎಂದು ಪ್ರೀತಿಯಿಂದ ಕರೆದು ಒಂದು ಮುತ್ತಿಟ್ಟ.

ಜಹಾಂಗೀರ್ ನಿರಾಳವಾಗಿ ನಿದ್ದೆ ಮಾಡಿದ. ಮೆಹರುನ್ನೀಸಾಳೊಂದಿಗೆ ಕನಸಿನಲ್ಲಿಯೇ ವಿಹರಿಸಿದ! ಮಹಬ್ಬತ್ ಖಾನ್, ಅಸಫ್ ಖಾನರನ್ನು ಕಂಡು ವಿಷಯ ತಿಳಿಸಬೇಕೆಂಬ ಕಾತರ! ಈಗಿನ ತನ್ನ ವಿರಹಾಕುಲತೆಯನ್ನು ಗಮನಿಸಿದ ಜಹಾಂಗೀರನಿಗೆ, ಈ ನಾಲ್ಕು ವರ್ಷಗಳು ಅವಳಿಂದ ದೂರವಿದ್ದುದಾದರೂ ಹೇಗೆ ಎಂದು ಆಲೋಚಿಸಿದ.

ಮೆಹರುನ್ನೀಸಾಳದೂ ಅದೇ ಸ್ಥಿತಿ. ನಿದ್ದೆಯಿಂದ ಏಳುವುದಕ್ಕೂ ಮನಸ್ಸಾಗಲಿಲ್ಲ. ಇನ್ನಷ್ಟು ಹೊದ್ದುಕೊಂಡು ಬೆಚ್ಚಗಿನ ಕನಸುಗಳನ್ನು ಕಾಣತೊಡಗಿದಳು. ಮಧ್ಯೆ ಮಧ್ಯೆ ಎಚ್ಚರದಲ್ಲಿ ತಾನು ಹಾಕಿದ ಷರತ್ತುಗಳ ಪರಿಣಾಮ ಏನಾಗುವುದೋ ಎಂದು ಹೆದರಿದಳು. ಕೇವಲ ಜನಾನಾದಲ್ಲಿ ಅವನ ಉಪಪತ್ನಿಯೆಂದು ಕರೆಸಿಕೊಳ್ಳುವುದೇ ಒಂದು ದೊಡ್ಡ ಅವಮಾನ! ಮದುವೆಯಾದ ಗಂಡನನ್ನು ನೋಡಲು ವರ್ಷಗಳೇ ಕಾಯಬೇಕಾಗಿ ಬರುತ್ತದೆ. ಅವರಿಗೆ ಸುಖಬೇಕೆಂದಾಗ ಮಾತ್ರವೇ ಉಪಪತ್ನಿಯರನ್ನು, ವೇಶ್ಯೆಯರನ್ನು ಕರೆಸಿಕೊಳ್ಳುತ್ತಾರೆ. ಅವರ ಸ್ಥಿತಿಯಂತೂ ಕರುಣಾಜನಕವಾಗಿರುತ್ತದೆ. ಅವರಿಗೆ ಜನಾನಾದಲ್ಲಿ ಕಿಮ್ಮತ್ತಿನ ಬೆಲೆಯೂ ಇಲ್ಲ. ಅವರಿಗೆ ತಮ್ಮದೇ ಆದ ಸ್ಥಾನಮಾನಗಳಿಲ್ಲ. ಗೌರವವೂ ಇಲ್ಲ. ಕೇವಲ ನನ್ನ ಸೌಂದರ್ಯಕ್ಕೆ ಮಾತ್ರ ಮೆಚ್ಚಿ ಬರುವುದಾಗಿದ್ದರೆ ಖಂಡಿತ ನನಗೆ ಒಪ್ಪಲು ಸಾಧ್ಯವಿರಲಿಲ್ಲ. ನನ್ನ ಕಾವ್ಯಶಕ್ತಿ, ಕಲಾತ್ಮಕ

ಅಭಿರುಚಿ, ಕಲಾಕುಶಲತೆ, ಸಾಹಸ, ಧೈರ್ಯ, ರಾಜನೀತಿ, ಬುದ್ಧಿಶಕ್ತಿಗಳನ್ನೂ ಮೆಚ್ಚಿಕೊಂಡಿದ್ದಾನೆ. ಆದ್ದರಿಂದಲೇ ನನ್ನ ಎಲ್ಲ ಷರತ್ತುಗಳನ್ನು ಒಪ್ಪಿಕೊಂಡಿದ್ದಾನೆ. ಇನ್ನು ಕಾಯಿಸಿ ಕಾಡುವುದು ಸರಿಯಲ್ಲವೆನಿಸಿ, ತನ್ನ ಸಮ್ಮತಿಯನ್ನು ಸೂಕ್ಷ್ಮವಾಗಿ ತಿಳಿಸಿ, ತಂದೆಯ ಮೂಲಕ ವಿಧಿವತ್ತಾಗಿ ಘೋಷಿಸಿ ತಿಳಿಸುವಂತೆ ಹೇಳುತ್ತೇನೆ ಎಂದುಕೊಂಡಳು.

ಈ ಎಲ್ಲ ಹಂಗಾಮ ಮುಗಿದ ಮೇಲೆ, ಅವಳು ತಂದೆಯ ಜೊತೆ ಮಾತನಾಡಿ ತನ್ನ ಅಭಿಪ್ರಾಯ ತಾನು ಹಾಕಿದ ಷರತ್ತುಗಳ ಬಗ್ಗೆ ತಿಳಿಸಿದಳು.

ಘಿಯಾಸ್ ಬೇಗ್, ಅಸ್ಮತ್‌ರ ಸಂತೋಷಕ್ಕೆ ಕೊನೆ ಮೊದಲಿರಲಿಲ್ಲ. ಮೊಘಲ್ ಚಕ್ರವರ್ತಿ ತಮ್ಮ ಅಳಿಯನಾಗುವುದೆಂದರೆ ಸಾಮಾನ್ಯವೇ? ಸಾಮ್ರಾಜ್ಯದಲ್ಲಿ, ತಮ್ಮ ಬಂಧುಬಾಂಧವರಲ್ಲಿ, ಅಧಿಕಾರಿಗಳಲ್ಲಿ ತಮ್ಮ ಬಗ್ಗೆ, ತಮ್ಮ ಅಧಿಕಾರಾದಿಗಳ ಬಗ್ಗೆ ಎಷ್ಟು ಉನ್ನತ ವಿಚಾರಗಳು ಚಲಾವಣೆಯಾಗುತ್ತವೋ ಯಾರಿಗೆ ಗೊತ್ತು! ಅಲ್ಲಾಹ್ ತೇರಿ ಶುಕರ್ ಹೈ ಯೇ ಸಬ್! ಎಂದು ಉದ್ಗರಿಸಿದ. ಮರುದಿವಸ ಜಹಾಂಗೀರ್ ಘಿಯಾಸ್ ಬೇಗ್ ಮತ್ತು ಅಸಫ್‌ಖಾನ್‌ರನ್ನು ದಿವಾನ್-ಇ-ಆಮ್‌ಗೆ ಆಹ್ವಾನಿಸಿದ. ತುಂಬಿದ ಸಭೆಯಲ್ಲಿ ಘಿಯಾಸ್ ಮನ್‌ಸಬ್‌ಅನ್ನು ಸಾವಿರದ ಎಂಟು ನೂರು ಕುದುರೆಗಳಿಗೆ ಏರಿಸಿದ. ಹಾಗೆಯೇ ಅಣ್ಣನ ಪದೋನ್ನತಿಯನ್ನೂ ಘೋಷಿಸಿದ.

ಮೆಹರುನ್ನೀಸಾ ಇದನ್ನೆಲ್ಲ ಗಮನಿಸಿ, ಜಹಾಂಗೀರ್ ನಿಜವಾಗಿಯೂ ತಾನು ಕೊಟ್ಟ ಮಾತನ್ನು ಉಳಿಸಿಕೊಳ್ಳುತ್ತಾನೆ ಎಂದುಕೊಂಡಳು. ತಮ್ಮಿಬ್ಬರ ಮಧ್ಯೆ ನಡೆದ ಮಾತುಕತೆಯ ವಿವರಗಳನ್ನು ತಿಳಿಸಿದಳು.

"ಬೇಟಾ ನೀಸಾ, ಅಂತೂ ನೀನು ಈ ವಿವಾಹಕ್ಕೆ ಒಪ್ಪಿದ್ದು ನಮ್ಮ ಮೇಲಿನ ದೊಡ್ಡ ಹೊರೆ ಕಳಚಿದಂತಾಯಿತು. ಅಲ್ಲಾಹ್ ನಮ್ಮ ಕಡೆಗೆ ಇದ್ದಾನೆಂಬುದಕ್ಕೆ ಇದೇ ಸಾಕ್ಷಿ. ಎಷ್ಟು ಸಲ ಬಾದಶಾಹರಿಂದ, ರುಖೈಯ್ಯಾ ಬಾನು ಬೇಗಂರಿಂದ ಒತ್ತಡದ ಸಂದೇಶಗಳು ಬಂದಿದ್ದವು. ನಿನ್ನನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವ ಅವರ ಮಾತನ್ನು ನಿರ್ಲಕ್ಷಿಸಲೂ ಆಗದೆ, ನಿನ್ನನ್ನು ಒಪ್ಪಿಸಲೂ ಆಗದ ಎಂತಹ ವಿಷಮ ಪರಿಸ್ಥಿತಿಯಲ್ಲಿ ಸಿಲುಕಿದ್ದೆವು ಎಂಬುದು ನಿನ್ನ ಊಹೆಗೆ ಖಂಡಿತ ಬರಲಾರದು. ನಿನ್ನ ಬಗ್ಗೆ ಸ್ವಲ್ಪ ಅಸಮಾಧಾನವೂ ಇತ್ತು. ಜಹಾಂಗೀರ್ ಬಾದಶಾಹರೇ ಸ್ವತಃ ಕೇಳಿಕೊಳ್ಳುತ್ತಿರುವಾಗ, ನೀನು ಲೆಕ್ಕಿಸದೆ ಹೋದದ್ದು ಅವರಿಗೆ ಬೇಸರ ತಂದಿದೆ. "ಏನು ತನ್ನನ್ನು ಅತಿಲೋಕ ಸುಂದರಿ ಎಂದುಕೊಂಡು, ಬಾದಶಾಹರನ್ನು ಅಡ್ಡಾಡಿಸುತ್ತಿದ್ದಾಳೆಯೆ?" ಎಂದು ಟೀಕೆಯನ್ನೂ ಮಾಡಿದರು. ನಾಲ್ಕು ವರ್ಷ ಜನಾನಾದಲ್ಲಿಯೇ ಇದ್ದರೂ ಒಮ್ಮೆಯಾದರೂ ತನ್ನ ಸ್ಥಿತಿಗತಿಯ ಬಗ್ಗೆ ವಿಚಾರಿಸಲಿಲ್ಲವೆಂದು ದೂರಿದೆಯಂತೆ. ಆದರೆ ಬೇಟಾ, ರುಖೈಯ್ಯಾ ಬೇಗಂ ಮೂಲಕ ಬಾದಶಾಹರು ನಿನಗೆ ಸಂಬಂಧಪಟ್ಟಂತೆ, ನಿನ್ನ ಸುರಕ್ಷಿತತೆಯ ಬಗ್ಗೆ ಬಹಳ ಕಾಳಜಿಯಿಂದ ವಿವರ ತಿಳಿದುಕೊಳ್ಳುತ್ತಿದ್ದರಂತೆ. ಯಾರಿಗೂ ಗೊತ್ತಿಲ್ಲದ ಹಾಗೆ ನಿನ್ನ ಭದ್ರತೆಗಾಗಿ, ಒಂದಷ್ಟು ಮಂದಿಯನ್ನು ಗೂಢಚಾರಿಕೆಗಾಗಿ ನಿಯಮಿಸಿದ್ದರಂತೆ!"

"ಬಡಪಾಯಿ ರುಖೈಯ್ಯಾ ಬೇಗಂ ಜನಾನಾದ ಯಜಮಾನಿಕೆಯಿಲ್ಲದೆ, ಅಕ್ಬರ್ ಬಾದಶಾಹರ ಸಾಂಗತ್ಯವಿಲ್ಲದೆ, ಒಂಟಿತನವನ್ನು ಅನುಭವಿಸುತ್ತಿದ್ದಾರೆ. ಅವರ ಯೋಗ

ಕ್ಷೇಮವಾಗಲೀ, ಅವರ ಬೇಕು, ಬೇಡಗಳಾಗಲಿ, ಕೇಳುವವರೇ ಇಲ್ಲ. ನೀನು ಜಹಾಂಗೀರ್ ಬಾದಶಾಹರ ಹೆಂಡತಿಯಾಗಬೇಕೆಂಬುದು ಪ್ರಾಮಾಣಿಕವಾದ ಅಂತರಂಗದ ಆಸೆಯಾಗಿದೆ. ಅವರನ್ನು ನಿರಾಶೆಗೊಳಿಸುವುದಿಲ್ಲವೆಂಬ ನಂಬಿಕೆ ನನಗಿತ್ತು. ಒಳ್ಳೆಯದೇ ಆಯಿತು ಬೇಟಾ. ಗೋಜಲು ಗೋಜಲು ಸಮಸ್ಯೆಗಳೆಲ್ಲಾ ಸರಳವಾಗಿ ಪರಿಹಾರವಾಯಿತು. ಈ ನಿನ್ನ ಸಮಸ್ಯೆಯಿಂದ ಅರ್ಜುಮಂದಳ ಭವಿಷ್ಯದ ಬಗ್ಗೆ ಭಯವಾಗಿತ್ತು." ಜನಾನಾದಲ್ಲಿ ಜಗತ್‌ಗೋಸಿನಿ ಚಿಂತಿತಳಾಗಿದ್ದಳು. ಮೆಹರುನ್ನೀಸಾ ಮತ್ತು ಗಂಡನ ವಿಚಾರ ಈಗೇನೂ ರಹಸ್ಯವಾಗಿ ಉಳಿದಿರುವ ವಿಷಯವಾಗಿರಲಿಲ್ಲ. ಅವರಿಬ್ಬರ ಮದುವೆಯ ಸುದ್ದಿ ಕಾಳ್ಗಿಚ್ಚಿನಂತೆ ಇಡೀ ಸಾಮ್ರಾಜ್ಯದ ಮೂಲೆ ಮೂಲೆಯನ್ನೂ ಮುಟ್ಟಿತ್ತು. ಜಗತ್‌ಗೋಸಿನಿಗೆ ತಿಳಿದಿದ್ದರಲ್ಲಿ ಆಶ್ಚರ್ಯವೇನೂ ಇರಲಿಲ್ಲ. ಆದರೆ ಜಹಾಂಗೀರನ ಬಾಯಿಂದಲೇ ಕೇಳಿಸಿಕೊಳ್ಳಬೇಕೆಂದಿದ್ದಳು. ಈ ಯೋಚನೆಯಲ್ಲಿ ಇರುವಾಗಲೇ, ಜಹಾಂಗೀರ್ ಪ್ರವೇಶಿಸಿದ. ಜಗತ್ ಅಚ್ಚರಿಯಿಂದ, "ಜಹಾಂಪನಾಹ್, ನೀವು ಇಲ್ಲಿ?" ಎಂದಳು. "ಬೇಗಂ ಸಾಹಿಬಾ. ನಿಮಗೆ ವಿಷಯ ತಿಳಿದೇ ಇರುತ್ತದೆ ಎಂಬುದನ್ನು ಬಲ್ಲೆ. ಆದರೂ ನೀವು ನನ್ನ ಪ್ರೀತಿಯ ಬೇಗಂ, ಬಾದಶಾಹ್ ಬೇಗಂ. ನಿಮಗೆ ನಾನೇ ಖುದ್ದಾಗಿ ತಿಳಿಸದಿದ್ದರೆ ತಪ್ಪಾಗುವುದೆಂದು ಬಲ್ಲೆ. ನೀವೇ ಮುಂದೆ ನಿಂತು ನಮ್ಮಿಬ್ಬರ ನಿಕಾಹ್ ಪೂರ್ಣಗೊಳಿಸಬೇಕು.

"ಅದಕ್ಕೆ ನೀವು ಇಷ್ಟೊಂದು ಕೇಳಿಕೊಳ್ಳಬೇಕೆ? ಈ ಥರದ ಮದುವೆಗಳನ್ನು ಎಷ್ಟು ಸಲ ನೋಡಿಲ್ಲ. ಈಗಲೇ ಅವಳನ್ನು ಜನಾನಾಗೆ ಕರೆಸಿಕೊಳ್ಳಬಹುದಾಗಿತ್ತಲ್ಲ? ನಿಮ್ಮ ಸೇವೆ ಮಾಡುತ್ತಿದ್ದಳು. ನಿಮಗೆ ಬೇಕಾದ್ದನ್ನೆಲ್ಲ ಒದಗಿಸುತ್ತಿದ್ದಳು."

"ಜಗತ್ ಬೇಗಂ. ನೀವು ತಪ್ಪಾಗಿ ಕಲ್ಪಿಸಿಕೊಳ್ಳುತ್ತಿದ್ದೀರಿ. ಅವಳು ಜನಾನಾದಲ್ಲಿ ನನಗೆ ದೇಹ ಸುಖ ಕೊಡಲು ಬರುತ್ತಿಲ್ಲ. ಸಂಪ್ರದಾಯಬದ್ಧವಾಗಿ, ನಿಮ್ಮಂತೆಯೇ ಹೆಂಡತಿಯಾಗಿ ಬರುತ್ತಿದ್ದಾಳೆ."

ಅವನ ಬಾಯಿಂದ 'ಹೆಂಡತಿಯಾಗಿ ಬರುತ್ತಿದ್ದಾಳೆ' ಎಂದು ಕೇಳಿದ ಕ್ಷಣದಲ್ಲಿಯೇ ಜಗತ್‌ಗೋಸಿನಿಗೆ ಆಘಾತವಾಯಿತು. ಇವತ್ತು ಹೆಂಡತಿಯಾಗಿ ಜನಾನಾ ಪ್ರವೇಶಿಸಿ, ನಾಳೆ ಜನಾನಾದಲ್ಲಿನ ನನ್ನ ಅಧಿಕಾರ, ಯಜಮಾನಿಕೆಗಳನ್ನು ಕಸಿದುಕೊಳ್ಳದೆ ಬಿಡಲಾರಳು. ಮೊದಲಿನಿಂದಲೂ ಬಾದಶಾಹರ ಮೇಲೆ ಅದೇನು ಮೋಡಿ ಮಾಡಿದ್ದಾಳೋ ದೇವರೇ ಬಲ್ಲ. ಬಾದಶಾಹರು ಅವಳ ಕೈಯಲ್ಲಿ ಸೂತ್ರದ ಗೊಂಬೆಯಾಗುವುದರಲ್ಲಿ ಅನುಮಾನವಿಲ್ಲ. ಏನಾದರೂ ಕುತಂತ್ರಗಳನ್ನು ಮಾಡಿ, ತಾನೇ ಗದ್ದುಗೆಯೇರಿ ಕುಳಿತು, ಬಾದಶಾಹರನ್ನು ಮೂಲೆ ಗುಂಪಾಗಿ ಮಾಡದ ಹೊರತು ಬಿಡಲಾರಳು ಎಂದು ಒಳಗೇ ಯೋಚಿಸತೊಡಗಿದಳು. ಅವನ ಮನಸ್ಸನ್ನು ಕೆಡಿಸಬೇಕೆಂದು ಮಾಡಿದ ಪ್ರಯತ್ನಗಳೂ ಫಲಕಾರಿಯಾಗಲಿಲ್ಲ. ಈಗ ಆದುದರ ಬಗ್ಗೆ ಯೋಚಿಸಿ ಮಾಡುವುದಾದರೂ ಏನಿದೆ. ಬಾದಶಾಹರನ್ನು ಯಾವ ರೀತಿಯಲ್ಲಾದರೂ ಪ್ರಭಾವಿಸಿ, ಜನಾನಾದ ಆಧಿಪತ್ಯವನ್ನು ಉಳಿಸಿಕೊಳ್ಳುವ ಪ್ರಯತ್ನವನ್ನಾದರೂ ಮಾಡಬೇಕೆಂದುಕೊಂಡಳು.

ಅಷ್ಟರಲ್ಲಿಯೇ ಜಹಾಂಗೀರ್ ಎದ್ದು, "ಜಗತ್ ಬೇಗಂ, ಅವಳು ಜನಾನಾ ಪ್ರವೇಶಿಸಿದಾಗ, ನಿಮ್ಮಲ್ಲಿನ ಯಾರೊಬ್ಬರಿಂದಲೂ ಯಾವುದೇ ರೀತಿಯ ತೊಂದರೆ ಆಗಬಾರದು. ಅವಳನ್ನು ಗೌರವ, ಮರ್ಯಾದೆಯಿಂದ ಸ್ವಾಗತಿಸಿ, ಯಾವುದಕ್ಕೂ ಕೊರತೆಯಿಲ್ಲದಂತೆ ನೋಡಿಕೊಳ್ಳಬೇಕು. ಜನಾನಾಕ್ಕೆ ವಿಶೇಷ ಹೆಣ್ಣಾಗಿ ಸೇರ್ಪಡೆಯಾಗುತ್ತಿದ್ದಾಳೆ. ಜಗತ್ ಇದೆಲ್ಲವನ್ನೂ ನೀವೇ ಮುಂದೆ ನಿಂತು ನಿರ್ವಹಿಸಬೇಕು. ಇಲ್ಲಿ ನಿಮ್ಮ ಮಾತು ನಡೆಯುತ್ತದೆ. ನಿಮಗೆ ಬಹಳ ಬೆಲೆಯಿದೆ ಇಲ್ಲಿ. ಕೇಳಿಸಿಕೊಳ್ಳುತ್ತಿದ್ದೀರಿ ತಾನೇ ಬೇಗಂ?"

ಜಗತ್‌ಗೋಸಿನಿಯ ಬಳಿ ಯಾವ ಉತ್ತರವೂ ಇಲ್ಲ. ಪ್ರತಿಭಟಿಸುವ ಎದೆಗಾರಿಕೆಯೂ ಇಲ್ಲ. ತನ್ನ ಅಧಿಕಾರವೇ ಕೈಜಾರಿ ಹೋಗುವ ಭೀತಿಯ ಭೂತ ಬೆಂಬೆತ್ತಿದೆ. ಬಾದಶಾಹ್ ಹೇಳಿದ್ದಕ್ಕೆ ಸದ್ಯಕ್ಕೆ ತಲೆಯಾಡಿಸುವುದೊಂದೇ ದಾರಿ ಎಂದು ಮೌನ ತಳೆದಳು.

ಅಂತೂ ಇಂತೂ ಮದುವೆಯ ದಿನ ಬಂದೇ ಬಂತು. ಘಿಯಾಸ್ ಕುಟುಂಬದ ಸಂತೋಷಕ್ಕೆ ಎಣೆಯಿಲ್ಲದಂತಾಯಿತು. ಘಿಯಾಸ್‌ನ ಮನೆ, ನೆಂಟರಿಷ್ಟರಿಂದ ಗಿಜಿಗುಡುತ್ತಿತ್ತು. ಮದುವೆಗೆ ಬೇಕಾದ ಸಿದ್ಧತೆಗಳು ಮನೆಯಲ್ಲಿ ಭರಾಟೆಯಿಂದ ನಡೆಯುತ್ತಿದ್ದವು. ಮದುವೆಗಾಗಿ, ಬೇಕಾಗಿದ್ದ ಒಡವೆ ವಸ್ತ್ರಗಳನ್ನು, ಬೇರೆ ಬೇರೆ ಕಡೆಗಳಿಂದ ತರಿಸಿದ್ದರು. ಚೈನಾದಿಂದ ರೇಶ್ಮೆ, ಡಾಕಾದಿಂದ ಮಸ್ಲಿನ್, ಗುಜರಾತ್‌ನಿಂದ ವೆಲ್ವೆಟ್(ಕಸೂತಿಯಿಂದ ಕೂಡಿದ್ದು) ಬಟ್ಟೆಗಳು ಬಂದವು. ಹಿಂದೂಸ್ತಾನದ ಬೇರೆಬೇರೆ ಕಡೆಗಳಿಂದ ಅಡಿಗೆಯವರು ಬಂದಿದ್ದರು.

ವಿಭಿನ್ನವೂ, ವೈವಿಧ್ಯಮಯ ಶೈಲಿಯವೂ ಆದ ಆಭರಣಗಳು ರಾಶಿರಾಶಿಯಾಗಿ ಬಂದವು. ನೋಡಿದವರ ಕಣ್ಣು ಕುಕ್ಕುವಂತಿದ್ದವು.

ಸಂಗೀತಗಾರರೂ ನಾಚವಾಲಿಗಳೂ ಗುಂಪು ಗುಂಪಾಗಿ ಸೇರಿದರು. ಮನೆಯ ಒಳಗಿನ ಸಿದ್ಧತೆಗಳು ಒಂದು ಬಗೆಯವಾದರೆ, ಹೊರಗೆ ಆಗ್ರಾ ನಗರವೇ ಅದ್ಭುತವಾಗಿ ಸಜ್ಜುಗೊಂಡಿತ್ತು. ಚೆಂಡು ಮಲ್ಲೆ, ಮಲ್ಲಿಗೆ ಹಾರಗಳಿಂದ, ಬಣ್ಣದ ಕಾಗದಗಳ ಬಾವುಟಗಳಿಂದ, ನಗರವಷ್ಟೇ ಅಲ್ಲ ಕೋಟೆ ಕೊತ್ತಲಗಳೂ ಅಲಂಕೃತವಾಗಿದ್ದವು.

ಸೇವಕರು, ತೋಟ, ತುಡಿಕೆ, ಉದ್ಯಾನಗಳನ್ನೆಲ್ಲ ಅಲಂಕರಿಸಿದರು. ಅವುಗಳೊಳಗಿನ ಹಲವು ಹಣ್ಣುಗಳನ್ನು ವಿವಿಧ ರೀತಿಯಲ್ಲಿ ವಿನ್ಯಾಸಗೊಳಿಸಿದ್ದರು.

ಹೂ ಕುಂಡಗಳನ್ನು, ಹಾದಿ ಬದಿಗಳಲ್ಲಿ, ವಿವಿಧ ರೀತಿಯ ಎಲೆಗಳಿಂದ ಕೂಡಿದವುಗಳನ್ನು ಕಣ್ಣಿಗೆ ಹಬ್ಬವೆನ್ನುವಂತೆ, ವಿವಿಧ ಮಾದರಿಗಳಲ್ಲಿ ಜೋಡಿಸಿದ್ದರು. ರುಖೈಯ್ಯಾ ಬಾನು ಬೇಗಂರ ಉಸ್ತುವಾರಿಯಲ್ಲಿ ಮದುಮಗಳಾದ ಮೆಹರುನ್ನೀಸಾ ಸಿಂಗಾರಗೊಳ್ಳುತ್ತಿದ್ದಳು. ನೀಲಿ ಬಣ್ಣದ ರೇಶಿಮೆಯ ಕಾಬಾ. ಅದಕ್ಕೆ ಹೊಂದುವಂತಹ ಬಣ್ಣದ ಚೂಡಿದಾರ್. ಚಿನ್ನದ ಎಳೆಗಳಿಂದ ಹೆಣೆದ ಮುಖದ ಮೇಲಿನ ಪರದೆ. ವೆಲ್ವೆಟ್ ಪಾದರಕ್ಷೆಗಳು. ಅವುಗಳ ಮೇಲೆ ಕಸೂತಿಬಿಡಿಸಲಾಗಿತ್ತು. ಕಿವಿಯಿಂದ ಭುಜದವರೆಗೆ ನೇತಾಡುವ ಲೋಲಾಕುಗಳು, ಕೊರಳಿಗೆ ಮುತ್ತು, ರತ್ನ, ವಜ್ರ, ವೈಡೂರ್ಯಗಳಿಂದ ಅತ್ಯಂತ ಅದ್ಭುತವಾದ ವಿನ್ಯಾಸವುಳ್ಳ ಹಾರಗಳು, ತೋಳು, ಮುಂಗೈಗಳಲ್ಲಿಯೂ ಅಗಲ ಪಟ್ಟಿಯ ಬಾಜುಬಂದಿ ಮತ್ತು ಬಳೆಗಳು! ಒಂದಷ್ಟು ಮಂದಿ ಹಿಂಬಾಲಕರೊಂದಿಗೆ,

ಮದುವೆ ಮಂಟಪದ ಬಳಿ ಬಂದು ನಿಂತಳು. ಅಸ್ಮತ್ ಕೈ ಕೊಟ್ಟು ವೇದಿಕೆ ಹತ್ತಿಸಿದಳು.

ತಾಳಮೇಳಗಳೊಂದಿಗೆ, ಸಂಗೀತದೊಂದಿಗೆ ಜಹಾಂಗೀರ್ ಮದುಮಗನ ವೇಷದಲ್ಲಿ, ಭಾವಿ ಮಾವ ಘಿಯಾಸ್ ಬೇಗ್ ಮತ್ತು ಮಕ್ಕಳೊಂದಿಗೆ ಆಗಮಿಸಿದ. ಆದರೆ ಖುರ‍್ರಂನ ಮುಖದಲ್ಲಿ ಸಂತೋಷ ಮರೆಯಾಗಿತ್ತು. ತನ್ನ ಮದುವೆ ನಡೆಯಬೇಕಾಗಿದ್ದುದು, ಅಪ್ಪನ ಮದುವೆಗೆ ಆತುರವೇನಿತ್ತು ಎನ್ನುವುದು ಅವನ ಬೇಸರಕ್ಕೆ ಕಾರಣವಾಗಿತ್ತು. ಜಹಾಂಗೀರ್ ಅಚ್ಚ ಬಿಳುಪಿನ ರೇಶಿಮೆಯ ಕಾಬಾ, ಮುತ್ತು ಮತ್ತು ಚಿನ್ನದ ಎಳೆಗಳ ಕಸೂತಿಯಿಂದ ಕೂಡಿದ್ದನ್ನು ಧರಿಸಿದ್ದ. ಸೊಂಟಪಟ್ಟಿಯಲ್ಲಿ, ಜೇಡ್ ಹುದುಗಿದ್ದ ಹಿಡಿಯನ್ನುಳ್ಳ ಚೂರಿ ಇತ್ತು. ಒಂದು ಹಿಂಡು ಶ್ರೀಮಂತರು, ಶ್ರೇಷ್ಠ ಸಭಾಸದರು, ಅಧಿಕಾರಿಗಳು ಇವರುಗಳೊಂದಿಗೆ ಕೂಡಿ ಜಹಾಂಗೀರನ ಜೊತೆ ಬಂದಿತ್ತು. ಅವರೆಲ್ಲ ನಿಧಾನ ಹೆಜ್ಜೆಗಳನ್ನಿಡುತ್ತಾ ಪ್ರವೇಶಿಸುತ್ತಿದ್ದಂತೆ, ಪನ್ನೀರದಾನಿಯಿಂದ, ಗುಲಾಬಿ, ಮಲ್ಲಿಗೆ ಮಿಶ್ರ ಸುಗಂಧದ ನೀರನ್ನು ಸಿಂಪಡಿಸುತ್ತಿದ್ದರು. ವೇದಿಕೆಯನ್ನು ಚಿನ್ನದ ಮೇಲ್ಚಪ್ಪರದಿಂದ ಅಲಂಕರಿಸಿದ್ದರು. ಅಲ್ಲಿಂದ ಮುತ್ತಿನ ಸರಪಳಿಗಳನ್ನು ಇಳಿಬಿಡಲಾಗಿತ್ತು.

ನಿಕಾಹ್‌ವನ್ನು ಸಂಪ್ರದಾಯಬದ್ಧವಾಗಿ, ವಿಧಿವತ್ತಾಗಿ ನೆರವೇರಿಸಲು ಮುಲ್ಲಾಗಳು, ಖಾಜಿಗಳು ಉಪಸ್ಥಿತರಿದ್ದರು. ಮದುಮಗ, ಮದುಮಗಳು ಇಬ್ಬರೂ ವೇದಿಕೆಗೆ ಆಗಮಿಸಲು, ಇಬ್ಬರಿಂದಲೂ ಕಬೂಲಾತಿಯನ್ನು ಹೇಳಿಸಿ, ನಿಕಾಹ್‌ಶಾಸ್ತ್ರವನ್ನು ಮುಗಿಸಿದರು.

ಜಹಾಂಗೀರ್, ನೂರ್ ಜಹಾನ್ ಆ ಕ್ಷಣದಿಂದ ದಂಪತಿಗಳಾದರು. ಜಹಾಂಗೀರನ ಇಪ್ಪತ್ತನೇ ಹೆಂಡತಿಯಾಗಿ, ಜಹಾಂಗೀರನ ಜನಾನಾದ ಅಧಿಕೃತ ಸದಸ್ಯಳಾದಳು.

* * *

ಜನಾನಾ ಪ್ರವೇಶಿಸುತ್ತಿದ್ದಂತೆ, ಅವಳು ತನ್ನ ಜವಾಬ್ದಾರಿಗಳನ್ನು ಹೇಗೆ ನಿರ್ವಹಿಸಬೇಕೆಂಬುದನ್ನು ಯೋಚಿಸಿದಳು. ಮೊದಲಿಗೆ ಜನಾನಾದಲ್ಲಿ ಯಾರು ಯಾರು, ಯಾವ ಯಾವ ಸ್ಥಾನಗಳಲ್ಲಿ ಇದ್ದಾರೆ. ಅವರ ಸ್ವಭಾವ ಎಂಥದ್ದು, ಅಲ್ಲಿನ ವ್ಯವಸ್ಥೆ ಹೇಗೆ? ಯಾರ ಯಾರ ಕರ್ತವ್ಯ ಏನೇನು? ಯಾರು ಯಾರು ಯಾವ ರೀತಿ ಅಧಿಕಾರ ಚಲಾಯಿಸುತ್ತಾರೆ. ಇತ್ಯಾದಿಗಳೆಲ್ಲವನ್ನೂ ಮೊದಲಿಗೆ ತಿಳಿದುಕೊಳ್ಳಬೇಕಿತ್ತು. ಮೊದಲು ರುಖೈಯ್ಯಾ ಬಾನುಬೇಗಂ ಜನಾನಾದ ಯಜಮಾನಿಯಾಗಿದ್ದರು. ಅವರ ಹದ್ದು ಕಣ್ಣಿಂದ ತಪ್ಪಿಸಿಕೊಳ್ಳಲು ಯಾರಿಂದಲೂ ಸಾಧ್ಯವಿರಲಿಲ್ಲ. ಇಲ್ಲಿಂದ ಪ್ರತಿಯೊಂದು ವಿಷಯವೂ ಬಾದಶಾಹರ ಗಮನಕ್ಕೆ ಹೋಗುತ್ತಿತ್ತು. ಬಾದಶಾಹರ ಆದೇಶವಿಲ್ಲದೆ, ಯಾರಾದರೂ ಹೊರಗೆ ಹೆಜ್ಜೆ ಇಟ್ಟರೆ ಸಾಯುವುದಂತೂ ಖಚಿತವಾಗಿತ್ತು. ಎಲ್ಲ ಬಗೆಯ ಅನುಕೂಲಗಳು ಇದ್ದುವಾದರೂ ಅದೊಂದು ರೀತಿಯಲ್ಲಿ ಜೈಲುಖಾನೆಯೇ ಆಗಿತ್ತು. ಯಾರಿಗೆಷ್ಟೇ ಸ್ವಾತಂತ್ರ್ಯ ಕೊಟ್ಟರೂ, ಬೇಡವೆನಿಸಿದಾಗ ಕಸಿದುಕೊಳ್ಳುತ್ತಿದ್ದರು.

ನಾಲ್ಕು ವರ್ಷಗಳು ಜನಾನಾವಾಸವನ್ನು ಅನುಭವಿಸಿ, ಸಾಕಷ್ಟು ಅನುಭವ ಪಡೆದಿದ್ದಳು. ಅಲ್ಲದೆ ಎಂಥವರನ್ನಾಗಲಿ ಎಂತಹ ಪ್ರಸಂಗವನ್ನಾಗಲಿ, ಮಣಿಸುವ ಮತ್ತು ಎದುರಿಸುವ ಸಾಮರ್ಥ್ಯವಿತ್ತು. ಜಹಾಂಗೀರ್ ಒಮ್ಮೆ ತನ್ನವನಾಗಿಬಿಟ್ಟರೆ ಸಾಕು.

ಎಲ್ಲವನ್ನೂ ಹೇಗೆ ವ್ಯವಸ್ಥಿತವಾಗಿ ಬದಲಾಯಿಸುತ್ತೇನೆ ತನ್ನ ಅಂಕೆಗೆ ತೆಗೆದುಕೊಳ್ಳುತ್ತೇನೆ ಎನ್ನುವುದನ್ನು ಜಗತ್ತಿನ ಮುಂದೆ ಪ್ರಸ್ತುತಪಡಿಸುತ್ತೇನೆ ಎಂದು ವಿಶ್ವಾಸದೊಂದಿಗೆ ಹೇಳಿಕೊಂಡಳು.

ಮೊದಲ ಕೆಲಸವೆಂದರೆ ತನ್ನ ಸವತಿ ಜಗತ್‌ಗೋಸಿನಿಯ ಪ್ರಬಲ ಕವಚವಾಗಿರುವ ಹೋಷಿಯಾರ್‌ನನ್ನು ಕಸಿದುಕೊಳ್ಳಬೇಕು. ಇಪ್ಪತ್ತು ವರ್ಷಗಳಿಂದ ಜಗತ್‌ಗೋಸಿನಿಯ ಸೇವೆಯಲ್ಲಿದ್ದವನಿಗೆ ಅವಳ ಒಳಹೊರಗುಗಳು ತಿಳಿದಿರುತ್ತವೆ. ಬಹಳ ಚಾಣಾಕ್ಷ ಸೂಕ್ಷ್ಮದೃಷ್ಟಿಯುಳ್ಳವ. ಒಮ್ಮೆ ಹೊಂದಿಕೊಂಡು ಬಿಟ್ಟರೆ ನಿಷ್ಠೆಯಿಂದ ಸೇವೆಸಲ್ಲಿಸುತ್ತಾನೆ. ಈಗಾಗಲೇ ನನ್ನ ವರ್ಚಸ್ಸಿನ ಪರಿಚಯವಾಗಿರುವುದರಿಂದ ಅವನಿಗೆ ಗೊತ್ತಿದೆ, ತನ್ನ ಭವಿಷ್ಯ ನನ್ನ ಕೈಲಿ ಇದೆ ಎನ್ನುವುದನ್ನು ಅರಿತಿದ್ದಾನೆ. ಆದರೂ ಸ್ವಲ್ಪಕಾಲ ಅವನನ್ನು ಅವನ ಪ್ರಾಮಾಣಿಕತೆಯನ್ನು ಖಚಿತಪಡಿಸಿಕೊಂಡ ಮೇಲೆಯೇ ಅವನಲ್ಲಿ ವಿಶ್ವಾಸವನ್ನು ತೋರಬೇಕು. ಇಷ್ಟೆಲ್ಲ ಆಲೋಚನೆಗಳ ಹಿಂದೆ, ಜಗತ್‌ಗೋಸಿನಿಯನ್ನು ಅವಳ ಅಹಂಕಾರಕ್ಕಾಗಿ ದ್ವೇಷಿಸುತ್ತಿದ್ದ ರುಖೈಯ್ಯಾ ಬಾನುಬೇಗಂರ ಹಿತೋಪದೇಶವಿತ್ತು. ಈಗಾಗಲೇ ಹೋಷಿಯಾರ್ ಈ ಮದುವೆ ಕೆಲಸಗಳಲ್ಲಿ ಬಹಳ ಚಟುವಟಿಕೆಯಿಂದ ತೊಡಗಿಸಿಕೊಂಡಿದ್ದ. ಜಗತ್‌ಗೋಸಿನಿ ಅಸಹಾಯಕಳಾಗಿ ಬುಸುಗುಟ್ಟುತ್ತಾ ಕುಳಿತಿದ್ದಳು. ನಿಕಾಹ್ ಮುಗಿದು ಇನ್ನೂ ಕೆಲವು ಆಚರಣೆಗಳಿದ್ದವು. ಮೆಹರುನ್ನೀಸಾಳನ್ನು ಹೊಸ ಬಗೆಯಲ್ಲಿ ಅಲಂಕರಿಸಿ ಸಿದ್ಧಗೊಳಿಸಬೇಕಿತ್ತು. ಅವಳ ಉಡುಪು ಆಭರಣಗಳೆಲ್ಲವೂ ವಜ್ರ ವೈಡೂರ್ಯ ಮುತ್ತು ರತ್ನಗಳಿಂದ ಕೂಡಿದವುಗಳಾಗಿದ್ದವು. ತೋಳ ಬಂದಿ, ಮಣಿಕಟ್ಟಿಗೆ ಅಗಲ ಪಟ್ಟಿಯ ರತ್ನ ಖಚಿತ ಬಳೆಗಳು, ಕಿವಿಗೆ ಕತ್ತಿಗೆ, ಅವಳ ಮೈಬಣ್ಣಕ್ಕೆ ಹೊಂದುವಂತಹ ಆಭರಣಗಳು ಎಲ್ಲಕ್ಕಿಂತ ಹೆಚ್ಚಾಗಿ ಚಕ್ರವರ್ತಿನಿಯಂತೆ ಕಾಣಿಸಬಲ್ಲ ಮೊಘಲ್ ಪೇಟ, ಮೇಲೊಂದು ಕ್ರೌಂಚ್‌ಪಕ್ಷಿಯ ಬಿಳಿಯಗರಿ, ಕಿರೀಟದ ಮಧ್ಯದಲ್ಲಿ ಸರಿಯಾಗಿ ಹಣೆ ಮೇಲಿರುವಂತೆ ಒಂದು ದೊಡ್ಡ ಕೆಂಪು ತಿಲಕದಂತೆ ಕಾಣುವ ರತ್ನ. ಪೇಟದಿಂದ ಇಳಿಬಿಟ್ಟ ಅತ್ಯಂತ ತೆಳುವಾದ ಮಸ್ಲಿನ್‌ಪರದೆ, ಹಿಂದಿನಿಂದ ಇಳಿಬಿಟ್ಟ ಚಿನ್ನದ ಕಸೂತಿಯಿಂದ ಕೂಡಿದ ಪರದೆ–ಇವುಗಳಿಂದ ಚಿನ್ನದ ಪುತ್ಥಳಿಯೋ ಸ್ವರ್ಗದ ಅಪ್ಸರೆಯೋ ಎಂಬಂತೆ ಅಲಂಕೃತಗೊಂಡು, ಜೊತೆಗೊಂದಷ್ಟು ಸೇವಕಿಯರನ್ನು ಇರಿಸಿಕೊಂಡು ಜಹಾಂಗೀರನ ಖಾಸಗಿ ಮಹಲಿಗೆ ಬಂದು ಪ್ರವೇಶಿಸಿದಳು.

ಜಹಾಂಗೀರ್ ಅವಳಿಗಾಗಿ ಚಡಪಡಿಸುತ್ತಾ ಎದುರು ನೋಡುತ್ತಿದ್ದ. ಮೆಹರುನ್ನೀಸಾಳ ಪ್ರವೇಶವಾಗುತ್ತಿದ್ದಂತೆ, ಜೊತೆಯಲ್ಲಿಯೇ ಬಂದು ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದ ಹೋಷಿಯಾರ್ ಮಹಲಿನಲ್ಲಿದ್ದ ಜನರನ್ನು ಹೊರಗೆ ಕಳಿಸಿದ. ಅವರಿಬ್ಬರ ಏಕಾಂತಕ್ಕೆ ಭಂಗ ಬಾರದಂತೆ ನೋಡಿಕೊಂಡ.

ಸ್ವಲ್ಪ ಹೊತ್ತಿನಲ್ಲಿಯೇ ವಿಧಿವತ್ತಾದ ಮದುವೆ ನಡೆಯಲಿತ್ತು. ಖಾಜಿಗಳು ಅವರಿಬ್ಬರನ್ನೂ ಕರೆದರು. ಕೂಡಲೇ ಭಾವೀ ದಂಪತಿಗಳು ಅವರ ಬಳಿಗೆ ಹೋದಾಗ, ಇಬ್ಬರನ್ನೂ, ಒಬ್ಬರಿಗೊಬ್ಬರು ಗಂಡಹೆಂಡತಿಯರಾಗಲು ಒಪ್ಪಿದ್ದೇವೆ ಎಂದು ಉಚ್ಚರಿಸುವಂತೆ ಖಾಜಿಗಳು ಸೂಚಿಸಿದರು. ಜಹಾಂಗೀರ್, "ಮೆಹರುನ್ನೀಸಾಳನ್ನು ಹೆಂಡತಿಯಾಗಿ ಸ್ವೀಕರಿಸುತ್ತೇನೆ" ಎಂದು ಹೇಳಿ ಮುಗಿಸಿದ. ಮೆಹರುನ್ನೀಸಾ

ಜಹಾಂಗೀರನ ಹೆಸರನ್ನು ಹೇಳುವಾಗ, ಅತ್ಯಂತ ಹೆಮ್ಮೆಯಿಂದ, ಅಂತರಂಗದಾಳದಿಂದ, ತನ್ನೊಳಗೇ "ನೂರುದ್ದೀನ್ ಮುಹಮ್ಮದ್ ಜಹಾಂಗೀರ್ ಪಾದಶಾಹ್ ಘಾಜಿಯನ್ನು ನನ್ನ ಗಂಡನಾಗಿ ಸ್ವೀಕರಿಸುತ್ತೇನೆ" ಎಂದು ಹೇಳಿಕೊಂಡು ಹೊರಗೆ ಪ್ರತಿಧ್ವನಿಸಿದಳು.

ಇಬ್ಬರ ನಡುವೆ ಮದುವೆಯ ಒಪ್ಪಂದದ ಪತ್ರದ ಮೇಲೆ ರಾಜಮುದ್ರೆ ಬಿದ್ದು ಸಿದ್ಧವಾಯಿತು. ದೂರದಲ್ಲಿ ಮದುವೆಯ ವಿಧಿ ಮುಗಿದಿದ್ದರ ಸೂಚನೆಯಾಗಿ, ಬ್ಯಾಂಡು, ಬಾಜಾ, ಬಜಂತ್ರಿಗಳ ಸದ್ದು ಕೇಳಿಬಂತು.

"ಮೆಹರುನ್ನೀಸಾಳ ಎದೆ ಬಡಿತ ಶುರುವಾಯಿತು. ಇದೇನು ಕನಸೋ ವಾಸ್ತವವೊ ಎನ್ನುವ ಅನುಮಾನದ ಗೊಂದಲದಲ್ಲಿ ಸಿಲುಕಿದಳು. ತಾನೆಲ್ಲಿ, ಮೊಘಲ್ ಸಾಮ್ರಾಟನೆಲ್ಲಿ? ಎಲ್ಲಿಗೆಲ್ಲಿಯ ಸಂಬಂಧ! ತನ್ನ ಹಣೆಬರಹಕ್ಕೆ ತಾನೇ ಬೆಚ್ಚಿ ಬಿದ್ದಳು! ಹುಟ್ಟಿದಾಗಲೇ ಅನಾಥಳಾಗಲು ಸಿದ್ಧವಾಗಿದ್ದವಳು, ಈಗ ಜಹಾಂಗೀರ್ ಬಾದಶಾಹನ ಮಡದಿ! ಮೊಘಲ್ ಸಾಮ್ರಾಜ್ಞಿ! ಖುದಾ ಏನಿದು ನಿನ್ನ ಕರಿಷ್ಮಾ! ಲಾಖ್, ಲಾಖ್ ಶುಕರ್ ಹೈ" ಎಂದು ತನ್ನಲ್ಲೇ ಹೇಳಿಕೊಂಡಳು. ತನ್ನ ಈಗಿನ ಸ್ಥಿತಿಯನ್ನು ನಂಬುವುದಕ್ಕೆ ಮನಸ್ಸು ಹಿಂಜರಿಯುತ್ತಿತ್ತು. ಮೊಘಲ್ ಇತಿಹಾಸದಲ್ಲಿ ತನ್ನ ಹೆಸರು ಅಂಕಿತವಾಗುತ್ತದೆ. ಆಗುವಂತೆ ಮಾಡುತ್ತೇನೆ ಎಂದು ತಾನು ಪಯಣಿಸಬೇಕಾದ ಹಾದಿಯನ್ನು ಆಲೋಚಿಸುತ್ತಿದ್ದಳು. ಮಹಲಿನ ಹೊರಗಡೆ ಇದ್ದ ಕಪ್ಪು ಶಿಲಾಫಲಕದ ಮೇಲೆ, ಪರ್ಷಿಯನ್ ಭಾಷೆಯಲ್ಲಿ, ಮಏ 25, 1611 ಮದುವೆಯಾದ ದಿನಾಂಕವನ್ನು ಕೆತ್ತಿಸಲಾಯಿತು.

ಇವರಿಬ್ಬರದೂ ಸಾಮಾನ್ಯ ಮದುವೆಯಾಗಿರಲಿಲ್ಲ. ಅವಳು ಜಹಾಂಗೀರನನ್ನು ಮಾತ್ರವೇ ವರಿಸಿರಲಿಲ್ಲ. ಇಡೀ ಮೊಘಲ್ ಸಾಮ್ರಾಜ್ಯವನ್ನೇ ವರಿಸಿದ್ದಳು.

ಮೊಘಲ್ ಇತಿಹಾಸದಲ್ಲಿ ಅಲ್ಲಿಯವರೆಗೆ ಯಾವ ಹೆಣ್ಣಿಗೂ ಈ ಮಟ್ಟದ ಗೌರವ ಸಂದಿರಲಿಲ್ಲ. ಆದರೆ ಮೆಹರುನ್ನೀಸಾಳಿಂದ, ಅಂದರೆ ಹೊಸದಾಗಿ 'ನೂರ್ ಜಹಾನ್', ಎಂದು ಬಿರುದಾಂಕಿತಳಾದವಳಿಂದ, ಮೊಘಲ್ ಸಾಮ್ರಾಜ್ಯ , ಮೊಘಲ್ ಸಮಾಜ, ಸ್ತ್ರೀ ಸಮುದಾಯಗಳ ಚಹರೆಗಳೇ ಬದಲಾಗಲಿವೆ.

ಆಗಲೇ ಅವಳೆದೆಯಲ್ಲಿ ನಿರ್ಧಾರಗಳು, ಸಾಮ್ರಾಜ್ಯದಾಳ್ವಿಕೆಯ ರೂಪುರೇಷೆಗಳು, ಬದಲಾಗಬೇಕಾದ ಶಾಸನಗಳು, ಸುಧಾರಣೆಗಳು ಎಲ್ಲವೂ ರೂಪು ಪಡೆಯತೊಡಗಿದವು. ಜನಾನಾದ ಕನಿಷ್ಠ ಹುಳುವಾಗಿ ಬದುಕುವ ಕರ್ಮದಿಂದ, ಅದ್ಭುತ, ವರ್ಣರಂಜಿತ, ಸಾಹಸಿ ದಿಟ್ಟ ಮಹಿಳೆಯೊಬ್ಬಳು ಹುಟ್ಟು ಪಡೆಯುತ್ತಿದ್ದಳು. ಮುಖ ಪರದೆಯ ಹಿಂದಿನಿಂದಲೂ, ಮುಂದಿನಿಂದಲೂ, ಜಹಾಂಗೀರನನ್ನು ಆಳಬಲ್ಲೆ. ಆದರೆ ಸೇಡಿನಿಂದಲ್ಲ; ಪ್ರೀತಿಯಿಂದ ಎಂದು ನಿರ್ಧಾರಗಳನ್ನು ಗಟ್ಟಿಗೊಳಿಸಿಕೊಳ್ಳುತ್ತಿದ್ದಳು.

## ಸಾಮ್ರಾಜ್ಞೆಯಾಗಿ ನೂರ್ ಜಹಾನ್

ವಿಧಿವತ್ತಾಗಿ ಮದುವೆಯಾದ ರಾಜದಂಪತಿಗಳು ತಮ್ಮ ರತಿಸುಖದ ಸ್ವರ್ಗದಲ್ಲಿ ನಿರಾತಂಕವಾಗಿ ವಿಹರಿಸುತ್ತಿದ್ದರು. ಗತದ ಸ್ಮೃತಿಯಾಗಲಿ, ಭವಿಷ್ಯದ ಕಲ್ಪನೆಯಾಗಲಿ ಅವರನ್ನು ಕಾಡಲಿಲ್ಲ. ಒಬ್ಬರಿಗಾಗಿ ಒಬ್ಬರು ಬೆಸೆದುಕೊಂಡು ಬಂದಿಗಳಾಗಿದ್ದರು.

ಸಮಯದ ವೇಗ ಅವರ ನಿರೀಕ್ಷೆಯ ಹಿಡಿತಕ್ಕೂ ಅಸಾಧ್ಯವಾಗಿತ್ತು. ನೂರ್ ಜಹಾನ್‌ಳಿಗೆ ಇನ್ನು ಕನಸುಗಳು ಬೇಕಿಲ್ಲ. ಚಕ್ರವರ್ತಿಯೂ ಸೇರಿದಂತೆ ಎಲ್ಲ ಸುಖಗಳೂ ಅವಳ ಕಾಲಡಿಯಲ್ಲಿ ಬಿದ್ದಿದ್ದವು. ರಾತ್ರಿ ಬೆಳಗುಗಳ ಪರಿವೆಯಿಲ್ಲದೆ ಮಲಗಿದ್ದರು. ಯಾರಿಗೂ ಅವರನ್ನು ಎಬ್ಬಿಸುವ ಧೈರ್ಯವಿರಲಿಲ್ಲ. ಅವರ ಸೇವೆಗೆ, ಆದೇಶಕ್ಕೆ ಕಾಯುತ್ತಾ, ಜಹಾಂಗೀರನ ಮಹಲಿನ ಮುಂಭಾಗದ ಇಕ್ಕೆಲಗಳಲ್ಲಿ ಕೈಕಟ್ಟಿಕೊಂಡು, ಅರೆಪುರುಷರು(ಖೋಜಾಗಳು) ವಿನಯದಿಂದ ಕಾಯುತ್ತಿದ್ದರು.

ಕಷ್ಟಪಟ್ಟು ತನ್ನ ಸೊಂಟ ಬಳಸಿ ಬಿಗಿದುಕೊಂಡಿದ್ದ ತೋಳುಗಳನ್ನು ಬಿಡಿಸಿ, ಎದ್ದು ಮಹಲಿನಾಚೆ ಬಂದಳು. ತಣ್ಣಗೆ ಗಾಳಿ ಬೀಸುತ್ತಿತ್ತು. ಸುತ್ತಲೂ ಹಣತೆಗಳನ್ನು ಹಚ್ಚಿಡಲಾಗಿತ್ತು.

ಆ ಸುಂದರವಾದ ರಾತ್ರಿಯಲ್ಲಿ ಹಣತೆಗಳ ಬೆಳಕಿನಲ್ಲಿ, ಅಮೃತ ಶಿಲೆಯ ಈಜು ಕೊಳದಲ್ಲಿ, ಒಂದು ಮುಳುಗು ಹಾಕಿ, ಜಡೆ ಬಿಚ್ಚಿ ಈಜಲು ತೊಡಗಿದಳು. ಇದ್ದಕ್ಕಿದ್ದಂತೆ ತನ್ನ ಬದುಕಿನಲ್ಲಿ ಆದ ಪಲ್ಲಟಕ್ಕೆ ಅವಳಿಗೆ ಅಚ್ಚರಿಯೋ ಅಚ್ಚರಿ! ಇಡೀ ಮೊಘಲ್ ಸಾಮ್ರಾಜ್ಯಕ್ಕೆ ತಾನು ಸಾಮ್ರಾಜ್ಞಿ! ತನ್ನ ಮಾತಿಗೆ ಪ್ರತಿಯಿಲ್ಲ, ಎಂದಿಗಿಂತ ಭಿನ್ನವಾದ ಆಲೋಚನೆಗಳನ್ನು ಅನುಷ್ಠಾನಕ್ಕೆ ತರಬೇಕು. ತನ್ನ ಆಳ್ವಿಕೆ ಸುವರ್ಣಾಕ್ಷರಗಳಲ್ಲಿ ಬರೆಯುವ ಇತಿಹಾಸವಾಗಬೇಕು. ...ಏನೆಲ್ಲಾ ಕನಸುಗಳನ್ನು, ಆಕಾಂಕ್ಷೆಗಳನ್ನು ಹೊತ್ತು, ತೇಲುತ್ತಿದ್ದಳು. ದೂರದಲ್ಲಿ ಸೇವಕರು ಕೈಕಟ್ಟಿ, ಅವಳ ಕಾವಲಿಗೆ ನಿಂತಿದ್ದರು. ನೀರಿನಲ್ಲಿ ಬೆರೆಸಿದ್ದ ಬಗೆಬಗೆಯ ಅತ್ತರುಗಳ ಸುವಾಸನೆ ಪರಿಸರವನ್ನೆಲ್ಲ ಗಂಧಯುಕ್ತವಾಗಿಸಿತ್ತು. ಆ ಮಾದಕ ಪರಿಸರದಲ್ಲಿ, 'ನೂರ್ ಜಹಾನ್!' ಆಹಾ ನೂರ್ ಜಹಾನ್! ಇನ್ನು ಮುಂದೆ ನೂರ್ ಜಹಾನ್! ನನ್ನ ಪ್ರೀತಿಯ ಬಾದಶಾಹ್, ಎಂಥ ಅದ್ಭುತವಾದ ಬಿರುದನ್ನು ದಯಪಾಲಿಸಿದ್ದಾನೆ. ಜಗತ್ತಿಗೇ ಬೆಳಕಲ್ಲವೇ ನಾನು! ಮೆಹರುನ್ನೀಸಾ ಇನ್ನು ಮುಂದೆ ನೆನಪೂ ಇರದಂತೆ, ಜಗತ್ತಿಗೇ ನೂರ್ ಜಹಾನ್‌ಳೆಂದೇ ಪರಿಚಿತಳಾಗಿರುತ್ತಾಳೆ!

ಈ ಒಂದು ಹೆಸರೇ ಸಾಕು, ಆ ಹೆಸರಿನೊಂದಿಗೆ, ಅಧಿಕಾರ, ಸೌಂದರ್ಯ, ಪ್ರತಿಭೆ, ಬುದ್ಧಿವಂತಿಕೆ, ಸಾಹಸ, ಸಾಮರ್ಥ್ಯ ಆಡಳಿತ ಕೌಶಲ್ಯ, ಗೌರವ ಪ್ರತಿಷ್ಠೆಗಳೆಲ್ಲವೂ ಎದ್ದು ಕಾಣಿಸುತ್ತವೆ.

ನೂರ್ ಜಹಾನ್, ಯಾವುದೋ ಸಮಯದಲ್ಲಿ ಎದ್ದು ಬಂದಿದ್ದಳು. ಸಿಹಿ ನಿದ್ದೆಯಲ್ಲಿ ಮಲಗಿದ್ದವನು, ಎಚ್ಚರಗೊಂಡು ನೋಡಿದಾಗ ಪಕ್ಕದಲ್ಲಿ ನೂರ್ ಜಹಾನ್ ಇರಲಿಲ್ಲ. ಗಾಬರಿಯಿಂದ ಈ ಹೊತ್ತಿನಲ್ಲಿ ಎಲ್ಲಿಗೆ ಹೋಗಿರಬಹುದು ಎಂದು ಎದ್ದು ಮಹಲನ್ನು ಒಂದು ಸುತ್ತು ಸುತ್ತಿ ಬಂದ. ಅವನು ಅಲ್ಲಲ್ಲಿ ಅಡ್ಡಾಡುತ್ತಿದ್ದದ್ದನ್ನು ನೋಡಿದ ಖೋಜಾಗಳು ಮುಂದೆ ಬಂದು.

"ಜಹಾಂಪನಾಹ್, ಈ ರಾತ್ರಿಯಲ್ಲಿ! ಏನಾದರೂ ಬೇಕಿತ್ತೆ? ಹುಕುಂ ನೀಡಿ ಹುಜೂರ್."

"ಬಾದಶಾಹ್ ಬೇಗಂ ಇಲ್ಲಿಗೇನಾದರೂ ಬಂದರೇನು?"

"ಜಹಾಂಪನಾಹ್ ಬಾದಶಾಹ್‌ಬೇಗಂ ಅವರು ಸ್ನಾನ ಮಾಡಲು ಹೋಗಿದ್ದಾರೆ."

ಈ ಹೊತ್ತಿನಲ್ಲಿ ಸ್ನಾನ ಮಾಡುವ ಹುಚ್ಚಾದರೂ ಬಂತೇಕೆ ಎಂದುಕೊಳ್ಳುತ್ತಾ, ಅವಳಿದ್ದ ಕೊಳದ ಬಳಿ ಬಂದ. ನೂರ್ ಜಹಾನ್ ತನ್ಮಯತೆಯಲ್ಲಿ, ಮೇಲ್ಮುಖವಾಗಿ

ಈಜುತ್ತಿದ್ದಾಳೆ. ಜಹಾಂಗೀರ್ ಅವಳಿದ್ದಲ್ಲಿಗೆ ಹೋಗಿ ನಿಂತ. ತಾನು ಬಂದದ್ದನ್ನು ಗಮನಿಸದಂತೆ ಕಾಣಿಸಿತು.

"ನೂರ್!" ಎಂದು ಕರೆದ.

ಥಟ್ಟನೆ ಆ ಕರೆಯಲ್ಲಿನ ಪ್ರೀತಿ, ಯಾರದೆಂದು ಗುರುತಿಸಿದಳು.

"ಓಹ್! ಜಹಾಂಪನಾಹ್!.....ಜಹಾಂಪನಾಹ್ ತಾವು ಇಲ್ಲೇಕೆ ಬಂದಿರಿ?"

"ನೂರ್ ನಿನ್ನ ಹುಡುಗಾಟ ಸಾಕು ಮಾಡು. ಹೊತ್ತಲ್ಲದ ಹೊತ್ತಲ್ಲಿ ಹೀಗೆ ಒಬ್ಬಳೇ ಬಂದು, ಈ ತಣ್ಣನೆಯ ನೀರಿನಲ್ಲಿ ಆಟವಾಡುವುದನ್ನು ನೋಡಿದರೆ, ಯಾರಾದರೂ ಹುಚ್ಚರೆನ್ನುತ್ತಾರೆ."

"ಜಹಾಂಪನಾಹ್ ಎದೆ ತುಂಬ ಬೆಚ್ಚನೆಯ ಭಾವಗಳು ಇಡಿಕಿರಿದು ತುಂಬಿರುವಾಗ, ಚಳಿಯೆಲ್ಲಿ? ಶೀತವೆಲ್ಲಿ"

"ಕವಿತೆಯ ಮಾತುಗಳನ್ನು ಬಿಟ್ಟು ಹೊರಗೆ ಬಾ"

"ಜಹಾಂಪನಾಹ್. ನಾನು ಇದರಿಂದ ಹೊರಬರುವುದಕ್ಕೆ ಬದಲಾಗಿ ನೀವೂ ನನ್ನ ಜೊತೆಗೆ, ನೀರಿಗಿಳಿದು ಬೆಚ್ಚನೆಯ ಸ್ಪರ್ಶದ ಆನಂದವನ್ನು ಅನುಭವಿಸಿ."

ಅವಳ ಮಾತುಗಳನ್ನು ನಿರಾಕರಿಸುವ ಶಕ್ತಿಯನ್ನೇ ಕಳೆದುಕೊಂಡಿದ್ದ. ಕೊಳದ ಅಂಚಿನಲ್ಲಿ ಬಂದು ಕುಳಿತು, ಕಾಲುಗಳನ್ನು ನೀರಿನಲ್ಲಿ ಇಳಿಬಿಟ್ಟ. ನೂರ್ ಜಹಾನ್ ಮುಗುಳು ನಗೆಯೊಂದಿಗೆ ಈಜುತ್ತಾ ಬಂದು ಅವನನ್ನು ನೀರೊಳಕ್ಕೆ ಎಳೆದುಕೊಂಡಳು.

ಮರುದಿನ ಎಂದಿನಂತೆ ದರಬಾರನ್ನು ಪ್ರವೇಶಿಸಿದ. ಸಾರ್ವಜನಿಕರು ಅಧಿಕಾರಿಗಳು ಸಂದರ್ಶನಕ್ಕಾಗಿ, ಸಲಹೆ, ಸಮಸ್ಯೆಗಳ ಪರಿಶೀಲನೆಗಾಗಿ ಪ್ರತಿ ದಿನದಂತೆ ಸೇರಿದ್ದರು. ಆಡಳಿತ ಸಂಬಂಧವಾದ ಚರ್ಚೆಗಳು, ಸಾಮ್ರಾಜ್ಯದಲ್ಲಿ ತೋರಿರಬಹುದಾದ ಸಮಸ್ಯೆಗಳು, ಪರಿಹಾರಗಳು ಎಲ್ಲವೂ ಚರ್ಚೆಯ ಭಾಗವಾಗಿತ್ತು. ನೂರ್ ಜಹಾನ್ ಹೆಂಗಸರಿಗಾಗಿಯೇ ಇದ್ದ ಜಾಲಂದ್ರದ ಗೋಡೆಯಾಚೆಗಿನ ಬಾಲ್ಕನಿಯಲ್ಲಿ ಕುಳಿತು ಜಹಾಂಗೀರನ ಕಾರ್ಯ ವೈಖರಿಯನ್ನು ಗಮನಿಸುತ್ತಿದ್ದಳು. ಅವಳಿಗೂ ಗಂಡನ ಬದಿಯಲ್ಲಿ ಕುಳಿತು ಆಡಳಿತ ವಿಷಯಗಳಲ್ಲಿ ಪಾಲ್ಗೊಳ್ಳಬೇಕು, ತನ್ನದೂ ವಿಚಾರಗಳನ್ನು ಹಂಚಿಕೊಳ್ಳಬೇಕು ಎಂಬ ತುಡಿತವಿದ್ದರೂ, ಮುಸ್ಲಿಂ ಸಮಾಜದಲ್ಲಿ, ಜನಾನಾದಲ್ಲಿ ಅವಕಾಶವಿರಲಿಲ್ಲ. ದನಿಯೆತ್ತುವ, ಅಭಿಪ್ರಾಯ ವ್ಯಕ್ತಪಡಿಸುವ ಅಧಿಕಾರ ವಂಚಿತರಾಗಿದ್ದರು. ಇನ್ನು ಮುಂದೆ ಅಧಿಕಾರ, ಅವಕಾಶ ದೊರೆತಾಗ, ಮುಸ್ಲಿಂ ಹೆಣ್ಣು ಮಕ್ಕಳಿಗೆ ಬುರ್ಖಾದ ಹೊರಗಿನ ಜಗತ್ತನ್ನು ಪರಿಚಯಿಸಬೇಕು ಎಂದುಕೊಂಡಳು.

ಆಗಲೇ ತನ್ನನ್ನು ಚಕ್ರವರ್ತಿನಿಯಾಗಿ, ಸಾಮ್ರಾಜ್ಯದ ಶಾಸಕಿಯಾಗಿ ಕಲ್ಪಿಸಿಕೊಂಡು, ತರಬೇಕಾದ ಬದಲಾವಣೆಗಳನ್ನು, ಸುಧಾರಣೆಗಳನ್ನು ಅವುಗಳ ರೂಪರೇಷೆಗಳನ್ನು ಮೂಡಿಸಿಕೊಳ್ಳಲು ಯತ್ನಿಸಿದಳು.

ಎಳೆಯ ಪ್ರಾಯದಿಂದಲೂ ಗಂಡು ಬದುಕನ್ನು ಬಯಸಿದಳೇ ಹೊರತಾಗಿ, ಜನಾನಾದಲ್ಲಿ ಯಾವುದೋ ಮೂಲೆಯೊಂದರಲ್ಲಿ ಹೆಂಡತಿಯಾಗಿಯೋ, ಉಪಪತ್ನಿಯಾಗಿಯೋ, ಇನ್ನೇನೋ ಆಗಿ ಬದುಕುತ್ತಾ ಬಿದ್ದಿರಲು ಯೋಚಿಸಿದವಳಲ್ಲ. ಇದೆಲ್ಲವನ್ನೂ ಪಡೆಯಲು ಸಾಧ್ಯವಾಗುವುದು ಜಹಾಂಗೀರನು ತನ್ನಿಂದ ಬಯಸಿದಷ್ಟು

ಪ್ರೀತಿಗಿಂತಲೂ ನೂರುಪಟ್ಟು ಪ್ರೀತಿಯನ್ನು ಕೊಟ್ಟು ಅವನ ಹಸಿವನ್ನು ತೀರಿಸಿದಾಗ. ನನ್ನ ಪ್ರೀತಿಯ ಕಡಲಲ್ಲಿ ಒಮ್ಮೆ ಮುಳುಗಿ ಹೋದರೆ ಸಾಕು. ಅವನು ಅದರಿಂದ ಹೊರಬರಲು ಇಚ್ಛಿಸುವುದೇ ಇಲ್ಲ. ಅವನಿಗೆ ಬೇಕಾದ್ದನ್ನು ಕೊಟ್ಟು, ನನಗೆ ಬೇಕಾದ್ದನ್ನು ಪಡೆದುಕೊಳ್ಳುತ್ತೇನೆ. ಇದು ನನ್ನ ದುರಾಸೆ ಎನಿಸಬಹುದು. ಅದಕ್ಕಾಗಿ ನಾನು ಅವನನ್ನು ಪ್ರೀತಿಸುತ್ತಿಲ್ಲ. ನನ್ನ ಪ್ರೀತಿ, ಪ್ರೇಮಗಳು, ಯಶಸ್ಸು, ಕೀರ್ತಿಗಳ ಕಾಮನೆ ಪ್ರಾಮಾಣಿಕವಾದದ್ದು. ಅವನೂ ಸಾಧಾರಣ ವ್ಯಕ್ತಿಯಲ್ಲ. ನೀತಿ, ನ್ಯಾಯ, ಧೈರ್ಯ, ಸಾಹಸಗಳ ಪ್ರತೀಕ. ಒಳ್ಳೆ ಬೇಟೆಗಾರ, ಹಾಗೆಯೇ ಉದಾರಿ, ಕರುಣಾಳು, ಸಾಮ್ರಾಜ್ಯದ ಸುಭಿಕ್ಷತೆ, ಅಭಿವೃದ್ಧಿಗಳನ್ನು ಬಯಸುವವನು, ಕಲಾಭಿರುಚಿ ಕಾವ್ಯಾಭಿರುಚಿಯುಳ್ಳವನು. ನಮ್ಮಿಬ್ಬರ ಸ್ವಭಾವ, ಸಾಮರ್ಥ್ಯಗಳು ಸಮಾನವೆಂದು ಬಲ್ಲ. ನನ್ನ ಕೈಗೆ ಬರುವ ಯಾವುದನ್ನೂ ಸಮರ್ಥವಾಗಿ ನಿರ್ವಹಿಸಬಲ್ಲೆ ಎನ್ನುವ ನಂಬಿಕೆ ಇರುವುದರಿಂದ, ನನ್ನ ಪ್ರೀತಿಯ ಬಿಗಿ ಬಂಧದಲ್ಲಿ ಸ್ವರ್ಗ ಸುಖವನ್ನು ಕಾಣುತ್ತಿರುವುದರಿಂದ, ಖಂಡಿತವಾಗಿಯೂ ನಾ ಬೇಡಿದ್ದನ್ನು ಬಯಸಿದ್ದನ್ನು, ಇಲ್ಲವೆಂದು ಹೇಳದೆ, ನನ್ನ ಮುಂದೆ ತಂದು ಸುರಿಯುತ್ತಾನೆ.

ಮದುವೆಯ ದಿನದಂದು ತನಗೆ ಕೊಟ್ಟ ರಾಶಿ ರಾಶಿ ಉಡುಗೊರೆಗಳೇ ಸಾಕ್ಷಿ. ಬೇಡದೆಯೇ ಬಂದ ಬೆಟ್ಟದಷ್ಟು ಎತ್ತರದ ಉಡುಗೊರೆಗಳು ನೆನಪಾದವು. ಜನಾನಾದ ಕೋಣೆಗಳು ಉಡುಗೊರೆಗಳಿಂದ ತುಂಬಿದ್ದವು. ಮೆಹರುನ್ನೀಸಾಳಿಂದ ದೊರೆತ ಒಪ್ಪಿಗೆಯೇ ಜಗತ್ತನ್ನೇ ಗೆದ್ದ ಸಂತೋಷವನ್ನು ತಂದಿತ್ತು. ಸುಮಾರು 5 ಲಕ್ಷ ಮೌಲ್ಯದ ಚಿನ್ನದ ನಾಣ್ಯಗಳು, ಮಸ್ಲಿನ್, ರೇಶಿಮೆ, ವೆಲ್‌ವೆಟ್‌ಗಳಿಂದ ಅತ್ಯಂತ ಸುಂದರವಾಗಿ ಕಸೂತಿ ಮಾಡಿದ ಮತ್ತು ಅತ್ಯದ್ಭುತವಾಗಿ ವಿನ್ಯಾಸ ಮಾಡಿ ಸಿದ್ಧಗೊಳಿಸಿದ 500 ಉಡುಪುಗಳು. ರಾಶಿರಾಶಿಯಾಗಿ ಅಮೂಲ್ಯವಾದ ಮುತ್ತುಗಳು, ರತ್ನಗಳು, ವಜ್ರಗಳಿಂದ, ಹರಳುಗಳಿಂದ ಹುದುಗಿಸಿ ತಯಾರಿಸಿದ ಉಂಗುರಗಳು, ಕತ್ತಿನ ಹಾರಗಳು, ಕೈ ಬಳೆಗಳು, ತೋಳಬಂದಿಗಳು, ವಿವಿಧ ಬಗೆಯ ಸುಗಂಧ ದ್ರವ್ಯಗಳು, ಚಿನ್ನ ಬೆಳ್ಳಿ ಎಳೆಗಳಿಂದ ಕಸೂತಿ ಬಿಡಿಸಿದ ಪಾದರಕ್ಷೆಗಳು, ಇಷ್ಟೇ ಅಲ್ಲದೆ ಡಜನ್‌ಗಟ್ಟಲೆ ಪಳಗಿಸಿದ ಆನೆಗಳು, ಅರಬಿ ದೇಶದ ಕುದುರೆಗಳು, ಅತ್ಯಂತ ಸುಂದರವಾಗಿ, ಅಲಂಕೃತಗೊಂಡ ಪಲ್ಲಕ್ಕಿಗಳು ಮತ್ತು ರಾಜಾದೇಶದೊಂದಿಗೆ ಅತ್ಯಂತ ಆಯಕಟ್ಟಿನ ಜಾಗಗಳಲ್ಲಿದ್ದ ರಾಮಪುರ, ಕನೌಜ್ ಮತ್ತು ಖಾಂದಾಹಾರ ಪ್ರದೇಶಗಳನ್ನು ಜಾಗೀರಾಗಿ ನೀಡಿದ್ದ.

ಮದುವೆಯ ಸಂದರ್ಭದ ವೈಭವವಂತೂ ವರ್ಣನೆಗೆ ಮೀರಿದ್ದು. ಸಾಮ್ರಾಜ್ಯದ ಮೂಲೆ ಮೂಲೆಗಳಿಂದ ಅತ್ಯಂತ ಹೆಸರಾದ, ಬಾಜಾ ಭಜಂತ್ರಿ, ಸಂಗೀತ ತಂಡಗಳನ್ನು, ನಾಚವಾಲಿಗಳನ್ನು ಕರೆಸಿದ್ದ. ಭೋಜನ ಕೂಟದಲ್ಲಿ, ವಿವಿಧ ಪ್ರಾದೇಶಿಕ ಶೈಲಿಗಳಲ್ಲಿ, ಭೋಜನ ಪದಾರ್ಥಗಳು, ಭಕ್ಷ್ಯಗಳು ಇದ್ದವು. ಮುಖ್ಯವಾಗಿ ಪರ್ಷಿಯನ್ ಮತ್ತು ಮೊಘಲಾಯಿ ಶೈಲಿಯ ಪದಾರ್ಥಗಳೇ ಹೆಚ್ಚಾಗಿ ಇದ್ದವು.

ಭೌತಿಕವಾದ ಸಿರಿ ಸಂಪತ್ತುಗಳು ಹೇರಳವಾಗಿದ್ದವಾದರೂ, ಮೆಹರುನ್ನೀಸಾ ಜಯಿಸಿದ್ದು ಅಧಿಕಾರ, ಸಿಂಹಾಸನ, ಸಾಮ್ರಾಜ್ಯ. ಒಟ್ಟಿನಲ್ಲಿ ಅವಳ ಅದೃಷ್ಟ, ಚಾಣಾಕ್ಷತೆ, ಜಾಣ್ಮೆ ಮುಂದಾಲೋಚನೆಗಳು ತಡವಾಗಿಯಾದರೂ ಪ್ರಾಪ್ತವಾಗಿಸಿದವು. ಈಗ ಪ್ರೀತಿ, ಮೋಹಗಳು, ಜಹಾಂಗೀರನನ್ನು ಅವನ ಅರಿವಿಗೇ ಬಾರದಂತೆ, ಕೈಗೊಂಬೆಯಾಗಿ

ಸುತ್ತಿದ್ದವು. ಒಂದೊಂದು ರಾತ್ರಿಯ ಸುಖಕ್ಕೆ ಬೇಕೆಂದರೆ ಒಂದೊಂದು ಸಾಮ್ರಾಜ್ಯವನ್ನೇ ಅವಳ ಕಾಲಡಿಗೆ ಅರ್ಪಿಸಲು ಸಿದ್ಧನಿದ್ದ.

ಅವಳ ಪ್ರೀತಿಯ ಮೋಹದಲ್ಲಿ ಎಷ್ಟು ಹುಚ್ಚನಾಗಿದ್ದನೆಂದರೆ, ಇಡೀ ಮೊಘಲ್ ಇತಿಹಾಸದಲ್ಲಿಯೇ ಯಾರಿಗೂ ಊಹಿಸಲಾಗದ ಅಧಿಕಾರವನ್ನು, ಪರಾಕಾಷ್ಠೆಯ ನೆಲೆಯಲ್ಲಿ ಈಗಾಗಲೇ ಕೊಟ್ಟುಬಿಟ್ಟಿದ್ದ. ಸಾಮ್ರಾಜ್ಯದ ಹಕ್ಕು ಅಧಿಕಾರವನ್ನು ಪ್ರತಿನಿಧಿಸುವ ರಾಜಮುದ್ರೆಯನ್ನು ಅವಳಿಗೆ ಒಪ್ಪಿಸಿಬಿಟ್ಟ. ಹೆಂಗಸರಿಗೆ ಯಾರಿಗೂ ಕೊಡಲಾಗುತ್ತಿರದ ಜಾಗೀರುಗಳನ್ನು(ಭೂ ಪ್ರದೇಶಗಳನ್ನು)ಹಿಂದು ಮುಂದು ನೋಡದೆಯೇ ಬಹುಮಾನಿಸಿಬಿಟ್ಟಿದ್ದ. ಕಂಡದ್ದನ್ನೆಲ್ಲಾ ಅವಳ ವಶಕ್ಕೆ ಒಪ್ಪಿಸುತ್ತಾ ಹೋದ. ಅಂಥಾದ್ದರಲ್ಲಿ, ಬಹಿರಂಗವಾಗಿ ನಡೆಯುವ ಝುರೋಕಾದ ಮೇಲೆ ಅವಳ ಬಯಕೆಯಾಯಿತು. ಯಾರೂ ಇಲ್ಲದ ಸಮಯ ನೋಡಿ, ಅವನ ಪ್ರೀತಿಯ ಮದಿರೆಯ ಬಟ್ಟಲನ್ನು ಅವನ ಕೈಗೆ ಕೊಟ್ಟು. ಅವನೆದೆಗೆ ಒರಗಿ. "ಜಹಾಂಪನಾಹ್, ನಿಜವಾಗಿಯೂ ನನ್ನನ್ನು ಮದುವೆಯಾಗಿ ಸಂತೋಷದಿಂದ ಇರುವಿರಾ?"

"ಇದೇನು ಮೆಹರುನ್ನೀಸಾ! ಈ ಪ್ರಶ್ನೆ ನಿನಗೆ ಯಾಕೆ ಬಂತು ಎಂಬುದು ನನಗೆ ಪ್ರಶ್ನೆಯಾಗಿದೆ."

"ಹಾಗಲ್ಲ ಜಹಾಂಪನಾಹ್, ಭಾವನೆಗಳ ರಭಸದಲ್ಲಿ ಒಮ್ಮೊಮ್ಮೆ ನಾವು ಆತುರದ ನಿರ್ಣಯಗಳಿಗೆ ಬಂದು ಬಿಡುತ್ತೇವೆ. ನಂತರವೇ ಆಲೋಚಿಸುವಂತೆ ಆಗುತ್ತದೆ. ನಾನು ನಿರೀಕ್ಷಿಸಿದ್ದಕ್ಕಿಂತ ಹೆಚ್ಚಾಗಿ ನೀವು ನನಗೆ ಕೊಟ್ಟಿರಿ. ನಾನೇನೂ ರಾಜಕುಮಾರಿಯಲ್ಲ, ರಾಜ್ಯಗಳನ್ನು ಉಡುಗೊರೆಯಾಗಿ ಕೊಡಲು. ನಿಮ್ಮ ಅಧೀನ ಅಧಿಕಾರಿಗಳು ಅಷ್ಟೇ!"

"ಹಾಗೆಲ್ಲ ಮಾತನಾಡಬೇಡ. ನಿನ್ನ ತಂದೆ, ಅಣ್ಣ, ನನ್ನ ಬೆನ್ನಿಗೆ ಇದ್ದಾರೆ. ಆಡಳಿತ ಸುಭದ್ರತೆಗಳನ್ನು ಅವರ ಮಾರ್ಗದರ್ಶನದಲ್ಲಿ ಇಡಬಲ್ಲೆ ಎನ್ನುವ ಭರವಸೆ ಇದೆ."

"ಜಹಾಂಪನಾಹ್, ನಾನೂ ಕೂಡಾ ನಿಮ್ಮ ಆಡಳಿತದಲ್ಲಿ ನನಗೆ ಸಾಧ್ಯವಾದ ರೀತಿಯಲ್ಲಿ ಸಹಾಯಮಾಡಬೇಕೆಂದಿದ್ದೇನೆ. ಇಷ್ಟು ವರ್ಷಗಳ ಕಾಲ ಬಹಳ ಸಮರ್ಥವಾಗಿ, ನ್ಯಾಯ ನೀತಿಯುತವಾಗಿ ಆಳಿದ್ದೀರಿ. ಇನ್ನಾದರೂ ನಿಮ್ಮ ಹೊರೆಯನ್ನು ಹಂಚಿಕೊಳ್ಳೋಣವೆಂದು ನನ್ನ ಆಸೆ. ಆದರೆ ಇದನ್ನು ನಿಮ್ಮ ಮಂತ್ರಿಗಳು, ಧರ್ಮ ಗುರುಗಳು, ನಿಮ್ಮ ಆಪ್ತರು, ಒಂದು ಹೆಣ್ಣಿನ ಪ್ರವೇಶವನ್ನು ಬಹುಶಃ ಸಹಿಸುವುದಿಲ್ಲ ಎನಿಸುತ್ತದೆ."

"ಅವರು ಸಹಿಸುವುದೇನು ಬಂತು ನಾನು ಹೇಳುತ್ತಿದ್ದೇನೆ. ನಿನ್ನ ಕೈಗೆ ರಾಜಮುದ್ರೆಯನ್ನೇ ನೀಡಿರುವೆನಲ್ಲ. ನೀನು ಏನೇ ಮಾಡಿದರೂ ನಿನ್ನನ್ನು ಪ್ರಶ್ನಿಸುವುದಕ್ಕೆ ನನ್ನ ಹೊರತು ಯಾರಿಗೂ ಧೈರ್ಯವಿಲ್ಲ"

"ಜಹಾಂಪನಾಹ್, ಒಂದಷ್ಟು ದಿವಸ, ನಿಮ್ಮ ರಾಜಕಾರ್ಯಗಳಲ್ಲಿ ನೀವು ನಡೆಸುವ ವಿಚಾರಣಾ ಕಾರ್ಯಕ್ರಮ (ಝುರೋಕಾ)ದಲ್ಲಿ ಭಾಗವಹಿಸಬೇಕೆಂದಿದ್ದೇನೆ."

ಜಹಾಂಗೀರನಿಗೆ ಮೆಹರುನ್ನೀಸಾಳ ಆಸಕ್ತಿಯ ಬಗ್ಗೆ ಹೆಮ್ಮೆ ಎನಿಸಿತು. ತಂದೆಯಾದ ಅಕ್ಬರನಿಗೆ ಹೊಳೆಯದಿದ್ದ ಕೆಲವು ಸಂಪ್ರದಾಯಗಳನ್ನು ರೂಢಿಗಳನ್ನು ಜಾರಿಗೆ ತಂದ. ಅಧಿಕಾರವಹಿಸಿಕೊಳ್ಳುತ್ತಿದ್ದಂತೆಯೇ ಜನರ ನಡೆನುಡಿಯನ್ನು ನಿಯಂತ್ರಿಸಲು ಹನ್ನೆರಡು

ನಿಯಮಗಳನ್ನು ಪ್ರಜೆಗಳು ಪಾಲಿಸಬೇಕೆಂದು ಶಾಸನ ಹೊರಡಿಸಿದ. ಕೆಲವು ನಿಯಮಗಳನ್ನು ತಾನೇ ಮೀರುತ್ತಿದ್ದುದೂ ಉಂಟು! ಆದರೆ ಪ್ರಜೆಗಳು ಮಾತ್ರ ನಿಷ್ಠುರ ನಿಯಮ ಪಾಲನೆಯನ್ನು ಮಾಡಲೇಬೇಕಿತ್ತು. ಅಂತಹವುಗಳಲ್ಲಿ ಝುರೋಕ ಪದ್ಧತಿಯನ್ನು ರೂಢಿಗೆ ತಂದ. ಪ್ರತಿಯೊಬ್ಬ ಪ್ರಜೆಗೂ ನ್ಯಾಯಯುತ ಪರಿಹಾರ ದೊರೆಯಬೇಕೆಂಬುದು ಅವನ ಆಶಯವಾಗಿತ್ತು. ಯಾರಿಗೆ ಏನೇ ಅನ್ಯಾಯವಾಗಿದ್ದರೂ, ಅದನ್ನು ದೊರೆಯ ತನಕ ತಲುಪಿಸಲು ನ್ಯಾಯದ ಗಂಟೆಯನ್ನು ಕಟ್ಟಿಸಿದ್ದ.

ಆಗ್ರಾ ಕೋಟೆಯ ಹೊರಭಾಗದಲ್ಲಿ ಸ್ವಲ್ಪ ಎತ್ತರದಲ್ಲಿ ವಿಶೇಷವಾದ ರೀತಿಯ ಒಂದು ಬಾಲ್ಕನಿ ಇರುತ್ತಿತ್ತು. ಅದರಲ್ಲಿ ಜಹಾಂಗೀರ ಕುಳಿತು, ಸಾರ್ವಜನಿಕರಿಗೆ ಸಂದರ್ಶನ ನೀಡುತ್ತಿದ್ದ, ದಿನದಲ್ಲಿ ಮೂರು ಬಾರಿ ಈ ರೀತಿಯ ಸಂದರ್ಶನ ನೀಡುತ್ತಿದ್ದ. ಅದರಲ್ಲಿ ಪ್ರಜೆಗಳು ತಮ್ಮ ಅಹವಾಲುಗಳನ್ನು ತಮ್ಮ ದೊರೆ ಜಹಾಂಗೀರನ ಮುಂದೆ ಪ್ರಸ್ತುತ ಪಡಿಸುತ್ತಿದ್ದರು. ದೂರುಗಳನ್ನು ಸಲ್ಲಿಸುತ್ತಿದ್ದರು.

ಮೆಹರುನ್ನೀಸಾ ರಾಜಾಂತಃಪುರಕ್ಕೆ (ಜನಾನಾಗೆ) ಬಂದಾಗಿನಿಂದ, ಝುರೋಕಾ ಕಾರ್ಯಕ್ರಮವನ್ನು, ಸೇವಕರ ಜೊತೆ ನಿಂತು ಹೆಂಗಸರಿಗೆಂದೇ ಇದ್ದ ಬಾಲ್ಕನಿಯ ಜಾಲಂಧ್ರಗಳಿಂದ ಗಮನಿಸುತ್ತಿದ್ದಳು. ಆದರೆ ಅವಳಿಗೆ ಇದಿಷ್ಟರಿಂದಲೇ ಸಮಾಧಾನವಾಗಿರಲಿಲ್ಲ. ತಾನೇ ನೇರವಾಗಿ ಜಹಾಂಗೀರನ ಜೊತೆಯಲ್ಲಿಯೇ ಕುಳಿತು. ಮುಖಾಮುಖಿಯಾಗಿ ಅನುಭವ ಪಡೆಯಬೇಕೆಂದೇ ಜಹಾಂಗೀರನ ಮನವೊಲಿಸಲು ಪ್ರಯತ್ನಿಸುತ್ತಿದ್ದಳು. ಜಹಾಂಗೀರ್ ಎತ್ತರದಲ್ಲಿ ಕುಳಿತುಕೊಳ್ಳುತ್ತಿದ್ದ. ಅವನಿಗಿಂತ ಕೆಳ ಸ್ತರದಲ್ಲಿ ಮಂತ್ರಿಗಳು ಮತ್ತು ಸಾಮಾನ್ಯರು ಕುಳಿತುಕೊಳ್ಳುತ್ತಿದ್ದರು.

ಮೆಹರುನ್ನೀಸಾಳ ಈ ಕೋರಿಕೆಗೆ ಥಟ್ಟನೆ ತಲೆದೂಗುವುದು ಕಷ್ಟವೆನಿಸಿತು.

"ಮೆಹರುನ್ನೀಸಾ ನೀನು ಕೇಳುತ್ತಿರುವ ಸವಲತ್ತು, ಇಲ್ಲಿಯವರೆಗೆ ನನ್ನ ಜನಾನಾ ಹೆಂಗಸರು ಯಾರೊಬ್ಬರೂ ಕೇಳುವ ಸಾಹಸವನ್ನು ಮಾಡಲಿಲ್ಲ. ಅವರ ಬದುಕೆಲ್ಲಾ ಜನಾನಾದ ಬಾಗಿಲಾಚೆಗೆ ವಿಸ್ತರಿಸಲಿಲ್ಲ. ಅವರ ಬೇಡಿಕೆಗಳು ಏನೇ ಇದ್ದರೂ ನೇರವಾಗಿ ಕೇಳುವ ಸಾಹಸ ಮಾಡಿರಲಿಲ್ಲ."

"ಜಹಾಂಪನಾಹ್ ನಾನು ನಿಮ್ಮ ಜನಾನಾದ ಹೆಂಗಸರ ಹಾಗಲ್ಲ–ಅವರಿಗೆ ಆ ಬದುಕಿನಲ್ಲಿಯೇ ಸಂತೃಪ್ತಿ ಇತ್ತು. ಹೊಟ್ಟೆಪಾಡಿಗೆ, ಮನರಂಜನೆಗೆ ಎಲ್ಲಕ್ಕೂ ಅವಕಾಶವಿತ್ತು. ಅವರಿಗೆ ಅದನ್ನು ಮೀರಿದ ಬಯಕೆಗಳು ಇದ್ದಿರಲಾರವು. ಆದರೆ ನಾನು ಆ ಜಾತಿಗೆ ಸೇರಿದ ಹೆಣ್ಣಲ್ಲ. ಈಗಂತೂ, ನಿಮ್ಮನ್ನು ಮದುವೆಯಾದಮೇಲೆ, ಮತ್ತೂ ಬೇರೆಯೇ ಹೆಣ್ಣು. ಜಗತ್ತನ್ನೇ ಸಾಧ್ಯವಾದರೆ ಆಳಬೇಕೆಂಬ ಕನಸುಗಳನ್ನು, ಮಹತ್ವಾಕಾಂಕ್ಷೆಗಳನ್ನು ಹೊತ್ತು ಬಂದಿರುವವಳು."

"ಮೆಹರುನ್ನೀಸಾ ನಿನಗೆ ಇಂಥದ್ದರ ಉಸಾಬರಿ ಯಾಕೆ? ನನ್ನ ಬಾಹುಬಂಧನದಲ್ಲಿ ನಿನ್ನ ಆಕಾಂಕ್ಷೆಗಳನ್ನು ಅರಳಿಸಿಕೋ, ನನ್ನೆದೆಯ ತಂಪಿನಲ್ಲಿ ಸುಖ ನಿದ್ರೆಮಾಡು."

"ಜಹಾಂಪನಾಹ್, ಅಲ್ಲಾಹ್‌ನ ನಿರ್ದೇಶನದಂತೆ ನಾನು ನಿಮ್ಮ ಕೈ ಹಿಡಿದಿದ್ದೇನೆ. ನಮ್ಮ ಸಮಾಜದ ಜನಾನಾದ ಹೆಣ್ಣುಮಕ್ಕಳ ದಯಾರ್ದ್ರ ಸ್ಥಿತಿಯನ್ನು ಕಂಡಿದ್ದೇನೆ. ಅವರಲ್ಲಿ ಸುಧಾರಣೆ, ಜ್ಞಾನೋದಯವಾಗಿ, ಪುರುಷರಿಗೆ ಸಮಾನವಾದ, ಪ್ರತಿಭೆ,

ಸಾಮರ್ಥ್ಯಗಳು ಬೆಳಕಿಗೆ ಬರಬೇಕಾದರೆ, ಬರಿ ಮಾತಿನಿಂದ ಸಾಧ್ಯವಿಲ್ಲ. ಅಧಿಕೃತವಾದ ಶಾಸನಾದೇಶವಿರಬೇಕು. ಅವರ ಮುಂದೆ ಒಂದು ಸ್ತ್ರೀ ಮಾದರಿಯೊಂದು ಸೃಷ್ಟಿಯಾಗಬೇಕು. ಎಷ್ಟು ಜನ ರಾಣಿಯರು ತಮ್ಮ ರಾಜ್ಯಗಳನ್ನು ಆಳಲಿಲ್ಲ! ನಮ್ಮ ತೈಮೂರಿಡ್ ವಂಶ ಪರಂಪರೆಯಲ್ಲಿಯೇ ಇರಲಿಲ್ಲವೇ, ನೇರವಾಗಿ ಸಾರ್ವಜನಿಕವಾಗಿ ಹೊರಗೆ ಕಾಣಿಸಿಕೊಳ್ಳದಿದ್ದರೂ ತಮ್ಮ ಗಂಡಂದಿರಿಗೆ ಜನಾನಾದೊಳಗಿದ್ದೇ, ರಾಜಕೀಯ ವಿಚಾರಗಳ ಬಗ್ಗೆ ಚರ್ಚಿಸುತ್ತಿದ್ದರು. ಸಲಹೆ, ಸೂಚನೆ, ಮಂತ್ರಾಲೋಚನೆಯನ್ನು ಬಾದಶಾಹರು ಇವರುಗಳಿಂದ ಪಡೆಯುತ್ತಿದ್ದರು, ಒಳಜಗಳಗಳಿದ್ದಲ್ಲಿ ಪರಿಹರಿಸುತ್ತಿದ್ದರು. ಹಲವು ಬಗೆಯ ಜವಾಬ್ದಾರಿಗಳನ್ನು ನಿರ್ವಹಿಸುತ್ತಿದ್ದರು. ಹಮಿದಾಬೇಗಂ, ಗುಲ್‌ಬದನ್ ಬಾನು ಮೊದಲಾದವರೇ ನಿಮ್ಮ ಮುಂದೆ ಸಾಕ್ಷಿಯಾಗಿದ್ದಾರೆ ಜಹಾಂಪನಾಹ್ ಒಮ್ಮೆ ಒಂದು ಅವಕಾಶ ಕೊಡಿ. ಝರೋಕ ಹೇಗೆ ನಡೆಯುತ್ತದೆ ಎನ್ನುವ ಕುತೂಹಲ ಅಷ್ಟೇ!"

ಜಹಾಂಗೀರನಿಗೆ ಏನು ಹೇಳಬೇಕೋ ತಿಳಿಯಲಿಲ್ಲ. ಅವಳು ಮೊಘಲ್ ಸಾಮ್ರಾಜ್ಯ ಆಳುವುದಕ್ಕೆಂದೇ ಹುಟ್ಟಿದ್ದಾಳೆ ಎನ್ನುವ ವಿಷಯ ಪ್ರಜೆಗಳಿಗೆ ತಿಳಿದಿಲ್ಲ. ಆದರೆ ಅವಳ ಸಾಮರ್ಥ್ಯಗಳು, ಮೇಧಾಶಕ್ತಿ, ಬಿಲ್ವಿದ್ಯೆ, ಬೇಟೆಯಾಡುವ ವಿಷಯ ಎಲ್ಲರಿಗೂ ತಿಳಿದಿದೆ. ಜಹಾಂಗೀರ್ ಅವಳ ಕೋರಿಕೆಗೆ ಒಪ್ಪಿಗೆಯನ್ನು ಕೊಟ್ಟ. ಬೆಳಗಾಗುತ್ತಿದ್ದಂತೆ ರಾಜದಂಪತಿಗಳು 'ಝರೋಕಾ'ಗೆಂದು ಸಿದ್ಧವಾಗಿದ್ದರು. ಈಗ ಅವರಿಬ್ಬರ ಆಪ್ತ ಸೇವಕ ಹೋಷಿಯಾರ್, ಅವರಿಗೆ ಗೌರವ ಸಲ್ಲಿಸಿ ಝರೋಕಾ ಬಾಲ್ಕನಿಗೆ ದಾರಿತೋರಿಸಿದ. ಅವರು ಬರುತ್ತಿದ್ದಾರೆ ಎನ್ನುವ ಸೂಚನೆಗಾಗಿ, ಕಾದಿದ್ದ ವಾದ್ಯವೃಂದ ಕಡೆ ಕೈ ಬೀಸಿದ. ಒಮ್ಮೆಲೇ ವಾದ್ಯವೃಂದ ಆರಂಭವಾಯಿತು. ಬಾಲ್ಕನಿಗೆ ಬರುತ್ತಿದ್ದಂತೆ ಎಲ್ಲರೂ ಗೌರವ ಮರ್ಯಾದೆಯೊಂದಿಗೆ ಎದ್ದು ನಿಂತರು. ಎಲ್ಲರ ಗೌರವಾಭಿನಂದನೆ ಸ್ವೀಕರಿಸಿದ ಮೇಲೆ, ಬಾಲ್ಕನಿಯಲ್ಲಿ ಮೀಸಲಿದ್ದ ಸಿಂಹಾಸನದ ಮೇಲೆ ಆಸೀನನಾದ. ಜೊತೆಗೇ ಇದ್ದ ನೂರ್ ಜಹಾನಳನ್ನು ಸಂಕೇತಿಸಿ ಕರೆದು ತನ್ನ ಪಕ್ಕದಲ್ಲಿ ಕುಳಿತುಕೊಳ್ಳಲು ಸೂಚಿಸಿದ. ನಿರೂಪಕನಾಗಿ ಕೆಲಸ ನಿರ್ವಹಿಸಲು ನಿಂತಿದ್ದ ಮೀರ್ ತೊಜಾಕ್‌ಗೆ ಏಕಕಾಲಕ್ಕೆ ಅಚ್ಚರಿ ಮತ್ತು ಆಘಾತಗಳಾದವು. ಜೀವಮಾನದಲ್ಲಿ ಮೊಟ್ಟ-ಮೊದಲ ಬಾರಿಗೆ ಒಂದು ಹೆಣ್ಣು ಬಾದಶಾಹರ ಪಕ್ಕದಲ್ಲಿ ಕುಳಿತಿದ್ದನ್ನು ನೋಡಿದ. ಅವಳೆದೆ ಬಡಿದುಕೊಳ್ಳುತ್ತಿತ್ತು. ಜನರಲ್ಲಿ ಈ ಹೊಸ ಸಂಪ್ರದಾಯ ಅಥವಾ ಬದಲಾವಣೆ ಎಂತಹ ಗಲಭೆಗೆ ಕಾರಣವಾಗುವುದೋ ಎಂದು ಹೆದರಿದಳು. ಅವಳು ಪರದೆಯೊಳಗೆ ಮುಖ ಮರೆಮಾಚಿದ್ದರಿಂದ ಅವಳಲ್ಲಿನ ಮುಖದ ಭಾವಗಳು ಜನರಿಗೆ ಕಾಣಿಸುತ್ತಿರಲಿಲ್ಲ. ಬದುಕಿದೆ ಎಂದುಕೊಂಡಳು. ಅಲ್ಲಿ ನಡೆಯುತ್ತಿದ್ದ ಒಂದೊಂದು ಸನ್ನಿವೇಶವನ್ನು ಗಮನಿಸಿ ನೋಡಿದಳು.

ಜಹಾಂಗೀರ್ ಎದ್ದು ನಿಂತು ಜನರನ್ನು ಸಂಬೋಧಿಸಿ ಮಾತನಾಡಿದ. "ನನ್ನ ಪ್ರೀತಿಯ ಪ್ರಜೆಗಳೇ. ನಿಮ್ಮ ಸುಖ ಸಂತೋಷಗಳೇ ನಮಗೆ ಮುಖ್ಯ. ಈ ಸುಖದ ಮಧ್ಯೆಯೂ ನಿಮಗೆ ಅನಿರೀಕ್ಷಿತ ಸಮಸ್ಯೆಗಳು ಹುಟ್ಟಬಹುದು. ಯಾವುದೋ ಕಾರಣಕ್ಕೆ ಯಾರಿಂದಲಾದರೂ ಅನ್ಯಾಯವಾಗಿರಬಹುದು. ಒಬ್ಬೊಬ್ಬರಾಗಿ ನಿಮ್ಮ ಸಮಸ್ಯೆಗಳು

ಏನಿವೆಯೋ ಅವುಗಳನ್ನು ನಮ್ಮ ಪ್ರತಿನಿಧಿಯವರ ಕೈಗೆ ನೀಡಿ ಅವರು ಅದನ್ನು ಓದಿ ನಮಗೆ ವಿವರಿಸುತ್ತಾರೆ ಎಂದು ಹೇಳಿ ಜಹಾಂಗೀರ್ ಕುಳಿತುಕೊಂಡ. ಒಬ್ಬೊಬ್ಬರೂ ತಮ್ಮ ಸಮಸ್ಯೆ ಸಂಕಷ್ಟಗಳನ್ನು ವಿವರಿಸಿದರು. ಅಸಂಖ್ಯಾತ ಮಂದಿ ತಮ್ಮ ಅಹವಾಲುಗಳನ್ನು ಹೇಳಿಕೊಳ್ಳಲು ಬಂದಿದ್ದರೂ ಮುಖ್ಯವಾದವುಗಳನ್ನು, ತೀರಾ ತುರ್ತಾದವುಗಳನ್ನು ಪರಿಗಣಿಸಿ, ನ್ಯಾಯ ತೀರ್ಮಾನವನ್ನು ಘೋಷಿಸಲಾಯಿತು.

ಅಹವಾಲುದಾರರಲ್ಲಿ ಮಹಬ್ಬತ್ ಖಾನನೂ ಒಬ್ಬನಾಗಿದ್ದ. ಜಹಾಂಗೀರ್ ಹೇಗೆ ಅವನ ಸಮಸ್ಯೆಗೆ ಪರಿಹಾರ ಹೇಳಬೇಕೋ ಎನ್ನುವ ಸಂದಿಗ್ಧದಲ್ಲಿ ಇದ್ದಾಗ, ನೂರ್ ಜಹಾನ್ ಮೆಲ್ಲಗೆ ಉಸುರಿದಳು. ಜಹಾಂಪನಾಹ್, ಇದಕ್ಕಿಂತ ಗಂಭೀರವಾದ ಅಹವಾಲುಗಳು ಇರುವಾಗ, ಇದನ್ನು ನಂತರ ಕೈಗೆತ್ತಿಕೊಳ್ಳಬಹುದಲ್ಲ ಎಂದು ಸೂಚಿಸಿದಳು. ಜಹಾಂಗೀರ್ ಹಾಗೆಯೇ ಮಾಡಿದ. ಮೊದಲಿನಿಂದಲೂ ಮಹಬ್ಬತ್‌ಖಾನ್, ಮೆಹರುನ್ನೀಸಾಳನ್ನು ಕಡೆಗಣಿಸುತ್ತಲೇ ಇದ್ದ. ಈಗ ಇದರಿಂದ ಇನ್ನಷ್ಟು ಅಸಮಾಧಾನಗೊಂಡ.

ಮೆಹರುನ್ನೀಸಾಳ ಸೂಕ್ಷ್ಮ ಕಣ್ಣಿಗೆ ಮಹಬ್ಬತ್‌ಖಾನನ ಮುಖ ಭಾವಗಳು ಕಾಣದೆ ಹೋಗಲಿಲ್ಲ. ಒಂದು ಕಡೆ ಭಯವೂ ಆಯಿತು. ಅವನಿಂದ ಮುಂದೆ ಏನೇನು ಆಗುವುದೋ ಎಂದು ಹೆದರಿದಳು. ತಾನಷ್ಟು ಅಧಿಕಾರದಿಂದ ಮಾತನಾಡಿದ್ದು ತಪ್ಪಾಯಿತೇನೋ ಎಂದುಕೊಂಡಳು.

ಆ ದಿನದ ಝುರೋಕಾ, ಊರ ಸುದ್ದಿಯಾಯಿತು. ಜನಾನಾ ಸುದ್ದಿಯೂ ಆಯಿತು. ಜನಾನಾದ ಹೆಂಗಸರು ಮೂಗಿನ ಮೇಲೆ ಬೆರಳಿಟ್ಟುಕೊಂಡರು! ಹೀಗೂ ಉಂಟೆ ಎಂದು ವ್ಯಂಗ್ಯವಾಡಿದರು. ಈ ಬಾದಶಾಹರು ಅವಳನ್ನು ತಲೆ ಮೇಲೆ ಕೂಡಿಸಿಕೊಳ್ಳುತ್ತಿದ್ದಾರೆ ಎಂದು ತಮ್ಮೊಳಗೆ ತಾವೇ ಹೇಳಿಕೊಂಡರು. ಒಂದು ವೇಳೆ ಈ ಟೀಕೆ ಹೊರಗೆ ಯಾರದಾದರೂ ಕಿವಿಗೆ ಬಿದ್ದರೆ, ಮಾತಾಡಿದವರ ತಲೆ ಉರುಳಿಬೀಳುತ್ತದೆ ಎಂದುಕೊಂಡರು.

ಈ ಸುದ್ದಿ ಜನಾನಾದಲ್ಲಿ ಒಬ್ಬರಿಗೆ ಹೆಮ್ಮೆಯೆನಿಸಿದರೆ, ಮತ್ತೊಬ್ಬರಿಗೆ ಹೊಟ್ಟೆಯಲ್ಲಿ ಬೆಂಕಿ ಬಿದ್ದ ಹಾಗಾಯಿತು. ಅಕ್ಬರ್‌ನ ಸಾವಿನ ನಂತರ, ರುಖೈಯ್ಯಾ ಬೇಗಂ, ಜಗತ್‌ಗೋಸಿನಿಯಿಂದ ಬಹಳಷ್ಟು ಅವಹೇಳನ ಅನುಭವಿಸಿದ್ದಳು. ಅವಳೇ ಪಾದಶಾಹ್ ಬೇಗಂ ಆದ ಮೇಲಂತೂ ಕೇಳಲೇ ಬೇಕಾಗಿರಲಿಲ್ಲ. ಮೆಹರುನ್ನೀಸಾಳ ಆ ದಿನದ ಝುರೋಕಾ ದಿಗ್ವಿಜಯ ಕೇಳಿ ಹೊಟ್ಟೆ ತಣ್ಣಗಾಯಿತು. ಜಗತ್‌ಗೋಸಿನಿಯ ಗರ್ವಭಂಗಕ್ಕೆ ಅವಳ ಅಸಹಾಯಕ ಸ್ಥಿತಿಗೆ ಸಂಭ್ರಮಿಸಿದಳು. ಅವಳ ಸೊಕ್ಕು ಮುರಿಯಲು ಸಾಮರ್ಥ್ಯ ಇರುವವಳು ಮೆಹರುನ್ನೀಸಾ ಒಬ್ಬಳೇ ಎನ್ನುವ ಸತ್ಯ ಅವಳಿಗೆ ಮನವರಿಕೆಯಾಗಿತ್ತು. ಅಂತೂ ಇಂತೂ ಜನಾನಾದಲ್ಲಿ ಒಂದು ರೀತಿಯ ಅಸಮಾಧಾನ ಹೊಗೆಯಾಡುತ್ತಿತ್ತು. ಸ್ಪರ್ಧೆ, ಪ್ರತಿಸ್ಪರ್ಧೆಯ ಪರಿಸರ ನಿರ್ಮಾಣವಾಗುತ್ತಿತ್ತು. ಆದರೆ ನೇರ ಪ್ರತಿಭಟನೆ ಮಾತ್ರ ಸಾಧ್ಯವಿರಲಿಲ್ಲ. ಹೆಂಗಸರ ಸೇಡಿನ ಆಟಗಳೇ ವಿಚಿತ್ರ! ಮೆಹರುನ್ನೀಸಾಳಿಂದ ಇನ್ನೂ ಸಾಕಷ್ಟು ಕೆಲಸಗಳು ಆಗಬೇಕಿದೆ. ನೋಡುತ್ತೇನೆ ಜಗತ್‌ಗೋಸಿನಿ ಈಗ ಏನು ಮಾಡುತ್ತಾಳೆಂದು. ಮೆಹರುನ್ನೀಸಾಳ ಮುಂದೆ ಅವಳದೇನೂ ನಡೆಯುವುದಿಲ್ಲ. ಅವನ ಹಾಸಿಗೆಯ ಸುಖಕ್ಕೆ

ಅಪ್ಸರೆಯರನ್ನೂ ನಿವಾಳಿಸಿ ಎಸೆಯಬೇಕೆನ್ನುವ ಸೌಂದರ್ಯದ ಪುತ್ಥಳಿ, ಸಾಮ್ರಾಜ್ಯವನ್ನೂ, ಜಹಾಂಗೀರನ ಹೃದಯ ಸಾಮ್ರಾಜ್ಯವನ್ನೂ ಆಕ್ರಮಿಸಿಕೊಂಡುಬಿಟ್ಟಿದ್ದಾಳೆ. ಅಂಥದ್ದರಲ್ಲಿ ಜಗತ್‌ಗೋಸಿನಿಯನ್ನು ಮೂಸಿಯೂ ನೋಡುವುದಿಲ್ಲ. ಅವಳು, ದಿನಗಳು ಒಂದೇ ರೀತಿ ಇರುವುದಿಲ್ಲ ಎನ್ನುವ ಸತ್ಯವನ್ನು ಮರೆತಿದ್ದಾಳೆ ಎಂದು ಜಗತ್‌ಗೋಸಿನಿಯ ಮೇಲಿನ ದ್ವೇಷವನ್ನೆಲ್ಲ ಮಾತುಗಳಲ್ಲಿ ಹರಿಸಿದಳು.

ರುಖೈಯ್ಯಾ ಬೇಗಂಗೆ ಒಂದು ಭರವಸೆ ಇತ್ತು. ಜಹಾಂಗೀರನನ್ನು ಮದುವೆಯಾಗಿಸುವಲ್ಲಿ ತನ್ನ ಪಾತ್ರವಿದೆ. ಮೆಹರುನ್ನೀಸಾ ಇದನ್ನು ಮರೆಯುವುದಿಲ್ಲ. ನನ್ನ ಪ್ರತಿಷ್ಠೆ, ಗೌರವವನ್ನು ಕೆಡಿಸುವ ಪ್ರಯತ್ನದ ಸಾಹಸಕ್ಕೆ ಜಗತ್‌ಗೋಸಿನಿ ಇನ್ನು ಮುಂದಾಗುವುದಿಲ್ಲ ಎಂದು. ಆದರೆ ಮೆಹರುನ್ನೀಸಾ ಅವಳು ಭಾವಿಸಿಕೊಂಡಷ್ಟು ಮುಗ್ಧೆಯಲ್ಲ. ಯಾರು ಯಾರು ಹೇಗೆ, ಯಾವಾಗ ಬದಲಾಗುತ್ತಾರೆ ಎನ್ನುವುದನ್ನು ಬಲ್ಲಳು. ಈಕೆ ಪಾದಶಾಹ್‌ಬೇಗಂ ಆಗಿದ್ದಾಗ, ಅಕ್ಬರ್ ಬಾದಶಾಹ್ ಬದುಕಿದ್ದಾಗ, ತಾನು ಜಹಾಂಗೀರನನ್ನು ಗಾಢವಾಗಿ ಪ್ರೀತಿಸುತ್ತಿದ್ದ ವಿಷಯ ಗೊತ್ತಿದ್ದೂ, ಅಲಿಖುಲಿಗೆ ಕೊಟ್ಟು, ಮೆಹರುನ್ನೀಸಾಳ ಮದುವೆ ಮಾಡಿಸುವ ನಿರ್ಧಾರವನ್ನು ಅಕ್ಬರ್ ಕೈಗೊಂಡಾಗ, ಒಂದು ಮಾತು ರುಖೈಯ್ಯಾ ತಮ್ಮಿಬ್ಬರ ಪ್ರೀತಿಯ ಬಗ್ಗೆ ತಿಳಿಸಿದ್ದರೆ, ಬಾದಶಾಹರೂ ಒಪ್ಪಿ ಮದುವೆಯಾಗಿದ್ದರೆ, ತನ್ನ ಕತೆ ಬೇರೆಯೇ ಆಗುತ್ತಿತ್ತು ಎನ್ನುವ ವಿಚಾರದಿಂದ ಸ್ವಲ್ಪ ಅಸಮಾಧಾನವನ್ನೇ ಮೆಹರುನ್ನೀಸಾ ತನ್ನೆದೆಯಲ್ಲಿ ಮರೆಯದೆ ಇರಿಸಿಕೊಂಡಿದ್ದಳು. ಆದರೆ ಹಾಗೆಂದು ರುಖೈಯ್ಯಾ ಬೇಗಂಗೆ ಯಾವುದೇ ಹಾನಿ ಮಾಡಲಿಲ್ಲ. ಬಾದಶಾಹರ ಅರಮನೆ, ಜನಾನಾ ಪ್ರಪಂಚದ ಪರಿಚಯ, ರಾಜಸಂಬಂಧಿಗಳ ಪರಿಚಯ ಇವೆಲ್ಲಾ ಸಾಧ್ಯವಾದದ್ದು ಪಾದಶಾಹ್ ಬೇಗಂ ಆಗಿದ್ದ ರುಖೈಯ್ಯಾರಿಂದ! ರುಖೈಯ್ಯಾ ಜೊತೆ ಸಾಕಷ್ಟು ಸಲುಗೆಯೂ ಇತ್ತು. ಪಾದಶಾಹ್ ಬೇಗಂ ಆದಮೇಲೂ ಮೆಹರುನ್ನೀಸಾ ಎಂದೇ ಸಂಬೋಧಿಸಿ ಕರೆಯುತ್ತಿದ್ದಳು.

'ಝುರೋಕಾ'ವನ್ನು ಯಶಸ್ವಿಯಾಗಿ ಪೂರೈಸಿ ಜಯಭೇರಿ ಬಾರಿಸಿದ ಸುದ್ದಿಯಿಂದ ತುಂಬಾ ಸಂತೋಷಗೊಂಡ ರುಖೈಯ್ಯಾ ಅವಳನ್ನು ತನ್ನ ಮನೆಗೆ ಕರೆಸಿಕೊಂಡಳು.

ಮೆಹರುನ್ನೀಸಾ ಉರುಫ್ ನೂರ್ ಜಹಾನಳೂ ತನ್ನ ವಿಜಯದ ಸಂತೋಷವನ್ನು ಯಾರೊಂದಿಗಾದರೂ ಹಂಚಿಕೊಳ್ಳಬೇಕೆಂದು ಕಾಯುತ್ತಿದ್ದಳು.

ನೂರ್ ಜಹಾನ್ ಒಳಗೆ ಬಂದು ಸಲಾಮ್ ಹೇಳಿದಾಗ, ರುಖೈಯ್ಯಾ ಮುಖದ ಮೇಲೆ ನಗೆ, ಸಂತೋಷಗಳು ತಾಂಡವವಾಡುತ್ತಿದ್ದವು. ಆ ಸ್ಥಿತಿಯಲ್ಲಿ ಹುಕ್ಕಾದಿಂದ ಜೋರಾಗಿ ಒಂದು ದಮ್ಮು ಎಳೆದುಕೊಂಡಳು. ನೂರ್ ಜಹಾನ್ ಬಂದದ್ದನ್ನು ಗಮನಿಸಿ, "ಬಾ ಮಗಳೆ ಮೆಹರುನ್ನೀಸಾ, ನಿನ್ನ ಪ್ರಥಮ ದಿಗ್ವಿಜಯಕ್ಕೆ ನನ್ನ ಹಾರ್ದಿಕ ಅಭಿನಂದನೆಗಳು."

"ಬೇಗಂ ಹುಜೂರ್ ಇದರಲ್ಲಿ ನನ್ನದೇನಿದೆ ಪ್ರಯತ್ನ. ತಮ್ಮ ಮಕ್ಕಳಾದ ಜಹಾಂಗೀರ್ ಬಾದಶಾಹ್‌ರು, ಅಪ್ಪಣೆ ಕೊಡದಿದ್ದರೆ ನಾನಲ್ಲಿಗೆ ಹೋಗಲು ಹೇಗೆ ಸಾಧ್ಯವಾಗುತ್ತಿತ್ತು?"

"ಎಲ್ಲವೂ ಸಾಧ್ಯವಾಗುತ್ತದೆ ಮೆಹರುನ್ನೀಸಾ. ನಿನ್ನ ಪ್ರೀತಿಯ ಪಾಶದಿಂದ ನಿನ್ನ ಗುಲಾಮನಾಗಿ ಬಿಟ್ಟಿದ್ದಾನೆ. ಪ್ರೀತಿಯ ಮೋಡಿಗೆ ವಶವರ್ತಿಯಾಗಿ, ನೀನು

ಬಯಸುವುದೆಲ್ಲವನ್ನೂ ಯಾಕೆಂದೂ ಪ್ರಶ್ನಿಸಿದೆ ನಿನ್ನ ಕಾಲಡಿಯಲ್ಲಿ ತಂದು ಸುರಿಯುತ್ತಾನೆ. ನಿನ್ನನ್ನು ಆರಾಧಿಸುತ್ತಾನೆ, ಈಗಾಗಲೇ ನಿನ್ನನ್ನು ಪಾದಶಾಹ್ ಬೇಗಂ ಎಂದು ಘೋಷಿಸಿರುವುದೇ ಅಲ್ಲದೆ ರಾಜಮುದ್ರೆಯನ್ನೂ ನಿನಗೆ ಒಪ್ಪಿಸಿರುವಾಗ, ಅವನಲ್ಲಿ ಇನ್ನೇನು ಅಧಿಕಾರ ತಾನೇ ಇರಲು ಸಾಧ್ಯ?"

"ಪಾದಶಾಹ್ ಬೇಗಂ ಹುಜೂರ್, ನನಗೆ ಅಧಿಕಾರಬೇಕೆಂದು ಬಯಸಿ ಮದುವೆಯಾಗಲಿಲ್ಲ. ಜಹಾಂಗೀರನನ್ನು ನಾನು ಬಹಳವಾಗಿ ಪ್ರೀತಿಸುತ್ತೇನೆ. ನನ್ನ ಬದುಕೇ ಅವರು. ಅವರಿಲ್ಲದ ಬದುಕು ನನಗೆ ಬರೀ ಶೂನ್ಯ. ನನ್ನ ಉದ್ದೇಶವೆಲ್ಲ, ಅವರಿಗೆ, ಅವರ ಬೆನ್ನಿಗೆ ನಿಂತು, ಮೊಘಲ್ ವಂಶ ಪರಂಪರೆಯ ಪ್ರತಿಷ್ಠೆಯನ್ನು ಹಿರಿಮೆಯನ್ನು ಮುಂದುವರೆಸಿಕೊಂಡು ಹೋಗಬೇಕೆಂಬುದೇ ಆಗಿದೆ. ಅದೇ ನನ್ನ ತುಡಿತವೂ ಆಗಿದೆ."

"ನಿನ್ನ ಆಶಯ ತುಡಿತಗಳೆಲ್ಲ ಬಹಳ ಒಳ್ಳೆಯದೇ! ಆದರೆ ಸಾಮ್ರಾಜ್ಯ, ಅಧಿಕಾರಗಳೆಂಬ ಆಮಿಷಗಳಿಗೆ ಒಳಗಾದವರಿಂದ ತೊಂದರೆ, ತಾಪತ್ರಯಗಳು ತಪ್ಪಿದ್ದಲ್ಲವಾದ್ದರಿಂದ, ನೀನು, ಸಲೀಂ ಇಬ್ಬರೂ ಬಹಳ ಜಾಗರೂಕತೆಯಿಂದ ಹೆಜ್ಜೆ ಹಾಕಬೇಕು. ರಾಜಕೀಯ ಪರಿಸರದಲ್ಲಿ ಮಿತ್ರರು ಯಾರು? ಶತ್ರುಗಳು ಯಾರು? ಎಂದು ಗುರುತಿಸುವುದು ಬಹಳ ಕಷ್ಟ. ನೀವಿಬ್ಬರೂ ಒಬ್ಬರಿಗೊಬ್ಬರು ಬೆಂಗಾವಲಾಗಿ ಇರಬೇಕು. ನಿನ್ನ ಜಹಾಂಗೀರನ ನಾಲ್ಕು ಜನ ಮಕ್ಕಳೂ ಇದ್ದಾರೆ. ಅವರಿಗೂ ಸಿಂಹಾಸನ ಅಧಿಕಾರದ ಮೋಹಗಳು ಇದ್ದೇ ಇರುತ್ತವೆ. ಅವರ ನಡುವೆಯೇ ಯಾವ ರೀತಿಯ ತಿಕ್ಕಾಟ ನಡೆಯುವುದೋ ಊಹಿಸಬಲ್ಲವರು ಯಾರು? ಎಚ್ಚರಿಕೆಯಿಂದ ಹೆಜ್ಜೆ ಹಾಕು. ಈ ಬಡ ಬೇಗಂಳನ್ನು ಮರೆತು ಕೈ ಬಿಡಬೇಡ. ನಿನ್ನ ಸಮಸ್ಯೆಗಳೇನಾದರೂ ಇದ್ದರೆ, ಸಂಕೋಚವಿಲ್ಲದೆ ಬಾ. ನನ್ನ ಅನುಭವದಿಂದ, ನನಗೆ ಸಾಧ್ಯವಾಗುವ ರೀತಿಯಲ್ಲಿ ಪರಿಹಾರವನ್ನು ಸೂಚಿಸುವ ಪ್ರಯತ್ನ ಮಾಡುತ್ತೇನೆ."

"ಶುಕ್ರಿಯಾ ಬೇಗಂ ಹುಜೂರ್. ನನಗಂತೂ ನನ್ನ ಸುತ್ತಲೂ ಶತ್ರುಗಳೇ ತುಂಬಿದ್ದಾರೆ ಎನಿಸುತ್ತದೆ. ನನ್ನ ಏಳ್ಗೆಗೆ ಕರುಬುವವರೂ, ನನಗೆ ಹಾನಿ ಮಾಡಲು ತುದಿಗಾಲ ಮೇಲೆ ನಿಂತಿರುವವರೂ ಇದ್ದಾರೆ ಎನ್ನುವುದು ಅಲ್ಪ ಸ್ವಲ್ಪವಾಗಿ ನನ್ನ ಗಮನಕ್ಕೆ ಬಂದಿದೆ. ನೆನ್ನೆಯ ಝುರೋಕಾ ನನಗೆ ಮತ್ತೊಬ್ಬ ಬದ್ಧ ಶತ್ರುವನ್ನು ಹುಟ್ಟಿಸಿದೆ. ನೀವು ನನ್ನ ಸಂತೋಷ ಕ್ಷೇಮಗಳನ್ನು ಬಯಸುವವರು, ನನ್ನ ಬಗ್ಗೆ ಕಾಳಜಿ ಇರುವವರು. ನನಗೆ ಹೆದರಿಕೆ ಇರುವುದು ಇಬ್ಬರಿಂದ. ಜನಾನಾದೊಳಗೊಬ್ಬರು ಹೊರಗಡೆಗೆ ಒಬ್ಬರು. ಯಾರೆಂದು ನಿಮಗೆ ತಿಳಿದೇ ಇರುತ್ತಾರೆ."

"ಜನಾನಾದೊಳಗೆ ದ್ವೇಷ, ಸೇಡುಗಳಿಂದ ಕುದಿಯುತ್ತಿರುವ ವ್ಯಕ್ತಿ ಬೇರೆ ಯಾರಾಗಲು ಸಾಧ್ಯ! ಜಗತ್‌ಗೋಸಿನಿಯಲ್ಲದೆ! ಆದರೆ ಹೊರಗಿನಿಂದ ಶತ್ರು ಯಾರೆಂದು ಹೆಸರಿಸು."

"ಮಹಬ್ಬತ್ ಖಾನ್– ವಜೀರ್ ಮಹಬ್ಬತ್ ಖಾನ್ ಇವರೇಕೆ ನನ್ನ ಮೇಲೆ ದ್ವೇಷ ಸಾಧಿಸುತ್ತಿದ್ದಾರೆ. ಸಲೀಂ ಆಗಿದ್ದ ದಿನಗಳಲ್ಲಿಯೂ ಬಾದಶಾಹರಿಗೆ ನನ್ನ ವಿಚಾರವಾಗಿ ಅಪಪ್ರಚಾರ ಮಾಡಿ, ಪ್ರೀತಿ, ಮದುವೆಗಳನ್ನು ಮುರಿಯುವ ಪ್ರಯತ್ನ, ಗುಟ್ಟಾಗೇನೂ

ಉಳಿದಿರಲಿಲ್ಲ. ನನ್ನ ಅಣ್ಣ ಅಸಫ್ ಖಾನ್ ಮೊದಲಿನಿಂದಲೂ ಅವನ ಚಾಡಿಕೋರತನವನ್ನು ಅರಿತಿದ್ದ. ದಯವಿಟ್ಟು ಅವನೇಕೆ ನನ್ನ ವಿಚಾರದಲ್ಲಿ ತಲೆ ಹಾಕುತ್ತಿದ್ದಾನೆ. ನನ್ನಿಂದ ಯಾವ ಅನ್ಯಾಯವೂ ಅವನಿಗಾಗಿಲ್ಲದಿರುವಾಗ, ಯಾಕೆ ಹೀಗೆ ವರ್ತಿಸುತ್ತಿದ್ದಾನೆ?"

"ಮೆಹರುನ್ನೀಸಾ, ನಿನಗಷ್ಟೊಂದು ಬುದ್ಧಿ ಇದ್ದರೂ, ಊಹಿಸಲಾರದೆ ಹೋದೆಯಾ? ಅವನು ಜಗತ್‌ಗೋಸಿನಿಯ ಚೇಲಾ. ಅವಳಿಗಾಗಿ ಅವನು ಕೆಲಸ ಮಾಡುತ್ತಿದ್ದಾನೆ. ಗಂಡನಿಂದ ನಿನ್ನನ್ನು ದೂರವಿರಿಸುವ ಹುನ್ನಾರ. ಜೊತೆಗೆ ಅವನಿಗೆ ಪದೋನ್ನತಿಯ ಭರವಸೆಯನ್ನೂ ನೀಡಿದ್ದಾಳೆ. ಇವಿಷ್ಟರ ಜೊತೆಗೆ, ನೀನು ಅವನ ಅಹವಾಲನ್ನು ನಿರ್ಲಕ್ಷಿಸಿದ ಸಿಟ್ಟೂ ಸೇರಿಕೊಂಡಿದೆ, ಅಷ್ಟೇ! ಜಹಾಂಗೀರ್ ನಿನ್ನಧೀನದಲ್ಲಿ ಇರುವವರೆಗೂ ನೀನು ಹೆದರಬೇಕಾದ್ದಿಲ್ಲ - ಪ್ರಪಂಚವೇ ನಿನ್ನ ವಿರುದ್ಧ ನಿಂತರೂ ಜಹಾಂಗೀರ್ ನಿನ್ನನ್ನು ಬಿಟ್ಟುಕೊಡುವುದಿಲ್ಲ. ನಿನ್ನಂತಹ ಬುದ್ಧಿವಂತ ಹೆಂಡತಿ ಸಿಕ್ಕಿದ್ದು, ರಾಜಕಾರಣದ ಬಗ್ಗೆ ಆಡಳಿತದ ಬಗ್ಗೆ ನಿರಾಂತಕವಾಗಿರಬಹುದು ಎನ್ನುವ ಲೆಕ್ಕಾಚಾರದಲ್ಲಿದ್ದಾನೆ."

ನೂರ್ ಜಹಾನಳಿಗೆ ಸ್ವಲ್ಪ ಸಮಾಧಾನವಾಯಿತು. ಶತ್ರುಗಳು ಸುಳಿಯದಿರಲು, ಭದ್ರ ಕೋಟೆಯೊಂದನ್ನು ಜಹಾಂಪನಾಹ್‌ರ ಸುತ್ತ ನಿರ್ಮಿಸಬೇಕಿದೆ. ಖುರ್‍ರಂನ ಮದುವೆ ಜೊತೆ, ಬಾದಶಾಹರ ಮಗ, ಶಹರಿಯಾರ್‌ಗೆ ತನ್ನ ಮಗಳು ಲಾಡ್ಲಿಯ ಮದುವೆಯನ್ನು ಮಾಡಿ ಬಿಟ್ಟರೆ, ಸಿಂಹಾಸನದ ಉತ್ತರಾಧಿಕಾರಿಯನ್ನಾಗಿ ಮಾಡಲು ಪ್ರಯತ್ನಿಸಬಹುದು ಎನ್ನುವ ಯೋಚನೆ ಅವಳದಾಗಿತ್ತು.

ಸದ್ಯಕ್ಕೆ ವರ್ತಮಾನದ ಪರಿಸ್ಥಿತಿಯಲ್ಲಿ, ಜಹಾಂಗೀರನ ರಾಜ್ಯಭಾರದಲ್ಲಿ ತರಬೇಕಾದ ಸುಧಾರಣೆಗಳತ್ತ ಗಮನಹರಿಸಬೇಕೆಂದು ಚಿಂತಿಸುತ್ತಾ, ರುಖೈಯ್ಯಾ ಬೇಗಂಳಿಂದ ಬೀಳ್ಕೊಂಡಳು.

ಜಗತ್‌ಗೋಸಿನಿ, ಮಹಬ್ಬತ್ ಖಾನ್ ಇಬ್ಬರಿಗೂ ನಿದ್ದೆ ಬರುತ್ತಿರಲಿಲ್ಲ. ತನಗಾದ ಅವಮಾನಕ್ಕೆ ಪ್ರತಿಯಾಗಿ ಸೇಡುತೀರಿಸಿಕೊಳ್ಳಲು ಮಹಬ್ಬತ್ ಖಾನ್ ಹೊಂಚುಹಾಕುತ್ತಿದ್ದ. ಜಗತ್‌ಗೋಸಿನಿಯ ಪರವಾಗಿ ಎಷ್ಟೇ ಉಪಾಯ ಯೋಚಿಸಿದರೂ ನೂರ್ ಜಹಾನಳನ್ನು, ಜಹಾಂಗೀರನಿಂದ ದೂರಮಾಡಲು ಸಾಧ್ಯವೇ ಇರಲಿಲ್ಲ. ಜಗತ್‌ಗೋಸಿನಿಯ ಉಮ್ಮಳ ಹೇಳತೀರದು. ಎರಡು ತಿಂಗಳಿಂದಲೂ ಒಮ್ಮೆಯಾದರೂ ಜಹಾಂಗೀರ್ ಜನಾನಾದ ಕಡೆ ತಲೆ ಹಾಕಿರಲಿಲ್ಲ. ಮದುವೆಯನ್ನು ತಪ್ಪಿಸಲು, ತನ್ನ ಸೌಂದರ್ಯದಿಂದ ಆಕರ್ಷಿಸಲು ಅವಳು ಮಾಡಿದ ಪ್ರಯತ್ನಗಳು ಒಂದಲ್ಲ, ಎರಡಲ್ಲ. ಏನೇ ಮಾಡಿದರೂ ಅವಳ ರೂಪ, ಸೌಂದರ್ಯ, ಸೂಕ್ಷ್ಮಮತಿ, ವಿದ್ಯಾರ್ಹತೆ ಪ್ರತಿಭೆ, ಕಲಾವಂತಿಕೆಗಳನ್ನು ಸಾಧಿಸಿಕೊಳ್ಳಲು ತನಗೆ ಆಗಲಿಲ್ಲ. ಅಕ್ಬರನ ಸಾವಿನ ನಂತರ ಜಹಾಂಗೀರ್ ಬಾದಶಾಹನಾಗುತ್ತಿದ್ದಂತೆ, ಸಹಜವಾಗಿ, ಬಾದಶಾಹ್ ಬೇಗಂ ಪಟ್ಟ ತನಗೇ ದೊರೆಯುವುದು ಖಚಿತವಾದ್ದರಿಂದ, ಹಿರಿಯ ಬೇಗಂರಿಂದ ರೀತಿ, ನೀತಿ, ಕರ್ತವ್ಯ, ಜವಾಬ್ದಾರಿಗಳ ಬಗ್ಗೆ, ಏನು ತಿಳಿದುಕೊಳ್ಳಬೇಕು ಹೇಗೆ ನಡೆದುಕೊಳ್ಳಬೇಕು. ಎನ್ನುವುದನ್ನೆಲ್ಲ ಕಲಿತು ರೂಢಿಸಿಕೊಂಡು ಮೆಹರುನ್ನೀಸಾಳ ತಲೆನೋವು ತನಗೆ ತಪ್ಪಿತೆಂದು ಬಹಳ ಸಂತೋಷಗೊಂಡಿದ್ದಳು.

ಆದರೆ ಹೋದೆಯಾ ಪಿಶಾಚಿ ಎಂದರೆ ಬಂದೇ ಗವಾಕ್ಷಿಯಲ್ಲಿ, ಎನ್ನುವ ಹಾಗೆ, ಮತ್ತೆ ವಿಧವೆಯಾಗಿ ಬಂದು ಜನಾನಾ ಸೇರಿಕೊಂಡಳು. ಆದರೆ ಆಗ ಅವಳಿಗೆ, ಜಹಾಂಗೀರ್ ನಿರ್ಲಿಪ್ತನಾಗಿರುವುದನ್ನು ನೋಡಿ ನಿರಾಳವಾಗಿದ್ದಳು. ಈಗ ನೋಡಿದರೆ ತನ್ನ ಬುಡಕ್ಕೆ ಕೊಡಲಿ ಬಿದ್ದಿದೆ. ಕಷ್ಟಪಟ್ಟು ಬೇಟೆಯಾಡುವುದನ್ನು ಕಲಿತಳು. ಮುಲ್ಲಾಗಳಿಂದ ಧರ್ಮ ಶಾಸ್ತ್ರ ಕಲಿತಳು. ಖುರ್ರಂನಂತಹ ಸುಂದರನಾದ ಮಗನನ್ನು ಉತ್ತರಾಧಿಕಾರಿಯಾಗಿಸುವ ಕನಸಿನೊಂದಿಗೆ ನೀಡಿದ್ದಳು. ಹೀಗಿದ್ದರೂ ರಾಜನ ಮಗಳಾದ ತನಗೆ ಇಲ್ಲದ ಅಧಿಕಾರ. ಕೂಳಿಗೂ ಗತಿಯಿಲ್ಲದೆ ನಿರಾಶ್ರಿತನಾಗಿ ಬಂದವನ ಮಗಳಿಗೆ ಇಷ್ಟೊಂದು ಅಧಿಕಾರವೇ? ತನಗೆಂತಹ ದುರ್ದೆಶೆ!

ಹೋಷಿಯಾರ್‌ನಂತಹ ಪ್ರಾಮಾಣಿಕ ಸೇವಕನನ್ನೂ ಕಸಿದುಕೊಂಡಳು. ಇಪ್ಪತ್ತೈದು ವರ್ಷಗಳಿಂದ ಅವಳ ಸೇವೆಯಲ್ಲಿದ್ದ ಹೋಷಿಯಾರ್ ಅತ್ಯಂತ ಸೂಕ್ಷ್ಮಮತಿಯುಳ್ಳವನಾಗಿದ್ದ. ಗೂಢಚಾರಿಕೆಯನ್ನು ಅತ್ಯಂತ ಸಮರ್ಥವಾಗಿ ನಿರ್ವಹಿಸುತ್ತಿದ್ದ. ಜನಾನಾದಲ್ಲಿ ಎಲ್ಲಿ ಬೇಕಾದರೂ ಓಡಾಡುವ ಸ್ವಾತಂತ್ರ್ಯ ಅವನಿಗೆ ಮಾತ್ರವೇ ಇತ್ತು. ಎಲ್ಲರೂ ಅವನಿಗೆ ಹೆದರುತ್ತಿದ್ದರು. ಹಾಗೆಯೇ ಸಮಸ್ಯೆಗಳು ಬಂದಾಗ ಅವನನ್ನೇ ಆಶ್ರಯಿಸಿ ಪರಿಹಾರ ಪಡೆಯುತ್ತಿದ್ದರು. ಒಂದು ರೀತಿಯಿಂದ ಅವನೇ ಜನಾನಾದ ಅಘೋಷಿತ ಯಜಮಾನನಾಗಿದ್ದ.

ಈಗ ಕೈ ಹಿಡಿದ ಗಂಡನನ್ನು ನೋಡಬೇಕಾದರೂ, ಮಾತಾಡಬೇಕಾದರೂ ಹೊಸ ಸಾಮ್ರಾಜ್ಞಿಯ ಅಪ್ಪಣೆ ಪಡೆಯಲೇ ಬೇಕಿತ್ತು. ಬಲವಂತದಿಂದ ಬಾದಶಾಹರನ್ನು ಕಾಣಲೇ ಬೇಕೆಂದು ಒಂದು ಹೆಜ್ಜೆ ಮುಂದೆ ಇಟ್ಟರೂ, ಬೇರೆ ಸೇವಕರು ತಡೆದು ನಿಲ್ಲಿಸುತ್ತಿದ್ದರು.

ಇಂಥ ಪರಿಸ್ಥಿತಿಯಲ್ಲಿ ಜಗತ್‌ಗೋಸಿನಿಗೆ, ಬಾದಶಾಹರನ್ನು ಹೇಗೆ ಭೇಟಿ ಮಾಡಬೇಕೆಂಬುದೇ ಸಮಸ್ಯೆಯಾಗುತ್ತಿತ್ತು. ತಾನೇ ನೇರವಾಗಿ ಹೋಗಿ, ನೂರ್ ಜಹಾನಳನ್ನು ಮಾತನಾಡಿಸಿ, ತನ್ನಿಚ್ಛೆಯನ್ನು ವ್ಯಕ್ತಪಡಿಸಿದ್ದರೆ, ಸುಲಭವಾಗಿ ಕೆಲಸವಾಗುತ್ತಿತ್ತು. ಆದರೆ ಜಗತ್‌ಗೋಸಿನಿಗೆ ಅಭಿಮಾನದ ಪ್ರಶ್ನೆ. ತಾನಿನ್ನೂ ಪಾದಶಾಹ್ ಬೇಗಂ ಎಂದೇ ಪಾಪ ನಂಬಿದ್ದಾಳೆ! ನೂರ್ ಜಹಾನ್ ಎಲ್ಲರೂ ಭಾವಿಸಿದಂತೆ ಕ್ರೂರಿಯೂ ಅಲ್ಲ; ನಿಷ್ಠುರಿಯೂ ಅಲ್ಲ. ಸವತಿಯರು ಪರಸ್ಪರ ಹೊಂದಿಕೊಂಡು ಹೋಗಬಹುದಿತ್ತು. ಅವಳಿಗೂ ಜಗತ್‌ಗೋಸಿನಿಯನ್ನು ಭೇಟಿಯಾಗಿ ತನ್ನ ಸ್ಥಾನ ಮಾನದ ಔನ್ನತ್ಯವನ್ನು ತೋರಿಸಿಕೊಳ್ಳಬೇಕೆನಿಸುತ್ತಿತ್ತು. ಜಗತ್‌ಗೋಸಿನಿ, ಹೋಷಿಯಾರ್ ತನ್ನಿಂದ ದೂರವಾದರೂ ಅವನ ಬಗ್ಗೆ ಒಂದು ಸ್ವಲ್ಪ ಕನಿಕರವಿರಿಸಿಕೊಂಡಿದ್ದಳು. ಹಾಗಾಗಿ ಜಗತ್‌ಗೋಸಿನಿ, ಜಹಾಂಗೀರನಿಗೆ, ತಾನು ಕೂಡಾ, ಅವರು ಬೇಟೆಗೆ ಹೋದಾಗ, ಬರಬೇಕೆಂಬ ಆಸೆಯನ್ನು ತಿಳಿಸುತ್ತ ಪತ್ರವೊಂದನ್ನು ತಲುಪಿಸಿದ್ದಳು. ಜಹಾಂಗೀರ್ ಆ ಪತ್ರವನ್ನು ತನ್ನ ಪಕ್ಕದಲ್ಲಿಯೇ ಕುಳಿತಿದ್ದ ನೂರ್ ಜಹಾನಳಿಗೆ ತೋರಿಸಿದ.

"ಜಹಾಂಪನಾಹ್, ಜಗತ್‌ಗೋಸಿನಿ ಬೇಗಂ ಬರುವುದಾದರೆ ಬರಲಿ, ಇಬ್ಬರೂ ಒಂದಷ್ಟು ಹೊತ್ತು ಜೊತೆಗೆ ಕಳೆದಂತಾಗುವುದು."

ಜಹಾಂಗೀರ್ ಮೆಹರುನ್ನೀಸಾಳ ಪ್ರತಿಕ್ರಿಯೆ ನೋಡಿ ಸುಮ್ಮನೆ ಅವಳತ್ತ ನೋಡಿದ.

ಅವಳನ್ನು ಅರ್ಥಮಾಡಿಕೊಳ್ಳಲು ಇನ್ನೂ ಸಮಯ ಬೇಕಾಗುತ್ತದೆ ಎಂದುಕೊಂಡ.

ನೂರ್ ಜಹಾನ್, ಜಹಾಂಗೀರನಷ್ಟೇ ಉದಾರಿ. ನಿಷ್ಠುರ ನಿಯಮ ಪಾಲಕರೂ ಆಗಿದ್ದ ಈ ದಂಪತಿಗಳು ಮಾನವೀಯತೆ, ಕರುಣೆ, ಪ್ರೀತಿ, ವಿಶ್ವಾಸಗಳನ್ನು ರೂಢಿಸಿಕೊಂಡವರಾಗಿದ್ದರು. ನೂರ್ ಜಹಾನ್ ಚಕ್ರವರ್ತಿನಿಯಾಗಿ ಅಧಿಕಾರವನ್ನು ಸ್ವೀಕರಿಸಿದ ಮೇಲೆ ಹೊಸ ಹೊಸ ಸುಧಾರಣೆಗಳನ್ನು ತರಲು ಪ್ರಯತ್ನಿಸಿದಳು. ವಿಶೇಷವಾಗಿ ಹೆಂಗಸರ ದಯನೀಯ ಸ್ಥಿತಿಯನ್ನು ಕಂಡವಳಾದ್ದರಿಂದ ಅವರ ಉದ್ಧಾರಕ್ಕೆ ಟೊಂಕ ಕಟ್ಟಿ ನಿಂತಳು. ವಿಧವೆಯರಿಗೆ, ಅಸಹಾಯಕ ಹೆಣ್ಣುಮಕ್ಕಳಿಗೆ, ಗಂಡಂದಿರ, ಪುರುಷರ, ದಬ್ಬಾಳಿಕೆ ದೌರ್ಜನ್ಯಗಳಿಗೆ ಒಳಾಗಾಗುತ್ತಿರುವವರ ರಕ್ಷಣೆಗೆಂದೇ ಪ್ರತ್ಯೇಕವಾದ ಯೋಜನೆಯೊಂದನ್ನು ರೂಪಿಸಿ, ಅವರು ತಮ್ಮ ಕಷ್ಟಗಳನ್ನು ಹೇಳಿಕೊಂಡು, ಸಹಾಯ ಪಡೆಯುವುದಕ್ಕಾಗಿ ಯಾವುದೇ ಸಮಯದಲ್ಲಿಯೂ ಜನಾನಾಕ್ಕೆ ಬರಬಹುದಾಗಿತ್ತು. ಅವಳ ಔದಾರ್ಯಕ್ಕೆ ಮಿತಿಯೇ ಇರಲಿಲ್ಲ. ತಾನೇ ಸ್ವತಃ ಅವರ ಸಮಸ್ಯೆಗಳನ್ನು ಕೇಳಿ ತಿಳಿದುಕೊಂಡು ತಕ್ಕಂತೆ ಆರ್ಥಿಕ ಸಹಾಯವನ್ನು ಮತ್ತು ಬೇರೆಬೇರೆ ರೀತಿಯಲ್ಲಿ ಸಹಾಯವನ್ನು ಮಾಡುತ್ತಿದ್ದಳು. ಯಾವುದೇ ಅನಾಥ ಹೆಣ್ಣು ಮಕ್ಕಳು, ಆಕೆಯನ್ನು ಆಶ್ರಯಿಸಿದಲ್ಲಿ ಅವರಿಗೆ ಆಶ್ರಯ ಕೊಟ್ಟು, ಮದುವೆಯನ್ನೂ ಮಾಡಿಸಿ, ಅವರಿಗೊಂದು ಬದುಕನ್ನು ಕಲ್ಪಿಸುತ್ತಿದ್ದಳು.

ವಯಸ್ಸಾದವರು, ತೀರ್ಥಯಾತ್ರೆಗೆ ಹೋಗಲು ಬಯಸಿದಲ್ಲಿ ಅವರನ್ನು ಮೆಕ್ಕಾ, ಕರಬಾಲಾ, ನಜಾಫ್ ಮೊದಲಾದ ಪುಣ್ಯ ಸ್ಥಳಗಳಿಗೆ ಕಳಿಸಿಕೊಡುತ್ತಿದ್ದಳು. ಅತಂತ್ರವಾಗಿ, ಅನಾಥವಾಗಿ, ಅಸಹಾಯಕರಾಗಿ, ಸ್ವಾತಂತ್ರ್ಯವಿಲ್ಲದೆ ಬಂದಿಗಳಂತೆ ಬದುಕುತ್ತಿದ್ದವರಿಗೆ, ನಿಷ್ಕ್ರಿಯವಾಗಿ ನಿಟ್ಟುಸಿರು ಬಿಡುತ್ತಿದ್ದವರಿಗೆ, ಅವರವರ ಯೋಗ್ಯತೆ, ಕಲಾಕುಶಲತೆ, ಅಭಿರುಚಿಗಳಿಗೆ ತಕ್ಕಂತೆ ಸಣ್ಣ ಪುಟ್ಟ ಉದ್ಯಮಗಳನ್ನು ಸ್ಥಾಪಿಸಿ, ಕ್ರಿಯಾಶೀಲವಾಗಿ, ಆರ್ಥಿಕ ಸ್ವಾವಲಂಬಿಗಳಾಗಿ, ಆತ್ಮವಿಶ್ವಾಸದೊಂದಿಗೆ ಬದುಕುವಂತಹ ವ್ಯವಸ್ಥೆ ಮಾಡಿದಳು. ಅವರಿಗೂ ಮುಕ್ತ ಪರಿಸರ ನಿರ್ಮಾಣ ಮಾಡಬೇಕೆನಿಸಿ, ಜನಾನಾದ ಸುತ್ತಲಿನ ವಿಶಾಲ ಪ್ರದೇಶದಲ್ಲಿ, ತೋಟ ತುಡಿಕೆಗಳು, ಉದ್ಯಾನಗಳು, ಈಜು ಕೊಳಗಳು, ಶಾಲೆಗಳು, ಸ್ನಾನ ಗೃಹಗಳು, ಮಾರುಕಟ್ಟೆಗಳು, ಆಟದ ಮೈದಾನಗಳು, ಅಡಿಗೆ ಮನೆಗಳು, ಹಲವು ಬಗೆಯ, ಹೆಂಗಸರಿಂದ ಸಾಧ್ಯವಾಗಬಹುದಾದ ಕೈಗಾರಿಕೋದ್ಯಮಗಳು, ಕರಕುಶಲ ವಸ್ತುಗಳ ತಯಾರಿಕಾ ಘಟಕಗಳು ಇತ್ಯಾದಿಗಳ ವ್ಯವಸ್ಥೆಯಿಂದಾಗಿ ಅದೊಂದು ಸ್ವಯಂಪೂರ್ಣ ಮಹಿಳಾ ಲೋಕವಾಗಿತ್ತು. ಅವಳ ಮೇಲ್ವಿಚಾರಣೆಯಲ್ಲಿ, ಜಗತ್ತಿನಾದ್ಯಂತ ಹೆಸರಾದ ಬಗೆಬಗೆಯ ಸುಗಂಧ ದ್ರವ್ಯಗಳ ತಯಾರಿಕಾ ಘಟಕ, ಇಡೀ ವಿಶ್ವದಲ್ಲಿಯೇ ಅನನ್ಯವಾಗಿತ್ತು. ವಿಶೇಷವಾಗಿ ತನ್ನ ತಾಯಿಯಿಂದ ಕಲಿತ, ಒಂದು ಬಗೆಯ ಸುಗಂಧ ದ್ರವ್ಯಕ್ಕೆ ಇತ್ತರ್-ಎ-ಜಹಾಂಗೀರಿ ಎಂದು ಹೆಸರಿಸಿ ತನ್ನ ಪ್ರೀತಿ ಗೌರವಗಳನ್ನು ತೋರಿಸಿದಳು.

ನೂರ್ ಜಹಾನ್‌ಳ ಬಹುಮುಖಿ ಪ್ರತಿಭೆ, ಕಾವ್ಯ ಪ್ರೀತಿ ಬಲ್ಲವನಾಗಿದ್ದ ಜಹಾಂಗೀರ್ ಮದುವೆಯಾದ ಮರುದಿನವೇ, ತಾನೂ ಕಾವ್ಯ ಪ್ರೀತಿಯುಳ್ಳವನಾಗಿದ್ದರಿಂದ ಅವಳನ್ನು ತನ್ನ ಗ್ರಂಥ ಭಂಡಾರಕ್ಕೆ ಕರೆದೊಯ್ದ. ಅಲ್ಲಿ ಪರ್ಷಿಯನ್ ಕವಿಗಳ ಕಾವ್ಯ ಕೃತಿಗಳು ಸಾಲುಸಾಲಾಗಿ ಕಾಣಿಸಿದವು. ಅವುಗಳ ಜೊತೆಗೆ ಎಲ್ಲ ಮತಧರ್ಮಗಳಿಗೆ ಸಂಬಂಧ

ಪಟ್ಟ ಶಾಸ್ತ್ರ ಗ್ರಂಥಗಳು, ಮಹಾಕಾವ್ಯಗಳೂ ಇದ್ದವು. ತಂದೆ ಅಕ್ಬರ್ ನಿರಕ್ಷರಿಯಾಗಿದ್ದರೂ ಈ ಗ್ರಂಥಗಳನ್ನು ಪರ್ಷಿಯನ್ ಭಾಷೆಗೆ ತರ್ಜುಮೆ ಮಾಡಿಸಿ, ತನ್ನ ಗ್ರಂಥಾಲಯದಲ್ಲಿ ಇರಿಸಿಕೊಂಡಿದ್ದ. ಈಗ ಅದು ಜಹಾಂಗೀರನ ಆಸ್ತಿಯಾಗಿತ್ತು.

"ಜಹಾಂಪನಾಹ್, ನಿಮ್ಮ ರಾಜನೀತಿ ಚತುರತೆ, ಮಾನವೀಯತೆಗಳ ಜೊತೆಗೆ, ಈ ನಿಮ್ಮ ಪುಸ್ತಕ ಪ್ರೀತಿ, ಕಾವ್ಯಾರಾಧನೆಯೇ ನನಗೆ ಅತಿ ಮೆಚ್ಚುಗೆಯ ವಿಷಯ. ನಾನೀಗಾಗಲೇ ಹಫೀಜ್, ಫಿರದೌಸ್, ಉಮರ್ ಖಯ್ಯಾಮ್, ಅಮೀರ್ ಖುಸ್ರೋ ಇವರುಗಳನ್ನು ಓದಿದ್ದೇನೆ. ನಿಮ್ಮದೆ ಒಂದು ಕವಿತೆಯನ್ನು ಹೇಳಲು ಸಾಧ್ಯವಾದರೆ ನನಗೆ ತುಂಬಾ ಖುಷಿಯಾಗುತ್ತದೆ.

"ನೂರ್, ನಿನ್ನಂತಹ ಹೆಂಡತಿ, ಕೈಯಲ್ಲಿ ಮಧುಪಾತ್ರೆ ಇದ್ದರೆ ಪ್ರತಿಯೊಬ್ಬ ರಸಿಕ ಪುರುಷನ ಜನ್ಮ ಪಾವನವಾಗುತ್ತದೆ. ಜಗತ್ತಿನಲ್ಲಿ ನನಗೆ ನೀನೊಬ್ಬಳಿದ್ದರೆ ಸಾಕು, ದಿನದಿನವೂ ನವನವೋನ್ಮೇಷಶಾಲಿನಿ ಸೌಂದರ್ಯವನ್ನು ವೀಕ್ಷಿಸುತ್ತಾ ಹತ್ತಾರು ಕವಿತೆಗಳನ್ನು ಕಾಣಿಕೆಯಾಗಿ ಕೊಡಬಲ್ಲೆ. ಇರಾಖಿಯ ಕವಿತೆಯ ಸಾಲುಗಳೇ ನನ್ನಂತರಂಗವನ್ನೂ ಹೊರಗೆಡಹುತ್ತದೆ. ಅವನೇನು ಬರೆದ ಓದಿರುವೆಯೇನು?"

"ಜಹಾಂಪನಾಹ್ ಇರಾಖಿಯ ಕವಿತೆಗಳನ್ನು ಓದಿರುವೆನಾದರೂ ನೀವು ಯಾವ ಸಾಲುಗಳನ್ನು ಮೆಚ್ಚಿರುವರೆಂದು ನನಗೆ ಹೇಗೆ ತಿಳಿಯುವುದು?"

"ಹಾಗಾದರೆ ಕೇಳು. ನನ್ನ ಭಾವನೆಗಳೆಲ್ಲವನ್ನೂ ಇರಾಖಿಯೇ ತನ್ನ ಸಾಲುಗಳಲ್ಲಿ ಸುರಿದು ಖಾಲಿ ಮಾಡಿಬಿಟ್ಟಿದ್ದಾನೆ."

"ನಿನ್ನ ಪ್ರೀತಿಯ ಹೊರತು। ಅನ್ಯಕರ್ಥವನೊಂದು ಕಾಣಲಾರೆ
ಬೇಕಿದೆ ನನಗೆ ನಿನ್ನ ರಕ್ಷಣೆ। ನನ್ನಾತ್ಮದೊಡನೆ ಪ್ರೇಯಸಿ
ನಿನ್ನ ಹೊರತು ಮತ್ತೊಬ್ಬರನು। ಕರೆದೊಯ್ಯುವುದ ನಾನರಿಯೆ।"
ಸಹನೆ ವಿಶ್ರಾಂತಿ ನೆಮ್ಮದಿ। ಗಳಿಗೆಡೆಯೆಲ್ಲಿದೆ ನನ್ನಲ್ಲಿ
ದಯೆ ಪ್ರೀತಿಗಳು ನಿನ್ನಲ್ಲಿ ಹೊರತು ನಾ ಕಾಣೆ। ನಾಕಾಣೆ
ನನ್ನನುಪಕರಿಸು। ತೋರಿಸು ನಿನ್ನ ಮುಖ
ನಿನ್ನ ನೋಟ ನನ್ನ। ನೋವಿಗೆ ಶಮನವಲ್ಲದೆ
ಮತ್ತೊಂದು ಕಾಣೆ । ನಾ ಕಾಣೆ ।"
ಕೇಳಿಸಿಕೊಂಡೆಯಲ್ಲ ನೂರ್ । ನನ್ನ ಸ್ಥಿತಿಯೂ ಇದೇ!
ನನ್ನಂತರಂಗದ ಆರ್ತ ಯಾಚನೆಯೂ ಇದೆ!!

"ಜಹಾಂಪನಾಹ್! ನೀವು ಹೀಗೆ, ಇಷ್ಟೊಂದು ಭಾವುಕರಾಗುತ್ತಾ ಹೋದರೆ, ನಮ್ಮ ಸಿಯಾಸತ್, ತಖ್ತ್, ತಾಜ್‌ಗಳ ಗತಿಯೇನು?"

"ಬೇಗಂ, ನೀನಿರುವವರೆಗೆ ನನಗೆ ಯಾವುದೇ ಭಯವಿಲ್ಲ. ನನ್ನ ಸರ್ವಾಧಿಕಾರವನ್ನೂ ನಿನಗೆ ಒಪ್ಪಿಸಿಬಿಡುತ್ತೇನೆ. ಆದರೆ ನೀನು ಮಾತ್ರ ನಿನ್ನ ಪ್ರೇಮಾಮೃತದ ರಸಧಾರೆಯಾ ಸ್ವಾದದಿಂದ ವಂಚಿಸಬೇಡ."

"ಜಹಾಂಪನಾಹ್, ನಾನು ಹುಟ್ಟಿರುವುದೇ ನಿಮಗಾಗಿ. ಆದರೆ ವಿಧಿಯಾಟದಿಂದಾಗಿ ಒಂದಷ್ಟು ವಿರಹ ಸಂಕಟ. ಈ ಸಂಕಟದ ಅಗ್ನಿಯಲ್ಲಿ ಕುದಿದು, ನಮ್ಮ ಪ್ರೀತಿ ಪುಟವಿಟ್ಟ

ಚೆನ್ನದಂತಾಗಿದೆ. ನೀವು ಚಿಂತಿಸಬೇಕಾದ ಅಗತ್ಯವಿಲ್ಲ. ಬಾದಶಾಹ ಜಹಾಂಗೀರರ ಆಳ್ವಿಕೆಯನ್ನು ಸುವರ್ಣಾಕ್ಷರಗಳಲ್ಲಿ ಬರೆದಿಡುವಂತೆ ಮಾಡುತ್ತೇನೆ."

"ಶುಕ್ರ ಗುಜಾರ್ ಬೇಗಂ!"

ಈ ಇಬ್ಬರ ನಡುವೆ ಪ್ರೀತಿಯ, ಪ್ರಶಂಸೆಯ ಮಾತುಗಳಿಗೆ ಕೊನೆಯೇ ಇರಲಿಲ್ಲ.

ನೂರ್ ಜಹಾನ್ ಜಾಣೆ. ತನ್ನ ಪ್ರೀತಿಯ ಅಮೃತ ಸಿಂಚನದಿಂದ ಸಮಸ್ತ ಅಧಿಕಾರವನ್ನೂ ಅಧಿಕಾರ ಚಿಹ್ನೆಗಳನ್ನೂ ಅಥವಾ ಪ್ರತೀಕಗಳನ್ನೂ ವಶಪಡಿಸಿಕೊಳ್ಳಬೇಕು. ಜನಾನಾದ ಯಜಮಾನಿ ಪಾದಶಾಹ್ ಬೇಗಂ ಆಗಿಯೇ ಇನ್ನೂ ಮುಂದುವರಿದಿರುವ ಜಗತ್‌ಗೋಸಿನಿಯಿಂದ ರಾಜಮುದ್ರೆಯನ್ನು ಕಸಿದುಕೊಳ್ಳದೆ ಸರ್ವಾಧಿಕಾರ ರವಾನೆಯಾಗುವುದು ಸಾಧ್ಯವಿಲ್ಲ ಎನ್ನುವುದನ್ನು ಖಚಿತವಾಗಿ ತಿಳಿದಿದ್ದಳು. ಅವಕಾಶ ನೋಡಿ ಅದನ್ನು ದಕ್ಕಿಸಿಕೊಂಡು ಬಿಟ್ಟರೆ ತನ್ನ ಮಹತ್ವಾಕಾಂಕ್ಷೆಗೆ ಅರ್ಥಸಿಕ್ಕಂತಾಗುತ್ತದೆ ಎಂದುಕೊಂಡಳು.

ಒಮ್ಮೆ ಸಂಜೆ ವೇಳೆ ಜಹಾಂಗೀರ್ ತನ್ನ ಪ್ರೀತಿಯ ಪಾರಿವಾಳಗಳು ಮತ್ತು ಸಾರಸ ಹಕ್ಕಿಗಳ ಜೊತೆ ಸರಸವಾಡುತ್ತಾ ಕಾಳು ಉಣಿಸುತ್ತಾ ಕುಳಿತಿರುವಾಗ ನೂರ್ ಜಹಾನ್ ಅಲ್ಲಿಗೆ ಬಂದಳು. ಗಂಡ, ಹಕ್ಕಿಗಳ ಜೊತೆ ಆಟವಾಡುತ್ತಿದ್ದುದನ್ನು ಗಮನಿಸಿ.

"ಜಹಾಂಪನಾಹ್, ಮೊಘಲ್ ಸಾಮ್ರಾಟರ ಎದುರು ಎಷ್ಟೊಂದು ಸಮಸ್ಯೆಗಳಿವೆ. ಸಾಮ್ರಾಜ್ಯದ ಅಭಿವೃದ್ಧಿ ಯೋಜನೆಗಳ ಬಗ್ಗೆ ಆಲೋಚಿಸಬೇಕಿದೆ. ಸಮುದ್ರ ವ್ಯಾಪಾರ, ವ್ಯವಹಾರಗಳ ಬಗ್ಗೆ ಹೀಗಿರುವಾಗ ಇವುಗಳ ಜೊತೆ ಆಡುತ್ತಿರುವಿರಲ್ಲ. ನಿಮಗೆ ಏನೆನ್ನಬೇಕು?"

"ಬೇಗಂ, ನಾನು ಎಂದೋ ಹೇಳಿದ್ದೇನೆ. ಇನ್ನು ಮುಂದೆ, ಆಡಳಿತ, ರಾಜನೀತಿ, ಅಭಿವೃದ್ಧಿ, ಯೋಜನೆ, ಯೋಚನೆ ಇತ್ಯಾದಿ ಮಾತುಗಳು ಬೇಡ. ನಾನು ಬೇಸತ್ತು ಹೋಗಿದ್ದೇನೆ. ಇದೆಲ್ಲವನ್ನೂ ನಿನಗೆ ಬಿಟ್ಟು ಬಿಟ್ಟಿದ್ದೇನೆ. ಆದರೆ ಅದಕ್ಕೆ ಮುಂಚೆ ನನ್ನದೊಂದು ಅಭಿಲಾಷೆಯಿದೆ. "ಅಭಿಲಾಷೆಯೆ? ಹೆಂಡ, ಹೆಣ್ಣು ಹೊರತಾಗಿ ನಿಮಗೂ ಬೇರೆಯೇ ಆದ ಅಭಿಲಾಷೆಗಳು ಇವೆಯೇನು?"

"ಬೇಗಂ ನನ್ನನ್ನು ತೀರಾ ಕನಿಷ್ಠನನ್ನಾಗಿ ಮಾಡಿಬಿಟ್ಟೆ ನಿಜ. ನನಗೆ ಹೆಂಡ ಹೆಣ್ಣುಗಳಿಲ್ಲದೆ ಬದುಕಲು ಸಾಧ್ಯವಿರಲಿಲ್ಲ. ಆದರೆ ಈಗ ನೀನು ಬಂದೆ. ನಿನ್ನೊಡಲೇ ಮಧುಪಾತ್ರೆ, ನಿನ್ನ ಪ್ರೀತಿಯೇ ಮದಿರೆ. ಲೋಕದ ಸಮಸ್ತ ಹೆಣ್ಣುಗಳ ಸೌಂದರ್ಯದ ಮೊತ್ತವೇ ನೀನು, ಎದುರಿಗೆ ಇರುವಾಗ, ಇನ್ನು ಯಾವ ಹೆಣ್ಣುಗಳಿಗಾಗಿ ಹಂಬಲಿಸಲಿ? ......(ಮೌನ) ಅತ್ಯಂತ ಅನಿವಾರ್ಯವಾಗಿಯೂ, ನಿರಂತರ ಚಲಾವಣೆಯಲ್ಲಿಯೂ, ಇಡೀ ಸಾಮ್ರಾಜ್ಯದಲ್ಲಿ ಕಾಣಿಸಿಕೊಳ್ಳುವ ವಸ್ತು ಯಾವುದೆಂದು ಭಾವಿಸಿದ್ದಿ? ಶ್ರೀಮಂತರಿಗೂ ಬಡವರಿಗೂ, ಎಲ್ಲರಿಗೂ ಯಾವುದೇ ತಾರತಮ್ಯವಿಲ್ಲದೆ, ಬೇಕೇ ಬೇಕೆನ್ನುವ ವಸ್ತು ಯಾವುದೆಂದು ಹೇಳು ನೋಡುವಾ!"

"ಜಹಾಂಪನಾಹ್, ಈ ಪ್ರಶ್ನೆಗೆ ಉತ್ತರವನ್ನು ಎಂಥ ಮುಗ್ಧರೂ, ಮೂರ್ಖರೂ ಹೇಳಬಲ್ಲರು. ಅದೆಂದರೆ ನಾಣ್ಯಗಳು. ಪ್ರತಿ ಮನುಷ್ಯನ ಕೈಲಿ, ಮಕ್ಕಳೂ ಮುದುಕರೂ ಸೇರಿದಂತೆ ಓಡಾಡುತ್ತಿರುತ್ತದೆ. ದೊಡ್ಡವರು, ಚಿಕ್ಕವರು ಎಂದು ವ್ಯತ್ಯಾಸ ಮಾಡುವುದಿಲ್ಲ."

"ಸರಿಯಾಗಿ ಊಹಿಸಿದೆ ಬೇಗಂ. ನಾಣ್ಯಗಳು ರಾಜನ ಅಧಿಕಾರದ ಪ್ರತೀಕಗಳು. ಆದ್ದರಿಂದ ಹೊಸರೀತಿಯ ನಾಣ್ಯಗಳನ್ನು ಹೊಸ ಸಂಕೇತಗಳೊಂದಿಗೆ, ಹೆಸರಿನೊಂದಿಗೆ ಟಂಕಿಸಿ ಚಲಾವಣೆಗೆ ತರಬೇಕೆಂದಿದ್ದೇನೆ. ಇಲ್ಲೀವರೆಗೆ ತಾತನ ಕಾಲದಿಂದ ಅದೇ ಮಾದರಿ ನಾಣ್ಯಗಳು! ಅಲ್ಪ ಸ್ವಲ್ಪ ವ್ಯತ್ಯಾಸಗಳೊಂದಿಗೆ! ಈಗ ಅದ್ಭುತವಾದ ರೀತಿಯ ವಿನ್ಯಾಸ. ಚಿಹ್ನೆ, ಹೆಸರುಗಳೊಂದಿಗೆ ಅದನ್ನು ಆದೇಶಿಸಬೇಕೆಂದಿದ್ದೇನೆ!"

ಜಹಾಂಗೀರನ ಈ ನಿರ್ಧಾರ ನೂರ್ ಜಹಾನಳಲ್ಲಿ ರೋಮಾಂಚನವನ್ನು ಉಂಟು ಮಾಡಿತು. ತನ್ನ ನಾಣ್ಯಗಳ ವಿನ್ಯಾಸವನ್ನು ತಾನೇ ರೂಪಿಸುವುದಾಗಿ ಹೇಳಿದಳು. ಎಷ್ಟು ಸುಂದರವಾಗಿರಬೇಕೆಂದರೆ ಜನರಿಗೆ ಅದನ್ನು ಖರ್ಚುಮಾಡಲೂ ಮನಸ್ಸು ಬಾರದಂತೆ ಇರಬೇಕೆಂದುಕೊಂಡಳು. 400, 300, 200, 100 ತೊಲಗಳ ಚಿನ್ನದ ದೈತ್ಯ ನಾಣ್ಯಗಳು! ಅವುಗಳನ್ನು ಮರೆಯಲೂ ಸಾಧ್ಯವಾಗದಂತಹವು. ಜಗತ್ತಿನಲ್ಲಿಯೇ ಅತ್ಯಂತ ದೈತ್ಯ ನಾಣ್ಯಗಳೆಂದು ಗುರುತಿಸಿಕೊಂಡವು. ಒಂದು ನಾಣ್ಯದ ತೂಕವಂತೂ ಇಂದಿನ ಹನ್ನೆರಡು ಕಿಲೋಗ್ರಾಮ್‌ಗಳಷ್ಟು ಇದ್ದು, ಅದು ಪೂರ್ತಿಯಾಗಿ ಅಪ್ಪಟ ಚಿನ್ನದಿಂದ ತಯಾರಾಗಿತ್ತು. ಎಲ್ಲಕ್ಕಿಂತ ಅಚ್ಚರಿಯ ಸಂಗತಿಯಾಗಿ ಅದರ ಮೇಲೆ "ನೂರ್ ಜಹಾನ್‌ರಾಣಿ ಬೇಗಂ" ಎಂದು ಕೆತ್ತಲಾಗಿತ್ತು.

ಇಂತಹ ಒಂದು ಅದ್ಭುತವಾದ ಕೆಲಸದ ಹಿಂದೆ ಇದ್ದುದು, ನೂರ್ ಜಹಾನಳ ಬಗ್ಗೆ ಜಹಾಂಗೀರನಿಗಿದ್ದ ಅಪಾರ ಪ್ರೀತಿ!

ನೂರ್ ಜಹಾನಳ ಸಲಹೆ ಒಪ್ಪಿಗೆಗಳು ಜಹಾಂಗೀರನಿಗೆ ಪ್ರತಿಯೊಂದು ಕೆಲಸದ ಹಿಂದೆ ಇದ್ದೇ ಇರಬೇಕೆಂಬುದು ಒಂದು ನಿಯಮವಾಗಿತ್ತು! ವ್ರತವಾಗಿತ್ತು.

ತಾನೇ ಕೇಳಿ ಪಡೆಯಬೇಕೆಂದುಕೊಂಡದ್ದನ್ನೆಲ್ಲ, ಜಹಾಂಗೀರನೇ ಸ್ವತಃ ನೀಡುತ್ತಿದ್ದ.

ಜಹಾಂಗೀರನ ಈ ಅತಿರೇಕದ ನಡೆ ಸಾಮ್ರಾಜ್ಯದಲ್ಲೆಲ್ಲ ಹಲವು ರೀತಿಯ ಟೀಕೆ, ಟಿಪ್ಪಣಿಗಳಿಗೆ ಗುರಿಯಾಗಿತ್ತು. ಜಗತ್‌ಗೋಸಿನಿ ಕುಸಿದು ಹೋಗಿದ್ದಳು. ಒಂದಲ್ಲ ಒಂದು ದಿನ ಅದೂ ಸದ್ಯದಲ್ಲೇ, ತನ್ನಲ್ಲಿರುವ ರಾಜಮುದ್ರೆ ಕೈಜಾರಿ ಹೋಗುವುದೆಂದು ಬಲ್ಲವಳಾಗಿದ್ದಳು. ಅದು ಕೈ ತಪ್ಪಿದರೆ, ತನ್ನ ಸ್ಥಿತಿ ಹಲ್ಲು ಕಿತ್ತ ಹಾವಿನಂತೆ! ಜನಾನಾದಲ್ಲಿ ತನ್ನ ಬಗ್ಗೆ ಕುರುಡು ಕಾಸಿನ ಕಿಮ್ಮತ್ತೂ ಇಲ್ಲದಂತಾಗುವುದೆಂದು ಹೆದರಿದಳು. ನೂರ್ ಜಹಾನಳೊಂದಿಗೆ ದ್ವೇಷ, ಸೇಡುಗಳನ್ನು ಸಾಧಿಸುವುದೆಂದರೆ, ಸಾವನ್ನು ಆಹ್ವಾನಿಸಿದಂತೆಯೇ! ಈ ಚಾಲಾಕಿ ಹೆಣ್ಣು ಯಾವ ಮಟ್ಟಕ್ಕಾದರೂ ಇಳಿದು ತನಗಾಗದವರ ಹುಟ್ಟು ಅಳಿಸಿಬಿಡಬಲ್ಲಳೆಂದು ಯೋಚಿಸಿ, ಸದಾ ಅವಳ ಹೆದರಿಕೆಯಲ್ಲಿಯೇ ಬದುಕುತ್ತಿದ್ದಳು.

ಇಬ್ಬರು ಸವತಿಯರೂ ಬೇಟೆಗೆ ಹೊರಡುವ ದಿನ ಬಂತು. ಮದುವೆಯಾದಂದಿನಿಂದ ಮೊದಲ ಬಾರಿಗೆ ಇಬ್ಬರೂ ಒಟ್ಟಿಗೆ ಗಂಡನ ಜೊತೆ ಸಹಪ್ರಯಾಣಕ್ಕೆ ಹೊರಟಿದ್ದಾರೆ. ಜಗತ್‌ಗೋಸಿನಿ ರಾಜಪೂತ ಹೆಣ್ಣು. ಬೇಟೆಯ ಕಲೆ. ಯುದ್ಧಕಲೆಗಳ ಪರಿಚಯ ಇತ್ತಾದರೂ ನೂರ್ ಜಹಾನ್ ಜೊತೆ ಹೋಲಿಕೆ ಸಾಧ್ಯವಿರಲಿಲ್ಲ. ಎಳೆವಯಸ್ಸಿನಲ್ಲಿ ಬಿಲ್ವಿದ್ಯೆಯನ್ನು ಕಲಿತು, ಸಮರ್ಥ ಗುರಿಕಾರಳೆಂದು ಹೆಸರು ಮಾಡಿದ್ದಳು. ಕಾಡು

ಪ್ರಾಣಿಗಳನ್ನು ನಿರಾಯಾಸವಾಗಿ, ಏಕ ಕಾಲದಲ್ಲಿ ಎರಡು ಮೂರನ್ನು ಸರಿಗುರಿಯಿಂದ ಗುಂಡಿಟ್ಟು ಕೊಂದಿದ್ದಳು. ಜಹಾಂಗೀರನೂ ಬೇಟೆಯಾಡುವಲ್ಲಿ ಪ್ರವೀಣನಾಗಿದ್ದ. 'ಬೇಟೆ' ಹೆಸರು ಕೇಳಿದರೆ ಸಾಕು, ರೋಮಾಂಚನಗೊಳ್ಳುತ್ತಿದ್ದ.

ಹೊರಡುವುದಕ್ಕೆ ಮೊದಲು ಜಹಾಂಗೀರ್ ತನ್ನ ಪ್ರೀತಿಯ ಬೇಗಂಗೆ ತಾನು ಬಳಸುತ್ತಿದ್ದ ವಿಶೇಷವಾದ ಬಂದೂಕನ್ನು ಕಳಿಸಿಕೊಟ್ಟ.

ಜಹಾಂಗೀರ್ ಹೆಂಡತಿಯರೊಂದಿಗೆ ಬೇಟೆಯ ಯಾತ್ರೆ ಕೈಗೊಳ್ಳುವುದಕ್ಕೆ ಹದಿನೈದು ದಿನಗಳ ಮೊದಲೇ ಒಂದು ತುಕಡಿ ಸೈನಿಕರು ಕಾಡಿನಲ್ಲಿ ರಾಜರಿಗಾಗಿಯೇ ಮೀಸಲಿದ್ದ ಜಾಗವನ್ನು ಹುಡುಕಿ, ಕಾಡು ಪ್ರಾಣಿಗಳು ತಮ್ಮ ಬೇಟೆ ಹುಡುಕಿಕೊಂಡು ಬರಬಹುದಾದ ಜಾಗಗಳನ್ನು ಗುರುತಿಸಿ, ಅಲ್ಲಿ ಹುಲಿ, ಸಿಂಹಗಳನ್ನು ಸೆಳೆಯಲು ಆಮಿಷವಾಗಿ ಕತ್ತೆಗಳನ್ನು ಬಲಿಪಶುಗಳಾಗಿ ಕಟ್ಟಿ ಕಾದಿರಿಸಿದರು. ಒಂದೆರಡು ದಿನ ಕಾದ ಮೇಲೆ ಹುಲಿ ಬಂದು ಕತ್ತೆಯ ಮೇಲೆ ಎರಗಿ ಅದರ ಕತ್ತು ಸೀಳಿ, ಅದರ ಮಾಂಸಭಕ್ಷಣೆ ಮಾಡಿತು. ಇದೇ ರೀತಿ, ಹುಲಿಗಳನ್ನು ಆಕರ್ಷಿಸಲು ಆಮಿಷವಾಗಿ ಕತ್ತೆಗಳನ್ನು ಒಂದೊಂದಾಗಿ ಕಟ್ಟಿದರು.

ಜಹಾಂಗೀರ್ ಇಬ್ಬರು ಹೆಂಡತಿಯರಿಗೂ ಬೇಗ ಹೊರಡಬೇಕೆಂಬ ಆದೇಶವನ್ನು ರವಾನಿಸಿದ.

ಸೇವಕರು, ಕುದುರೆ ಸವಾರಿಗೆ ಅನುಕೂಲವಾಗುವಂತೆ ಜೀನುಗಳನ್ನು, ಆಸನಗಳನ್ನು ಸಿದ್ಧಪಡಿಸಿದರು.

ಇಬ್ಬರು ಹೆಂಗಸರೂ ಎದುರು ಬದರಾದರು. ಮೊಟ್ಟಮೊದಲ ಬಾರಿಗೆ, ಇಬ್ಬರೂ ಸೇರಿದ್ದರಿಂದ ನೋಡುವವರ ಕುತೂಹಲ ಹೆಚ್ಚಿತ್ತು. ಇಬ್ಬರು ಸವತಿಯರಲ್ಲಿಯೂ ಸಹಜವೆಂಬಂತೆ ಮತ್ಸರ ತುಂಬಿದ್ದರೂ ಸೌಜನ್ಯಕ್ಕಾಗಿ ಮೆಹರುನ್ನೀಸಾ ಜಗತ್‌ಗೋಸಿನಿಗೆ, ಕೋರ್ನಿಶ್ ಮಾಡಿ ಗೌರವ ಸೂಚಿಸಿದಳು. ಜಗತ್‌ಗೋಸಿನಿಯೂ ಮನಸ್ಸಿಲ್ಲದ ಮನಸ್ಸಿಂದ ಸೆಟೆದುಕೊಂಡೇ ಪ್ರತಿಕ್ರಿಯೆ ತೋರಿದಳು. ಅವರಿಬ್ಬರ ಮುಖದಲ್ಲಿನ ಭಾವಗಳನ್ನು ಸುತ್ತಲೂ ಇದ್ದವರು ಗಮನಿಸುತ್ತಿದ್ದರು. ಜಹಾಂಗೀರ್ ಕೂಡಾ ಇಬ್ಬರ ನಡುವಿನ ನಾಟಕವನ್ನು ತಮಾಶೆಯಿಂದ ನೋಡುತ್ತಿದ್ದನೇ ಹೊರತು ಪ್ರತಿಕ್ರಿಯಿಸಲಿಲ್ಲ. ಬದಲಾಗಿ ಬೇಗನೆ ಹೊರಡುವಂತೆ ಆದೇಶಿಸಿದ.

ಅದೇ ಸಮಯಕ್ಕೆ ಮಾವುತ ಹೌಡಾದೊಂದಿಗೆ ಇದ್ದ ಆನೆಯನ್ನು ಕರೆತಂದು ಅವರಿಬ್ಬರ ಮುಂದೆ ನಿಲ್ಲಿಸಿದ ಮತ್ತು ಕುಳಿತುಕೊಳ್ಳಲು ಸೂಚಿಸಿದ. ಆನೆ ಮುಂಗಾಲುಗಳನ್ನು ಮಡಚಿ ಕುಳಿತುಕೊಂಡಿತು. ಹೌಡಾ ಚಿನ್ನದಿಂದ ತಯಾರಿಸಲಾಗಿತ್ತು. ಒಳಗೆ ಮೆತ್ತನೆಯ ಹಾಸುಗಳನ್ನು ಹಾಸಲಾಗಿತ್ತು. ಹಾಗೆಯೇ ಬೆನ್ನಿಗೆ ಮಲ್ಲಿಗೆಯಂತಹ ಮೃದುವಾದ ದಿಂಬುಗಳನ್ನು ಇರಿಸಲಾಗಿತ್ತು. ಮುತ್ತು ವಜ್ರಗಳಿಂದ ಸಿಂಗರಿಸಿ ಹೊಲಿದ ಅಂಚುಗಳುಳ್ಳ ಪರದೆಗಳನ್ನು ನಾಲ್ಕೂ ಕಡೆ ಇಳಿಬಿಡಲಾಗಿತ್ತು. ಮೊದಲಿಗೆ ಜಹಾಂಗೀರ್, ನಂತರ ಅನುಕ್ರಮದಲ್ಲಿ ವ್ಯತ್ಯಯವಾಗಿ ಮೆಹರುನ್ನೀಸಾ ಕಡೆಯಲ್ಲಿ ಜಗತ್‌ಗೋಸಿನಿ, ಹೌಡಾದೊಳಗೆ ಕುಳಿತರು. ಮಾವುತ ಅವರು ಹತ್ತಿದ ಮೇಲೆ ತನ್ನ ಆನೆಯನ್ನು ಎಬ್ಬಿಸಿ, ನಡೆಯಲು ಆದೇಶಿಸಿದ. ಇಬ್ಬರು ಹೆಂಗಸರು ಮುಖದ ಮೇಲೆ ಪರದೆ ಎಳೆದುಕೊಂಡರು.

ನಂತರ 500 ಮಂದಿ ಅಹದಿಗಳು (ನಪುಂಸಕರು). ಬಂದೂಕುಧಾರಿಗಳು, ಭರ್ಜಿದಾರರು, ಒಂದಷ್ಟು ಮಂದಿ ಸಭಾಸದರು ಹೌಡಾ ಹೊತ್ತ ಆನೆಯನ್ನು ಹಿಂಬಾಲಿಸಿದರು.

ಮರಗಿಡಗಳೊಂದಿಗೆ ದಟ್ಟವಾಗಿದ್ದ ಕಾಡನ್ನು ಪ್ರವೇಶಿಸಿದರು. ಎಲೆಗಳ ಕೊಂಬೆಗಳ ಸಳಸಳ ಸದ್ದಿನ ನಡುವೆ ಹಲವು ಬಗೆಯ ಹಕ್ಕಿಗಳ ದನಿಗಳು ಕೇಳಿಬರುತ್ತಿದ್ದವು. ಸಾಕಷ್ಟು ಆಹ್ಲಾದಕರವಾದ ವಾತಾವರಣ ನಿರ್ಮಾಣವಾಗಿತ್ತು. ರಾಜ ಪರಿವಾರದ ಅಕ್ಕಪಕ್ಕಗಳಲ್ಲಿ ಬಂದೂಕುಧಾರಿಗಳು ಅಪಾಯವನ್ನು ಎದುರಿಸಲು ಬಂದೂಕುಗಳನ್ನು ಹೆಗಲ ಮೇಲೆ ಇರಿಸಿಕೊಂಡಿದ್ದರು. ಜಹಾಂಗೀರ್ ಅವರನ್ನು ಒಳ ಹೋಗಲು ಆದೇಶಿಸಿದ. ಹುಲಿಯೊಂದು ಆಗಲೇ ಬೇಟೆಗಾಗಿ ಸಿದ್ಧವಾಗಿತ್ತು. ಈ ಬೇಟೆ ಈ ಬಾರಿ ಬಹಳ ಮಹತ್ವದ್ದಾಗಿತ್ತು. ಇಬ್ಬರು ಹೆಂಗಸರೂ ಬೇಟೆಗಾರರಾಗಿ ಬಂದಿದ್ದರು. ಜಹಾಂಗೀರ್ ಮನಸ್ಸಾದಾಗಲೆಲ್ಲ ಒಂದಷ್ಟು ಸೈನಿಕರನ್ನು ಬೆನ್ನಿಗಿರಿಸಿಕೊಂಡು ಹೋಗುತ್ತಿದ್ದ. ಆದರೆ ಈ ಬಾರಿ ಇದು ಅವಿಸ್ಮರಣೀಯ! ನವವಧುವಾಗಿ ಬಂದಿರುವ ಮೆಹರುನ್ನೀಸಾ ಜೊತೆಗಿದ್ದಾಳೆ. ಅಲ್ಲದೆ ಅವಳ ಬೇಟೆಯ ಕಾಲದ ಪ್ರಾತ್ಯಕ್ಷಿಕೆಯೂ ಆಗಲಿದೆ.

ಜಹಾಂಗೀರ್ ಅವರ ನಡುವಿನ ಮೌನದ ಹಿಂದಿನ ಭಾವನೆಗಳು ಏನಿರಬಹುದೆಂಬುದನ್ನು ಊಹಿಸುತ್ತಿದ್ದ. ಮೆಹರುನ್ನೀಸಾಳಿಗೆ ತನ್ನ ವ್ಯಾಪ್ತಿಯಲ್ಲಿ ಇರುವ ಎಲ್ಲವನ್ನೂ ಕೊಡಬಲ್ಲನಾಗಿದ್ದರೂ ಜಗತ್‌ಗೋಸಿನಿಯ ವಶದಲ್ಲಿರುವ ರಾಜಮುದ್ರೆಯನ್ನು ಕಸಿದುಕೊಡಲಾರ. ಮೆಹರುನ್ನೀಸಾ ಸ್ವಪ್ರಯತ್ನದಿಂದ ಅವಳನ್ನು ಮೆಚ್ಚಿಸಿ ಪಡೆದುಕೊಳ್ಳಬೇಕಲ್ಲದೆ, ಜನಾನಾದ ವ್ಯವಹಾರಗಳಲ್ಲಿ ತಾನು ಪ್ರವೇಶಿಸಲಾರದವನಾಗಿದ್ದ.

ಇಬ್ಬರು ಹೆಂಗಸರೂ ತಮ್ಮ ಬಂದೂಕುಗಳನ್ನು ಬೇಟೆಗೆ ಅಣಿಗೊಳಿಸಿಕೊಂಡರು. ಅಷ್ಟರಲ್ಲಿ ಆನೆಯ ಘೀಂಕಾರ ಕೇಳಿಸಿತು. ಒಂದು ರೀತಿಯ ಹೆದರಿಕೆ ಕಾಣಿಸಿಕೊಂಡಿತು. ಬಹುಶಃ ಅದಕ್ಕೆ ಹುಲಿಯ ವಾಸನೆ ಹತ್ತಿರಬೇಕೆಂದು ಮಾವುತ ಭಾವಿಸಿದ.

ಆನೆಯಲ್ಲಿ ಹುಟ್ಟಿದ ನಡುಕ, ತೊದಲುತ್ತಿದ್ದ ಅದರ ಹೆಜ್ಜೆಗಳು ಹುಲಿ ಸಮೀಪದಲ್ಲಿ ಎಲ್ಲಿಯೋ ಇರಬೇಕೆಂಬುದಕ್ಕೆ ಸೂಚನೆಗಳಾಗಿದ್ದವು. ತಕ್ಷಣವೆ ಎಲ್ಲರೂ ಗುರಿಯಿಟ್ಟರು. ದೂರದ ಬಂಡೆಯ ಸಮೀಪದಲ್ಲಿ ಮತ್ತು ಆನೆಗೆ ತೀರಾ ಸಮೀಪ ಇರುವುದನ್ನು ಊಹಿಸಿದರು. ಸೈನಿಕರೂ ತಮ್ಮ ತಮ್ಮ ಬಂದೂಕುಗಳಿಂದ ಗುರಿ ಇಟ್ಟರು.

ಮೆಹರುನ್ನೀಸಾ ಹುಲಿಯನ್ನು ಗುರುತಿಸಿದಳು. ಅವಳೂ ಒಳ್ಳೆಯ ಗುರಿಕಾರಳಾಗಿದ್ದಳು. ಬೇಟೆಯಾಡಬಲ್ಲವಳಾಗಿದ್ದಳು. ಆದರೆ ಹುಲಿಗಳ ಬೇಟೆಯಾಡುವ ಅವಕಾಶ ಸಿಕ್ಕಿರಲಿಲ್ಲ. ಈಗ ನೋಡಿದರೆ ಹುಲಿ ತೀರಾ ತೀರಾ ಸಮೀಪದಲ್ಲಿದೆ. ಹುಲಿಯನ್ನು ಹತ್ತಿರದಲ್ಲಿ ಕಂಡ ಆನೆ ತತ್ತರಿಸಿತು. ಹೌಡಾದ ಒಳಗೆ ಕುಳಿತವರಿಗೂ ಭಯ, ಆತಂಕಗಳು ಅನುಭವಕ್ಕೆ ಬಂದವು. ಆದರೂ ಮೆಹರುನ್ನೀಸಾ ವಿಚಲಿತಳಾಗಲಿಲ್ಲ. ಬಂದೂಕನ್ನು ಹುಲಿಗೆ ಗುರಿಯಿಟ್ಟಳು. ಸಿಟ್ಟಿನಿಂದ ಹುಲಿ ಅವರ ಮೇಲೆ ಎರಗಬೇಕೆಂದು ಎಗರುತ್ತಿದ್ದಂತೆ ಮೆಹರುನ್ನೀಸಾಳ ಬಂದೂಕಿನಿಂದ ಹೊರಟ ಗುಂಡು ನೇರವಾಗಿ ಹುಲಿಯ ಎದೆಯನ್ನು ಪ್ರವೇಶಿಸಿದಂತೆ ಕಂಡಿತು. ರಂಧ್ರದಿಂದ ರಕ್ತ ಚಿಲ್ಲನೆ ಚಿಮ್ಮಿ ನೆಲವನ್ನೆಲ್ಲ ತೋಯಿಸಿತು.

"ಸಾಮ್ರಾಜ್ಞಿ ಹುಲಿಯನ್ನು ಕೊಂದುಬಿಟ್ಟರು" ಎಂದು ಹರ್ಷೋದ್ಗಾರಗಳೊಂದಿಗೆ

ಚಪ್ಪಾಳೆ, ಜಯಕಾರಗಳು ಅಲ್ಲಿನ ಪ್ರಶಾಂತ ವಾತಾವರಣದಲ್ಲಿ ಕಲರವ ಸೃಷ್ಟಿಸಿದವು.

ಎಲ್ಲರ ಪ್ರಾಣ ಅಪಾಯದ ಅಂಚಿನಲ್ಲಿ ಇರುವಾಗ, ಹೌಡಾದಿಂದ ಹೊರಟ ಗುಂಡು ಎಲ್ಲರನ್ನೂ ಕಾಪಾಡಿತು. ಆದರೆ ಆ ಗುಂಡು ಹೊರಟದ್ದು ಮೆಹರುನ್ನೀಸಾಳ ಬಂದೂಕಿನಿಂದ ಅಲ್ಲ! ಜಗತ್‌ಗೋಸಿನಿಯ ಬಂದೂಕಿನಿಂದ! ಇದೊಂದು ಸಂಗತಿಯಿಂದ ಜಹಾಂಗೀರ್ ಜಗತ್‌ಗೋಸಿನಿಯ ಅಭಿಮಾನಿಯಾದ. ಕಾವ್ಯಾತ್ಮಕ ಶಬ್ದಗಳಿಂದ ಹೊಗಳಿ, ಹತ್ತಿರಕ್ಕೆಳೆದುಕೊಂಡು, ಇಲ್ಲಿವರೆಗೂ ಅವಳಿಗೆ ವಂಚಿಸಿದ್ದ ಪ್ರೀತಿಯನ್ನೆಲ್ಲಾ ಸುರಿದು ಬಿಟ್ಟ. ಜಗತ್‌ಗೋಸಿನಿಗೆ ತನ್ನ ಈ ಕೆಲಸ ಮೆಹರುನ್ನೀಸಾಳ ಮೇಲೆ ಸಾಧಿಸಿದ ವಿಜಯವೆಂದೇ ಭಾವಿಸಿದಳು. ಅವಕಾಶ ದೊರೆತಾಗ, "ರಾಜಮನೆತನದ ಹೆಣ್ಣುಗಳಿಗಲ್ಲದೆ ಬೇಟೆಯಾಡುವ ಕಲೆ, ಎಲ್ಲಿಂದಲೋ ನಿರಾಶ್ರಿತರಾಗಿ ಬಂದು ಸೇರಿಕೊಂಡ ಕುಟುಂಬದ ಹೆಣ್ಣು ಮಕ್ಕಳಿಗೆ ಹೇಗೆ ತಾನೇ ಸಾಧ್ಯ?" ಎಂದು ವ್ಯಂಗ್ಯವಾಗಿ ಟೀಕಿಸಿದಳು.

ಬೇಟೆಯ ಬೆನ್ನಲ್ಲೇ ಅರಮನೆಯಲ್ಲಿ ಸಂಭ್ರಮಾಚರಣೆ. ಅದ್ದೂರಿ ಭೋಜನ. ಜಗತ್‌ಗೋಸಿನಿಗೆ ಅತ್ಯಂತ ಪ್ರಿಯವಾದ ಮುತ್ತಿನ ಕಂಠಾಭರಣದ ಉಡುಗೊರೆ! ಇದರಿಂದ ಜಗತ್‌ಗೋಸಿನಿಯ ಅಸಮಾಧಾನವೆಲ್ಲ ಮರೆಯಾಗಿ, ಜಹಾಂಗೀರ್ ಇನ್ನಾದರೂ ತನ್ನವನಾದನೆಂದು ಹಿಗ್ಗಿದಳು. ಎಷ್ಟೋ ದಿನಗಳಿಂದ ತನ್ನನ್ನು ನೋಡಲು ಜನಾನಾಕ್ಕೆ ಬಾರದಿದ್ದ ಗಂಡ ಇಂದು ಬಂದದ್ದು, ಅವಳಿಗೆ ಸ್ವರ್ಗವೇ ಭೂಮಿಗಿಳಿದಂತಾಯಿತು. ಅವನ ಪಕ್ಕ ಸೇರಿ, ಅನುಭವಿಸಬೇಕೆಂದು ಬಯಸಲಿಲ್ಲ. ಅವನ ಮನೋಕಾಂಕ್ಷೆಗಳನ್ನು ಅರಿತು ಅವುಗಳನ್ನು ಪೂರೈಸುವುದರಲ್ಲಿ ತೃಪ್ತಿ ಕಾಣುತ್ತಿದ್ದಳು. ಮೆಹರುನ್ನೀಸಾಳ ಪರಿಚಯವಾಗುವವರೆಗೂ ಅವನ ರಾಣಿಯರಲ್ಲಿ ಅತ್ಯಂತ ಸುಂದರಳೂ, ಮೆಚ್ಚಿನವಳೂ ಆಗಿದ್ದವಳೆಂದರೆ ಜಗತ್‌ಗೋಸಿನಿಯೇ.

ಆದರೆ ಮೆಹರುನ್ನೀಸಾಳೂ ಅವಳಂತೆಯೇ, ಒಂದು ರೀತಿಯಲ್ಲಿ ಅವಳಿಗಿಂತ ಹೆಚ್ಚಾಗಿಯೇ ಪ್ರಿಯಳಾಗಿದ್ದಳು. ಕಾರಣ ಅವಳಲ್ಲಿ ಸೌಂದರ್ಯ ಮಾತ್ರವಲ್ಲ, ಜನಾನಾದಲ್ಲಿನ ಯಾವ ಹೆಣ್ಣಿನಲ್ಲಿಯೂ ಇಲ್ಲದ ಬುದ್ಧಿ ಮತ್ತೆ ಜಾಣ್ಮೆ, ರಾಜಕೀಯ ಚಾಣಾಕ್ಷತೆ, ಬಹುಮುಖ ಪ್ರತಿಭೆ, ಸಾಹಿತ್ಯ, ಸಂಗೀತ, ಕಾವ್ಯ, ಚಿತ್ರಕಲೆ ಎಲ್ಲದರಲ್ಲಿಯೂ ಅನನ್ಯಳಾಗಿದ್ದಳು. ಜೊತೆಗೆ ಸ್ವಭಾವದಿಂದ ದಯೆ, ಕರುಣೆ, ಅನುಕಂಪ, ಅದರಲ್ಲಿಯೂ ಹೆಣ್ಣು ಮಕ್ಕಳ ಪ್ರಗತಿ, ಸ್ವಾವಲಂಬನೆ, ಸಾಮಾಜಿಕ ಸ್ವಾತಂತ್ರ್ಯಗಳನ್ನು ಕಾಣಬೇಕೆಂದು ತುಡಿಯುತ್ತಿದ್ದಳು. ಎಲ್ಲಕ್ಕಿಂತ ಹೆಚ್ಚಾಗಿ ತನ್ನ ಮೇಲೆ ಪ್ರೀತಿಯನ್ನೆಲ್ಲ ಸುರಿದುಬಿಟ್ಟಿದ್ದಳು. ತನಗಾಗಿಯೇ ಅವಳ ಬದುಕು ಎನ್ನುವಷ್ಟು ಮಟ್ಟಿಗೆ ನಂಬಿಕೆ ಮೂಡಿಸಿದ್ದಳು.

ಆದರೆ ಅವಳಲ್ಲಿನ ದಿಟ್ಟತನ, ಯಾವುದನ್ನೂ, ಯಾರನ್ನೂ ಲಕ್ಷಿಸದೆ ಹೇಳಬೇಕೆಂಬುದನ್ನು ಹೇಳುವ ಸ್ವಭಾವ ಕೇಳುವವರಿಗೆ ಇರಿಸು ಮುರಿಸು ಉಂಟು ಮಾಡುತ್ತಿತ್ತು. ಇಂಥ ಸ್ವಭಾವದ ಜೊತೆ ಜೊತೆಯಲ್ಲಿಯೇ, ಧರ್ಮಶ್ರದ್ಧೆ, ಕರ್ತವ್ಯ ನಿಷ್ಠೆ, ಕಾವ್ಯಾನುಸಂಧಾನ, ಧರ್ಮ ಗ್ರಂಥಗಳ ಪಠನ, ಅನ್ಯಾಯದ ವಿರುದ್ಧ ಪ್ರತಿಭಟಿಸುವ ಛಾತಿ, ಎಲ್ಲವನ್ನೂ ರೂಢಿಸಿಕೊಂಡಿದ್ದಳು.

ಗುರಿ ಸಾಧನೆ ಅವಳ ಪ್ರಧಾನ ಗುಣವಾಗಿತ್ತು. ಬಯಸಿದ್ದನ್ನು ಪಡೆಯುವವರೆಗೆ ಸಮಾಧಾನವಿರುತ್ತಿರಲಿಲ್ಲ. ಈಗ ಅವಳ ದೃಷ್ಟಿ 'ರಾಜಮುದ್ರೆ'ಯ ಮೇಲಿದೆ. ಅದನ್ನು

ಸುಲಭವಾಗಿ ಪಡೆಯಲು ಸಾಧ್ಯವಿಲ್ಲವಾದರೂ ಪಡೆಯುತ್ತೇನೆಂಬ ಆತ್ಮವಿಶ್ವಾಸವಂತೂ ಖಂಡಿತ ಅವಳಲ್ಲಿದೆ.

ಆದರೆ ಈಗ ಸದ್ಯಕ್ಕೆ ತನ್ನ ಬೇಟೆಯ ಸೋಲನ್ನು ಸರಿಪಡಿಸಿಕೊಳ್ಳಬೇಕು. ಇಡುವ ಗುರಿ ಒಂದೂ ತಪ್ಪಬಾರದು. ಬಡಿ ಅಥವಾ ಮಡಿ ಸಿದ್ಧಾಂತವೇ ಅವಳ ಉಸಿರಾಗಿತ್ತು. ಮನುಷ್ಯನಲ್ಲಿ ಒಂದಲ್ಲ ಒಂದು ಸಮಯದಲ್ಲಿ, ಯಾವುದೋ ಒಂದು ವಿಚಾರದಲ್ಲಿ ಸೋಲು ಎದುರಾಗುವುದು ಸಹಜವೇ! ಆದರೆ ಈಗ ಅವಳು ಸೋತದ್ದು, ತನ್ನನ್ನು ದ್ವೇಷಿಸುವ ಬದ್ಧ ಶತ್ರುವಾದ ಸವತಿ ಜಗತ್‌ಗೋಸಿನಿ ಎದುರು! ಎಂಥ ಅಸಹನೀಯ ಅವಮಾನ! ಮತ್ತೊಮ್ಮೆ ಅವಳೆದುರು ಇಂತಹ ಸೋಲಿಗೆ ಅವಕಾಶ ನೀಡಬಾರದೆಂಬ ಪ್ರತಿಜ್ಞೆಯನ್ನು ಪೂರೈಸಲು ಸಾಧನೆಯ ಅಗತ್ಯವಿದೆ ಎಂದುಕೊಂಡಳು. ಮೀರ್ ಶಿಕಾರಿಯಿಂದ ಬಂದೂಕನ್ನು ಬಳಸುವ ಸರಿಗುರಿಯನ್ನು ಹೇಗೆ ಇಡಬೇಕೆಂಬ ತಂತ್ರಜ್ಞಾನವನ್ನು ಕಲಿತಳು. ನಿರಂತರ ಅಭ್ಯಾಸದ ಮೂಲಕ ಪರಿಣತಿ ಪಡೆಯಲು ಸಾಧ್ಯವಾಯಿತು.

ಬೇಟೆಯಿಂದ ಬಂದ ದಿನದಿಂದ ಜಹಾಂಗೀರ್ ಅವಳಿದ್ದ ಮನೆಗೆ ಬರುವುದೇ ಅಪರೂಪವಾಯಿತು. ಆದರೆ ಜಗತ್‌ಗೋಸಿನಿ ಮನೆಗೆ, ರಾಜ್ಯಾಡಳಿತದ ಬಿಡುವಿಲ್ಲದ ಕೆಲಸಗಳ ನಡುವೆಯೂ ಬಿಡಿಸಿಕೊಂಡು ಹೋಗಿ ಬರುತ್ತಿದ್ದ. ಅವನಿಗಾಗಿ ಗೋಸಿನಿ ವಿಶೇಷವಾಗಿ ಮನರಂಜನೆಯ ಸಾಧನಗಳನ್ನು ಸಿದ್ಧಪಡಿಸುತ್ತಿದ್ದಳು. ಗೋಸಿನಿಗೆ ಪೂರ್ಣ ಸಂತೃಪ್ತಿ ದೊರೆತಿತ್ತು. ಅವಳು ಬಯಸುತ್ತಿದ್ದುದೂ ಇಷ್ಟನ್ನೇ! ಮೆಹರುನ್ನೀಸಾಳ ಕಪಿಮುಷ್ಟಿಯಿಂದ ಗಂಡನನ್ನು ಬಿಡಿಸಲು ಸಾಧ್ಯವಾದರೆ, ಅದೇ ಅವಳ ದೊಡ್ಡ ಸಾಧನೆಯಾಗುತ್ತಿತ್ತು.

ರಾತ್ರಿಯ ಹೊತ್ತಿನ ಐಷಾರಾಮದ ಚಟುವಟಿಕೆಗಳನ್ನು ಹೊರತುಪಡಿಸಿದರೆ, ಸಾಮ್ರಾಜ್ಯದ ಅಭಿವೃದ್ಧಿ ಯೋಜನೆಗಳ ಬಗ್ಗೆ, ಆಡಳಿತ ಸುಧಾರಣೆಗಳ ಬಗ್ಗೆ ಮತ್ತು ಮುಂದಿನ ವಾರಸುದಾರನ ಬಗ್ಗೆ ಜಹಾಂಗೀರ್ ಚಿಂತಿಸುತ್ತಿದ್ದ. ಖುರ್ರಂನ ಹೊರತು, ತನ್ನ ಮಿಕ್ಕ ಮಕ್ಕಳಲ್ಲಿ ಯಾರ ಮೇಲೂ ಭರವಸೆಯಿಡಲು ಸಾಧ್ಯವಿರಲಿಲ್ಲ. ಖುಸ್ರೋ ಖುರ್ರಂಗಿಂತಲೂ ಮೇಲ್ಮೈನ ಮಗನೆ! ರೂಪದಲ್ಲಿ, ದಾರ್ಢ್ಯದಲ್ಲಿ, ಪರಾಕ್ರಮದಲ್ಲಿ ಅವನನ್ನು ಮೀರಿಸುವವರಿರಲಿಲ್ಲ, ಆದರೆ ತಾನಾಗಿ ತಾನು ಅಂತಹ ಮಗನನ್ನು ಕ್ರೂರವಾಗಿ ಶಿಕ್ಷಿಸಿ, ಕಣ್ಣು ಕುರುಡುಮಾಡಿ ನಿಷ್ಪ್ರಯೋಜಕನನ್ನಾಗಿ ಮಾಡಿದೆನಲ್ಲ ಎಂದು ಪಶ್ಚಾತ್ತಾಪ ಪಟ್ಟ. ಆದರೆ ಈಗ ಪ್ರಯೋಜನವಿಲ್ಲ. ಇನ್ನು ಪರವೇಜ್?! ಪರವೇಜ್, ಅವನೂ ಕೂಡಾ ಪ್ರಯೋಜನವಿಲ್ಲ. ಅವನಿಗೂ ತನ್ನ ಚಾಳಿ ಬಂದಿದೆ. ಚಾಳಿಬರುವುದು ತಪ್ಪಲ್ಲ. ಅದರಾಚೆಗೂ ತಾನು ಸಾಮ್ರಾಜ್ಯಾಕಾಂಕ್ಷೆಯನ್ನೂ ಬೆಳೆಸಿಕೊಂಡು ಬಾದಶಾಹನಾಗಿದ್ದೇನೆ. ಅದರ ವಿಸ್ತಾರ, ಬೆಳವಣಿಗೆ, ಪ್ರಜಾಕ್ಷೇಮಗಳ ಕಾಳಜಿ ಇಟ್ಟುಕೊಂಡಿದ್ದೇನೆ. ಇನ್ನು ಶಹರಿಯಾರ್, ಎಲ್ಲರಿಗಿಂತ ಚಿಕ್ಕವನು ಎಳಸು. ಅವನಲ್ಲಿ ಹೇಗೆ ತಾನೇ ಭರವಸೆ ಸಾಧ್ಯ ಎನ್ನುವ ಚಿಂತೆಯಲ್ಲಿಯೇ ಮುಳುಗಿದ್ದ.

ನೂರ್ ಜಹಾನ್‌ಗೆ ಜಹಾಂಗೀರನ ಎಲ್ಲ ಮಕ್ಕಳ ಇತಿಹಾಸ ಗೊತ್ತಿತ್ತು. ಹೇಗಾದರೂ ಮಾಡಿ ತನ್ನ ಲಾಡ್ಲಿಯನ್ನು ಶಹರಿಯಾರ್‌ಗಾದರೂ ಕೊಟ್ಟು ನಿಕಾಹ್ ಮಾಡಿಸಿಬಿಟ್ಟರೆ. ನನ್ನ ಅಧಿಕಾರಕ್ಕೆ ಇನ್ನಷ್ಟು ಬಲ ಬರುತ್ತದೆ. ಆದರೆ ಇದಕ್ಕಾಗಿ ಜಹಾಂಪನಾಹ್‌ರ

ಅನುಮತಿ ಬೇಕು. ಹೇಗಿದ್ದರೂ ಲಾಡ್ಲಿ ಮತ್ತು ಶಹರಿಯಾರರು ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದಾರೆ. ಶಹರಿಯಾರನನ್ನೆ ಮುಂದೆ ಸಿಂಹಾಸನದ ಮೇಲೆ ಕೂರಿಸಿ ತಾನೇ ಆಡಳಿತ ಸೂತ್ರಗಳನ್ನು ಇರಿಸಿಕೊಳ್ಳಬೇಕು. ತನ್ನ ಮಗಳೋ ಮೊದ್ದು ಹುಡುಗಿ. ಅವಳಿಗೆ ಈ ತಖ್ತ್, ತಾಜ್‌ಗಳು ಯಾವುದೂ ಬೇಡ. ಅಸಫ್‌ಖಾನ್ ತನ್ನ ಮಗಳು ಮತ್ತು ಅಳಿಯನ ಪರವಾಗಿ ಪ್ರಯತ್ನಮಾಡುತ್ತಾನೆ. ಈಗೇನೋ ತಾನು ಹೇಳಿದಂತೆ ತನ್ನ ಷಡ್ಯಂತ್ರಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದಾನೆ. ಆದರೆ ಆಸೆ, ದುರಾಸೆ, ಮಹತ್ವಾಕಾಂಕ್ಷೆಗಳ ಸ್ವಾರ್ಥ ಸಂಬಂಧಗಳ ಬಗ್ಗೆ ಯೋಚಿಸುವುದೇ ಇಲ್ಲ. ಸ್ವತಃ ಈಗಿನ ಬಾದಶಾಹರೂ ಕೂಡಾ, ಆದಷ್ಟು ಬೇಗ್ ತಖ್ತ್ ಕಸಿದುಕೊಳ್ಳಲು ವಿಷವನ್ನೇ ಕೊಟ್ಟಿದ್ದರಲ್ಲ! ಎಂದೆಲ್ಲಾ ಯೋಚಿಸುವಲ್ಲಿ ಮಗ್ನಳಾಗಿದ್ದಳು. ಹೀಗೆ ಗಂಡ ಹೆಂಡಿರಿಬ್ಬರೂ ಅವರವರ ರೀತಿಯ ಚಿಂತನೆಗಳಲ್ಲಿ ಮುಳುಗಿದ್ದರು.

ಮೆಹರುನ್ನೀಸಾಳ ಭಾಗ್ಯರೇಖೆ ಬಹಳ ಪ್ರಬಲವಾಗಿದ್ದಂತೆ ತೋರಿತು. ಸರ್ವಾಧಿಕಾರದ ಪ್ರತೀಕವಾದ ರಾಜಮುದ್ರೆ ಕೈವಶವಾಗದೆ ನೂರ್ ಜಹಾನಳಿಗೆ ನಿದ್ದೆ ಸಾಧ್ಯವಿರಲಿಲ್ಲ. ಜೊತೆಗೆ ಬೇಟೆಯ ದಿನದ ಸೋಲು ಅವಳನ್ನು ಚುಚ್ಚುತ್ತಿದ್ದುದೇ ಅಲ್ಲದೆ ಜಹಾಂಗೀರ್ ಗೋಸಿನಿಯ ಮನೆಯಲ್ಲಿಯೇ ಬಿಡಾರ ಹೂಡಿ ಬಿಟ್ಟು ತನ್ನನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿಬಿಟ್ಟಿರುವನೇನೋ ಎಂದು ಭಾವಿಸಿದಳು. ಒಮ್ಮೆ ರುಖೈಯ್ಯಾ ಬೇಗಂ, 'ಈ ಗಂಡಸರ ಸ್ವಭಾವ ವಿಚಿತ್ರ. ಅವರ ಮಾತು ಮತ್ತು ನಡೆ ಯಾವಾಗಬೇಕಾದರೂ ಬದಲಾಗಬಹುದು' ಎಂದು ಎಚ್ಚರಿಕೆ ಬೇರೆ ನೀಡಿದ್ದಳು. ಜಗತ್‌ಗೋಸಿನಿಯೇನಾದರೂ ಮಾಯಾ ಮಾಟ ಮಾಡಿಸಿ ತನ್ನಿಂದ ಬಾದಶಾಹರು ಸಂಪೂರ್ಣ ವಿಮುಖರಾದರೆ, ನಿರ್ಲಕ್ಷಿಸಿ ಬಿಟ್ಟರೆ ನನ್ನ ಗತಿಯೇನು? ಅವಳೇ ಚಕ್ರವರ್ತಿನಿಯಾಗಿ, ನಾನು ಜನಾನಾದಲ್ಲಿ ಉಪಪತ್ನಿಯಾಗಿ ಉಳಿದುಬಿಡುವ ಪರಿಸ್ಥಿತಿ ಬಂದು ಬಿಟ್ಟರೆ? ನನ್ನ ಮಹತ್ವಾಕಾಂಕ್ಷೆಯ ಮಹಲು ಕುಸಿಯುವುದರಲ್ಲಿ ಆಶ್ಚರ್ಯವಿಲ್ಲ ಎಂದು ಒಮ್ಮೆ ಅನಿಸಿದರೆ, ಮತ್ತೊಮ್ಮೆ ಜಹಾಂಗೀರನಿಗೆ ಸೌಂದರ್ಯವೊಂದೇ ಇದ್ದರೆ ಸಾಲದು, ಅದರ ಜೊತೆಗೆ ಪ್ರತಿಭೆ, ಬುದ್ಧಿ, ಕೌಶಲ್ಯ, ಚಾಣಾಕ್ಷತೆಗಳನ್ನೂ ಬಯಸುತ್ತಾನೆ. ಅಲ್ಲದೆ ನನ್ನನ್ನು ಅವನಾಗಲೇ ಹೃದಯ ಸಾಮ್ರಾಜ್ಞಿಯಾಗಿ ಸ್ವೀಕರಿಸಿ, ನನಗೆ ರಾಜಮುದ್ರೆ ಹೊರತು, ಎಲ್ಲ ಅಧಿಕಾರವನ್ನೂ ಕೊಟ್ಟಿದ್ದಾನೆ. ಆದ್ದರಿಂದ ಎಂದಿಗೂ ನನ್ನನ್ನು ದೂರವಿಡಲಾರ ಎಂದು ಆತ್ಮಸಾಂತ್ವನ ಮಾಡಿಕೊಂಡಳು.

ಜಹಾಂಗೀರ್ ತನ್ನನ್ನು ಕಾಣಲು ಬಾರದೆ ನಿರ್ಲಿಪ್ತನಾಗಿರುವ ವಿಷಯವನ್ನು ನೂರ್ ಜಹಾನ್ ತಂದೆಯ ಗಮನಕ್ಕೆ ತಂದಳು. ಘಿಯಾಸ್‌ಗೆ ಗೊತ್ತು, ಇದೆಲ್ಲ ಮಧ್ಯಂತರ. ತನ್ನ ಮಗಳ ಮೋಡಿ ಬಾದಶಾಹರನ್ನು ಹೇಗೆ ಕಟ್ಟಿಹಾಕಿದೆ ಎಂದರೆ, ಆ ಗಂಟುಗಳಿಂದ ಹೊರಬರಲು ಸಾಧ್ಯವೇ ಇಲ್ಲದಂತಹದ್ದು ಎಂದು ಚೆನ್ನಾಗಿ ಬಲ್ಲ. ಅಕ್ಬರ್ ಬಾದಶಾಹರಿಗಿದ್ದ ತನ್ನ ನಿಷ್ಠೆ, ಈಗ ಮಗಳ ಹಿತಾಸಕ್ತಿ ಬಗ್ಗೆ ಬದಲಾಗಿದೆ! ಅವಳಿಗೆ ಸಮಾಧಾನ ಹೇಳಿ ಸ್ವಲ್ಪ ಕಾಯುವಂತೆ ಹೇಳಿದ. ಜಗತ್‌ಗೋಸಿನಿಯಿಂದ ರಾಜಮುದ್ರೆ ಓಂಪಡೆಯಲು ಮಾಡುತ್ತಿರುವ ಪ್ರಯತ್ನದ ಭಾಗವಾಗಿ, ಮಗಳಿಂದ ದೂರವಿದ್ದು ಜಗತ್‌ಗೋಸಿನಿಯ ಪ್ರೀತಿ, ವಿಶ್ವಾಸಗಳನ್ನು ಗೆಲ್ಲುತ್ತಿದ್ದಾನೆ ಎನ್ನುವುದು ಘಿಯಾಸ್‌ನ

ಲೆಕ್ಕಾಚಾರ. ಆದರೂ ನೂರ್ ಜಹಾನಳಿಗೆ, ಜಹಾಂಗೀರ್ ಒಮ್ಮೆಯಾದರೂ ತನ್ನನ್ನು ಬಂದು ಕಾಣದ ಹೊರತು ನಂಬಿಕೆ ಬರುತ್ತಿಲ್ಲ.

ನೂರ್ ಜಹಾನಳ ನಿರೀಕ್ಷೆಗಳು ಸುಳ್ಳಾಗಲಿಲ್ಲ. ಅಂತೂ ಇಂತೂ ಒಂದು ದಿನ ಜಹಾಂಗೀರ್ ಅವಳ ಮನೆಗೆ ಬಂದೇ ಬಂದ. ನೂರ್‌ಗಂತೂ ಸಂತೋಷ, ಸಂಭ್ರಮಗಳಿಗೆ ಮಿತಿಯಿಲ್ಲದಂತಾಯಿತು. ಒಂದು ಕ್ಷಣವೂ ಅಗಲಿರುವುದನ್ನು ಸಹಿಸದ ಜಹಾಂಗೀರನಿಗೆ ತನ್ನ ಪಕ್ಕದಲ್ಲಿ ನೂರ್ ಜಹಾನ್ ಅಥವಾ ಅವನ ಪ್ರೀತಿಯ ಮೆಹರುನ್ನೀಸಾ ಇಲ್ಲದ್ದನ್ನು ಕಂಡಾಗ, ಅಸಹನೀಯ ಯಾತನೆಯಾಗುತ್ತಿತ್ತು. ತನ್ನ ಅನುಪಸ್ಥಿತಿಯಲ್ಲಿ ಅವಳ ದಿನಚರಿ ಹೇಗಿರುತ್ತಿತ್ತೆಂಬ ವಿಷಯಗಳನ್ನು ಅವಳ ಸೇವಕರಿಂದ ಕೇಳಿ ತಿಳಿದುಕೊಂಡ.

ನೂರ್ ಜಹಾನ್ ಮೊರದಗಲ ಮುಖ ಮಾಡಿಕೊಂಡು ಓಡಿ ಬಂದು ಅವನಿಗೆ ತೆಕ್ಕೆ ಹಾಕಿಕೊಂಡು ಬಿಕ್ಕಿಬಿಕ್ಕಿ ಅತ್ತಳು.

"ಬೇಗಂ ಇದೇನು ಸಣ್ಣ ಮಕ್ಕಳಂತೆ ಅಳುತ್ತಿದ್ದೀರಿ?"

"ಜಹಾಂಪನಾಹ್, ಒಂದು ಕ್ಷಣವೂ ಅಗಲಿರಲು ಇಷ್ಟಪಡದ ನೀವು ನನ್ನಿಂದ ವಾರಗಟ್ಟಲೆ ದೂರವಿದ್ದು, ನನ್ನನ್ನು ಹೆದರಿಸಿಬಿಟ್ಟಿರಿ. ನರಕಯಾತನೆಗೆ ದೂಡಿದಿರಿ. ನನ್ನ ಬೇಟೆಯ ಗುರಿ ತಪ್ಪಿ ಸೋತದ್ದಕ್ಕೆ ಇಷ್ಟು ಘೋರವಾದ ಶಿಕ್ಷೆಯೇ? ಜಹಾಂಪನಾಹ್ ನೀವೇ ನನ್ನ ಬದುಕು. ನಿಮ್ಮ ಪ್ರೀತಿ, ಅಭಿಮಾನ, ಪ್ರೋತ್ಸಾಹಗಳೇ ನನ್ನ ಜಗತ್ತು. ನಿಮ್ಮ ಬಾದಶಾಹ್‌ಗಿರಿಯನ್ನು ಜಗತ್ತೇ ಹೊಗಳುವಂತೆ ಮಾಡುವುದು ನನ್ನ ಗುರಿ. ಹೀಗಿರುವಾಗ, ಇದಕ್ಕೆಲ್ಲ ಅವಕಾಶವೇ ಇಲ್ಲದಂತಾದರೆ, ನನ್ನನ್ನು ದೂರವಿಟ್ಟು ಬಿಟ್ಟರೆ, ನಾನು ಹೇಗೆ ತಾನೇ ನೆಮ್ಮದಿಯಿಂದ ಇರಬಲ್ಲೆ ನೀವೇ ಹೇಳಿ!"

"ನನ್ನ ಪ್ರೀತಿಯ ಬೇಗಂ, ನೀನಿಲ್ಲದಿದ್ದರೆ, ನಾನೇ ಇಲ್ಲ. ಸೌಂದರ್ಯ ದೇವತೆಯಾದ ನಿನ್ನ ಮುಂದೆ, ನನಗೆ ಸಾವಿರ ಜನ್ನತ್‌ಗಳಿದ್ದರೂ ಬೇಕಿಲ್ಲ. ಈ ವಿರಹದ ಸೃಷ್ಟಿಯೂ ನಿನ್ನನ್ನು ಮೆಚ್ಚಿಸಲು, ನಿನ್ನ ಮಹತ್ವಾಕಾಂಕ್ಷೆಯನ್ನೂ ಸಾಕಾರಗೊಳಿಸುವುದಕ್ಕಾಗಿಯೆ! ಇನ್ನು ಮುಂದೆ ನಿನ್ನ ಮಾತು, ಆದೇಶಗಳಿಗೆ ಎದುರಿಲ್ಲ. ಮೊಘಲ್ ಸಾಮ್ರಾಜ್ಯದ ಸರ್ವಾಧಿಕಾರವೂ ನಿನ್ನದೇ. ನಿನ್ನ ಚಾಣಾಕ್ಷತೆ, ರಾಜನೀತಿ ಚಾತುರ್ಯ, ದೂರದೃಷ್ಟಿ, ಅಭಿವೃದ್ಧಿಯ ಕನಸುಗಳು, ಎಲ್ಲಕ್ಕಿಂತ ನಿನ್ನ ಔದಾರ್ಯ, ಹೆಣ್ಣುಮಕ್ಕಳ ಬಗೆಗಿನ ಕಾಳಜಿಗಳು, ವ್ಯಾಪಾರ ವ್ಯವಹಾರ ಕೌಶಲ್ಯ ಎಲ್ಲವನ್ನೂ ಸಾಕಾರಗೊಳಿಸುವೆ ಎನ್ನುವ ನಂಬಿಕೆಯಿಂದ ಇದೋ ಇಲ್ಲಿದೆ, ನನ್ನ ಕಡೆಯಿಂದ ಈ ಪ್ರೀತಿಯ ನಜರಾನಾ" ಎಂದು ವೆಲ್ವೆಟ್ ಚೀಲವೊಂದನ್ನು ಅವಳ ಕೈಲಿ ಇರಿಸಿದ.

ನೂರ್ ಜಹಾನ್ ಅಚ್ಚರಿಯಿಂದ,

"ಜಹಾಂಪನಾಹ್ ಇದೆಂತಹ ಉಡುಗೊರೆ!"

"ನೋಡು ಬಿಚ್ಚಿ ನೋಡು. ಯಾವುದಕ್ಕಾಗಿ ತುಡಿಯುತ್ತಿದ್ದೆಯೋ ಅಸ್ವಸ್ಥಳಾಗಿದ್ದೆಯೋ, ಮಹತ್ವಾಕಾಂಕ್ಷೆ ಇರಿಸಿಕೊಂಡಿದ್ದೆಯೋ ಅದೇ ಇದು! ಇದನ್ನು ನೋಡಿ, ಸಂತೋಷದಿಂದ ಅರಳುವ ನಿನ್ನ ಮುಖವನ್ನು ನೋಡಬೇಕೆಂದಿದ್ದೇನೆ. ನೂರಾರು ಪೀಪಾಯಿಗಳ ಮದಿರೆಯ ಸೇವನೆಯ ಸಂತೃಪ್ತಿ ಪಡೆಯಬೇಕೆಂದಿದ್ದೇನೆ.

ಇದು ನಿರ್ಜೀವ ವಸ್ತುವಲ್ಲ! ನನ್ನನ್ನೇ ಇದರ ಮೂಲಕ ಅರ್ಪಿಸಿಕೊಳ್ಳುತ್ತಿದ್ದೇನೆ. ಇನ್ನು ಮುಂದೆ ರಾಜ್ಯಭಾರ, ರಾಜ್ಯಾಡಳಿತದ ಜವಾಬ್ದಾರಿ ನಿನ್ನದೇ! ನನಗೆ ವಿಶ್ರಾಂತಿ ಬೇಕಿದೆ. ನಾನು ಬರೆಯುತ್ತಿರುವ ದಿನಚರಿ (ನೆನಪುಗಳ ಸಂಪುಟವಾದ, ತುಜುಕ್. ಎ. ಜಹಾಂಗೀರಿ)ಯಲ್ಲಿ ನನ್ನೆಲ್ಲ ನೆನಪುಗಳನ್ನು ಯಾವೊಂದು ವಿವರವೂ ಬಿಟ್ಟು ಹೋಗದಂತೆ ಬರೆಯಬೇಕೆಂದಿದ್ದೇನೆ."

"ಜಹಾಂಪನಾಹ್ ನನ್ನಲ್ಲಿ ಇಷ್ಟೊಂದು ಭರವಸೆಯಿಟ್ಟು ಇಡೀ ಮೊಘಲ್ ಸಾಮ್ರಾಜ್ಯವನ್ನು ನನ್ನ ಕೈಗೆ ಇರಿಸಿ ಬಹುದೊಡ್ಡ ಜವಾಬ್ದಾರಿಯ ಭಾರವನ್ನು ನನ್ನ ಮೇಲೆ ಹೊರಿಸಿದ್ದೀರಿ. ನಾನು ಹೇಗೆ ತಾನೇ ಶುಕ್ರಿಯಾ ವ್ಯಕ್ತಪಡಿಸಲಿ? ನಿಮ್ಮ ವಿಶ್ವಾಸ, ಭರವಸೆಗಳನ್ನು ಖಂಡಿತವಾಗಿಯೂ ಸುಳ್ಳುಮಾಡುವುದಿಲ್ಲ. ಇದೋ ಇಂದೇ ನಿಮಗೊಂದು ವಚನ ಕೊಡುತ್ತಿದ್ದೇನೆ. ನಮ್ಮಿಬ್ಬರ ಹೆಸರು ಹಿಂದೂಸ್ತಾನದ ಇತಿಹಾಸದಲ್ಲಿ ಸ್ವರ್ಣಾಕ್ಷರಗಳಲ್ಲಿ ನಮೂದಾಗುವಂತೆ ದುಡಿಯುತ್ತೇನೆ. ನನ್ನ ಕೆಲಸಗಳ ಮೂಲಕವೇ ನನ್ನನ್ನು ನನ್ನ ವ್ಯಕ್ತಿತ್ವವನ್ನು ಜಗತ್ತು ಗುರುತಿಸುವಂತೆ ಮಾಡುತ್ತೇನೆ. ಜಹಾಂಪನಾಹ್, ಜನ್ಮ ಜನ್ಮಾಂತರಗಳವರೆಗೂ ನಾನು ನಿಮಗೆ ಶುಕ್ರಗುಜಾರಳಾಗಿ ಇರುತ್ತೇನೆ."

"ಬೇಗಂ ನನ್ನ ಮಕ್ಕಳಲ್ಲಿ ಸಮರ್ಥನಾದ ಒಬ್ಬ ಶಹಜಾದಾನನ್ನು ಮುಂದಿನ ಮೊಘಲ್ ಸಾಮ್ರಾಜ್ಯದ ತಖ್ತ್, ತಾಜ್‌ಗಳ ವಾರಸುದಾರನನ್ನಾಗಿ ರೂಪಿಸುವುದು ನಿನ್ನ ಕೆಲಸ......ಅಲ್ಲ...ಅಲ್ಲ.... ನಿನ್ನ ಜವಾಬ್ದಾರಿ."

"ಈ ಜವಾಬ್ದಾರಿ ವಹಿಸಿದ್ದಕ್ಕಾಗಿ ನಿಮಗೆ, ಈ ಮಲಿಕಾ-ಎ-ಜಹಾಂಗೀರ್ ಮೆಹರ್‌ಬಾನಳಾಗಿರುತ್ತಾಳೆ."

## ರಾಜಕೀಯ ಪಲ್ಲಟಗಳು

ನೂರ್ ಜಹಾನಳ ಅಧಿಕಾರಕ್ಕೆ ಇನ್ನು ಯಾವುದೇ ಬಗೆಯ ಅಡೆತಡೆಗಳು ಇಲ್ಲದಂತಾಯಿತು. ಘಿಯಾಸ್ ಕುಟುಂಬದವರಿಗೆ ಮೊಘಲ್ ಸಾಮ್ರಾಜ್ಯವೇ ತಮ್ಮ ಕೈವಶವಾದಂತಾಯಿತು. ಅಣ್ಣ ತಂಗಿಯರಿಗೆ ಅವರವರದೇ ಸ್ವಾರ್ಥ, ಹೊರಗೆ ಕಾಣಿಸಿಕೊಳ್ಳದೆ ಕೆಲಸ ಮಾಡುತ್ತಿತ್ತು. ಹೆಣ್ಣಾಗಿ ತಾನು ತಖ್ತ್ ತಾಜ್‌ಗಳ ಅಧಿಕಾರವನ್ನು ಬಹಿರಂಗವಾಗಿ ತೋರಿಸಿಕೊಳ್ಳಬಾರದು. ಆದರೆ ಹಿಂದೆ ನಿಂತು ರಾಜ್ಯಾಡಳಿತದ ಸೂತ್ರಗಳನ್ನು ಹಿಡಿದು ಆಡಿಸಬಹುದಾಗಿತ್ತು. ಹೆಸರಿಗೊಬ್ಬ ರಾಜಕುಮಾರ, ಸಿಯಾಸತ್ ಅನ್ನು ವಹಿಸಿಕೊಂಡರೆ ಸಾಕು! ಪರೋಕ್ಷವಾಗಿ ಅವಳೇ ಮೊಘಲ್ ಸಾಮ್ರಾಜ್ಞಿಯೆಂದು ಗುರುತಿಸಲಾಗುತ್ತದೆ. ಅಬುಲ್ ಹಸನ್, ಉರುಫ್ ಅಸಫ್ ಖಾನ್‌ಗೆ ತನ್ನ ಅಳಿಯ ಖುರ್‍ರಂನನ್ನು ಬಾದಶಾಹನಾಗಿ ಕಾಣಬೇಕೆಂಬ ತುಡಿತ! ಆದರೆ ಎಲ್ಲರ ಸ್ವಾರ್ಥಗಳು ಯಾವ ರೂಪ ಪಡೆಯುತ್ತವೆ ಎನ್ನುವುದನ್ನು ಕಾಲವೇ ತಿಳಿಸುತ್ತದೆ.

ಕುರುಡನಾದರೂ ಖುಸ್ರೊ ಸಿಂಹಾಸನಾಧಿಪತಿಯಾಗಬೇಕೆಂಬುದು ಜಹಾಂಗೀರನ ಆಸೆ. ಅದು ಸೋತಲ್ಲಿ ಖುರ್‍ರಂ ಒಬ್ಬನೇ ಎಲ್ಲ ರೀತಿಯಿಂದಲೂ ಅತ್ಯಂತ ಸಮರ್ಥನಾದವನು. ಮಿಕ್ಕಿಬ್ಬರು ನಿಷ್ಪ್ರಯೋಜಕರು. ತಂಗಿಯ ಸರ್ವಾಧಿಕಾರತ್ವ ಅಸಫ್ ಖಾನ್‌ನನ್ನು ಚಿಂತೆಗೆ ಈಡು ಮಾಡಿತು. ಅವಳು ಮನಸ್ಸುಮಾಡಿದಲ್ಲಿ ಎಲ್ಲವನ್ನೂ

ತಾರುಮಾರಾಗಿಸಬಲ್ಲಳು. ಅವಳಿಗೂ ಖುರ್ರಂನ ಸಾಮರ್ಥ್ಯದ ಅರಿವಿದೆ. ಹಾಗಾಗಿ ಅವಳ ಯೋಚನೆಗಳು ಯಾವ ದಿಕ್ಕು ಹಿಡಿಯುತ್ತವೆಯೋ ಹೇಳಲಾಗುವುದಿಲ್ಲ. ನನ್ನ ಅಳಿಯ ಖುರ್ರಂನನ್ನು ನಿವಾರಿಸಿ ತನ್ನ ಮಗಳನ್ನು, ಜಹಾಂಗೀರನ ಇನ್ನಿಬ್ಬರು ಮಕ್ಕಳಲ್ಲಿ ಯಾರಿಗಾದರೂ ಕೊಟ್ಟು ಮದುವೆ ಮಾಡಿಸಿ, ಮಗಳಿಗೆ, ಅಳಿಯನಿಗೆ ಅಧಿಕಾರ ಕೊಡಿಸಬಲ್ಲಳು. ಕಣ್ಣು ಕಳೆದುಕೊಂಡ ಖುಸ್ರೋ ಜೊತೆಯೇ ನಿಕಾಹ್ ಮಾಡಿಸಿ, ಅವನನ್ನೇ ಹಿರಿಯ ಮಗನಾದ್ದರಿಂದ ಸಿಂಹಾಸನ ಕೊಡಿಸುವ ಆಲೋಚನೆ ಇತ್ತಾದರೂ ಅವನು ಒಪ್ಪಲಿಲ್ಲ. ಖುರ್ರಂಗೆ ಕೂಡಾ ಪ್ರಯತ್ನಿಸಿದಳಾದರೂ ಅಸಫ್ ಖಾನನ ಮಗಳು ಅರ್ಜುಮಂದಳನ್ನು ಅವನು ಬಹಳವಾಗಿ ಪ್ರೀತಿಸಿ ಮದುವೆಯಾಗಿದ್ದ. ಈಗ ಇದ್ದವರೆಂದರೆ ಪರವೇಜ್ ಮತ್ತು ಶಹರಿಯಾರ. ಪರವೇಜ್ ಎಲ್ಲ ರೀತಿಯಿಂದಲೂ ಅಯೋಗ್ಯನಾಗಿದ್ದರೂ ಮಗಳನ್ನು ಅವನಿಗೇ ನಿಕಾಹ್ ಮಾಡಿಸುವ ಹುನ್ನಾರದಲ್ಲಿದ್ದಳು. ಖುರ್ರಂನನ್ನು ದಕ್ಷಿಣದೇಶಗಳ ಕಡೆ ಸೇನಾಕಾರ್ಯಾಚರಣೆಗೆಂದು ಕಳಿಸಿಬಿಟ್ಟು ಅವನು ಬರುವಷ್ಟರಲ್ಲಿ ತನ್ನ ಯೋಜನೆಗಳನ್ನು ಪೂರೈಸಬಹುದೆಂದು ಯೋಚಿಸಿದಳು. ಜಹಾಂಗೀರನ ಮುಂದೆ ಪರವೇಜನ ಪ್ರಸ್ತಾಪ ಮಾಡಿ ಅವನ ಮನಸಬದಾರಿಕೆಯನ್ನು ಹೆಚ್ಚಿಸುವುದು. ಸಾಧ್ಯವಾದರೆ ಮುಂದಿನ ಬಾದಶಾಹನನ್ನಾಗಿ ಸಿದ್ಧಗೊಳಿಸುವುದು, ಅವಳ ಉದ್ದೇಶವಾಗಿತ್ತು. ಎಷ್ಟು ಬುದ್ಧಿವಂತಿಕೆಯಿಂದ ಕಾರ್ಯಯೋಜನೆಯನ್ನು ಸಿದ್ಧಪಡಿಸಿದಳೆಂದರೆ, ತನಗೆ ಯಾರು ಯಾರಿಂದ ವಿರೋಧ ವ್ಯಕ್ತವಾಗುವುದೋ ಅವರನ್ನೆಲ್ಲಾ ತನ್ನ ಜಂಟಾದ ಭಾಗವಾಗಿಸಿಕೊಂಡು, ಅವರನ್ನೂ ತನ್ನ ಮಂತ್ರಾಲೋಚನೆಯಲ್ಲಿ ಪಾಲುದಾರರನ್ನಾಗಿಸಿಕೊಂಡರೆ, ಯಾವುದೇ ರೀತಿಯ ಪ್ರತಿರೋಧವಿರುವುದಿಲ್ಲವೆಂದು ಲೆಕ್ಕಾಚಾರ ಹಾಕಿದ್ದಳು.

ತನ್ನ ನಯವಾದ ಮಾತುಗಳಿಂದ ಜಹಾಂಗೀರನ ಮನವೊಲಿಸಿ, ಮನಸಬದಾರಿಕೆ ಹೆಚ್ಚಿಸಿದಳು. ಜೊತೆಗೆ ಪರವೇಜನ ಜವಾಬ್ದಾರಿಯನ್ನು ತನ್ನ ಸೋದರ ಅಸಫ್ ಖಾನನಿಗೆ ವಹಿಸಿಬಿಟ್ಟಳು. ಅವನಿಗೆ ರೀತಿ, ನೀತಿ, ನಡೆನುಡಿ, ಶಿಷ್ಟಾಚಾರಗಳನ್ನು ಕಲಿಸುವ ಹೊಣೆ ಅವನ ಪಾಲಿಗೆ ಬಂತು. ಖುರ್ರಂಗೆ ನೂರ್ ಜಹಾನ್ ಇನ್ನೂ ಪೂರ್ತಿಯಾಗಿ ಅರ್ಥವಾಗಿರಲಿಲ್ಲ. ಅವಳ ಅಣ್ಣನ ಮಗಳನ್ನೇ ಮದುವೆಯಾಗಿರುವುದರಿಂದ ತನ್ನ ದಾರಿಗೆ ಅಡ್ಡಬರುವುದಿಲ್ಲವೆಂದೇ ಭಾವಿಸಿ, ಅವಳ ಮಂತ್ರಣಾ ಸಭೆಯಲ್ಲಿ ಭಾಗವಹಿಸುತ್ತಿದ್ದ.

ಶಹರಿಯಾರ್ ಒಬ್ಬ ಮಾತ್ರ ಉಪಪತ್ನಿಯೊಬ್ಬಳಿಗೆ ಹುಟ್ಟಿದನೇ ಹೊರತಾಗಿ ಮಿಕ್ಕವರೆಲ್ಲರೂ, ವಿಧ್ಯುಕ್ತ ಹೆಂಡತಿಯರಿಗೆ ಹುಟ್ಟಿದವರಾಗಿದ್ದರು.

ನತದೃಷ್ಟ ಖುಸ್ರೋ, ತನ್ನ ತಾಯಿ ಮನ್‌ಬಾಯಿಯ ಸೋದರ ಮಾನ್‌ಸಿಂಗ್ ಮತ್ತು ಹೆಣ್ಣುಕೊಟ್ಟ ಮಾವ ಮಿರ್ಜಾ ಅಜೀಜ್ ಕೋಕರ ದುರ್ಬೋಧೆಯಿಂದ, ತಂದೆ ಸಲೀಂ (ಜಹಾಂಗೀರನ) ವಿರುದ್ಧವೇ ಬಂಡೆದ್ದು, ಸೋತು ಕ್ರೂರವಾದ ಶಿಕ್ಷೆಯ ಪರಿಣಾಮವಾಗಿ ಕಣ್ಣು ಕಳೆದುಕೊಂಡಿದ್ದ. ತಾಯಿ ತಂದೆ, ಮಗನ ಘರ್ಷಣೆ ಸಹಿಸಲಾರದೆ ಆತ್ಮಹತ್ಯೆ ಮಾಡಿಕೊಂಡಿದ್ದಳು. ಎಷ್ಟೋ ಸಮಯದ ನಂತರ, ಜಹಾಂಗೀರನಿಗೆ ಪಶ್ಚಾತ್ತಾಪವಾಗಿ ಕಣ್ಣಿನ ಚಿಕಿತ್ಸೆಯನ್ನು ಮಾಡಿಸಿದರೂ ಪೂರ್ತಿಯಾಗಿ ದೃಷ್ಟಿಬರಲು ಸಾಧ್ಯವಾಗಲಿಲ್ಲ.

ಪರವೇಜ್, ಜಹಾಂಗೀರನ ಮೂರನೇ ಹೆಂಡತಿ ಸಾಹಿಬ್ ಜಮಾಲ್‌ಳಿಗೆ ಹುಟ್ಟಿದ. ಆದರೆ ಈ ರಾಜವಂಶಕ್ಕೆ ಅಂಟಿಕೊಂಡಿದ್ದ ಹೆಂಡದ ಚಟ ಪರವೇಜ್‌ನನ್ನು ಅಂಟಿಕೊಂಡಿತು. ಜೊತೆಗೆ, ಇವನು ಅಪ್ಪನ ಜೊತೆ ಆಗ್ರಾದಲ್ಲಿ ಇರಲೇ ಇಲ್ಲ. ಖಾನ್-ಇ-ಖಾನನ್, ಅಬ್ದುರ್ ರಹೀಮ್‌ನ ಸುಪರ್ದಿಯಲ್ಲಿ ದಕ್ಷಿಣ ದೇಶದಲ್ಲಿಯೇ ಉಳಿದು ಬಿಟ್ಟ.

ಆದರೆ ಎಲ್ಲ ರೀತಿಯಿಂದಲೂ ಯೋಗ್ಯನೂ, ಸಮರ್ಥನೂ, ಸಾಹಸಿಯೂ ಸುಂದರ ಪುರುಷನೂ ಆಗಿದ್ದ ಖುರ್‍ರಂ ಒಬ್ಬನೇ ಸಿಂಹಾಸನಕ್ಕೆ ಯೋಗ್ಯನಾಗಿದ್ದ. ಅವಕಾಶಗಳು ಕೂಡಾ ಅವನ ಕಡೆಗೇ ಇದ್ದವು. ಖುರ್‍ರಂ ನಿರೀಕ್ಷಿಸಿದಂತೆ ಬಾದಶಾಹನಾದಲ್ಲಿ, ನೂರ್ ಜಹಾನಳ ಅಧಿಕಾರಕ್ಕೆ ಕತ್ತರಿ ಬೀಳುತ್ತದೆ. ಹಾಗಾಗಿ ನೂರ್ ಜಹಾನ್, ಖುರ್‍ರಂನನ್ನು ತನ್ನೆಡೆಗೆ ಸೆಳೆದುಕೊಳ್ಳಲು ಪ್ರಯತ್ನಿಸುತ್ತಿದ್ದಳು.

ನೂರ್ ಜಹಾನಳಿಗೆ ತಾನು ತಿಳಿದುಕೊಂಡಂತೆ ಕೆಲಸಗಳು ಸುಲಭವಾಗುತ್ತಿರಲಿಲ್ಲ. ಆಗ್ರಾ, ಫತೇಪುರ್ ಸಿಕ್ರಿ ಮತ್ತೆ ಎಲ್ಲೆಡೆಗಳಲ್ಲೂ ತನ್ನ ಕಡೆಯಿಂದ ಗೂಢಚಾರರನ್ನು ನೇಮಿಸಿದಳು. ಜಗತ್‌ಗೋಸಿನಿ ಜೊತೆ ಸೇರಿ ಮಹಬ್ಬತ್‌ಖಾನ್, ನೂರ್ ಜಹಾನಳನ್ನು ಹತ್ತಿಕ್ಕಲು ಪ್ರಯತ್ನಿಸುತ್ತಿದ್ದ, ಜೊತೆಗೆ ಪಿತೂರಿ ಮಾಡಿ ಅವಳನ್ನು ಅಧಿಕಾರ ವಂಚಿತಳನ್ನಾಗಿ ಮಾಡಬೇಕೆಂದು ಯೋಚಿಸಿದ. ಆದರೆ ಅವೆಲ್ಲವೂ ಅವರ ಪ್ರಯತ್ನ ಮತ್ತು ಆಲೋಚನೆಗಳು, ಅಷ್ಟೇ! ಜಹಾಂಗೀರ್ ಎಲ್ಲಿವರೆಗೆ ನೂರ್ ಜಹಾನಳ ಕಪಿ ಮುಷ್ಟಿಯಲ್ಲಿ ಬಂದಿಯಾಗಿ ಇರುತ್ತಾನೋ ಅಲ್ಲಿವರೆಗೂ ಅವಳನ್ನು ಬಗ್ಗುಬಡಿಯುವುದು ಸಾಧ್ಯವಿಲ್ಲ ಎನ್ನುವ ವಾಸ್ತವ ಸತ್ಯವನ್ನೂ ಬಲ್ಲವನಾಗಿದ್ದ.

ಲಾಡ್ಲಿಯನ್ನು ಹೇಗಾದರೂ ರಾಜಪರಿವಾರಕ್ಕೆ ಸೇರಿಸಿಬಿಡಬೇಕು ಎನ್ನುವ ತವಕ. ಅದಕ್ಕಾಗಿ ಯೋಚಿಸಿ ಯೋಚಿಸಿ, ಕಡೆಗೆ ಜಹಾಂಗೀರನ ಅತ್ಯಂತ ಕಿರಿಯ ಪುತ್ರ ಶಹರಿಯಾರನೊಂದಿಗೆ ನಿಕಾಹ್ ಮಾಡಿಸಲು ಜಹಾಂಗೀರನಿಂದ ಒಪ್ಪಿಗೆ ಪಡೆದಳು.

ಖುರ್‍ರಂ ನೂರ್ ಜಹಾನಳನ್ನು ಬಹಳವಾಗಿ ನಂಬಿದ. ಅವಳಂತೂ ಅವನಲ್ಲಿ ತುಂಬ ಭರವಸೆಯಿರಿಸಿಕೊಂಡಿರುವುದಾಗಿಯೂ ಸಾಮ್ರಾಜ್ಯದ ಅಥವಾ ಶಾಹಿ ಸಲ್ತನತ್‌ನ ಪ್ರತಿಷ್ಠೆ, ಮರ್ಯಾದೆಗಳನ್ನು ಉಳಿಸುವ ಜವಾಬ್ದಾರಿ ಅವನ ಮೇಲಿದೆಯೆಂದು ಪ್ರಾಮಾಣಿಕವಾದ ಅಂತರಂಗದ ಮಾತುಗಳೆಂಬಂತೆ ತೋರಿಸಿಕೊಂಡಿದ್ದಳು. ಖುರ್‍ರಂ ಅವಳ ಮಾತುಗಳನ್ನು ಬಹಳವಾಗಿ ನಂಬಿದ. ಅವರ ಆಲೋಚನೆಯಂತೆ ತಮ್ಮ ಕೆಲಸಕ್ಕೆ ಅಡ್ಡಿಬರಬಹುದಾದ ವ್ಯಕ್ತಿಗಳನ್ನು ಮೊದಲಿಗೆ ಉಚ್ಚಾಟನೆ ಮಾಡಬೇಕಿತ್ತು. ಖುರ್‍ರಂಗೆ ಮೊದಲ ಕಂಟಕ ಯಾರೆಂದು ಹೊಳೆಯಿತು. ಮನಸ್ಸಿನಲ್ಲಿ ಕಸಿವಿಸಿ ಆಯಿತು. ಆದರೆ ಇದು ರಾಜಕೀಯ! ಮೆದುಭಾವನೆ, ಪಾಪಪ್ರಜ್ಞೆ ಅನುಕಂಪಗಳಿಗೆ ಅವಕಾಶವೇ ಇಲ್ಲ. ಗುರಿ ತಲುಪಬೇಕು. ಅಷ್ಟೇ! ಇದರಲ್ಲಿ ಅವನ ಸ್ವಾರ್ಥವೂ ಇತ್ತು. ಅವರ ಯೋಜನೆ, ಯೋಚನೆ ತನ್ನ ಅನುಕೂಲಕ್ಕೆ ಎಂದು ಭಾವಿಸಿದ. ಅಧಿಕಾರ ಯಾರಿಗೆ ಬೇಡ! 'ಬಲವಿದ್ದವನೇ ಬದುಕಬಲ್ಲ' ಎಂಬ ನಾಣ್ಣುಡಿಯಂತೆ ನಡೆಯಬೇಕು. ಇತ್ತೀಚೆಗೆ ಜಹಾಂಗೀರ್ ಖುಸ್ರೋನ ಬಗ್ಗೆ ಅತಿಯಾದ ಪ್ರೀತಿ, ಅನುಕಂಪ, ಆಸಕ್ತಿಗಳನ್ನು ತೋರಿಸುತ್ತಿದ್ದುದು ಖುರ್‍ರಂನ ಗಮನಕ್ಕೂ ಬಂದಿತ್ತು. ಅಣ್ಣ ಎನ್ನುವ ಬಾಂಧವ್ಯದ ಎಳೆಯನ್ನು ಕತ್ತರಿಸಿ, ತನ್ನ ಹಾದಿಯನ್ನು ಸುಗಮಗೊಳಿಸಿಕೊಳ್ಳುವುದೊಂದೇ ಅವನ

ಸದ್ಯದ ತುರ್ತು. ಯಾಕೆಂದರೆ, ನಿಜವಾದ ಉತ್ತರಾಧಿಕಾರಿ ಅವನೇ! ಪರಂಪರಾಗತವಾಗಿ ತಖ್ತ್, ತಾಜ್‌ಗಳ ಹಕ್ಕುದಾರ ಅವನೇ ಆಗಿರುವಾಗ, ಬೇರೆಯವರ ಆಸೆ, ಆಕಾಂಕ್ಷೆ, ಹಂಬಲಗಳು ಸಾಕಾರಗೊಳ್ಳುವ ಸಾಧ್ಯತೆಯೇ ಇರುವುದಿಲ್ಲ. ಖುರ್‍ರಂ ಜಂಟಾ ಸದಸ್ಯರ ದುರುದ್ದೇಶವೇನೆಂಬುದನ್ನು ಇನ್ನೂ ಆಲೋಚಿಸಿರಲಿಲ್ಲ.

ನೂರ್ ಜಹಾನ್ ತನ್ನ ಆಲೋಚನೆಗಳನ್ನು ಕಾರ್ಯರೂಪಕ್ಕೆ ಇಳಿಸಬೇಕಾದಲ್ಲಿ 'ಖುಸ್ರೋ' ನನ್ನು ಅತ್ಯಂತ ನಿಷ್ಠಾವಂತ ಅನುರಾಯನ ಭದ್ರ ಕಾವಲಿನಿಂದ ದೂರ ಮಾಡಬೇಕು. ತಮಗೆ ಅನುಕೂಲವೆನಿಸುವ ವ್ಯಕ್ತಿಯನ್ನು ಅವನ ರಕ್ಷಣೆಗೆ ನೇಮಿಸಬೇಕಾಗಿತ್ತು. ಜಹಾಂಗೀರನ ತಲೆಕೆಡಿಸಿ, ಅನುರಾಯ್ ಒಬ್ಬ ಯೋಧ. ಅವನಿಗೆ ಪರಿಚಿತವಾದ ಮತ್ತು ಅವನ ಪರಿಣತಿ, ಅರ್ಹತೆಗಳನ್ನು ಗಮನಿಸಿ, ಅವನನ್ನು, ಅವನಿಗೂ ಕೂಡ ತಿಳಿಸದೆ, ದೂರದ ದಕ್ಷಿಣದ ಕಡೆಗೆ ಸ್ಥಳಾಂತರಿಬೇಕೆಂದು ಯೋಚಿಸಿ, ಅದನ್ನೂ ಮಾಡಿದಳು. ಬುರಹಾನ್‌ಪುರ್ ಕೋಟೆಯಲ್ಲಿ ಅಸಫ್‌ಖಾನನ ದೇಖರೇಖಿಯಲ್ಲಿ ಖುಸ್ರೋನನ್ನು ಇರಿಸಿದಳು.

ಜಹಾಂಗೀರ್ ಪೂರ್ತಿ ಅಮಲೇರಿಸಿಕೊಂಡು ಮೈಮೇಲೆ ಪ್ರಜ್ಞೆ ಇಲ್ಲದಂತೆ, ತನ್ನ ಅನುಪಸ್ಥಿತಿಯಲ್ಲಿ ಏನೇನು ಆಗುತ್ತಿದೆ ಎನ್ನುವುದನ್ನು ಗಮನಿಸದೆ, ತೂರಾಡುತ್ತಾ, ಬಾಯಿಗೆ ಬಂದಂತೆ ಬಡಬಡಿಸುತ್ತಿದ್ದ. ಇತ್ತೀಚೆಗೆ ಮದಿರೆಯ ಜೊತೆಗೆ ಅಫೀಮಿನ ಚಟವನ್ನೂ ಹತ್ತಿಸಿಕೊಂಡಿದ್ದ. ತಾನು ಯಾರೆಂಬುದನ್ನು ಮರೆತು, ಬಂದವರನ್ನೆಲ್ಲ, ನಾನು ಯಾರು? ನಾನು ಯಾರು ಎಂದು ಪೀಡಿಸುತ್ತಾ ಕೇಳುತ್ತಿದ್ದ. ಜಹಾಂಗೀರನನ್ನು ಹುಡುಕಿಕೊಂಡು ಬಂದ ನೂರ್ ಜಹಾನ್, ಸಾಮಾನ್ಯವಾಗಿ, ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಅಫೀಮನ್ನು ನೀಡುತ್ತಿದ್ದಳು. ಆ ದಿನ ಅದು ಹೇಗೋ ಏನೋ ಅಫೀಮಿನ ಪ್ರಮಾಣ ಹೆಚ್ಚಾಗಿರುವಂತೆ ತೋರಿ ಬಂತು. ಅವಳನ್ನೂ ತಾನು ಯಾರೆಂದು ಪ್ರಶ್ನಿಸಿದ. ನೂರ್ ಜಹಾನ್, "ತಾವು ಜಹಾಂಗೀರ್" ಎಂದು ಹೇಳಿದರೂ ಅರ್ಥ ಮಾಡಿಕೊಳ್ಳಲಿಲ್ಲ. ನೂರ್ ಜಹಾನ್ ಕಡೆಗೆ ಅವನ ಕಿವಿಯಲ್ಲಿ ತಮ್ಮಿಬ್ಬರ ಪರಿಚಯ. ಪ್ರೀತಿ, ನಿಕಾಹ್, ನೂರ್ ಮಹಲ್ ಇತ್ಯಾದಿ ಸಂಗತಿಗಳನ್ನೆಲ್ಲ ವಿವರಿಸಿದಳು. ನೂರ್ ಜಹಾನ್, ಖುತುಬುದ್ದೀನ್, ಷೇರ್ ಆಫ್ಘನ್ ಹೆಸರುಗಳನ್ನು ಬಡಬಡಿಸಿದ. ಅವನ ಮನಸ್ಸಿನಲ್ಲಿ ಏನೇನೋ ಗೊಂದಲಗಳು, ಅನುಮಾನಗಳು ಸೃಷ್ಟಿಯಾಗಿರುವಂತೆ ತೋರಿತು. ತುಂಬ ಉದ್ವಿಗ್ನನಾದಂತೆ ಕಾಣಿಸುತ್ತಿದ್ದ.

ಖುರ್‍ರಂಗೆ ಕ್ರಮೇಣ ವಿಷಯಗಳೆಲ್ಲ ಸ್ಪಷ್ಟವಾಗತೊಡಗಿದವು. ನೂರ್ ಜಹಾನ್‌ಳನ್ನೂ ಕೂಡಾ ವಿಶ್ವಾಸಕ್ಕೆ ತೆಗೆದುಕೊಳ್ಳುವುದು ಅಪಾಯವೇ. ಆದರೆ ಅದು ಆಕೆಯ ಹೇಳಿಕೆಯಿಂದಲ್ಲದೆ, ತನಗೂ ಕೂಡಾ ಅದು ಅಗತ್ಯವೆನಿಸಿತು. ಮೊದಲಿಗೆ ದೊಡ್ಡ ಮುಳ್ಳನ್ನು ನಿವಾರಿಸಬೇಕಾಯಿತು. ಆ ದೊಡ್ಡ ಮುಳ್ಳೇ ಖುಸ್ರೋ!

ಒಂದು ದಿನ ಚಳಿಗಾಲದ ರಾತ್ರಿ, ಖುರ್‍ರಂ ಮುಖವನ್ನು ಕಪ್ಪು ಬಟ್ಟೆಯಿಂದ ಮರೆಸಿ ಒಂದಷ್ಟು ಮಂದಿ ಕುದುರೆ ಸವಾರರೊಂದಿಗೆ ಬುರಹಾನ್‌ಪುರದ ಕೋಟೆಯನ್ನು ಸಮೀಪಿಸಿದ. ಕೋಟೆಯ ಕಾವಲುಗಾರ ಮಿರ್ಜಾ ಜಾನಿಬೇಗ್, ಚಳಿಗಾಳಿ ಮಳೆಯನ್ನೂ ಲೆಕ್ಕಿಸದೆ ಕಾವಲಿದ್ದ. ಕೋಟೆ ಪ್ರವೇಶಿಸಲು ಮುಸುಕಿನ ವ್ಯಕ್ತಿ ಮುಂದಾದಾಗ,

ಸೂರ್ಯಾಸ್ತದ ನಂತರ ಯಾರಿಗೂ ಕೋಟೆ ಪ್ರವೇಶಿಸಲು ಅನುಮತಿ ಇಲ್ಲವೆಂದು ನಿರ್ದಾಕ್ಷಿಣ್ಯವಾಗಿ ನಿರಾಕರಿಸಿದ. ಆದರೆ ಆ ವ್ಯಕ್ತಿ, ತನ್ನ ಬಳಿ ವಜೀರ ಆಜಮ್ ಅಸಫ್‌ಖಾನರ ಅನುಮತಿ ಪತ್ರವಿದೆಯೆಂದು ಹೇಳಿದ. ನಂತರ ಮುಸುಕು ಸರಿಸಿ ತನ್ನನ್ನು ಯಾರೆಂದು ತೋರಿದಾಗ, ಜಾನಿಬೇಗ್, ಆ ಕುದುರೆ ಸವಾರ ಬೇರೆ ಯಾರೂ ಆಗಿರದೆ ಸ್ವತಃ ಶಹಜಾದಾ ಖುರ್ರಂ ಎಂದು ಗ್ರಹಿಸಿ ಕೋರ್ನಿಶ್ ಮಾಡಿ ಒಳಗೆ ಹೋಗಿ ತಿಳಿಸುತ್ತೇನೆಂದು ಒಳಹೋದ. ಆದರೆ ಅವನಿಗೆ ಅನುಮಾನ ಕಾಡತೊಡಗಿತು. ಈ ಅಪರ ರಾತ್ರಿಯಲ್ಲಿ ಶಹಜಾದಾ ಖುಸ್ರೋರನ್ನು ಕಾಣಲು ಬರಬೇಕಾದ ಅವಸರವೇನಿರಬಹುದು? ದೂರ ದಕ್ಷಿಣದ ಸುಬೇದಾರಿಕೆಯಲ್ಲಿ ಇದ್ದವನು ಇಷ್ಟು ದೂರ ಬರುವುದಕ್ಕೆ, ಆಗ್ರಾದಲ್ಲಿ ಅಂತಹ ಅವಸರಗಳೇನೂ ಸೃಷ್ಟಿಯಾಗಿಲ್ಲವಲ್ಲ ಎಂದು ಯೋಚಿಸಿ ತಲೆ ಕೆಡಿಸಿಕೊಂಡ. ಆದರೆ ಅವರು ಯಜಮಾನರು, ತಾವು ಸೇವಕರು. ಅವರ ಆಜ್ಞೆಯನ್ನು ನೆರವೇರಿಸುವುದಷ್ಟೇ ತಮ್ಮ ಕರ್ತವ್ಯವೆಂದು ಭಾವಿಸಿ ಸುಮ್ಮನಾದ. ಅಷ್ಟರಲ್ಲಿ ಕೋಟೆಯ ಬಾಗಿಲು ತೆರೆದುಕೊಂಡಿತು. ಖುರ್ರಂ ಸೈನಿಕರೊಡನೆ ಒಳಗೆ ಪ್ರವೇಶಿಸಿದ. ಆ ಕೋಟೆ ಅವನಿಗೆ ಅಪರಿಚಿತವಾಗಿರಲಿಲ್ಲ. ಕೋಟೆಯ ಮೂಲೆ ಮೂಲೆಯ ಪರಿಚಯವಿತ್ತು. ಆದ್ದರಿಂದ ಖುಸ್ರೋ ಇರುವ ಜಾಗವನ್ನು ಗುರುತಿಸುವುದು ಅಷ್ಟೇನೂ ಕಷ್ಟವಾಗಲಿಲ್ಲ. ಜೊತೆಗೆ ಬರಲು ಪ್ರಯತ್ನಿಸಿದ ಜಾನಿಬೇಗ್‌ನನ್ನು ಬೇಡವೆಂದು ತಡೆದು ತಾನೊಬ್ಬನೇ ಖುಸ್ರೋನನ್ನು ಕಾಣಲು ಮುಂದಾದ.

ಕೆಂಪು ಕಲ್ಲಿನ ಗೋಡೆಯ ಮೇಲೆ ಅಷ್ಟೊಂದು ಬೆಳಕು ಬೀಳುತ್ತಿರಲಿಲ್ಲ. ಆ ಮಂದ ಬೆಳಕಿನಲ್ಲಿ ಅತ್ಯಂತ ವಿಶಾಲವಾದ ಕೋಣೆಯೊಂದನ್ನು ಪ್ರವೇಶಿಸಿದ. ಯಾರೋ ಬಂದರೆಂಬುದನ್ನು ಗ್ರಹಿಸಿದ ಖುಸ್ರೋ, 'ಯಾರದು' ಎಂದು ಪ್ರಶ್ನಿಸಿದ ಮತ್ತು ನಿದ್ದೆ ಮಾಡುತ್ತಿದ್ದ ಖುಸ್ರೋ, ನಿದ್ದೆ ಗಣ್ಣಿನಲ್ಲಿಯೇ ಎದ್ದು ಬಂದ.

ಅಷ್ಟು ಹೊತ್ತಿಗೆ ಬೆಳಕು ಹರಿದಿತ್ತು. ಖುಸ್ರೋ ನಿಧಾನವಾಗಿ ಸಮೀಪಿಸುತ್ತಿದ್ದ. ಖುರ್ರಂ, ಅಣ್ಣನನ್ನು ಬಹಳ ದಿನಗಳಿಂದ ನೋಡಿರಲಿಲ್ಲ. ಅವನು ಬೆರಗಿನಿಂದ ಮೆಚ್ಚಿಗೆಯಿಂದ ಅವನ ಆಜಾನುಬಾಹು ದೇಹವನ್ನು ಸುಂದರವಾದ ಮುಖವನ್ನು ರೆಪ್ಪೆ ಮಿಟುಕಿಸದೆ ನೋಡುತ್ತಿದ್ದ. ಖುರ್ರಂ ಕೂಡಲೇ ಹೋಗಿ ತಬ್ಬಿಕೊಂಡ.

"ಬಡೇ ಭಾಯಿಜಾನ್ ನಿಮ್ಮನ್ನು ನೋಡಿ ಬಹಳ ಸಂತೋಷವಾಯಿತು. ಹೇಗಿದ್ದೀರಿ? ನಿಮ್ಮ ಕಣ್ಣಿನ ದೃಷ್ಟಿ ಸರಿಹೋಯಿತೇ?"

"ಖುರ್ರಂ ನಿನ್ನನ್ನು ಭೇಟಿಯಾಗಿದ್ದು ನನಗೆ ಬಹಳ ಸಂತೋಷವಾಗಿದೆ. ನಾನೂ ನಿನ್ನನ್ನು ನೋಡಿ ಬಹಳ ಕಾಲ ಆಗಿದೆ. ಎಲ್ಲವೂ ಹೇಗಿದೆ? ನಾನೊಬ್ಬ ನತದೃಷ್ಟ! ನನ್ನನ್ನು ಕಾಣಬರುವವರೇ ಇಲ್ಲ. ಎಲ್ಲರೂ ನನ್ನನ್ನು ದೇಶದ್ರೋಹಿ. ಬಂಡುಕೋರ ಎಂದು ಭಾವಿಸುತ್ತಾರೆ. ಆದರೆ ನಿಜವಾಗಿಯೂ ನನಗೇನೂ ತಖ್ತ್ ಬೇಕಿರಲಿಲ್ಲ. ಆದರೆ ದೊಡ್ಡವರೆಲ್ಲರೂ ಸೇರಿ ನನ್ನ ತಲೆಕೆಡಿಸಿದರು. ಹಾಗೇ ನೋಡಿದರೆ ಅಬ್ಬಾ ಹುಜೂರ್ ಕೂಡಾ, ದಾದಾ ಹುಜೂರರನ್ನು ಸರಿಸಿ, ತಖ್ತನ್ನು ಪಡೆಯಲು ಪ್ರಯತ್ನಿಸಲಿಲ್ಲವೇ? ಅಲಹಾಬಾದಿನಿಂದ ಒಂದು ದೊಡ್ಡ ಸೈನ್ಯದ ಪಡೆಯನ್ನು ಆಗ್ರಾದ ಮೇಲೆ ಆಕ್ರಮಣ ಮಾಡಲು ಕಳಿಸಿರಲಿಲ್ಲವೇ? ನಿನಗೆ ಬಹುಶಃ ಇದೆಲ್ಲ ಗೊತ್ತಿರಲಿಕ್ಕಿಲ್ಲ. ನೀನು ಇನ್ನೂ

ಬಹಳ ಚಿಕ್ಕವನಾಗಿದ್ದೆ. ಸಾಲದೆಂಬಂತೆ ಒಮ್ಮೆ ದಾದಾ ಹುಜೂರರ ಹುಟ್ಟುಹಬ್ಬದಂದು ಸಿಹಿಯಲ್ಲಿ ವಿಷಬೆರೆಸಿ ಸಾಯಿಸಲು ಪ್ರಯತ್ನಿಸಿರಲಿಲ್ಲವೇ? ಹಾಗಿರುವಾಗ ಅಬ್ಬಾ ಹುಜೂರ್ ಕ್ರೂರ ಶಿಕ್ಷೆಕೊಟ್ಟು, ಅಂಧನನ್ನಾಗಿ ಮಾಡಿ, ನನ್ನ ಬದುಕೇ ಒಂದು ಜಹನ್ನುಮ್ ಆಗಿ ಪರಿವರ್ತಿಸಿಬಿಟ್ಟರು. ನನಗೀಗ ಯಾವ ಭವಿಷ್ಯವೂ ಇಲ್ಲ. ಆದರೆ ದಾದಾಹುಜೂರ್, ಅಬ್ಬಾ ಹುಜೂರರನ್ನು ಯಾವುದೇ ದಂಡನೆಯಿಲ್ಲದೆ ಉದಾರ ಮನಸ್ಸಿನಿಂದ ಕ್ಷಮಿಸಿ ಬಿಟ್ಟರು. ನನ್ನನ್ನೂ ಅಬ್ಬಾ ಹುಜೂರ್ ಕ್ಷಮಿಸಿದ್ದಾರೆ. ಕಣ್ಣಿನ ದೃಷ್ಟಿ ಮರಳಿ ಪಡೆಯುವ ರೀತಿಯಲ್ಲಿ ಚಿಕಿತ್ಸೆ ಕೊಡಿಸುತ್ತಿದ್ದಾರೆ. ಆದರೆ ಇದೆಲ್ಲ ಯಾಕೆ ಬೇಕು?"

"ತಂದೆಯಾದವರು ಮಕ್ಕಳನ್ನು ಅನುಮಾನದ ದೃಷ್ಟಿಯಿಂದ ನೋಡುತ್ತಿದ್ದಾರೆ ಎನ್ನುವ ಅರಿವುಂಟಾದಾಗ ತುಂಬ ಕಸಿವಿಸಿ ಎನಿಸಿತು. ಇದೆಲ್ಲ ನಡೆದಾಗ ನೀನಿನ್ನೂ ಮುಗ್ಧ ಬಾಲಕನಾಗಿದ್ದೆ."

"ಭಾಯಿಜಾನ್ ಆದದ್ದನ್ನೆಲ್ಲ ನೆನಪಿಸಿಕೊಂಡು ಅಳುವುದರಲ್ಲಿ ಪ್ರಯೋಜನವಿಲ್ಲ. ನಮಗೆದುರಾದುದನ್ನು, ಎದುರಾಗುವುದನ್ನು ಸಹಿಸಿಕೊಳ್ಳಲೇಬೇಕು."

"ಖುರ್ರಂಭಾಯಿ ನೀನು ಏನು ಹೇಳುತ್ತಿದ್ದಿ? ಎದುರಾದದ್ದನ್ನೆಲ್ಲ ಎದುರಿಸಿಯಾಯಿತು. ಇನ್ನೇನು ತಾನೇ ಎದುರಾಗುವುದಕ್ಕಿದೇ?"

"ನೀನೇನಾದರೂ ನನ್ನನ್ನು ಆಗ್ರಾಕ್ಕೆ ಕರೆದೊಯ್ಯುವುದಾದರೆ ನಾನು ಸಿದ್ಧ. ನನಗೆ ಎಲ್ಲಾದರೇನು? ಅಬ್ಬುವಿನ ಪ್ರೀತಿ ಇಲ್ಲ. ಅಮ್ಮಿಯ ಮಮತೆಯಿಲ್ಲ. ನನ್ನದೂ ಒಂದು ಬದುಕೇ?"

"ಬಡೇಭಾಯಿ ನೀವು ಸಿದ್ಧವಾಗಿರಿ!– ಎಂದ ಖುರ್ರಂನ ದನಿಯಲ್ಲಿ ಏನೋ ಒಂದು ಬಗೆಯ ಭಯಾನಕ ಆದೇಶವಿದೆಯೇನೋ ಎನಿಸಿತು. ಕಣ್ಣಿದ್ದರೆ ಖುರ್ರಂ ತನ್ನನ್ನು ಕೊಲ್ಲುವ ಪ್ರಯತ್ನದಲ್ಲಿ ಇದ್ದಾನೆ ಎನ್ನುವುದನ್ನು ಅರ್ಥಮಾಡಿಕೊಳ್ಳುತ್ತಿದ್ದ.

"ಬಡೇಭಾಯಿ ನಾವು ನಾಲ್ಕು ಜನ ಶಹಜಾದರು ಯಾರಿಗಾದರೂ ಒಬ್ಬರಿಗೆ ಮಾತ್ರವೇ ತಖ್ತ್ ಪಡೆಯುವ ಸಾಧ್ಯತೆ ಇರುತ್ತದೆ. ನ್ಯಾಯಯುತವಾಗಿ ಅದು ನಿಮ್ಮದಾಗುತ್ತದೆ. ಆದರೆ ನೀವು ಹೀಗಿದ್ದೂ ತಖ್ತ್‌ನ ಅಧಿಕಾರ ನಿಮ್ಮ ಪಾಲಿಗೆ ಬಂದರೂ ಬರಬಹುದು."

"ಖುರ್ರಂಭಾಯಿ, ನೀನೇನು ಹೇಳುತ್ತಿರುವಿ? ನನಗೇನೂ ಅದರ ಆಸೆ ಇಲ್ಲ."

"ನಿಮಗೆ ಆಸೆಯಿರದಿರಬಹುದು. ನಿಮ್ಮ ಹೆಸರಿನಲ್ಲಿ ಬೇರೆಯವರಿಗೆ ಆಸೆ ಇರಬಹುದಲ್ಲ. ಅದಕ್ಕಾಗಿ, ಭಾಯಿಜಾನ್ ತಖ್ತ್‌ನ್ನು ಪಡೆಯಬೇಕಾದರೆ, ನಿಮ್ಮನ್ನು........"

"ಖುರ್ರಂ, ನನ್ನ ಮಾತು ಕೇಳಿಸಿಕೋ"........ಎಂದು ಏನನ್ನೋ ಹೇಳಲು ಪ್ರಯತ್ನಿಸುತ್ತಿದ್ದ ಖುಸ್ರೋನನ್ನು ಕೊಲ್ಲಲು ಪ್ರಯತ್ನಿಸಿದ. ಕುರುಡನಾದರೂ ಖುಸ್ರೋ, ಪ್ರಾಣ ಉಳಿಸಿಕೊಳ್ಳಲು ಸಾಕಷ್ಟು ಪ್ರಯತ್ನಿಸಿದ, ಕೊಸರಾಡಿದ. ಆದರೆ ಕಡೆಗೂ ಖುರ್ರಂ ನಿರ್ದಾಕ್ಷಿಣ್ಯವಾಗಿ ಅವನ ಕಥೆ ಮುಗಿಸಿದ.

ಕೊಲೆಗಾರ ಯಾರೆಂಬುದು ತಿಳಿಯದಂತೆ ಯಾವುದೇ ಸುಳಿವುಗಳಿಲ್ಲದಂತೆ ಪರಿಸರ ಸೃಷ್ಟಿಸಿದ. ಹೊಟ್ಟೆಗೆ ಕತ್ತಿ ಇರಿಸಿದ. ಅಲ್ಲಿಂದ ಸಹಜವಾಗಿ ಹೊರಬಂದು, ಕುದುರೆ ದೌಡಾಯಿಸಿಕೊಂಡು ಪರಾರಿಯಾದ.

ಖುಸ್ರೋನ ಸಾವಿನ ಸುದ್ದಿ ಕಾಳ್ಗಿಚ್ಚಿನಂತೆ ಹರಡಿತಾದರೂ ಅದು ಕೊಲೆಯೆಂದು ಬಿಂಬಿತವಾಗಲಿಲ್ಲ. ಖುರ್‍ರಂ ಅವನ ಸಾವಿನ ಸುತ್ತ, ಸುಂದರವಾದ ಮತ್ತು ವಾಸ್ತವವೆನಿಸುವಂತಹ ಒಂದು ಕತೆಯನ್ನು ಕಟ್ಟಿ ಜಹಾಂಗೀರನಿಗೆ ವಿವರಿಸಿದ್ದ. ಅದನ್ನೇ ನಂಬಿ ಜಹಾಂಗೀರ್ ತನ್ನ ಆತ್ಮಚರಿತ್ರೆ ಅಥವಾ ನೆನಪುಗಳ ಸಂಪುಟವಾದ 'ತುಜುಕ್–ಎ–ಜಹಾಂಗೀರಿ'ಯಲ್ಲಿ ದಾಖಲಿಸಿದ.

ಲಿಪಿಕಾರರನ್ನು ಕರೆಸಿ, ತನ್ನ ನೆನಪುಗಳನ್ನು ಉಕ್ತಲೇಖಿಸುತ್ತಾ ಹೋದಂತೆ, ಅವರು ದಾಖಲಿಸುತ್ತಿದ್ದರು. ಮಧ್ಯೆ ಮಧ್ಯೆ ಕೆಲವನ್ನು ಮರೆತು ಬಿಡುತ್ತಿದ್ದ. ಮತ್ತೆ ನೆನಪಿಸುತ್ತಿದ್ದರು. ಮತ್ತೆ ನೆನಪಿಸಿಕೊಂಡು, ಬರೆಯುವಂತೆ ಸೂಚಿಸುತ್ತಿದ್ದ. ಹಾಗೆಯೇ ತನ್ನ ಮಗ ಖುಸ್ರೋನ ಸಾವನ್ನು ಹೀಗೆ ವಿವರಿಸಿದ, "ನನ್ನ ಹಿರಿಯಮಗ ಶಹಜಾದ ಖುಸ್ರೋನ ಪ್ರಾಣದ ಹಣತೆ ಆರಿ ಹೋಯಿತು. ಪಿತೃಭಕ್ತನಾದ ಖುಸ್ರೋ ದಟ್ಟ ಕತ್ತಲ ರಾತ್ರಿಯಲ್ಲಿ ಅಸಹನೀಯ ಹೊಟ್ಟೆ ನೋವಿನಿಂದ ನರಳಿದನಾದರೂ ಧೈರ್ಯ ಕಳೆದುಕೊಳ್ಳದೆ ಸಹಿಸಿಕೊಂಡಿದ್ದ. ಪ್ರಶಾಂತವಾಗಿ ಸಾವನ್ನಪ್ಪಿದ. ಒಳ್ಳೆಯ ಮನುಷ್ಯ. ಆದರ್ಶ ಪುತ್ರ ಸೋದರ, ಪತಿ ಮತ್ತು ತಂದೆ ಎಲ್ಲವೂ ಆಗಿದ್ದ. ಸಾಯುವಾಗ ಖುಸ್ರೋ ಕೇವಲ ಮೂವತ್ನಾಲ್ಕು ವರ್ಷದವನಾಗಿದ್ದ. ಆರೋಗ್ಯವಂತನಾಗಿ ಗಟ್ಟಿಮುಟ್ಟಾಗಿ, ದೃಢ ಶರೀರಿಯಾಗಿ, ಮಾದಕ ಮತ್ತು ಹೊಳಪಿನ ಸುಂದರ ಕಣ್ಣುಳ್ಳವನಾಗಿದ್ದ. ಇನ್ನೂ ನನ್ನ ಕಣ್ಣೆದುರು ಅವನ ಸುಂದರ ರೂಪ ಎದ್ದು ಕಾಣಿಸುತ್ತದೆ. ಅವನ ಧ್ವನಿಯೂ ಶಾಂತ ಗಂಭೀರವಾದುದಾಗಿತ್ತು. ವಿಶಾಲವಾದ ವಕ್ಷವುಳ್ಳ ಅವನನ್ನು ಎದೆಗೆ ಅಪ್ಪಿಕೊಂಡರೆ, ಹೃದಯದ ಬಡಿತ ಕೇಳಿಸುತ್ತಿತ್ತು.

ಇದನ್ನು ಕೇಳಿಸಿಕೊಳ್ಳುತ್ತಿದ್ದ ಲಿಪಿಕಾರ ರಘುನಾಥ ಜಹಾಂಗೀರನ ಮುಖದತ್ತ ನೋಡಿದ. ಯಾಕೋ ಅನುಮಾನ! ಈ ಸಾವಿನ ಕತೆ ಸತ್ಯವಿರಲಾರದು ಎಂದೆನಿಸುತ್ತಿತ್ತು. ಜಹಾಂಗೀರ್ ಖುಸ್ರೋನ ತಂದೆ. ಮಗನ ಸಾವನ್ನು ವಿವರಿಸುವಾಗ ಗಂಟಲು ತುಂಬಿ ಬಂದಂತಿತ್ತು. ಹೊಟ್ಟೆ ನೋವಿನಿಂದ ಸಾಯುವುದೆಂದರೆ, ಅದೇನು ಅಂತಹ ಭಯಂಕರ ಕಾಯಿಲೆಯೇನೂ ಅಲ್ಲವಲ್ಲ! ಅಂಥಾದ್ದರಲ್ಲಿ ಬಾದಶಾಹನ ಮಗ ಶಹಜಾದಾನಿಗೆ, ಈ ಕಾಯಿಲೆ ಬರಲು ಸಾಧ್ಯವೇ! – ಎಂದೆಲ್ಲ ಯೋಚಿಸುತ್ತಿದ್ದ.

ಜಹಾಂಗೀರ್ ಕತೆ ಮುಂದುವರೆಸಿದ. "ಒಂದು ಸಂತೋಷದ ವಿಚಾರವೆಂದರೆ, ಖುಸ್ರೋ ಸಾಯುತ್ತಿದ್ದ ಸಮಯದಲ್ಲಿ ನನ್ನ ಮೂರನೆಯ ಮಗ ಖುರ್‍ರಂ ಅಲ್ಲಿದ್ದ. ಅಕಸ್ಮಾತ್ತಾಗಿ ಬುರಹಾನ್‌ಪುರದ ಕಡೆಗೆ ಹೋಗಿದ್ದ. ಅಣ್ಣನ ಸಾವಿನ ಸಮಯದಲ್ಲಿ ಸದ್ಯಕ್ಕೆ ಅವನು ಅಲ್ಲಿದ್ದು ಅವನ ನೋವನ್ನು ಕಡಿಮೆಮಾಡಲು ಪ್ರಯತ್ನಿಸಿದ. ಆದರೂ ಸಾವಿನಿಂದ ಉಳಿಸಲಾಗಲಿಲ್ಲ. ದುಃಖಾತಿರೇಕದಿಂದ ಕುಸಿಯುವಂತಾಗಿದ್ದರೂ ಧೈರ್ಯ ತಂದುಕೊಂಡು, ಮುಂದೆ ಮಾಡಬೇಕಾದ ಕೆಲಸಗಳ ಕಡೆ ಗಮನ ಕೊಟ್ಟ. ಅದ್ದೂರಿಯಾಗಿ ಶವಯಾತ್ರೆಯನ್ನು, ಅಣ್ಣನ ಗೌರವಾರ್ಥ ಏರ್ಪಡಿಸಿದ. ಶವವನ್ನು ಸ್ಮಶಾನದ ತನಕ ಮೆರವಣಿಗೆಯಲ್ಲಿ ಹೊತ್ತೊಯ್ಯುವ ವ್ಯವಸ್ಥೆ ಮಾಡಿದ. ಅಷ್ಟೇ ಅಲ್ಲ, ಸ್ವತಃ ತನ್ನ ಕೈ ಬರಹದಿಂದಲೇ ಖುಸ್ರೋನ ಸಾವನ್ನು ವಿವರಿಸಿ ಬರೆದು ಕಳಿಸಿದ. ಅವನ ಬರವಣಿಗೆಯಂತೂ ಶೋಕಾರ್ದ್ರತೆಯಿಂದ ತುಂಬಿದಂತೆ ಇತ್ತು. ಇಂತಹ ಗಂಭೀರ

ದುಃಖದ ಸ್ಥಿತಿಯಲ್ಲಿಯೂ ಶಹಜಾದಾ ಖುರ್ರಂ ವಿಚಲಿತನಾಗದೆ, ಅಬ್ಬಾ ಹುಜೂರಾದ ನನಗೆ ತಿಳಿಸುವುದನ್ನು ಮರೆಯಲಿಲ್ಲ. ನಾನು ಜಹಾಂಗೀರ್, ಸಲೀಂ ಹಿಂದೂಸ್ತಾನದ ಬಾದಶಾಹ್ ನನ್ನ ಮಗ ಖುಸ್ರೋನ ಬಗ್ಗೆ ಹೆಮ್ಮೆಪಡುತ್ತೇನೆ. ಹಾಗೆಯೇ ಖುರ್ರಂ ಬಗ್ಗೆಯೂ ಹೆಮ್ಮೆಪಡುತ್ತೇನೆ."

ಸ್ವಲ್ಪ ದಿನಗಳ ನಂತರ ಜಹಾಂಗೀರನ ಸ್ಥಿತಿ ಒಂದು ಸ್ತಿಮಿತಕ್ಕೆ ಬಂದಿತ್ತು. ಮೆಹರುನ್ನೀಸಾಳ ಜೊತೆ ಒಂದಷ್ಟು ಹೊತ್ತು ಏಕಾಂತದಲ್ಲಿ ಕಳೆಯಬೇಕು; ಭಾವಿ ಬಾದಶಾಹನ ಬಗ್ಗೆ ಚಿಂತಿಸಬೇಕಿತ್ತು. ಅವನ ದೃಷ್ಟಿಯಲ್ಲಿ, ಅವಳ ಹೊರತಾಗಿ, ಸಮರ್ಥವಾದ ಸಲಹೆ ನೀಡಲು ಯಾರಿಗೂ ಸಾಧ್ಯವಿಲ್ಲ.

ಅವನ ಮನಸ್ಸಿನಲ್ಲಿ ಖುರ್ರಂ ಒಬ್ಬನೇ ಸಿಂಹಾಸನಕ್ಕೆ ಯೋಗ್ಯ ಅಧಿಕಾರಿ. ಆದರೂ ಮೆಹರುನ್ನೀಸಾ ಪೂರ್ವಾಪರಗಳನ್ನು ಯೋಚಿಸಿ ಹೇಳಬಲ್ಲಳು.

ಹೋಷಿಯಾರನ ಮೂಲಕ ಜಹಾಂಗೀರ್ ಮೆಹರುನ್ನೀಸಾ ಉರುಫ್ ನೂರ್ ಜಹಾನಳಿಗೆ ಕರೆ ಕಳಿಸಿದ.

ಮೆಹರುನ್ನೀಸಾ ವಿಧೇಯ ಹೆಂಡತಿಯಂತೆ ಬಂದು, ಮಾವಿನ ಮರದ ಅಡಿಯಲ್ಲಿ ಕುಳಿತಿದ್ದ ಜಹಾಂಗೀರನ ಪಕ್ಕದಲ್ಲಿ ಕುಳಿತಳು.

"ಜಹಾಂಪನಾಹ್, ನಿಮ್ಮ ಜೊತೆ ಒಂದಷ್ಟು ಹೊತ್ತು ಸಮಯ ಕಳೆಯಲು ಅವಕಾಶ ಮಾಡಿಕೊಟ್ಟದ್ದಕ್ಕೆ ಶುಕ್ರಗುಜಾರ್ ಹೇಳಲೇಬೇಕಿದೆ. ಇಷ್ಟಕ್ಕೂ ನನ್ನ ನೆನಪಾದದ್ದಕ್ಕೆ ಕಾರಣವನ್ನು ಕೇಳಬಹುದೇ?"

"ಬೇಗಂ ನಿನಗೇ ಗೊತ್ತಿದೆ. ನನ್ನ ಮುಂದಿನ ವಾರಸುದಾರನ ಬಗ್ಗೆ ನನಗೆ ಚಿಂತೆಯಾಗಿದೆ. ಖುಸ್ರೋನ ಸಾವನ್ನು ಮರೆಯಲಾಗುತ್ತಿಲ್ಲ. ನಾಲ್ಕು ಮಕ್ಕಳಲ್ಲಿ ಅವನು ಹಿರಿಯನಾಗಿದ್ದು. ಅವನಿಗೆ ನ್ಯಾಯಯುತವಾಗಿ ತಖ್ತ ಮೇಲೆ ಕೂರುವ ಅಧಿಕಾರ ಇತ್ತು. ಆದರೆ ಈಗ ಅವನಿಲ್ಲ. ಪರವೇಜ್, ಹಿರಿಯನಾದರೂ ಅದಕ್ಕೆ ಅವನಲ್ಲಿ ಯಾವ ಅರ್ಹತೆಯೂ ಇಲ್ಲ. ನಿರೀಕ್ಷೆಯೂ ಇಲ್ಲ. ಶಹರಿಯಾರ್ ಇನ್ನೂ ಚಿಕ್ಕವನಾಗಿದ್ದು, ಲೆಕ್ಕಕ್ಕೇ ಬರುವುದಿಲ್ಲ. ಇರುವವನು ಒಬ್ಬನೇ ಒಬ್ಬ, ನನ್ನ ಶೇರ್‌ಬೇಟಾ ಖುರ್ರಂ. ಅವನಲ್ಲಿ ನನಗೆ ತುಂಬು ಭರವಸೆಯಿದೆ. ಅವನಿಗೂ ಕನಸುಗಳಿವೆ. ಆದರೆ ಆ ಕನಸುಗಳು ಸಾಯದಂತೆ ನೋಡಿಕೊಳ್ಳುವವರು ಒಬ್ಬರು ಬೇಕಾಗಿದ್ದಾರೆ. ನನ್ನ ಪ್ರೀತಿಯ ನೂರ್‌ಬೇಗಂ ಹೇಳಿ, ನೀವು ಅವನಿಗೆ ಸಾಥ್ ನೀಡಿ, ಮುಂದೆ ಮೊಘಲ್ ಬಾದಶಾಹನಾಗಲು ಸಮರ್ಥನಾಗುವಂತೆ ರೂಪಿಸುತ್ತೀರೆಂದು ನಂಬುತ್ತೇನೆ. ಸದ್ಯಕ್ಕೆ ನಾನಿದ್ದೇನೆ. ಆದರೆ ನಾನು ಕೊಡುವುದಕ್ಕೆ ಮೊದಲೇ, ಬಂಡೆದ್ದು ದ್ರೋಹ ಬಗೆಯಬಾರದು. ನನ್ನ ಅಬ್ಬಾ ಹುಜೂರ್ ದಶಕಗಳ ಕಾಲ ರಾಜ್ಯಭಾರ ಮಾಡಿದರು. ನಾನು ವಯಸಿಗೆ ಬಂದಿದ್ದರೂ ಬಾದಶಾಹ ಪದವಿ ಬಿಟ್ಟುಕೊಡದೆ ಹೋದದ್ದು, ನಾನು ದಂಗೆಯೇಳಲು ಕಾರಣವಾಯಿತು. ಮನುಷ್ಯನ ಬದುಕು ಶಾಶ್ವತವಲ್ಲ. ಯಾವುದೇ ಸಿದ್ಧತೆಗಳನ್ನು ಯೋಚಿಸದೆ ಸಾಯುವುದು ನನಗಿಷ್ಟವಿಲ್ಲ. ಖಂಡಿತವಾಗಿ ನನ್ನ ಖುರ್ರಂ ನನ್ನ ಹೆಸರನ್ನು ಮತ್ತು ಚುಗತಾಯ್‌ವಂಶ ಪರಂಪರೆಯನ್ನು ಕಾಪಾಡುತ್ತಾನೆ. ಮೊಘಲ್

ಇತಿಹಾಸವನ್ನು ಅವನ ದಾದಾ ಹುಜೂರರಂತೆ ಸುವರ್ಣಾಕ್ಷರಗಳಲ್ಲಿ ಬರೆಸುತ್ತಾನೆ."

"ಅದು ನನಗೂ ಗೊತ್ತಿದೆ ಜಹಾಂಪನಾಹ್. ಖಂಡಿತವಾಗಿ, ನಿಮ್ಮ ಕನಸುಗಳನ್ನು ಆಕಾಂಕ್ಷೆಗಳನ್ನು ಪೂರೈಸುತ್ತಾನೆ. ನೀವಂದಂತೆ ಅವನ ಹೊರತು ಬೇರಾರೂ ಸಮರ್ಥರಲ್ಲ ಎನ್ನುವ ಸತ್ಯದ ಅರಿವು ನನಗಿದೆ."

ಪರವೇಜ್ ಕುಡುಕನೇ ನಿಜ. ಹಾಗೆ ನೋಡಿದರೆ ಜಹಾಂಗೀರನೂ ಪರವೇಜನಂತೆಯೇ ಮಾದಕ ವಸ್ತುಗಳ ಗುಲಾಮನಾಗಿದ್ದ. ಆದರೆ ಗುಣ, ಸಾಹಸ, ಸಾಮರ್ಥ್ಯಗಳನ್ನೂ ಸಮಯ ಬಂದಾಗ ತೋರಿಸಬಲ್ಲವನಾಗಿದ್ದ. ಆದ್ದರಿಂದಲೇ ಅಕ್ಬರ್ ಅವನು ಎಷ್ಟೇ ಮಾದಕ ವಸ್ತುಗಳ ಗುಲಾಮನಾಗಿದ್ದರೂ, ಅತಿಯಾಗಿ ಅದರ ಬಗ್ಗೆ ಬೇಸರಗೊಂಡಿದ್ದರೂ, ಕ್ಷಮಿಸಿ ಅವನನ್ನೇ ಉತ್ತರಾಧಿಕಾರಿಯನ್ನಾಗಿ ಮಾಡಿದ. ಅವನ ಉಳಿದ ಇಬ್ಬರು ಮಕ್ಕಳಾದ ದಾನ್ಯಾಲ್ ಮತ್ತು ಮುರಾದ್ ಮದ್ಯವ್ಯಸನಿಗಳಾಗಿ ಸಾವನ್ನಪ್ಪಿದ್ದರು. ಹೀಗಾಗಿ ಅಕ್ಬರ್‌ಗೆ ಅನ್ಯ ಮಾರ್ಗವಿರಲಿಲ್ಲ. ಸಾವಿನಂಚಿನಲ್ಲಿ ಇರುವಾಗಲೇ ಅಕ್ಬರ್ ಸಲೀಂನನ್ನು ಕರೆಸಿ, ಉದಾರ ಮನಸ್ಸಿನಿಂದ ಅವನ ದೌರ್ಬಲ್ಯಗಳನ್ನು ಕ್ಷಮಿಸಿ, ಅಲ್ಲಿಯೇ ರಾಜಪರಿವಾರದ ಸದಸ್ಯರ ಮುಂದೆ, ಬಾದಶಾಹತ್ವದ ಪ್ರತೀಕವಾದ 'ತಾಜ್' ಅನ್ನು ತನ್ನ ತಲೆ ಮೇಲಿಂದ ತೆಗೆದು, ಅವನ ತಲೆ ಮೇಲೆ ಇರಿಸಿದ್ದ.

ನೂರ್, ಜಹಾಂಗೀರನ ಮನದಾಳದ ಅಭಿಪ್ರಾಯವನ್ನು ಕೇಳಿಸಿಕೊಂಡಳು. ಆದರೆ ಸಂದಿಗ್ಧದಲ್ಲಿ ಮನಸ್ಸು ತೊಳಲಾಡಿತು. ತಾನು ಗಾದಿಗಾಗಿ, ಅಧಿಕಾರಕ್ಕಾಗಿ ಮಾಡುತ್ತಿರುವ ಪ್ರಯತ್ನಗಳು ಒಂದೆಡೆ ಇರುವಾಗ ಖುರ್ರಂನ ಪರವಾಗಿ ಇರುತ್ತೇನೆಂದು ಜಹಾಂಗೀರನಿಗೆ ಮಾತು ಕೊಟ್ಟಳಾದರೂ, ಖುರ್ರಂ ಅಧಿಕಾರಕ್ಕೆ ಬಂದಾಗ ತನ್ನ ಗತಿ ಏನಾಗಬಹುದು? ಜಹಾಂಗೀರ್ ಅಧಿಕಾರದಲ್ಲಿ ಇರುವವರೆಗೂ ತನಗೆ ಅಧಿಕಾರ ಇರುತ್ತದೆ. ಹೆಸರಿಗೆ ಜಹಾಂಗೀರನೇ ಬಾದಶಾಹನಾದರೂ ತನಗೆ ಬೇಕಾದ್ದೆಲ್ಲವನ್ನೂ, ಅಧಿಕಾರ, ಸ್ವಾತಂತ್ರ್ಯ ಮೊದಲಾದವುಗಳೆಲ್ಲವನ್ನೂ ನೀಡುತ್ತಿದ್ದಾನೆ. ಆದರೆ ಅದು ಎಲ್ಲಿವರೆಗೆ? ಅವನಿರುವವರೆಗೆ! ಆದ್ದರಿಂದ ಸ್ವಲ್ಪಮಟ್ಟಿಗಾದರೂ ಅಧಿಕಾರ ಉಳಿಸಿಕೊಳ್ಳಲು ಸಾಧ್ಯವಾಗಬೇಕೆಂದರೆ ಖುರ್ರಂನ ಪರವಾಗಿ ನಿಲ್ಲುವುದು. ಅವನಿಗೆ ತಾನು ಅವನ ಪರವಾಗಿ ಇದ್ದೇನೆಂದು ತಿಳಿದಾಗ ಸಂತೋಷ ಪಡುತ್ತಾನೆ. ಅವನಿಗೆ ತನ್ನ ಬಗ್ಗೆ ಹೆಮ್ಮೆ, ಮೆಚ್ಚುಗೆಗಳಿವೆ. ದಕ್ಷಿಣದಲ್ಲಿ ಗೆದ್ದು ಬಂದಾಗ, ಹೊತ್ತು ತಂದ ಸಂಪತ್ತು ಅಮೂಲ್ಯವಾದ ವಸ್ತ್ರಾಭರಣಗಳ ರಾಶಿಯನ್ನು ನಮ್ಮ ಮುಂದೆ ಸುರಿದದ್ದನ್ನು ನೆನಪಿಸಿಕೊಂಡಳು.

ಈಗ ಅವಳ ಕೈಲಿ ಸರ್ವಾಧಿಕಾರವಿದೆ. ಗದ್ದುಗೆ ಮೇಲೆ ಕುಳಿತುಕೊಳ್ಳುವುದಿಲ್ಲ ಅಷ್ಟೆ! ಮೊಘಲ್ ಸಮಾಜ ಹೆಣ್ಣಿನ ಅಧಿಕಾರವನ್ನು ಒಪ್ಪಿಕೊಳ್ಳುವುದಿಲ್ಲ. ಬಲವಂತದಿಂದ, ದಿಟ್ಟತನದಿಂದ ಕುಳಿತಲ್ಲಿ ಪ್ರಜೆಗಳು ದಂಗೆಯೇಳುತ್ತಾರೆ. ಹಾಗಾಗಿ ಏನನ್ನೇ ಸಾಧಿಸಬೇಕಾದರೂ, ಯಾರನ್ನೇ ನಿಯಂತ್ರಿಸಬೇಕಾದರೂ ಪರೋಕ್ಷವಾಗಿ ಮಾಡಬೇಕಾಗುತ್ತದೆ.

ತನಗೆ ತನ್ನದೇ ಆದ ಮಿತಿಗಳಿವೆ ಎಂಬುದನ್ನು ಅರಿತಿದ್ದಳು. ಬಹಿರಂಗವಾಗಿ, ಆ ಸ್ಥಾನದಲ್ಲಿ ಸಭಿಕರ ಎದುರಲ್ಲಿ ಮಾತಾಡುವುದಕ್ಕಾಗಲೀ, ಸಮಾಜದ ಕಟ್ಟುಪಾಡುಗಳನ್ನು ಬದಲಿಸುವುದಾಗಲೀ ಸಾಧ್ಯವೇ ಇರಲಿಲ್ಲ. ತಮ್ಮ ಜನಾನಾದ ಹೆಣ್ಣುಗಳಲ್ಲಿಯೂ ಪೂರ್ಣ

ಬದಲಾವಣೆ ಸಾಧ್ಯವಾಗಲಿಲ್ಲವಾದರೂ ಸ್ವಲ್ಪ ಮಟ್ಟಿಗೆ ವಿಚಾರವಂತರೂ, ವಿದ್ಯಾವಂತರೂ, ಕುಶಲಕಲಾವಿದರೂ, ಉದ್ಯಮದಾರರೂ, ಸ್ವಾವಲಂಬಿಗಳೂ ಆಗಲು ಸಾಧ್ಯವಾಯಿತು. ತಮ್ಮಲ್ಲಾದ ಬದಲಾವಣೆಗೆ ತಾವೇ ಹಿಗ್ಗಿದರು. ಬದುಕಿಗೆ ಒಂದು ಅರ್ಥ ಬಂದಿದೆ ಎಂದು ಭಾವಿಸಿದರು.

ಈಗ ಅಧಿಕಾರ ಅವಳ ಕೈಲಿದ್ದುದಕ್ಕಾಗಿ, ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ತಂದಳು. ಹೆಣ್ಣು ಮಕ್ಕಳ ನೋವು ಸಂಕಟಗಳಿಗೆ ಪರಿಹಾರದ ದಾರಿಗಳನ್ನು ತೆರೆದಳು. ಜನಾನಾದ ವ್ಯಾಪ್ತಿಯಲ್ಲಿಯೇ ಮದರಸಾಗಳನ್ನು ಹೆಣ್ಣು ಮಕ್ಕಳಿಗಾಗಿ ತೆರೆದಳು. ಜನಾನಾದಲ್ಲಿ ಜಹಾಂಗೀರನ ಹುಟ್ಟು ಹಬ್ಬ, ನವರೋಜ್‌ಗಳನ್ನು ಅತ್ಯಂತ ಸಂಭ್ರಮದಿಂದ ಆಚರಿಸಿ, ಬಂದಿಗಳಂತೆ, ಬೇಗುದಿಯಲ್ಲಿ ಬೇಯುತ್ತಿದ್ದ ಸಾವಿರಾರು ಹೆಣ್ಣು ಮಕ್ಕಳ ಮನದಲ್ಲಿ ಸಂತೋಷ ಉತ್ಸಾಹಗಳು ಕಾಣಿಸಿಕೊಳ್ಳುವಂತೆ ಮಾಡಿದಳು. ಕವಿಗೋಷ್ಠಿಗಳು, ಸಂಗೀತ ಕಛೇರಿಗಳು, ಕಥಕ್, ಭರತನಾಟ್ಯ ಮುಂತಾದ ಶಾಸ್ತ್ರೀಯ ನೃತ್ಯ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದಳು. ಅವಳಲ್ಲಿ ಜಾತಿಭೇದದ ಮನೋಭಾವವಾಗಲೀ, ಧರ್ಮಗಳ ಬಗ್ಗೆ ಪೂರ್ವಗ್ರಹಗಳಾಗಲೀ ಇರಲಿಲ್ಲ. ಮುಸ್ಲಿಂ ಪಂಡಿತರನ್ನು ಮತ್ತು ಹಿಂದು ವಿದ್ವಾಂಸರನ್ನು ಸಮಾನವಾಗಿ ಗೌರವಿಸುತ್ತಿದ್ದಳು. ಒಟ್ಟಿನಲ್ಲಿ ನೂರ್ ಜಹಾನ್‌ಳಿಂದ, ಮೊಘಲ್ ಸಾಮ್ರಾಜ್ಯದಲ್ಲಿ ಸಮನ್ವಯ ಸಾಂಸ್ಕೃತಿಕ ಪರಿಸರ ನಿರ್ಮಾಣವಾಗುವಂತೆ ನೋಡಿಕೊಂಡಳು.

ಸಾರ್ವಜನಿಕರ ಉಪಯೋಗಕ್ಕಾಗಿ, ಸರಾಯ್‌ಗಳನ್ನು, ವಿಶ್ರಾಂತಿ ಧಾಮಗಳನ್ನು, ಸುಂದರವಾದ ಉದ್ಯಾನಗಳನ್ನು, ಸಾಲುಮರಗಳನ್ನು, ರಸ್ತೆಗಳನ್ನು ನಿರ್ಮಿಸಿದಳು.

ಆಗಾಗ ಕಾಶ್ಮೀರಕ್ಕೆ ಬೇಸಿಗೆಯ ದಿನಗಳನ್ನು ಕಳೆಯಲು ಹೋಗುತ್ತಿದ್ದು, ಅಲ್ಲಲ್ಲಿ ಸುಂದರವಾದ ನೂರ್ ಅಫ್‌ಶಾನ್ ಮತ್ತು ನೂರ್ ಮಂಜಿಲ್ ಉದ್ಯಾನಗಳನ್ನು ನಿರ್ಮಿಸಿದಳು. ಜೊತೆಗೆ ಪ್ರೇಕ್ಷಣೀಯವೆನಿಸುವ ವಿಶಿಷ್ಟ ಜಾತಿಯ, ವಿಶಿಷ್ಟ ಮಾದರಿಯ ಮರಗಿಡಗಳನ್ನು ಬೆಳೆಸಿ ಅಭಿವೃದ್ಧಿಪಡಿಸಿದಳು. ಹೆಜ್ಜೆ ಹೆಜ್ಜೆಗೂ ಕಣ್ಣಿಗೆ ಹಬ್ಬ, ಮನಸ್ಸಿಗೆ ಮುದ ನೀಡುವಂತಹ ದೃಶ್ಯಗಳನ್ನು ಸೃಷ್ಟಿಸಿದಳು.

ಅತ್ಯಂತ ಕಲಾತ್ಮಕವಾದ ಮಕಬರಾಗಳು, ಗುಂಬಜ್‌ಗಳು, ಮಹಲ್‌ಗಳು, ಮಸ್‌ಜಿದ್‌ಗಳು, ಅವಳ ಕಲಾಭಿರುಚಿ, ಕಲಾಪ್ರತಿಭೆಗೆ ದ್ಯೋತಕಗಳಾಗಿದ್ದವು.

ವಸ್ತ್ರಾಭರಣಗಳ ವಿಚಾರದಲ್ಲಿಯಂತೂ, ಮಾತಿಗೆ ನಿಲುಕದ ಪ್ರತಿಭೆಯ ಸಂಕೇತದಂತೆ, ವಸ್ತುಗಳು ತಯಾರಾಗುತ್ತಿದ್ದವು. ಹೆಣ್ಣುಮಕ್ಕಳಿಗೆ, ಸಂದರ್ಭಕ್ಕೆ ತಕ್ಕಂತೆ ಉಡಬಹುದಾದ ಉಡುಪುಗಳ ವಿನ್ಯಾಸ ಬೆರಗುಗೊಳಿಸುವಂತಿತ್ತು. ಆಭರಣಗಳ ವಿಚಾರದಲ್ಲಿಯೂ ಹಾಗೆಯೇ ಅವಳ ಕಲಾ ಪ್ರತಿಭೆ ವ್ಯಕ್ತವಾಗುತ್ತಿತ್ತು. ಇಡೀ ಸಾಮ್ರಾಜ್ಯದಲ್ಲಿ ಇವೆಲ್ಲಕ್ಕೂ ಬಹಳವಾದ ಬೇಡಿಕೆಯಿತ್ತು. ಇದೆಲ್ಲವನ್ನೂ ಮುಂದುವರೆಸಿಕೊಂಡು ಹೋಗಲು ಅಧಿಕಾರ ಮುಖ್ಯವಾಗಿ ಬೇಕಾಗುತ್ತಿತ್ತು. ಖುರ್ರಂ ಬಾದಶಾಹನಾದ ಮೇಲೆ ಇಂದಿನಂತೆ ಇದೇ ರೀತಿಯಲ್ಲಿ ಅಧಿಕಾರ ಮುಂದುವರೆಸಲು ಸಾಧ್ಯವಿದೆಯೇ ಎಂದು ಯೋಚಿಸಿದಳು.

ಪ್ರಜೆಗಳು ಖುರ್ರಂನನ್ನು ಒಪ್ಪಿಕೊಳ್ಳುತ್ತಾರೆ. ಆದ್ದರಿಂದ ಸ್ವಲ್ಪ ಮಟ್ಟಿನ ಸ್ವಾತಂತ್ರ್ಯ, ಅಧಿಕಾರ ಸಾಧ್ಯವಾಗಬಹುದು.

ನೂರ್ ಜಹಾನ್‌ಳ ವಿಚಾರದಲ್ಲಿ ಎರಡು ಬಣಗಳು ಇದ್ದವು. ಈ ಬಗೆಯ ಎರಡು ಬಣಗಳು ಜನಾನಾದಲ್ಲಿಯೂ ಇದ್ದವು. ಸಭಾಸದರ ಬಣಗಳಲ್ಲಿ ನೂರ್ ಜಹಾನ್‌ಳನ್ನು ಅವಳ ಸಾಧನೆ ಸಾಮರ್ಥ್ಯಗಳಿಗಾಗಿ ಮೆಚ್ಚಿಗೆ ತೋರುವ ಬಣವಿದ್ದರೆ, ಮತ್ತೊಂದು ಬಣ, ಜಗತ್‌ಗೋಸಿನಿ ಮತ್ತು ಖುರ್ರಂ ಪರವಾಗಿದ್ದ ರಾಜಪೂತ ಸೈನಿಕರಾಗಿದ್ದರು. ನೂರ್ ಜಹಾನಳನ್ನು, ಜಗತ್‌ಗೋಸಿನಿಗೆ ಅನ್ಯಾಯ ಮಾಡಿದಳೆಂಬ ಕಾರಣಕ್ಕೆ ದ್ವೇಷಿಸುತ್ತಿದ್ದರು. ಖುರ್ರಂ ಪರವಾಗಿ ನಿಷ್ಠೆಯನ್ನು ಇರಿಸಿಕೊಳ್ಳಬೇಕೆಂದು ತೀರ್ಮಾನಿಸಿದ್ದರು.

ಜಹಾಂಗೀರನಿಗೆ ಖುರ್ರಂ ಪರ ಇರುವುದಾಗಿ ಮಾತುಕೊಟ್ಟಿದ್ದರೂ, ಖುರ್ರಂನನ್ನು ಸಂಪೂರ್ಣವಾಗಿ ನಂಬುವುದು ಸಾಧ್ಯವಿರಲಿಲ್ಲ. ಅದಕ್ಕಾಗಿ ತಂದೆ ಮತ್ತು ಅಣ್ಣನ ಸಲಹೆಯ ಅಗತ್ಯವಿದೆಯೆಂದು ಭಾವಿಸಿದಳು. ಆದರೂ ಯಾವುದೇ ತೀರ್ಮಾನ ಕೈಗೊಳ್ಳುವವರೆಗೂ ಖುರ್ರಂನ ವಿಶ್ವಾಸವನ್ನು ಕಾಯ್ದಿರಿಸಿಕೊಳ್ಳಬೇಕೆಂದು ನಿರ್ಧರಿಸಿದಳು.

ತಮ್ಮ ಜಂಟಾದ ಭಾಗವಾಗಿದ್ದ ಖುರ್ರಂನನ್ನೂ ತನ್ನ ವ್ಯವಹಾರಗಳಲ್ಲಿ ಸೇರಿಸಿಕೊಂಡಳು. ವಿದೇಶೀ ವ್ಯಾಪಾರಿಗಳ ಜೊತೆ ವ್ಯಾಪಾರ ವಹಿವಾಟು, ತಮ್ಮ ಹಡಗುಗಳನ್ನು ವಿದೇಶಗಳಿಗೆ ಸರಕು ಸಾಗಣೆಗಾಗಿ ಎರವಲು ಕೊಡುವುದು, ಸರಕಿನ ಮೇಲೆ ವಿಧಿಸಬೇಕಾದ ತೆರಿಗೆಗಳ ಸ್ವರೂಪ ಇತ್ಯಾದಿಗಳನ್ನು ಚರ್ಚಿಸಲು, ಹಿತದೃಷ್ಟಿಯಿಂದ ತಂದೆಯ ಮನೆಯನ್ನು ಆರಿಸಿಕೊಂಡಳು.

ಮೊಘಲ್ ದೊರೆಗಳು ಆಸಕ್ತಿ ವಹಿಸಿ, ಸಮುದ್ರ ಮಾರ್ಗದಲ್ಲಿ ಬಂದು ವ್ಯಾಪಾರಮಾಡಲು ಬಯಸುವ ವಿದೇಶೀ ವ್ಯಾಪಾರಿಗಳಿಗೆ ಹಿಂದೂಸ್ತಾನಕ್ಕೆ ಬರಲು ಅವಕಾಶ ಕಲ್ಪಿಸಿದರಲ್ಲದೆ ಅವರಿಗೆ ಬೇಕಾದ ಅನುಕೂಲಗಳನ್ನೂ, ರಕ್ಷಣೆಯನ್ನೂ, ಒದಗಿಸಲು ಮುಂದಾದವರೆಂದರೆ ಅಕ್ಬರ್ ಮತ್ತು ಜಹಾಂಗೀರ್. ಸರಕು ಸಾಗಣೆಯಲ್ಲಿ ಬಹಳಷ್ಟು ರಿಯಾಯಿತಿ ದರದಲ್ಲಿ ತೆರಿಗೆಗಳನ್ನು ವಿಧಿಸುತ್ತಿದ್ದರು. ಕೇವಲ ಶೇಕಡ 2½ ಅಷ್ಟೇ ವಿಧಿಸಲಾಗುತ್ತಿತ್ತು. ಹಿಂದೂಸ್ತಾನದಿಂದ ಕರಕುಶಲ ವಸ್ತುಗಳು, ಹತ್ತಿ ಬಟ್ಟೆ, ಉಡುಪುಗಳು–ಇವುಗಳಿಗೆ ಇಂಗ್ಲೆಂಡಿನಲ್ಲಿ ಬಹಳ ಬೇಡಿಕೆಯಿತ್ತು. ಇದರಷ್ಟೇ ಬೇಡಿಕೆಯ ವಸ್ತುಗಳಾಗಿದ್ದ ಸಂಬಾರ ಪದಾರ್ಥಗಳು, ಓಪಿಯಮ್, ಸಕ್ಕರೆ, ಬೇರೆ ಬೇರೆ ಗುಣಮಟ್ಟದ ರೇಶಿಮೆ ಬಟ್ಟೆ, (ಇಂಡಿಗೋ) ನೀಲಿ, ಉಪ್ಪು, ಅರಗು, ಮೇಣ, ಬೊರಾಕ್ಸ್, ಹಳದಿ, ಹಲವು ಬಗೆಯ ಮಾದಕ ಪದಾರ್ಥಗಳು, ಮುತ್ತು, ಹವಳ, ಸುಗಂಧ ದ್ರವ್ಯಗಳು, ಪಿಂಗಾಣಿ ವಸ್ತುಗಳು. ಅತ್ಯಂತ ಶ್ರೇಷ್ಠ ಗುಣಮಟ್ಟದ ರೇಶಿಮೆ, ವೆಲ್ವೆಟ್, ಬ್ರೊಕೇಡ್ ಮುಂತಾದವುಗಳೆಲ್ಲ ಇಲ್ಲಿಂದ ರಫ್ತಾಗುತ್ತಿದ್ದವು. ಇವುಗಳಿಗೆ ಬದಲಾಗಿ, ಅಲ್ಲಿಂದ ಚಿನ್ನ, ಬೆಳ್ಳಿ ಮೊದಲಾದ ಲೋಹಗಳನ್ನು ಆಮದು ಮಾಡಿಕೊಳ್ಳುತ್ತಿತ್ತು. ಸಮುದ್ರ ವ್ಯಾಪಾರ, ವಹಿವಾಟು ಅತ್ಯಂತ ಲಾಭದಾಯಕವೆನಿಸಿ ಇದಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ಕೊಡಲಾಗುತ್ತಿತ್ತು. ಹಿಂದೂಸ್ತಾನದಿಂದ ರಫ್ತಾಗುವ ಸರಕುಗಳ ಪ್ರಮಾಣ ಬಹಳ ದೊಡ್ಡದಾಗಿತ್ತು. ಆದರೆ ಆಮದು ವಸ್ತುಗಳು ಕನಿಷ್ಠ ಪ್ರಮಾಣದವಾಗಿದ್ದವು. ಆದ್ದರಿಂದ ಇಂಗ್ಲೆಂಡಿನ ಬೇಡಿಕೆಯ ಪ್ರಮಾಣವನ್ನು ಕಡಿಮೆ ಮಾಡಲು ಇಂಗ್ಲೆಂಡ್ ಮತ್ತು ಇತರ ದೇಶಗಳು ಪ್ರಯತ್ನಿಸಿದವು.

ವಿಲಿಯಂ ಹಾಕಿನ್ಸ್ ಎಂಬ ಬ್ರಿಟಿಷ್ ವ್ಯಾಪಾರಿಯೊಬ್ಬ, ಜಹಾಂಗೀರನೊಂದಿಗೆ ಇಂಗ್ಲೆಂಡ್ ಮತ್ತು ಹಿಂದೂಸ್ತಾನದ ನಡುವೆ ವ್ಯಾಪಾರ ವಿಚಾರವಾಗಿ ಚರ್ಚೆ ಮಾಡಿ ಒಪ್ಪಂದಕ್ಕೆ ಸಹಿ ಮಾಡುವಂತೆ ಪ್ರಯತ್ನಿಸಿದ. ಆದರೆ ಇದಕ್ಕೂ ಮೊದಲೇ ಅಂದರೆ ಹಲವಾರು ವರ್ಷಗಳ ಹಿಂದೆಯೇ, ಬ್ರಿಟಿಷರ ಪ್ರವೇಶ ಆಗುವಷ್ಟು ಹೊತ್ತಿಗೆ, ಒಳ್ಳೆಯ ಪ್ರಮಾಣದಲ್ಲಿ ವ್ಯಾಪಾರ ವಾಣಿಜ್ಯವನ್ನು ಹಿಂದೂಸ್ತಾನದೊಂದಿಗೆ ಕುದುರಿಸಿಕೊಂಡಿದ್ದರು. ಅವರು ಅರಬಿ ಸಮುದ್ರ ಮಾರ್ಗವನ್ನು ಆರಿಸಿಕೊಂಡಿದ್ದರು. ಇದರಿಂದಾಗಿ ಯಾತ್ರಾರ್ಥಿಗಳಾಗಿ ಮೆಕ್ಕಾ ಮದೀನ ಕಡೆ ಹೋಗಬಯಸುವ ಯಾತ್ರಿಗಳಿಂದ ತೆರಿಗೆ ಸಂಗ್ರಹಿಸಲು ಅನುಕೂಲವೂ, ಲಾಭದಾಯಕವೂ ಆಗುತ್ತಿತ್ತು.

ಮೊಘಲ್ ರಾಣಿಯರೂ ಸೇರಿದಂತೆ, ಈ ವ್ಯಾಪಾರದಲ್ಲಿ ತಮ್ಮ ಸ್ವಂತ ಹಡಗುಗಳನ್ನು ತೊಡಗಿಸಿಕೊಂಡಿದ್ದರು. ನೂರ್ ಜಹಾನಳಂತೂ ಹಡಗುಗಳ ಒಂದು ಸಮೂಹವನ್ನೇ ಹೊಂದಿದ್ದಳು. ಹಾಗೆಯೇ ಪಾದಶಾಹ್ ಬೇಗಂ ಕೂಡಾ ಹಡಗುಗಳ ಒಡೆತನವನ್ನು ಹೊಂದಿದ್ದಳು. ಹಿಂದೂಸ್ತಾನವನ್ನು ಸುತ್ತುವರೆದ ಸಮುದ್ರಗಳಲ್ಲಿ, ಸರಕು ಸಾಗಣೆಗೆ ಅನುಮತಿಯನ್ನು ಯಾರಿಗೆ ಕೊಡಬೇಕು ಎನ್ನುವುದು ಪ್ರಶ್ನೆಯಾಗಿತ್ತು. ಖುರ್ರಂನ ದೃಷ್ಟಿಯಲ್ಲಿ ಇಬ್ಬರಿಗೂ ಅವಕಾಶ ಕಲ್ಪಿಸಿ ತಾವು ಹೆಚ್ಚಿನ ಲಾಭವನ್ನು ಪಡೆಯಬಹುದು ಎನ್ನುವುದಾಗಿತ್ತು. ತಮ್ಮ ಸ್ವಂತ ಹಡಗುಗಳ ರಕ್ಷಣೆಯೂ ಆಗುತ್ತೆ, ಲಾಭವೂ ಬರುತ್ತದೆ ಎನ್ನುವ ಆಲೋಚನೆಯಿಂದ ಮೆಹರುನ್ನೀಸಾಳಿಗೂ ಖುರ್ರಂನ ಮಾತು ಹಿಡಿಸಿತು. ಒಬ್ಬರೇ ಇದ್ದಲ್ಲಿ ಉದ್ಧಟತನ ಹೆಚ್ಚಾಗುತ್ತದೆ. ಸ್ಪರ್ಧಿಗಳಿದ್ದಲ್ಲಿ ಸ್ವಲ್ಪ ಸೌಮ್ಯತೆ ತರ್ಕಗಳು ಕಾಣಿಸಿಕೊಂಡು, ನಮಗೆ ಲಾಭಾಂಶ ಹೆಚ್ಚಾಗುತ್ತದೆ ಎನ್ನುವ ಲೆಕ್ಕಾಚಾರ ಬೇರೆ!

ಖುರ್ರಂಗಂತೂ ಸಮುದ್ರದಾಚೆಯ ದೇಶಗಳೊಂದಿಗೆ ವ್ಯಾಪಾರ ಮಾಡುವ ಹುಕಿ ಹೆಚ್ಚಾಗಿತ್ತು. ಸಾಕಷ್ಟು ಲಾಭ ಗಳಿಕೆಯ ಸಾಧ್ಯತೆಯನ್ನು ಕಂಡುಕೊಂಡಿದ್ದ. ಅಜ್ಜಿ ರುಖೈಯ್ಯಾ ಬೇಗಂ ತಾನು ಹುಡುಗನಾಗಿದ್ದಾಗ ಚೀಲಗಳ ತುಂಬಾ ಸ್ವರ್ಣಮುದ್ರೆಗಳನ್ನು ತುಂಬಿಕೊಂಡಿರುತ್ತಿದ್ದು, ಯಾವಾಗಲಾದರೂ ಪ್ರೀತಿಯಿಂದ ಅವನಿಗೆ ನಾಣ್ಯಗಳನ್ನು ಕೊಡಬೇಕೆಂದೆನಿಸಿದಾಗ ಚೀಲದಿಂದ ಕೆಳಗೆ ಸುರಿದು ಎಣಿಸಿ ಕೊಡುತ್ತಿದ್ದಳು. ತನಗೆ ಆದಾಯ ಮೂಲವಿರುತ್ತಿದ್ದುದು ತನ್ನ ಹೆಸರಿಗಿದ್ದ ಜಾಗೀರುಗಳಿಂದ, ಮನಸಬ್‌ಗಳಿಂದ. ಈ ಸಮುದ್ರ ವ್ಯಾಪಾರದಿಂದ ಮತ್ತಷ್ಟು ಹಣ ಗಳಿಸಿದಲ್ಲಿ ಹೆಂಡತಿ, ಮಕ್ಕಳಿಗೆ ಬೇಕಾದ್ದನ್ನು ಕೊಡಬಹುದೆಂದು ಆಲೋಚಿಸಿ, ಅದರಲ್ಲಿ ಇತ್ತೀಚೆಗೆ ಆಸಕ್ತಿ ತಳೆದ. ಕೂಡಲೇ ವ್ಯವಹಾರ ಕುದುರಿಸಿಕೊಳ್ಳಲು, ಪೋರ್ಚುಗೀಸ್ ವೈಸ್‌ರಾಯಗೆ ತಾನೇ ಖುದ್ದಾಗಿ ಒಂದು ಪತ್ರ ಬರೆದು ತನ್ನ ಖೋಜಾ ಸೇವಕನ ಕೈಗಿತ್ತು ಕೂಡಲೇ ಗೋವಾ ತಲುಪುವಂತೆ ನೋಡಿಕೊಳ್ಳಲು ಆದೇಶಿಸಿದ.

ಅಷ್ಟರಲ್ಲಿ ಅವನಿಗೊಂದು ಅನಿರೀಕ್ಷಿತ ಅಚ್ಚರಿಯೊಂದು ಕಾಯುತ್ತಿತ್ತು. ಮೇವಾಡದ ಮೇಲೆ ದಿಗ್ವಿಜಯ ಸಾಧಿಸಿ ಹಿಂತಿರುಗಿದ ಸೈನಿಕರು, ಸೇನಾಧಿಪತಿಗಳು, ಖುರ್ರಂಗೆ ಜಯಘೋಷ ಮಾಡುತ್ತಿದ್ದರು. ಅವನು ಬಹಳ ಸಮರ್ಥವಾಗಿ ಸೇನಾ ಕಾರ್ಯಾಚರಣೆಯನ್ನು ರೂಪಿಸಿದ್ದ. ತನ್ನ ಸೈನಿಕರಲ್ಲಿ ಉತ್ಸಾಹ, ಭರವಸೆಗಳನ್ನು ತುಂಬಿ ಬೆನ್ನು ತಟ್ಟಿದ್ದ. ಈಗ ಅವರೆಲ್ಲ ವಿಜಯೋತ್ಸವ ಆಚರಣೆಯ ಗುಂಗಿನಲ್ಲಿದ್ದಾರೆ. ತನ್ನಜ್ಜ

ಅಕ್ಬರ್‌ನ ಕನಸನ್ನು ಸಾಕಾರಗೊಳಿಸಿದ್ದಾನೆ. ತಂದೆಯ ಮಹತ್ವಾಕಾಂಕ್ಷೆಯನ್ನು ಪೂರೈಸಿದ್ದಾನೆ. ಇದಕ್ಕಿಂತಲೂ ಹೆಚ್ಚಿನದೇನನ್ನು ತಾನೇ ನಿರೀಕ್ಷಿಸಲು ಸಾಧ್ಯ? ಹಿಂದೂಸ್ತಾನದ ಭಾವಿ ಬಾದಶಾಹನಾಗುವ ಯೋಗ ಅವನಿಗಲ್ಲದೆ ಮತ್ತಾರಿಗೆ ತಾನೇ ಇರಲು ಸಾಧ್ಯ? ಎಲ್ಲರೂ ಇದನ್ನೇ ನಿರೀಕ್ಷಿಸಿದ್ದರು ಮತ್ತು ಬಯಸಿದ್ದರೂ ಕೂಡಾ! ಆದರೆ ಒಂದೇ ಒಂದು ಜೀವ ಅಸೂಯೆ ಹತಾಶೆಯಿಂದ ಕುದಿಯುತ್ತಿತ್ತು. ಅದೇ ಮೆಹರುನ್ನೀಸಾ! ಉರುಫ್ ನೂರ್ ಜಹಾನ್!

ಹೊರಗೆ ಬಂದು ಎಲ್ಲ ಸೈನಿಕರಿಗೂ ಕೃತಜ್ಞತೆ ಹೇಳಿದ. ಅಲ್ಲದೆ ಮೇವಾಡದ ರಾಜ ಅಮರ್‌ಸಿಂಗ್ ಮತ್ತು ಅವನ ಮಗ ಕರಣ್ ಸಿಂಗ್‌ರನ್ನು, ತಂದೆಯ ಸೂಚನೆಯಂತೆ ಅತ್ಯಂತ ಗೌರವ, ಮರ್ಯಾದೆಗಳಿಂದ ನಡೆಸಿಕೊಂಡ. ಜೊತೆಗೆ, ಸ್ನೇಹ ಸಂಬಂಧದ ಗುರುತಾಗಿ, ಕಳೆದುಕೊಂಡ ಆಸ್ತಿಪಾಸ್ತಿಯನ್ನು ಹಿಂತಿರುಗಿಸಿದ. ತಂದೆ ಮಕ್ಕಳ ಆತ್ಮ ಗೌರವಕ್ಕೆ ಕುಂದಾಗದಂತೆ ನಡೆಸಿಕೊಂಡ. ಅಮರ್‌ಸಿಂಗ್ ಸೋತು ಸೆರೆಯಾಗಿದ್ದರೂ ತನ್ನ ಗತ್ತನ್ನು ಬಿಟ್ಟುಕೊಟ್ಟಿರಲಿಲ್ಲ. ತನ್ನನ್ನು ರಾಜನಂತೆಯೇ ನಡೆಸಿಕೊಳ್ಳಬೇಕೆಂಬ ಅಪೇಕ್ಷೆಯನ್ನು ಇರಿಸಿಕೊಂಡಿದ್ದ. ಆದರೆ ಖುರ್ರಂನ ನಡವಳಿಕೆ ನೋಡಿದ ಮೇಲೆ ದರ್ಪ ಸೋರಿಹೋಯಿತು. ಖುರ್ರಂ ಕಾಲ ಬಳಿ ಬಂದು ನಿಂತು ತಲೆಬಾಗಿ ನಮಸ್ಕರಿಸಲು ಹೋದಾಗ ಥಟ್ಟನೆ ಖುರ್ರಂ–

"ಕೂಡದು! ಕೂಡದು, ನೀವು ನನಗೆ ನನ್ನ ತಂದೆಯ ಸಮಾನರು. ನೀವು ಮೊಘಲ್ ಸಾಮ್ರಾಜ್ಯಕ್ಕೆ ನಿಷ್ಠರಾಗಿರಿ. ನಮಗೆ ಅಗತ್ಯ ಬಿದ್ದಾಗ, ನಿಮ್ಮ ನೆರವು ನಮಗಿರಲಿ, ನಮ್ಮಿಬ್ಬರ ಮಧ್ಯೆ ಯಾವುದೇ ಮನಸ್ತಾಪಗಳು ಬೇಡ. ದಿಗ್ವಿಜಯ, ಯಾತ್ರೆಗಳೆಂದಾಗ ಸೋಲು ಗೆಲುವುಗಳು ಇದ್ದದ್ದೇ! ಒಮ್ಮೆ ಸೋತರೆ, ಮತ್ತೊಮ್ಮೆ ಗೆಲುವು. ಆದ್ದರಿಂದ ನೀವು ಸೋತಿರೆಂದು ಭಾವಿಸಬೇಡಿ. ಮೊಘಲ್ ಬಾದಶಾಹರುಗಳು ನಿಮ್ಮ ಸುರಕ್ಷತೆ, ಸಿರಿವಂತಿಕೆಗಳನ್ನು ಕಾಪಾಡುವ ಜವಾಬ್ದಾರಿ ಹೊರುತ್ತಾರೆ."

ಅಮರ್‌ಸಿಂಗ್ ಮತ್ತು ರಾಜಕುಮಾರ ಕರಣ್–ಇಬ್ಬರೂ ಖುರ್ರಂನ ಸಜ್ಜನಿಕೆ, ಸಭ್ಯತೆ, ಉದಾರತೆಗಳನ್ನು ಕಂಡು ಕೃತಜ್ಞತೆ, ಸಂತೋಷಗಳನ್ನು ವ್ಯಕ್ತಪಡಿಸಿದರು.

"ಶಹಜಾದೆ ಖುರ್ರಂ ಅವರೇ, ನಿಮ್ಮ ಸ್ನೇಹ ಸೌಹಾರ್ದತೆಗಳು ನಮ್ಮನ್ನು ಮೂಕ ವಿಸ್ಮಿತರನ್ನಾಗಿ ಮಾಡಿವೆ. ನಮ್ಮ ಕೃತಜ್ಞತೆಯ ಸಂಕೇತವಾಗಿ ಈ ಅಮೂಲ್ಯವಾದ ರತ್ನವೊಂದನ್ನು ಕಾಣಿಕೆಯಾಗಿ ಸ್ವೀಕರಿಸಬೇಕೆಂದು ಕೇಳಿಕೊಳ್ಳುತ್ತೇವೆ ಎನ್ನುತ್ತಾ ತನ್ನ ಬೆನ್ನಿಗೆ ನಿಂತಿದ್ದ ಸೈನಿಕರಿಗೆ ಆ ರತ್ನವನ್ನು ತರಲು ಸೂಚಿಸಿದ. ಬಹುದೊಡ್ಡ ಮತ್ತು ತೂಕದ ರತ್ನ ಬಾದಶಾಹರ ಪೇಟದ ಮಧ್ಯದಲ್ಲಿ ಹುದುಗಿ ಸಹಸ್ರ ಕಿರಣಗಳನ್ನು ಹೊರಚೆಲ್ಲುವ ಸಾಮರ್ಥ್ಯವಿದ್ದ ರತ್ನ, ಬಹಳ ತೂಕದ್ದು. ಅದನ್ನು ನೋಡಿದ ಖುರ್ರಂ, ಸ್ತಂಭಿಸಿ ಹೋದ. ಇಂಥ ಅಮೂಲ್ಯ ರತ್ನ, ಸಾವಿರ ಸಾಮ್ರಾಜ್ಯಗಳ ಬೆಲೆಗೂ ಮೀರಿರಬೇಕು! ಎಂದುಕೊಂಡ.

ಈ ಅದ್ಭುತ ರತ್ನವನ್ನು ತಂದೆಗೆ ಉಡುಗೊರೆಯಾಗಿ ನೀಡಬೇಕೆಂದುಕೊಂಡ ಕೂಡಲೇ ಮನಸ್ಸು ಬದಲಾಯಿಸಿದ. ಮೆಹರುನ್ನೀಸಾ ಗಮನಕ್ಕೆ ಬಂದರೆ ಸಾಕು, ಅದು ಸೇರುವುದು ಅವಳ ಕೈಯ್ಯನ್ನೇ! ಕಡೆಗೆ ಯಾರಿಗೂ ಕೊಡುವುದೇ ಬೇಡ, ಮೊಘಲ್

ವಂಶದ ಅಮೂಲ್ಯ ಆಸ್ತಿಯಾಗಿ ಇದು ನನ್ನಲ್ಲೇ ಇರಲಿ ಎಂದು ತೀರ್ಮಾನಿಸಿದ. ಮತ್ತೊಮ್ಮೆ ಅದನ್ನೇ ದಿಟ್ಟಿಸಿ ನೋಡುತ್ತಿದ್ದ.

"ಶಹಜಾದೆ, ಇದು ತಮಗೆ ಹಿಡಿಸಿತೇ? ಈ ಬಡವನ ಬಳಿ ಇದನ್ನು ಬಿಟ್ಟರೆ ಬೇರೇನೂ ಇಲ್ಲ. ಇಗೋ ಇದರ ಜೊತೆಗೆ ನನ್ನಲ್ಲಿ ಉಳಿದಿರುವ ಕನಿಷ್ಠ ಸಂಪತ್ತೆಂದರೆ, ಒಂದಷ್ಟು ಆನೆ, ಕುದುರೆ, ರೇಶಿಮೆ, ರತ್ನಖಚಿತ ಚೂರಿಗಳು ಮಾತ್ರ."

"ಸಾಕು ಸಾಕು ಇದಕ್ಕಿಂತ ನಮಗೆ ನಿಮ್ಮಿಂದ ಹೆಚ್ಚೇನೂ ಬೇಕಿಲ್ಲ. ನಿಮ್ಮಲ್ಲಿದ್ದುದನ್ನೆಲ್ಲ ನಾವೇ ಕಸಿದುಕೊಂಡಿದ್ದೇವೆ. ನಿಮ್ಮ ಸ್ನೇಹಪೂರ್ವಕ ಶರಣಾಗತಿಯೇ ನಮಗೆ ದೊಡ್ಡ ಉಡುಗೊರೆ. ನಿಮ್ಮ ಅಧಿಕಾರ, ಅಂತಸ್ತಿಗೆ ಚ್ಯುತಿ ಬಾರದ ರೀತಿಯಲ್ಲಿ ನಿಮ್ಮನ್ನು ನಡೆಸಿಕೊಳ್ಳುತ್ತೇವೆ. ಇನ್ನು ಮುಂದೆ ನೀವು ನಮ್ಮ ಸಾಮಂತರಾಗಿದ್ದು ಮೊಘಲ್ ಸಾಮ್ರಾಜ್ಯಕ್ಕೆ ಸೇವೆ ಸಲ್ಲಿಸುವಿರಿ. ಇಷ್ಟರಲ್ಲೇ ರಾಜಮುದ್ರೆ ಹೊಂದಿರುವ ಆದೇಶ ನಿಮ್ಮ ಕೈ ಸೇರುತ್ತದೆ" ಎಂದು ಹೇಳಿ, ತಮ್ಮ ಭಾವನೆಗಳ ಪ್ರತೀಕವಾಗಿ ಖುರ್ರಂ, ಗೌರವಯುತವಾದ ರಾಜಪೋಷಾಕು ಮತ್ತು ಮುತ್ತು ರತ್ನಗಳಿಂದ ಹುದುಗಿದ ಖಡ್ಗವನ್ನು ಉಡುಗೊರೆಯಾಗಿ ನೀಡಿದ.

"ರಾಣಾ ಅಮರಸಿಂಗ್ ಅವರೆ, ಈ ಉಡುಗೊರೆ ಮಾತ್ರವೇ ಅಲ್ಲ, ನೀವಿನ್ನೂ ರಾಜಪಟ್ಟವನ್ನು ರಾಜಾ ಎಂಬ ಬಿರುದನ್ನು ಹೊಂದಿರುತ್ತೀರಿ. ಎಂದೆಂದಿಗೂ ಅದು ಮುಂದುವರೆಯುತ್ತದೆ. ಮೇವಾಡವನ್ನು ನಿಮಗೆ ಜಾಗೀರಾಗಿ ಹಿಂತಿರುಗಿಸುತ್ತಿದ್ದೇವೆ. ಬದುಕಿರುವ ತನಕ ಅದು ನಿಮ್ಮದೇ ಆಗಿರುತ್ತದೆ."

"ಬಹಳ ಸಂತೋಷ, ನಾನು ಮಾತ್ರವಲ್ಲ, ನಮ್ಮ ಮಗ ಕುಮಾರ್ ಕರಣ್ ಕೂಡಾ ನಿಮ್ಮ ವಿಶ್ವಾಸಪಾತ್ರ ಸೇವಕನಾಗಿ ನಿಮ್ಮ ಜೊತೆ ಇರುತ್ತಾನೆ. ನನ್ನ ಪರವಾಗಿ ಅವನು ನಿಮ್ಮೆಲ್ಲ ಸೈನಿಕ ಕಾರ್ಯಾಚರಣೆಗಳಲ್ಲಿ ಜೊತೆಗಿರುತ್ತಾನೆ" ಎಂದು ಹೇಳುತ್ತಿದ್ದಂತೆ ಕರಣ್ ಒಂದೆರಡು ಹೆಜ್ಜೆ ಮುಂದೆ ಬಂದು, ಖುರ್ರಂನ ಮುಂದೆ ಮೊಣಕಾಲೂರಿ, ಖಡ್ಗವನ್ನು ಹೊರತೆಗೆದು ಅದರ ಮೇಲೆ ಕೈಯಿರಿಸಿ, ಸದಾ ತಾನು ಖುರ್ರಂ ಬಗ್ಗೆ ಪ್ರಾಮಾಣಿಕನಾಗಿರುತ್ತೇನೆ. ನಿಮ್ಮೆಲ್ಲ ದಂಡಯಾತ್ರೆಗಳಲ್ಲಿ ಪ್ರಧಾನ ಪಾತ್ರವಹಿಸುತ್ತೇನೆಂದು ಪ್ರತಿಜ್ಞೆ ಮಾಡಿದ. ಮತ್ತೊಮ್ಮೆ ಮೂವರೂ ಸೈನ್ಯದ ಸಮಕ್ಷಮದಲ್ಲಿ ಒಬ್ಬರನ್ನೊಬ್ಬರು ಆತ್ಮೀಯವಾಗಿ ಆಲಂಗಿಸಿಕೊಂಡರು.

ಖುರ್ರಂನ ಮೇವಾಡದ ಮೇಲಿನ ದಿಗ್ವಿಜಯ ಪ್ರಜೆಗಳ ಬಾಯಿಂದ ಮೆಚ್ಚುಗೆಯ ಮಾತುಗಳನ್ನು ಹೊಮ್ಮಿಸಿದವು. ಮುಂದಿನ ಬಾದಶಾಹರು ಶಹಜಾದಾ ಖುರ್ರಂ ಎಂದೇ ತೀರ್ಮಾನಿಸಿಬಿಟ್ಟರು. ರಾಜಪರಿವಾರದಲ್ಲಿ, ಪ್ರಜೆಗಳಲ್ಲಿ ವಿಜಯೋತ್ಸಾಹದ ಸಂಭ್ರಮದ ಹೊನಲು ಉಕ್ಕಿ ಹರಿಯಿತು. ಜಹಾಂಗೀರನಿಗಂತೂ ಖುರ್ರಂನನ್ನು ಕುರಿತು ಎಲ್ಲಿಯೂ ಇಲ್ಲದ ಹೆಮ್ಮೆ ಮೇರೆವರಿಯಿತು.

ಸಮುದ್ರ ವ್ಯಾಪಾರದಲ್ಲಿನ ಹಡಗುಗಳನ್ನು ಅದೂ ರುಖೈಯ್ಯಾ ಬೇಗಂರ 'ರಹೀಮಿ' ಹಡಗಿನ ಜೊತೆ ಜೊತೆಯಾಗಿ ಇನ್ನೂ ಉಳಿದ ನೂರು ಭಾರತೀಯ ಹಡಗುಗಳನ್ನು ಪೋರ್ಚುಗೀಸರು ವಶಪಡಿಸಿಕೊಂಡಿದ್ದರು. ಅಂದ ಮೇಲೆ ತನ್ನ ಹಡಗುಗಳಿಗೂ ಆ ಗತಿ ಬಂದರೆ ಆಶ್ಚರ್ಯಪಡಬೇಕಾದುದಿಲ್ಲ. ಖುರ್ರಂ ಬಹಳ ಬುದ್ಧಿವಂತ, ಪೋರ್ಚುಗೀಸ್

ವೈಸ್‌ರಾಯ್‌ನ ಮನವೊಲಿಸಿ, ಹೇಗೋ ತನ್ನ ಕೆಲಸ ಸಾಧಿಸಿಕೊಳ್ಳುತ್ತಾನೆ. ಆದರೆ ತಮ್ಮ ಪಾಡು? ಏನಾದರೂ ಉಪಾಯ ಆಲೋಚಿಸಲೇಬೇಕು ಎಂದುಕೊಂಡಳು. ಅವರಿಗೆ ಸರಿಯಾದ ಪಾಠ ಕಲಿಸಬೇಕೆಂದು ನಿರ್ಧರಿಸಿ, ಇದಕ್ಕೆ ಮುಖಾರಬ್ ಖಾನನನ್ನು ಮಧ್ಯವರ್ತಿಯಾಗಿ ಕಳಿಸಲು ಯೋಚಿಸಿದಳು. ಆದರೆ ಅವಳ ವಿಶ್ವಾಸ ಪಾತ್ರ ಸೇವಕ ಹೋಷಿಯಾರ್, ಮುಖಾರಬ್ ಖಾನ್ ನಂಬಲರ್ಹ ವ್ಯಕ್ತಿಯಲ್ಲ ಯಾಕೆಂದರೆ ಅವನು ಪೋರ್ಚುಗೀಸರ ಹೊಗಳು ಭಟ್ಟನಾಗಿದ್ದಾನೆ. ಸಾಲದ್ದಕ್ಕೆ ಕ್ರಿಶ್ಚಿಯಾನಿಟಿಗೆ ಮತಾಂತರ ಗೊಂಡಿದ್ದಾನೆ. ಖಂಡಿತವಾಗಿಯೂ ಅವನು ತಮಗೆ ಸಹಾಯ ಮಾಡಲಾರ ಎಂದು ತಿಳಿಸಿದ. ಆದರೆ ನೂರ್ ಜಹಾನ್ ಹಠ ಹಿಡಿದು, ಡಿಯು, ಡಾಮನ್ ಬಂದರುಗಳನ್ನು ವಶಪಡಿಸಿಕೊಳ್ಳಬೇಕು. ಇಷ್ಟು ಕಾಲ, ಮೊಘಲರ ಔದಾರ್ಯದ ಸಹಾಯವನ್ನು ಪಡೆದು, ಅನುಭವಿಸಿದ್ದಾರೆ. ಇನ್ನು ಮುಂದೆ ತಮ್ಮಿಂದ ಯಾವ ಅನುಕೂಲಗಳೂ, ಸವಲತ್ತುಗಳೂ ಅವರಿಗೆ ದೊರೆಯದಂತೆ ಮಾಡಲು ನಿರ್ಧರಿಸಿದಳು.

ಪಾದ್ರಿ ಕ್ಸೆರೋಮ್‌ನನ್ನು ವಶಕ್ಕೆ ತೆಗೆದಿರಿಸಿಕೊಳ್ಳಬೇಕೆಂದು ಮುಖಾರಬ್ ಖಾನನಿಗೆ ಆದೇಶ ಕಳಿಸಿದಳು. ಗೋವಾದಿಂದ ವೈಸರಾಯ್ ಕಳಿಸಿದ್ದ ಪರವಾನಗಿಯನ್ನು ಹಿಂತಿರುಗಿಸಿಬಿಟ್ಟಳು. ಅವುಗಳ ಪ್ರಯೋಜನ ತನಗಿಲ್ಲವೆಂದು ತಿಳಿಸಿ ಪತ್ರವನ್ನೂ ಬರೆದಿದ್ದಳು. ರಾಜ ಮುದ್ರೆಯೊಂದಿಗೆ ಆದೇಶವನ್ನು ರವಾನಿಸಿದಳು. ಇದರಲ್ಲಿ ಅಪರೂಪಕ್ಕೆ ತನ್ನ ಹೆಸರಿನಲ್ಲಿನ ಮುದ್ರೆಯನ್ನೊತ್ತಿ ಕಳಿಸಿದ್ದಳು. ಹಿಂದೂಸ್ತಾನದಲ್ಲಿ ಉಳಿಯಬೇಕೆಂದು ಬಯಸಿದಲ್ಲಿ ತನ್ನ ಆದೇಶಗಳನ್ನು ಪಾಲಿಸಬೇಕೆಂಬ ಎಚ್ಚರಿಕೆಯನ್ನೂ ಸೂಚಿಸಿ, ಜಹಾಂಗೀರನ ಸಹಿಯ ಪಕ್ಕದಲ್ಲಿಯೇ, ತನ್ನ ಸಹಿಯನ್ನೂ ನಮೂದಿಸಿದಳು ನೂರ್ ಜಹಾನ್, ಪಾದಶಾಹ್ ಬೇಗಂ ಎಂದು.

ಖುರ್‍ರಂನ ವಿಜಯೋತ್ಸವ, ಅಜಮೇರದಲ್ಲಿ ಅದ್ದೂರಿಯಾಗಿ ನಡೆಯುತ್ತಿತ್ತು. ಬೀದಿ ಬೀದಿಗಳೆಲ್ಲ ಬಣ್ಣ ಬಣ್ಣದ ಬಾವುಟಗಳಿಂದ ಮೆರೆಯುತ್ತಿದ್ದವು. ಜನ ಸಮೂಹ ತುಂಬಿ ತುಳುಕುತ್ತಿತ್ತು. ರಸ್ತೆಯಂಚಿನ ಬಾಲ್ಕನಿಗಳಿಂದ ಹೆಂಗಸರು ವಿಜಯೋತ್ಸವದ ಸಂಭ್ರಮವನ್ನು ಕಣ್ತುಂಬಿಕೊಳ್ಳುತ್ತಿದ್ದರು. ದೊಡ್ಡ ಬಯಲು ಪ್ರದೇಶದಲ್ಲಿ ಒಲೆಗಳನ್ನು ಹೂಡಿ, ಬಾಣಸಿಗರು ಬಗೆ ಬಗೆಯ ಭಕ್ಷ್ಯಗಳನ್ನು ತಯಾರಿಸುತ್ತಿದ್ದರು.

ಜನರ ಉದ್ಘೋಷಗಳ ಮಧ್ಯೆ ವಿಜೇತ ಖುರ್‍ರಂ ಠೀವಿಯಿಂದ ಕುದುರೆಯೇರಿ ಕುಳಿತು ಮೆಲ್ಲನೆ ಸಾಗಿ ಬರುತ್ತಿದ್ದ. ವೈಭವಯುತವಾದ ಸ್ವಾಗತದ ಮೂಲಕ ಖುರ್‍ರಂಗೆ ತನ್ನ ಪ್ರತಿಷ್ಠೆ, ಕೀರ್ತಿ, ಸಾಮರ್ಥ್ಯ, ಜನಪ್ರೀತಿಗಳನ್ನು ಪ್ರದರ್ಶಿಸಬೇಕಿತ್ತು. ತನ್ನ ಈ ದಿಗ್ವಿಜಯದಿಂದ ತಂದೆ ಜಹಾಂಗೀರ್ ಬಾದಶಾಹ್‌ರಿಗೆ ಜನ್ನತ್ ಸಮ ಸಂತೋಷವಾಗಿರಲೇ ಬೇಕು. ತನ್ನ ಇಂತಹ ಸಾಹಸ ಕೆಲಸಗಳು ಪರವೇಜ್‌ಗಾಗಲಿ ಶಹರಿಯಾರ್‌ಗಾಗಲಿ ಸಾಧ್ಯವಿಲ್ಲ. ಆದ್ದರಿಂದ ಸಿಂಹಾಸನ ನಿರಾತಂಕವಾಗಿ ತನ್ನದೇ ಆಗುವುದೆಂಬ ಭರವಸೆ ಗಟ್ಟಿಗೊಳ್ಳುತ್ತಿತ್ತು.

ತನ್ನ ಬಗ್ಗೆ ಉದ್ಘೋಷಗಳೊಂದಿಗೆ ಸಂತೋಷ ವ್ಯಕ್ತಪಡಿಸುತ್ತಿದ್ದ ಪ್ರಜಾ ಸಮೂಹಕ್ಕೆ ಬಾಲ್ಕನಿಯಲ್ಲಿನ ಜನಾನಾದ ಹೆಂಗಸರಿಗೆ ಮತ್ತು ರಸ್ತೆಯಂಚಿನ ಮನೆ ಕಿಟಕಿ, ಬಾಲ್ಕನಿಗಳಲ್ಲಿನ ಹೆಂಗಸರಿಗೆ ಅವರ ಪ್ರೀತಿಯನ್ನು ಸ್ವೀಕರಿಸಿದ ಸಂಕೇತವಾಗಿ ಕೈಯೆತ್ತಿ

ಅತ್ತಿತ್ತ ತೂಗುತ್ತಾ, ಪ್ರತಿಕ್ರಿಯಿಸುತ್ತಾ, ಕಾಯುತ್ತಾ ಮನದಲ್ಲಿ ಗೆಲುವನ್ನು ಬಿಂಬಿಸುತ್ತಾ ಸಾಗಿ ಕಡೆಯದಾಗಿ ಅರಮನೆಯನ್ನು ಪ್ರವೇಶಿಸಿದ. ಮಗನ ದಿಗ್ವಿಜಯಗಳನ್ನು ಕೇಳಿದ ಜಗತ್‌ಗೋಸಿನಿ ಮತ್ತು ಜನನಾದ ಹೆಂಗಸರೆಲ್ಲಾ ಕೂಡಲೇ ಅವನನ್ನು ಸಮೀಪಿಸಿ ಮುಬಾರಕ್ ಹೇಳಿದರು. ಜಗತ್‌ಗೋಸಿನಿ ಉಕ್ಕಿ ಹರಿಯುತ್ತಿದ್ದ ಆನಂದ ಬಾಷ್ಪಗಳಿಂದ ಖುರ್ರಂನನ್ನು ಹತ್ತಿರಕ್ಕೆ ಸೆಳೆದುಕೊಂಡು ಬಿಗಿದಪ್ಪಿಕೊಂಡಳು. “ಮುಬಾರಕ್ ಹೋ ಬೇಟಾ ನಿನ್ನಂಥ ಮಗನಿರುವುದು ನನ್ನ ಬದುಕಿಗೆ ನಿಜವಾಗಿಯೂ ಕಿರೀಟ ಪ್ರಾಯವೇ! ನಿನ್ನ ತಂದೆಯ ಎಲ್ಲ ಗುಣಗಳೂ ನಿನ್ನಲ್ಲಿ ನೆಲೆಸಿ ತಂದೆಗೆ ತಕ್ಕ ಮಗನೆಂದು ಹೊಗಳಿಸಿಕೊಂಡು ಮೊಘಲ್ ಬಾದಶಾಹ ಪರಂಪರೆಯ ಮಕುಟಮಣಿಯಾಗು ಬೇಟಾ. ಹೋಗು ನಿನ್ನ ತಂದೆ ಸಾವಿರ ಕಣ್ಣುಗಳಿಂದ ಕಾಣುವುದಕ್ಕಾಗಿ ಕಾತುರರಾಗಿ ದಿವಾನ್-ಇ-ಆಮ್‌ನಲ್ಲಿ ಸಭಾಸದರೊಂದಿಗೆ ಎದುರು ನೋಡುತ್ತಿದ್ದಾರೆ” ಎಂದು ಹೇಳಿ ಅವನನ್ನು ಬೀಳ್ಕೊಟ್ಟಳು.

ಖುರ್ರಂ ಸಭೆಯನ್ನು ಪ್ರವೇಶಿಸುತ್ತಿದ್ದಂತೆ ಸಭಾಸದರೆಲ್ಲ ಎದ್ದು ನಿಂತು ಕೋರ್ನಿಶ್ ಮಾಡಿದರು. ಖುರ್ರಂ ನೇರವಾಗಿ ಜಹಾಂಗೀರ್‌ನನ್ನು ಸಮೀಪಿಸಿ, ನೆಲಕ್ಕೆ ಮುತ್ತಿಟ್ಟು ಗೌರವ ಸೂಚಿಸಿದ ಕೂಡಲೇ ಸಿಂಹಾಸನದಿಂದ ಎದ್ದ ಜಹಾಂಗೀರ್ ಖುರ್ರಂನನ್ನು ಅಪ್ಪಿಕೊಂಡ.

“ಬೇಟಾ ನಿಜವಾಗಿಯೂ ಮೊಘಲ್ ವಂಶದ ರಾಜರತ್ನ ನನ್ನ ಮಗನಾಗಿದ್ದು ನನಗೆ ಹೆಮ್ಮೆಯ ವಿಷಯ. ನಿನ್ನ ಈ ದಿಗ್ವಿಜಯ ಸಾಮಾನ್ಯದ್ದಲ್ಲ. ನಿನ್ನ ದಾದಾರ ಕಾಲದಿಂದಲೂ ಸಾಧ್ಯವಾಗದ್ದನ್ನು ನೀನು ಸಾಧಿಸಿದ್ದು ಸಾಮಾನ್ಯದ ಮಾತಲ್ಲ. ಎಷ್ಟೇ ರೀತಿಯಲ್ಲಿ ಗೌರವಿಸಿದರೂ ಏನೇ ಉಡುಗೊರೆ ಕೊಟ್ಟರೂ ನಿನ್ನ ಈ ಸಾಹಸದ ಕೆಲಸಕ್ಕೆ ಕಡಿಮೆಯೇ.”

ನನ್ನ ಪ್ರೀತಿಯ ಸಭಾಸದರೇ, ನಾನು ಹೇಳುತ್ತಿರುವುದರಲ್ಲಿ ಅತಿಶಯೋಕ್ತಿ ಇರಲಾರದೆಂದು ಭಾವಿಸಿರುತ್ತೇನೆ. ಆದ್ದರಿಂದ ನಿಮ್ಮೆಲ್ಲರ ಸಮಕ್ಷಮದಲ್ಲಿ ಸಾಕ್ಷಿಯಲ್ಲಿ ಈ ದಿನದಿಂದ ನನ್ನ ಮಗನ ಹೆಸರು ‘ಶಹಜಹಾನ್’ ಎಂದು ಗುರುತಿಸಲಾಗುತ್ತದೆ. ಅವನು ಜಗತ್ತಿನ ರಾಜ! ಇದನ್ನು ನೀವು ಒಪ್ಪುತ್ತೀರಿ ಎಂದು ಭಾವಿಸುತ್ತೇನೆ” ಎಂದ ಕೂಡಲೇ ಕಿವಿಗಡಚಿಕ್ಕುವ ಕರತಾಡನ ಸಭೆಯ ಮೂಲೆ ಮೂಲೆಯಲ್ಲಿ ಅನುರಣಿಸಿತು. ಖುರ್ರಂ ಆನಂದೋದ್ರೇಕದಿಂದ ಮೂಕನಾಗಿಬಿಟ್ಟಿದ್ದ. ಈ ಬಿರುದೂ ಸಾಮಾನ್ಯದ್ದಲ್ಲ! ತೈಮೂರ್ ವಂಶದಲ್ಲಿ ಆಳುತ್ತಿರುವ ರಾಜನಿಗೆ ಮಾತ್ರವೇ ಸಲ್ಲುವಂತಹ ಬಿರುದು, ತನಗೆ!! ಅದೂ ತಾನಿನ್ನೂ ರಾಜನಾಗಿಲ್ಲ. ಕೇವಲ ಶಹಜಾದೆ! ತಂದೆಯ ಔದಾರ್ಯ, ವಾತ್ಸಲ್ಯಗಳಿಂದ ಹೃದಯ ತುಂಬಿಬಂತು. ಮತ್ತೊಮ್ಮೆ ನೆಲಮುಟ್ಟಿ ಸಲಾಂ ಅರ್ಪಿಸಿದ. ಮಗನನ್ನು ಎಬ್ಬಿಸಿದಾಗ ಧಾರಾಕಾರವಾಗಿ ಹರಿಯುತ್ತಿದ್ದ ಆನಂದಬಾಷ್ಪಗಳನ್ನು ಒರೆಸಿದ. ಮಗನನ್ನು ಸ್ವಾಗತಿಸಲು ಸಕಲ ಏರ್ಪಾಡುಗಳನ್ನು ಮಾಡಿಕೊಂಡಿದ್ದ. ಪಕ್ಕದಲ್ಲಿ ನಿಂತಿದ್ದ ಸೇವಕರಿಗೆ ಸನ್ನೆ ಮಾಡಲು, ದೊಡ್ಡ ದೊಡ್ಡ ಹರಿವಾಣಗಳೊಂದಿಗೆ ಬಾದಶಾಹರನ್ನು ಸಮೀಪಿಸಿದರು. ಜಹಾಂಗೀರ್ ಸ್ವತಃ ತಾನೇ ವಿನ್ಯಾಸ ಮಾಡಿದ ‘ನಾದಿರಿ’ ಎನ್ನುವ ಗೌರವದ ಪೋಷಾಕನ್ನು ತಯಾರಿಸಲು ಆದೇಶಿಸಿದ್ದ, ಚಕ್ರವರ್ತಿಯಿಂದ ಇಂತಹ

ಪೋಷಾಕು ಬಹುಮಾನಿತವಾದಲ್ಲದೆ ಬೇರೆ ಯಾರೂ ಧರಿಸುವಂತಿರಲಿಲ್ಲ. ಅಂಥಾದ್ದನ್ನು ಜಹಾಂಗೀರ್ ಮಗನಿಗೆ ತೊಡಿಸಿದ. ಜೊತೆಗೆ ಅಮೂಲ್ಯವಾದ, ಮಣಿ ಖಚಿತವಾದ ಖಡ್ಗವೊಂದನ್ನು ಆ ಪೋಷಾಕಿನಲ್ಲಿ ಸಿಕ್ಕಿಸಿದ. ತನ್ನೆದುರಿಗೆ ಕಾಣುವಂತೆ, ಅವನಿಗಾಗಿ ಪ್ರತ್ಯೇಕ ಆಸನವನ್ನು ವ್ಯವಸ್ಥೆ ಮಾಡಿ ಕೂರಿಸಿದ. ಇಲ್ಲಿಯವರೆಗೆ ಬಾದಶಾಹರ ಸಮ್ಮುಖದಲ್ಲಿ ಇಷ್ಟು ಹತ್ತಿರದಲ್ಲಿ ಕುಳಿತುಕೊಳ್ಳುವ ಅವಕಾಶ ಯಾರಿಗೂ ದೊರೆತಿರಲಿಲ್ಲ.

ಬಾಲ್ಕನಿಯಲ್ಲಿ ಕುಳಿತು ಅಮೃತ ಶಿಲೆಯ ಜಾಲಂಧ್ರದ ಮೂಲಕ ಎಲ್ಲವನ್ನೂ ಗಮನಿಸುತ್ತಿದ್ದ ಜನಾನಾದ ಹೆಂಗಸರಲ್ಲಿ ಒಬ್ಬೊಬ್ಬರ ಮನಃಸ್ಥಿತಿಯೂ ಭಿನ್ನ ಭಿನ್ನವಾಗಿತ್ತು. ಅರ್ಜುಮಂದ್ ತನ್ನ ಸೋದರತ್ತೆ ಮೆಹರುನ್ನೀಸಾಳ ಪಕ್ಕದಲ್ಲಿಯೇ ಕುಳಿತಿದ್ದಳು. ಖುರ್ರಂನನ್ನು ಮುಖಾಮುಖಿ ಸ್ವಾಗತಿಸಲು ಹೋಗಲಿಲ್ಲ. ಕಾರಣ ಜಗತ್‌ಗೋಸಿನಿಯ ದರ್ಪ, ಪ್ರತಿಷ್ಠೆಗಳನ್ನು ಎದುರಿಸಬೇಕಾಗುತ್ತಿತ್ತು.

"ಅರ್ಜುಮಂದ್ ನಿಜವಾಗಿಯೂ ನೀನು ಬಹಳ ಅದೃಷ್ಟವಂತೆ! ಖುರ್ರಂನಂತಹ ಗಂಡನನ್ನು ಪಡೆದು ಸಾಮ್ರಾಜ್ಞಿಯಾಗುವ ಅದೃಷ್ಟ ನಿನ್ನ ಪಾಲಿನದಾಗಿದೆ. ನನಗೂ ಖುರ್ರಂ ಎಂದರೆ ಪ್ರಾಣ. ಜಹಾಂಗೀರನ ಮಗನೆಂದ ಮೇಲೆ ನನಗೂ ಮಗನೇ ಅಲ್ಲವೇ?"

"ಹೌದು ಅತ್ತೆ, ನೀವು ಹೇಳುವುದು ಸತ್ಯ. ನಿಜವಾಗಿ ನನಗೆ ನನ್ನ ಗಂಡನ ಮೇಲೆ ಹೆಮ್ಮೆ ಎನಿಸುತ್ತದೆ."ಎಂದು ಹೇಳಿ ಮೆಹರುನ್ನೀಸಾಳ ಮುಖದತ್ತ ನೋಡಿದಳು. ಅವಳ ಮಾತುಗಳಲ್ಲಿ ಸಿಹಿಯಿತ್ತಾ, ಕಹಿಯಿತ್ತಾ, ನಿರ್ಧರಿಸಲಾರದೆ ಹೋದಳು. ಅವಳಿಗೆ ಮೆಹರುನ್ನೀಸಾಳ ಪಿತೂರಿಗಳು, ಮಹತ್ವಾಕಾಂಕ್ಷೆಗಳು, ಜಾಣ ಮಾತುಗಳು... ಆಷಾಢಭೂತಿ ಮುಖವಾಡಗಳು.... ಎಲ್ಲವೂ ತಿಳಿದಿದ್ದವು, ಕಂಡಿದ್ದವು. ಶಹರಿಯಾರನ ತಲೆಕೆಡಿಸಿ, ಅವನೆದೆಯಲ್ಲಿ ಬಾದಶಾಹನಾಗುವ ಬಯಕೆಯ ಬೀಜಗಳನ್ನು ಬಿತ್ತಿದ್ದಳು. ಅರ್ಜುಮಂದಳ ಮಾತುಗಳು, ಅವಳ ಬೀಗುವಿಕೆಗಳು ಮೆಹರುನ್ನೀಸಾಳಿಗೆ ಮುಖದ ಮೇಲೆ ಅಪ್ಪಳಿಸಿದಂತೆನಿಸಿತು.

ಜನಾನಾದ ಪ್ರತಿಯೊಬ್ಬರೂ ಅರ್ಜುಮಂದ್ ದಂಪತಿಗಳಿಗೆ ಮುಬಾರಕ್ ಹೇಳಿ, ಕೊಂಡಾಡಿದರು.

ಸಮಾರಂಭವೆಲ್ಲ ಮುಗಿದು ತನ್ನ ಮಹಲಿಗೆ ಹಿಂತಿರುಗಿದ ಮೆಹರುನ್ನೀಸಾಳಿಗೆ ನಡುಕ ಶುರುವಾಯಿತು. ತನ್ನ ಮಗಳಲ್ಲಿ ಎಷ್ಟೊಂದು ಆಸೆಗಳನ್ನು ಇರಿಸಿಕೊಂಡಿದ್ದಳು. ಆದರೆ ......ಹುಡುಗಿ ಅಮ್ಮನಿಗೆ ತೀರಾ ವ್ಯತಿರೇಕ. ಅವಳಿಗೆ ಆಸೆ, ಆಕಾಂಕ್ಷೆ, ಅಸೂಯೆ, ಹಗೆತನ ಯಾವುದೂ ಇರಲಿಲ್ಲ. ಅತ್ಯಂತ ಸರಳ ಮತ್ತು ನಿಷ್ಕಲ್ಮಷ ಮನಸ್ಸಿನ ಹುಡುಗಿ. ಇಂತಹ ಮಗಳಿಂದ ಏನು ತಾನೆ ಸಾಧಿಸಲು ಸಾಧ್ಯ? ಆ ಅರ್ಜುಮಂದ್, ತನ್ನ ಕಣ್ಣ ಮುಂದೆ ಬೆಳೆದ ಹುಡುಗಿ, ಎಷ್ಟು ಪ್ರಬುದ್ಧಳಾಗಿ ರೂಪಾಂತರಗೊಂಡಿದ್ದಾಳೆ. ಮೂರು ಗಂಡು ಮಕ್ಕಳ ತಾಯಿಯೂ ಆಗಿದ್ದಾಳೆ! ಆದರೆ ತನ್ನ ಹುಡುಗಿ?!.......ಇನ್ನೂ ಹುಡುಗತನದಲ್ಲಿ ಇದ್ದಾಳೆ!! ಇಷ್ಟೊಂದು ಧೈರ್ಯ, ದರ್ಪಗಳು ಅವಳಲ್ಲಿ ಬಂದದ್ದಾದರೂ ಹೇಗೆ? ನನ್ನ ಮಗಳನ್ನು ಮದುವೆ ಮಾಡಿಸಲು ಎಷ್ಟೇ ಪ್ರಯತ್ನಿಸಿದರೂ, ಖುರ್ರಂ ಅವಳನ್ನು ಗೆಳತಿಯಾಗಿ ಒಪ್ಪಿಕೊಂಡನೇ ಹೊರತು, ಅರ್ಜುಮಂದಳಿಗೆ ಸವತಿಯಾಗಿ ತನ್ನ

ಹೆಂಡತಿಯಾಗಿ ಬರಮಾಡಿಕೊಳ್ಳಲು ಇಷ್ಟಪಡಲಿಲ್ಲ. ಅಲ್ಲದೆ ಅರ್ಜುಮಂದ್ ಸೌಂದರ್ಯದ ಮುಂದೆ ನನ್ನ ಲಾಡ್ಲಿಯ ಸೌಂದರ್ಯವೇನು? ಬಹಳ ಪೇಲವವಾಗಿ ಕಾಣಿಸುತ್ತದೆ.

ಶತಾಯ ಗತಾಯ ಲಾಡ್ಲಿಯನ್ನು ಮದುವೆಯಾಗುವಂತೆ ಮತ್ತೊಮ್ಮೆ ಪ್ರಯತ್ನಿಸಬೇಕು. ಮೊಘಲರಿಗೆ ಹೆಂಡಂದಿರ ಮೇಲೆ ಹೆಂಡಂದಿರನ್ನು ತರುವದು ಸರ್ವೇಸಾಮಾನ್ಯ... ಆದರೆ ಮದುವೆಯಾದರೂ, ಪಾದಶಾಹ್ ಬೇಗಂ ಆಗುತ್ತಾಳೆಂಬ ಖಾತ್ರಿಯೂ ಇಲ್ಲ. ತನ್ನ ಅಣ್ಣ ಅಸಫ್‌ಖಾನ್ ಆಗಲಿ, ಅರ್ಜುಮಂದ್ ಆಗಲಿ ಇದಕ್ಕೆ ಅವಕಾಶ ಕೊಡುವುದೂ ಇಲ್ಲ. ಉಪಪತ್ನಿ ಪಟ್ಟ ಸಿಗಬಹುದೇ ಹೊರತು, ಪತ್ನಿಯ ಸವಲತ್ತುಗಳನ್ನು ನಿರೀಕ್ಷಿಸಲಾಗುವುದಿಲ್ಲ ಎಂದು ಏನೇನೋ ಲೆಕ್ಕಾಚಾರಗಳಲ್ಲಿ ಮುಳುಗಿ ಹೋದಳು. ಉಪಪತ್ನಿಯಾದರೂ ಸರಿಯೇ, ತಾನು ಬಾದಶಾಹ್‌ಬೇಗಂ ಆಗಿರುವವರೆಗೆ ಯಾವುದೇ ತೊಂದರೆ ಇರುವುದಿಲ್ಲ. ಆದರೆ ಶಹರಿಯಾರ್ ಗತಿ? ಲಾಡ್ಲಿಯನ್ನು ಅತಿಯಾಗಿ ಪ್ರೀತಿಸುತ್ತಿದ್ದಾನೆ. ಖಂಡಿತ ಅವಳನ್ನು ಬಿಟ್ಟು ಕೊಡಲಾರ – ಹೀಗೆ ಏನೇನೋ ಇಲ್ಲ ಸಲ್ಲದ ಯೋಚನೆಗಳಲ್ಲಿ, ಸಭೆ ಮುಗಿದದ್ದನ್ನು ಗಮನಿಸಲೇ ಇಲ್ಲ. ಲಾಡ್ಲಿ ಅಮ್ಮನನ್ನು ಎಚ್ಚರಿಸಿದಾಗಲೇ ವಾಸ್ತವಕ್ಕೆ ಮರಳಿದಳು.

ಭಾವನಾತ್ಮಕ ಮನಃಸ್ಥಿತಿಯಿಂದ ಹೊರಳಬೇಕಾದ ತುರ್ತು ಅವಳಿಗೆ ಎದುರಾಯಿತು. ಪೋರ್ಚುಗೀಸರು ತಮ್ಮ ಹಡಗುಗಳನ್ನು ವಶಪಡಿಸಿಕೊಳ್ಳುತ್ತಾ, ಬೆಂಕಿಯಿಂದ ಸುಡುತ್ತಾ ಏನೇನೋ ದೌರ್ಜನ್ಯಗಳನ್ನು ಎಸಗುತ್ತಿದ್ದುದಕ್ಕೆ, ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ, ಡಾಮನ್ ಮೇಲೆ ಆಕ್ರಮಣ ಮಾಡಲು ಆದೇಶಿಸಿದ್ದಳು. ರಾಜಕೀಯ ಸಂಬಂಧಗಳ ಹಿನ್ನೆಲೆಯಲ್ಲಿ ಅವಳು ಮಾಡಿದ್ದು ಸರಿಯಲ್ಲ. ತಂದೆ ಘಿಯಾಸ್‌ಬೇಗ್ ಮಗಳಿಗೆ ಬುದ್ಧಿ ಹೇಳಿದ. ಖುರ್ರಂ ಕೂಡಾ ದನಿಗೂಡಿಸಿದ. ಮುಂದಾಲೋಚನೆ ಇಲ್ಲದೆ ಅನುಚಿತ ನಿರ್ಧಾರಗಳು ಸರಿಯಲ್ಲವೆಂದು ತಿಳಿಸಿದ. ಖುರ್ರಂನ ಜೊತೆ ದ್ವೇಷ ಸಲ್ಲದು. ಅವನ ಜೊತೆ ವ್ಯವಹಾರ ಆಪ್ತವಾಗಿರುವಂತೆ ನೋಡಿಕೊಳ್ಳಬೇಕು. ಅವನನ್ನು ಅಪಾರವಾಗಿ ಪ್ರೀತಿಸುತ್ತಿರುವಂತೆ, ಕಡೆಯ ಪಕ್ಷ ಲಾಡ್ಲಿ ವಿಚಾರದಲ್ಲಿ ಅವನ ನಿರ್ಧಾರ ತಿಳಿಯುವ ತನಕವಾದರೂ ನಟಿಸಬೇಕು. ಹೇಗಿದ್ದರೂ ಇನ್ನೇನು ಇಷ್ಟರಲ್ಲೇ ಅವನ ಇಪ್ಪತ್ತಾರನೆ ಹುಟ್ಟುಹಬ್ಬ ಬರಲಿದೆ. ಅದನ್ನು ಅದ್ದೂರಿಯಾಗಿ ಆಚರಿಸಬೇಕು. ಬಹುದೊಡ್ಡ ಪ್ರಮಾಣದಲ್ಲಿ ಔತಣ ಕೂಟವನ್ನು ಏರ್ಪಡಿಸಬೇಕು. ಇದೆಲ್ಲದರಿಂದಾದರೂ ಖುರ್ರಂ ಮನಸ್ಸು ಪರಿವರ್ತನೆಯಾಗಬಹುದೆಂಬ ವ್ಯವಹಾರದ ಲೆಕ್ಕಾಚಾರಗಳೊಂದಿಗೆ ಸಂಭ್ರಮಾಚರಣೆಯ ಸಿದ್ಧತೆಗಳನ್ನು ನಡೆಸಿದಳು.

ಎಲ್ಲರ ಸಮಕ್ಷಮದಲ್ಲಿ, ಖುರ್ರಂನ ತುಲಾಭಾರ ನಡೆಯಿತು. ಮೂಟೆ ಮೂಟೆ ಚಿನ್ನದ ನಾಣ್ಯಗಳನ್ನು, ಚಿನ್ನ ಮುತ್ತು ರತ್ನಗಳು ತುಂಬಿದ ತಕ್ಕಡಿಯಲ್ಲಿನ ಒಂದು ತಟ್ಟೆಯಲ್ಲಿ ನಾಣ್ಯದ ಮೂಟೆಗಳನ್ನೂ ಮತ್ತೊಂದರಲ್ಲಿ ಖುರ್ರಂನನ್ನು ಕೂರಿಸಿ, ತುಲಾಭಾರ ಕಾರ್ಯಕ್ರಮ ಮುಗಿಸಿದರು. ಅವನ ತೂಕದ ನಾಣ್ಯಗಳನ್ನು ಬಡಬಗ್ಗರಿಗೆ ಉದಾರವಾಗಿ ಹಂಚಿದರು.

ಅವಕಾಶಕ್ಕಾಗಿ ಕಾಯುತ್ತಿದ್ದ ನೂರ್ ಜಹಾನ್, ಉರುಫ್ ಮೆಹರುನ್ನೀಸಾ ಖುರ್ರಂಗಾಗಿ ಹೇಳಿ ಕಳಿಸಿದಳು. ಖುರ್ರಂಗೆ ಆಶ್ಚರ್ಯ. ಅವಳು ಜನಾನಾದ ಮಹಲಿಗೆ ತನ್ನನ್ನೇಕೆ ಕರೆಸುತ್ತಿದ್ದಾಳೆ. ಮತ್ತೇನಾದರೂ ಫರಮಾನ್ ಹೊರಡಿಸುತ್ತಾಳೋ

ಹೇಗೆ? ಎಂದು ಯೋಚಿಸುತ್ತಲೇ ಮೆಹರುನ್ನೀಸಾಳ ನಿವಾಸಕ್ಕೆ ಹೋದ. ಹೋಷಿಯಾರ್ ಖುರ್‍ರಂನನ್ನು ಅವಳಿದ್ದಲ್ಲಿಗೆ ಕರೆದೊಯ್ದು. ಒಳಗೆ ಪ್ರವೇಶಿಸುತ್ತಲೇ ಖುರ್‍ರಂ ಕೋರ್ನಿಶ್ ಮಾಡಿ.

"ಬೇಗಂ ಹುಜೂರ್. ನಮ್ಮನ್ನು ಕರೆಕಳಿಸಿದ್ದರ ಕಾರಣ ಕೇಳಬಹುದೇ?"

"ಶಹಜಾದೆ ಖುರ್‍ರಂ, ನಾವು ಯಾವುದೇ ಕಾರಣವಿಲ್ಲದೆ ಯಾರನ್ನೂ ಕರೆಸುವುದಿಲ್ಲ."

"ಹಾಗಾದರೆ ಹೇಳಿ ನನ್ನಿಂದ ಏನಾಗಬೇಕು? ನಿಮ್ಮ ಈ ಮಗ ನಿಮ್ಮ ಗುಲಾಮ."

"ನೀವು ನನ್ನ ಮಗ ಎನ್ನುವ ಸಲುಗೆಯಿಂದಲೇ ನಿಮ್ಮಿಂದ ಒಂದು ಉಪಕಾರವಾಗಬೇಕಿದೆ."

"ಏನೆಂದು ಅಪ್ಪಣೆ ಕೊಡಿಸಿ."

"ಶಹಜಾದೆ, ಸಣ್ಣ ವಯಸ್ಸಿನಿಂದಲೂ ನಿಮ್ಮನ್ನು ಬಹಳ ಸಲುಗೆ ವಾತ್ಸಲ್ಯಗಳಿಂದ ಬೆಳೆಸಿದ್ದೇನೆ. ನಿಮ್ಮ ದಿಗ್ವಿಜಯಗಳನ್ನು ಕಂಡು ನಾನೂ ಬಾದಶಾಹರು ಹೆಮ್ಮೆಪಟ್ಟಿದ್ದೇವೆ. 'ಶಹಜಹಾನ್' ಬಿರುದೂ ಕೂಡಾ ನಮ್ಮಿಬ್ಬರ ಒಪ್ಪಿಗೆಯಿಂದಲೇ ನಿಮಗೆ ದಯಪಾಲಿಸಿದ್ದೇವೆ."

"ಹೌದು, ನೀವು ಮಾಡಿದ್ದೆಲ್ಲವೂ ನನಗೆ ನೆನಪಿದೆ. ಅದಕ್ಕಾಗಿ ನಿಮ್ಮ ಮೇಲೆ ಗೌರವವಿದೆ. ನನ್ನ ಸ್ವಂತ ತಾಯಿಯ ಜೊತೆಯಲ್ಲಿ ಇದ್ದುದಕ್ಕಿಂತಲೂ ನಿಮ್ಮ ಜೊತೆಯ ಒಡನಾಟವೇ ನನಗೆ ಹೆಚ್ಚಾಗಿತ್ತು. ಇದಾವುದನ್ನೂ ನಾನು ಇಲ್ಲವೆನ್ನಲಾರೆ. ಈಗ ಹೇಳಿ ನನ್ನಿಂದ ನಿಮಗೆ ಏನಾಗಬೇಕು?"

"ಶಹಜಾದೆ, ನಮ್ಮ ಸಂಬಂಧ, ಬಾಂಧವ್ಯ ಇನ್ನೂ ಗಟ್ಟಿಯಾಗಬೇಕೆಂದೇ, ನನ್ನ ಮಗಳು ಲಾಡ್ಲಿಯನ್ನು ವಿವಾಹವಾಗಬೇಕೆಂದು ಕೇಳಿಕೊಳ್ಳುತ್ತೇನೆ" ಖುರ್‍ರಂ ಇದನ್ನು ಕೇಳಿ ದಿಗ್ಭ್ರಾಂತನಾದ.

"ಪಾದಶಾಹ್ ಬೇಗಂ, ನೀವು ಹೇಳುತ್ತಿರುವುದೇನು? ನಿಮ್ಮದೇ ಕುಟುಂಬದ ಅರ್ಜುಮಂದಳನ್ನು ಮದುವೆಯಾಗಿದ್ದೇನಲ್ಲ? ವಿನಯದಿಂದ ಹೇಳುತ್ತೇನೆ, ಅರ್ಜುಮಂದಳ ಮೇಲೆ, ಇನ್ನೊಂದು ಹೆಣ್ಣನ್ನು ತಂದು ಹೇರಲಾರೆ. ಅವಳಿಂದ ನಾನು ಬಯಸುವ ಪ್ರೀತಿಯೆಲ್ಲವೂ ದೊರೆತಿದೆ. ಮುದ್ದಾದ ಗಂಡು ಮಕ್ಕಳನ್ನು ಉಡುಗೊರೆಯಾಗಿ ಕೊಟ್ಟಿದ್ದಾಳೆ."

"ಶಹಜಾದೆ, ಹಾಗೆ ನಿರಾಕರಿಸಿದರೆ, ಈ ಪಾದಶಾಹ್ ಬೇಗಂ ಮುಂದೆ ಉದ್ಧಟತನ ತೋರಿಸಿದಂತಾಗುತ್ತದೆ. ಈ ನಿರಾಕರಣೆಯನ್ನು ನಾನು ಸಹಿಸುವುದಿಲ್ಲ. ಅಲ್ಲದೆ ಈ ಸಂಬಂಧದಿಂದ ನಮಗೆ ಬೇಕಾದಷ್ಟು ಅನುಕೂಲಗಳಿವೆ. ಪ್ರಯೋಜನಗಳಿವೆ. ನಿಧಾನವಾಗಿ ಯೋಚಿಸಿ, ನಾಳೆ ನೀವು ಬಾದಶಾಹರಾದಾಗ, ಸಿಂಹಾಸನ ಏರಿದಾಗ ಯಾವುದೇ ರೀತಿಯ ತೊಂದರೆಗಳಿಲ್ಲದಂತೆ ನೋಡಿಕೊಳ್ಳುತ್ತೇನೆ. ನಿಮಗೆ ಬೇಕಾದ್ದೆಲ್ಲವನ್ನೂ ನಿಮ್ಮ ಮುಂದೆ ತಂದು ಸುರಿಯುತ್ತೇನೆ."

ಮೆಹರುನ್ನೀಸಾಳ ಮಾತು ಕೇಳಿ ಖುರ್‍ರಂ ಒಂದು ವ್ಯಂಗ್ಯ ನಗೆ ನಕ್ಕ.

"ಬೇಗಂ ಸಾಹಿಬಾ ನಿಮ್ಮ ಮಾತು ಕೇಳಿದರೆ ನಗಬೇಕು ಎನಿಸುತ್ತದೆ. ನೀವು ನನಗೆ ಏನನ್ನು ಕೊಡಬಲ್ಲಿರಿ....ಐಶ್ವರ್ಯ, ವಸ್ತು, ಒಡವೆ, ಜಾಗೀರುಗಳು, ಮನಸಬ್‌ಗಳು

ಅತ್ಯಂತ ವರ್ಚಸ್ವಿ ಮತ್ತು ಶಕ್ತಿಶಾಲಿ ಅಧಿಕಾರಿಗಳ ಜೊತೆಗೆ ಸ್ನೇಹ?...ಇವೆಲ್ಲವೂ ನನಗೆ ಸಾಕಷ್ಟಿವೆ. ನಾನು ಕಾಣದ್ದು, ಅನುಭವಿಸದಿರುವುದು ಯಾವುದೂ ಇಲ್ಲ. ನಾನು ಸಾಧಿಸಿದ ದಿಗ್ವಿಜಯಗಳೇ ನನ್ನ ಸಾಮರ್ಥ್ಯಕ್ಕೆ ಕನ್ನಡಿಯಾಗಿವೆ."

"ಶಹಜಾದೆ ಖುರ್ರಂ. ಈ ಬೀಗುವಿಕೆಯನ್ನು ನಿಲ್ಲಿಸಿ. ನಿಮಗೆ ದೊರೆಯುತ್ತಿರುವ ಸನ್ಮಾನ ಗೌರವಗಳ ಹಿಂದೆ ನಾನಿದ್ದೇನೆ. ನಿಮ್ಮ ತಂದೆಯವರು, ನಾನು ಹೇಳಿದ್ದನ್ನು, ಮೀರಿ ಒಂದು ಹೆಜ್ಜೆ ಮುಂದಿಡುವುದಿಲ್ಲ. ನೀವೇ ಗಾದಿಯೇರುತ್ತೀರಿ ಎನ್ನುವ ಭ್ರಮೆ ನಿಮಗಿದೆ. ಯಾಕೆಂದರೆ, ನಿಮ್ಮಲ್ಲಿ ನಿಮ್ಮದೇ ವಂಶದ ರಕ್ತಹರಿಯುತ್ತಿದೆ. ಆದರೆ ನಾನು ಬಯಸಿದರೆ ಪ್ರಪಂಚವನ್ನೇ ಬದಲಾಯಿಸಬಲ್ಲೆ. ಈಗಲೂ ಕಾಲ ಮಿಂಚಿಲ್ಲ. ದಯವಿಟ್ಟು ಲಾಡ್ಲಿಯನ್ನು ಸ್ವೀಕರಿಸಿ. ಅರ್ಜುಮಂದ ಮತ್ತು ಲಾಡ್ಲಿ ಇಬ್ಬರೂ ಅಕ್ಕ-ತಂಗಿಯರಂತೆ ಹೊಂದಿಕೊಂಡು ಹೋಗುತ್ತಾರೆ. ಅಲ್ಲದೆ ನನ್ನ ಸಹಕಾರ, ಸಲಹೆ, ಮಾರ್ಗದರ್ಶನಗಳು, ಮುಂದೆ ಎಂದೆಂದಿಗೂ ಸಿಗುವಂತೆ ನೋಡಿಕೊಳ್ಳುತ್ತೇನೆ. ಇಲ್ಲದಿದ್ದರೆ ಬಾದಶಾಹರು ನಿಮ್ಮ ಮೇಲೆ ಸುರಿಯುತ್ತಿರುವ ಪ್ರೀತಿ, ತೋರುತ್ತಿರುವ ಅನುಗ್ರಹಗಳು ಇನ್ನು ಮುಂದೆ ದೊರೆಯದಂತೆ ಮಾಡುತ್ತೇನೆ, ಯೋಚಿಸಿ."

"ನೀವು ಬೆದರಿಕೆಗಳನ್ನು ಹಾಕಬೇಡಿ. ಮೊದಲನೆಯದಾಗಿ ಯಾವ ತಂದೆಗೂ, ಉತ್ತರಾಧಿಕಾರಿಯಾಗಲಿರುವ ಮಗನ ಮೇಲಿನ ಪ್ರೀತಿಗಿಂತ ಹೆಚ್ಚು ಹೆಂಡತಿ ಮೇಲೆ ಇರಲಾರದು. ಅಲ್ಲದೆ ನಾನೇನು ಬಳೆ ತೊಟ್ಟು ಬುರ್ಖಾ ಧರಿಸಿ, ಜನಾನಾದಲ್ಲಿ ಕೂರುವ ಹೆಣ್ಣಲ್ಲ. ಯಾರ ಸಹಾಯದ ಅಗತ್ಯವೂ ಇಲ್ಲದೆಯೇ ಇಡೀ ಹಿಂದೂಸ್ತಾನವನ್ನೇ, ಈ ನಿಮ್ಮ ಮಗ ಆಳುವುದನ್ನು ನೀವೇ ಕಣ್ಣಾರೆ ನೋಡುವಿರಿ. ಇದು ನನ್ನ ಸವಾಲು! ಹಾಗೂ ಪ್ರತಿಜ್ಞೆ, ನಾನು ನೀವು ಭಾವಿಸುವಷ್ಟು ಅಸಮರ್ಥನಲ್ಲ" ಎಂದು ನೆಲದ ಮೇಲೆ ಹೆಜ್ಜೆ ಅಪ್ಪಳಿಸುತ್ತಾ, ಖುದಾಹಾಫಿಜ್ ಹೇಳಿ ರಭಸದಿಂದ ಹೊರಗೆ ಬಂದ.

ಮೆಹರುನ್ನೀಸಾ ಜ್ವಾಲಾಮುಖಿಯಾದಳು. ಮೊಘಲ್ ಸಾಮ್ರಾಜ್ಞಿಯಾದ ತನ್ನನ್ನೇ ನಿಕೃಷ್ಟವಾಗಿಸಿ, ಮುಖಕ್ಕೆ ರಾಚುವಂತೆ ಧಿಕ್ಕರಿಸಿ ಹೊರಟನಲ್ಲ!! ಎಂದು ಕುದಿಯ ತೊಡಗಿದಳು. ಈ ವಿಷಯ ಅಸಫ್‌ಖಾನನಿಗೆ ತಿಳಿದರೆ, ಅವನೇನೆಂದುಕೊಳ್ಳುತ್ತಾನೆ. ಅಣ್ಣ ತಂಗಿಯರ ಸಂಬಂಧ ಕಳಚುವುದಿಲ್ಲವೇ? ನನ್ನ ಕಷ್ಟದ ದಿನಗಳಲ್ಲಿ ನನಗೆಷ್ಟು ಸಹಾಯ ಮಾಡಿದ! ಇದೆಲ್ಲವನ್ನೂ ಮರೆತು, ನನ್ನ ಮಹತ್ವಾಕಾಂಕ್ಷೆಗೆ ಸಂಬಂಧಗಳನ್ನು ಬಲಿಗೊಡುತ್ತಿದ್ದೇನಲ್ಲವೇ? .....ಛೆ! ಛೆ! ಪ್ರಶಾಂತವಾಗಿ ಯೋಚಿಸಬೇಕಿತ್ತು. ಜಹಾಂಗೀರನ ಇತ್ತೀಚಿನ ಸ್ಥಿತಿ ಚೆನ್ನಾಗಿಲ್ಲ. ದುರದೃಷ್ಟಕ್ಕೆ ಏನಾದರೂ ಅವಘಡ ಸಂಭವಿಸಿದರೆ, ನನ್ನ ಗತಿಯೇನು? ಖುರ್ರಂ ತನ್ನನ್ನು ಹೇಗೆ ನಡೆಸಿಕೊಳ್ಳಬಹುದು? ಅವನು ಹೇಳಿದಂತೆ, ಜಹಾಂಗೀರನಿಗೆ, ತನ್ನ ಮೇಲಿನ ಪ್ರೀತಿಗಿಂತ ಅವನ ಮೇಲೆ ಹೆಚ್ಚಾಗಿರಬಹುದೇ? ಇದು ನಿಜವಾದರೆ, ಅವರ ಕಣ್ಣಲ್ಲೂ ನಾನು ಬಹಳ ಸಣ್ಣವಳಾಗುವುದಿಲ್ಲವೆ?... ರಾಜನೀತಿ, ರಾಜಕೀಯ ತಂತ್ರಗಾರಿಕೆಯಲ್ಲಿ ನುರಿತವಳೆಂದು ಹೊಗಳಿಸಿಕೊಂಡು, ಉಪಾಯಾಂತರದಿಂದ ಅವನ ಮನಃಪರಿವರ್ತನೆ ಮಾಡುವುದು ಬಿಟ್ಟು ಏಕ್‌ದಂ ಅವನ ಮುಂದೆ ಮನಸ್ಸಿನಾಳದ ಭಾವನೆಗಳನ್ನೆಲ್ಲ ಹೊರಚೆಲ್ಲಿಬಿಟ್ಟನೆ? .....ಎಂಥಾ ಮೂರ್ಖತನ! ಎಂದು ತನ್ನನ್ನು ತಾನೇ ಹಳಿದುಕೊಳ್ಳತೊಡಗಿದಳು.

ಖುರ್ರಂನನ್ನು ಹೀಗೆ ನೇರವಾಗಿ ಕೇಳುವ ಮೊದಲು ಪರವೇಜ್, ಶಹರಿಯಾರ್‌ರನ್ನೂ ದೃಷ್ಟಿಯಲ್ಲಿ ಇರಿಸಿಕೊಂಡಿದ್ದಳು. ಅವರ ಪರವಾಗಿ ಜಹಾಂಗೀರನೊಂದಿಗೆ ವಾಗ್ವಾದ ಮಾಡಿದ ಮನಸಬ್‌ಗಳನ್ನು ಪರವೇಜ್‌ನಿಗೆ ಕೊಡಿಸಿಕೊಟ್ಟಿದ್ದಳು. ಖುರ್ರಂನನ್ನೂ ತನ್ನ ಜಂಟಾ ಕೂಟದಲ್ಲಿ ಇರಿಸಿಕೊಂಡಿದ್ದಳಾದರೂ, ಅವನ ಬೆನ್ನ ಹಿಂದೆ ಪಿತೂರಿಗಳನ್ನು ನಡೆಸುತ್ತಿದ್ದಳು. ಬಲೆ ಬೀಸಿ ಯಾವ ಮೀನು ಸಿಕ್ಕರೂ ಪರವಾಗಿಲ್ಲ ಎನ್ನುವ ನೀತಿಯನ್ನು ಅನುಸರಿಸಿದಳು. ಖುರ್ರಂ ಎಚ್ಚೆತ್ತುಕೊಂಡ. ತನಗೆ ನೇರ ಸ್ಪರ್ಧಿಯಾಗಿದ್ದ ಮತ್ತು ಬಾದಶಾಹರ ಹಿರಿಯಮಗನಾಗಿದ್ದ ಮತ್ತು ಅಧಿಕೃತ ಉತ್ತರಾಧಿಕಾರಿಯಾಗಿದ್ದ ಖುಸ್ರೋನನ್ನು ಮುಗಿಸುವುದು ಜಂಟಾದ ಉದ್ದೇಶವಾಗಿತ್ತು ಮತ್ತು ತನ್ನ ಹಿತ ದೃಷ್ಟಿಯೂ ಇತ್ತಾಗಿ, ಖುರ್ರಂ ಉಪಾಯದಿಂದ ತಾನು ಕೊಲೆ ಮಾಡಿ, ಹೊಟ್ಟೆ ನೋವಿನಿಂದ ಸತ್ತಂತೆ ಬಿಂಬಿಸಿ ಪ್ರಚಾರ ಮಾಡಿದ.

ನೂರ್ ಜಹಾನಳ ಕೃಪಾದೃಷ್ಟಿಯಲ್ಲಿರುವ ಪರವೇಜ್, ಶಹರಿಯಾರರ ಕತೆ ಉಳಿದಿತ್ತು. ಇದೇ ಚಿಂತೆಯಲ್ಲಿದ್ದ ಖುರ್ರಂ ಅರ್ಜುಮಂದ್‌ಳನ್ನು ಕಾಣಲು ಅಂತಃಪುರ ಹೊಕ್ಕ. ಅರ್ಜುಮಂದ್‌ಳ ಮೊಗದಲ್ಲಿ ಚಿಂತೆಯ ಕಾರ್ಮೋಡಗಳು ಕವಿದಿದ್ದವು.

"ಬೇಗಂ, ಏನಾಗಿದೆ ನಿಮಗೆ, ಭಾವೀ ಚಕ್ರವರ್ತಿಯಾಗುವ ಮಗುವನ್ನು ಹೆತ್ತು ಸಂಭ್ರಮಪಡಬೇಕಾದ ಜಾಗದಲ್ಲಿ ಮೊಗ ಬಾಡಿಸಿಕೊಂಡು ಕುಳಿತಿದ್ದೀರಲ್ಲ?"

"ಚಿಂತೆಯಿಂದ ಕುಳಿತುಕೊಳ್ಳದೆ ಏನು ಮಾಡಬೇಕು? ಜನಾನಾದಲ್ಲಿ ಏನೆಲ್ಲ ವದಂತಿಗಳು ಸುಳಿದಾಡುತ್ತಿವೆ ಗೊತ್ತೇನು? ಮೆಹ್ರೂ ಅತ್ತೆ, ಬಾದಶಾಹರ ಗಮನಕ್ಕೆ ಬಾರದಂತೆ, ಅವರ ತಂದೆ, ಅಣ್ಣ, ಆಪ್ತರು ನಿಷ್ಠರೂ ಆದವರನ್ನೆಲ್ಲ ಸೇರಿಸಿಕೊಂಡು ಒಂದು "ಜಂಟಾ" ಸಿದ್ಧಪಡಿಸಿಕೊಂಡಿದ್ದಾರಂತೆ. ಆಗಾಗ ಅವರೆಲ್ಲ ಸಭೆ ಸೇರಿ ಮುಂದಾಲೋಚನೆ ನಡೆಸುತ್ತಾರಂತೆ. ನಮ್ಮತ್ತೆಯ ಸ್ವಭಾವ ನಿಮಗೆ ಗೊತ್ತಿಲ್ಲ. ಎಚ್ಚರದಿಂದಿರಿ" ಎಂದಳು.

ಖುರ್ರಂಗೆ ಇದು ಹೊಸ ವಿಷಯವೇನೂ ಆಗಿರಲಿಲ್ಲ. ಮೊದಲಿಗೆ ಅವನೂ ಜಂಟಾದ ಭಾಗವಾಗಿದ್ದ. ಮೊನ್ನೆ ಅವರಿಬ್ಬರ ನಡುವೆ ನಡೆದ ಘರ್ಷಣೆ ನೆನಪಾಗಿ, ಅರ್ಜುಮಂದಳ ಮಾತಿನಲ್ಲಿ ನಂಬಿಕೆ ಬಂತು. ಈಗ ತಾನೂ ಕೂಡಾ ಅವಳ ವಿರೋಧಿಯೇ? ಹಿಂದೂಸ್ತಾನದ ಮಲಿಕಾ–ಎ–ಬೇಗಂ ಆಗಿರುವವಳು ಇಂಥ ನೀಚ ಕೆಲಸಕ್ಕೆ ಇಳಿದಳೇ? ಇಷ್ಟು ಹೊತ್ತಿಗೆ ಖುರ್ರಂಗೆ ನೂರ್‌ಳ ಉದ್ದೇಶಗಳು ಸ್ಪಷ್ಟವಾಗಿ ಮನದಟ್ಟಾಗಿದ್ದವು. ಆದರೂ ಅರ್ಜುಮಂದ್ ಹುಟ್ಟಿದಂದಿನಿಂದ ಜೊತೆಯಲ್ಲಿಯೇ ಬೆಳೆದವಳಾದ್ದರಿಂದ ಅತ್ತೆಯ ಸ್ವಭಾವವನ್ನು ಬಲ್ಲವಳಾದ್ದರಿಂದ, ಅವಳ ಆತಂಕಕ್ಕೆ ಅರ್ಥವಿದೆ ಎನಿಸಿತು.

"ಯಾಕೆ ಸುಮ್ಮನಿದ್ದೀರಿ, ನನ್ನ ಮಾತಿನಲ್ಲಿ ನಂಬಿಕೆ ಇಲ್ಲವೇ? ನೋಡಿ ನಿಮಗೆ ನಂಬಿಕೆ ಬಾರದಿರಬಹುದು. ಮೊದಲಿನಿಂದಲೂ ಹಠಮಾರಿ, ಬೇಕೆನಿಸಿದ್ದನ್ನು ಪಡೆಯದ ಹೊರತು ಸುಮ್ಮನಿರುವುದಿಲ್ಲ. ಅವನ್ನು ಪಡೆದುಕೊಳ್ಳುವಲ್ಲಿ ಸ್ನೇಹ, ಬಂಧುತ್ವ, ಪ್ರೀತಿ, ಸಂಬಂಧಗಳು ಯಾವುದೂ ಲೆಕ್ಕಕ್ಕೆ ಬರುವುದೇ ಇಲ್ಲ. ಸತ್ತ ಹೆಣಗಳನ್ನು ಮೆಟ್ಟಿಲಾಗಿಸಿಕೊಂಡು ಏರಿಬಿಡುತ್ತಾರೆ! ಈ ವಯಸ್ಸಿನಲ್ಲಿ ಈ ಸೊಗಸು, ಸೌಂದರ್ಯಗಳು

ಅಲಂಕಾರಗಳು ಏಕೆ ಬೇಕು? ..... ಆಫ್ಘನ್ ಸಾಯುತ್ತಿದ್ದಂತೆ ಮಗಳು ಲಾಡ್ಲಿಯನ್ನು ಕರೆದುಕೊಂಡು ಬಂದು ಜನಾನಾ ಸೇರಿದ್ದೇಕೆ? ಬಾದಶಾಹರನ್ನು ಸೆಳೆಯುವುದಕ್ಕಲ್ಲವೇ? ಯಾರನ್ನಾದರೂ, ತಮ್ಮ ಮಾಂತ್ರಿಕ ನೋಟ, ಮಾಟಗಳಿಂದ ಸೆಳೆದುಕೊಂಡು ಬಿಡುತ್ತಾರೆ. ನಿಮ್ಮ ತಂದೆಯವರ ವಿಷಯದಲ್ಲಿಯೂ ಹಾಗೇ ಆದದ್ದು! ಬಾದಶಾಹರನ್ನು ಪೂರ್ತಿಯಾಗಿ ಮೋಡಿಯಿಂದ ವಶೀಕರಣ ಮಾಡಿಕೊಂಡು ಬಿಟ್ಟಿದ್ದಾರೆ; ಬಾದಶಾಹರು ಗುಲಾಮರಾಗಿಬಿಟ್ಟಿದ್ದಾರೆ. ಮದ್ಯವ್ಯಸನಿಯಾಗಿರುವುದರ ಜೊತೆಗೆ ಅಫೀಮಿನ ದಾಸರಾಗಿದ್ದಾರೆ" ಎಂದು ಬಡ ಬಡನೆ, ತನ್ನ ಕಿವಿಗೆ ಬಿದ್ದ ಸುದ್ದಿಗಳನ್ನೆಲ್ಲ ಚಾಚೂ ತಪ್ಪದೆ ಉದುರಿಸಿ ಬಿಟ್ಟಳು. ಆ ಮಾತುಗಳಲ್ಲಿ ಸ್ತ್ರೀ ಸಹಜವಾದ ಅಸೂಯೆಯಿತ್ತು. ಖುರ್‍ರಂ ಇದನ್ನು ಗಮನಿಸಿದ. ನೂರ್ ಜಹಾನ್ ಅರ್ಜುಮಂದ್ ಹೇಳುವಷ್ಟು ಕೆಟ್ಟವಳಲ್ಲ ಅನ್ನುವುದನ್ನು ಅವನು ಬಲ್ಲ.

"ಅರ್ಜುಮಂದ್ ಇದೆಲ್ಲ ಸುಳ್ಳು ಸುದ್ದಿಗಳು. ಅವರಿಗೆ ಆಗದವರು ಯಾರೋ ಈ ಸುದ್ದಿಗಳನ್ನು ಹರಡುತ್ತಿದ್ದಾರೆ. ನಿನ್ನ ಅತ್ತೆ ಏನು ಎನ್ನುವುದನ್ನು ನಾನು ಚೆನ್ನಾಗಿ ಬಲ್ಲೆ. ಮಹತ್ವಾಕಾಂಕ್ಷೆ ಮತ್ತು ಹಿಡಿದದ್ದನ್ನು ಸಾಧಿಸಬೇಕೆನ್ನುವ ಒಂದೆರಡು ದೌರ್ಬಲ್ಯಗಳನ್ನು ಬಿಟ್ಟರೆ, ಅವರಲ್ಲಿನ ಸೌಂದರ್ಯಕ್ಕೂ ಮಿಗಿಲಾದ ಗುಣಗಳಿವೆ. ಮೊಘಲ್ ಆಳ್ವಿಕೆ ನಿರಾತಂಕವಾಗಿ ಸಾಗುತ್ತಿದೆ. ಸಾಕಷ್ಟು ಸುಭಿಕ್ಷವಾಗಿದೆ. ಎಲ್ಲಿಯೂ ದಂಗೆ ಗಲಭೆಗಳಿಲ್ಲ, ಕಲಹಗಳಿಲ್ಲ, ವ್ಯವಸ್ಥಿತವಾದ ರೀತಿಯಲ್ಲಿ ಆಡಳಿತವನ್ನು ನೋಡಿಕೊಳ್ಳುತ್ತಿದ್ದಾರೆ.

"ಮೊಘಲ್ ಸಾಮ್ರಾಜ್ಯದ ಕೀರ್ತಿ ಎಲ್ಲೆಲ್ಲೂ ವ್ಯಾಪಿಸಿದೆ. ನಿನ್ನತ್ತೆ ನೂರ್ ಜಹಾನ್ ಸಾಮಾನ್ಯ ಹೆಂಗಸಲ್ಲ, ಕವಿ, ಕಲಾವಿದರಿಗೆ ಆಶ್ರಯ. ಪ್ರೋತ್ಸಾಹಗಳು, ಎಲ್ಲರಿಗೂ ಇಲ್ಲಿ ಬರುವಂತೆ ಪ್ರಚೋದಿಸುತ್ತಿದೆ. ಹೆಂಗಸರು, ಗಂಡಸರು ಎನ್ನುವ ಭೇದವಿಲ್ಲದೆ ಸಮಾನವಾದ ರೀತಿಯಲ್ಲಿ ಪ್ರೋತ್ಸಾಹ ಮತ್ತು ಆರ್ಥಿಕ ಸಹಾಯ ನೀಡುತ್ತಿದ್ದಾರೆ. ದಾದಾ ಅಕ್ಬರ್ ಬಾದಶಾಹರಂತೆ ಎಲ್ಲ ಧರ್ಮ ಜಾತಿಗಳನ್ನು ಸಮಾನವಾಗಿ ಕಾಣುತ್ತಾ, ಹಿಂದೂ ಧರ್ಮಗ್ರಂಥ ರಚನೆಗೆ, ಅನುವಾದಕ್ಕೆ ಅವಕಾಶ ಕಲ್ಪಿಸುತ್ತಿದ್ದಾರೆ. ಪರ್ಷಿಯನ್, ಅರೇಬಿಕ್, ಸಂಸ್ಕೃತ ಇತ್ಯಾದಿ ಭಾಷೆಗಳನ್ನು ಬಲ್ಲವರು. ಹಿಂದೂ ಮಹಾಕಾವ್ಯಗಳನ್ನು ಓದಿಕೊಂಡಿದ್ದಾರೆ. ಸ್ವತಃ ಅವರು ಕವಯಿತ್ರಿ, ಕಲಾವಿದೆ, ವಸ್ತ್ರ ವಿನ್ಯಾಸಕಿ ಎಂದೆಲ್ಲಾ ಗುರುತಿಸಿಕೊಂಡು, ವಿಶ್ವದಾದ್ಯಂತ ಅವರ ಉದ್ದಿಮೆ, ಉತ್ಪಾದನೆಗಳು ಬಹಳ ಪ್ರಸಿದ್ಧ. ಅವರು ಪರಿಚಯಿಸಿದ ನನ್ನ ಅಪ್ಪನ ಹೆಸರಿನಲ್ಲಿ 'ಇತ್ತರ್ ಜಹಾಂಗೀರಿ' ಎನ್ನುವ ಸುಗಂಧದ್ರವ್ಯ ತಯಾರಿಕೆ ಪ್ರಪಂಚದಲ್ಲೆಲ್ಲ ಹೆಸರು ಮಾಡಿದೆ.

"ಅವರು ಏರ್ಪಡಿಸುವ ಭೋಜನ ಕೂಟಗಳು, ಮುಷಾಯಿರಾಗಳು, ಕಾವ್ಯ ಸ್ಪರ್ಧೆಗಳು! – ಇತ್ಯಾದಿಗಳ ಬಗ್ಗೆ ಹೇಳಲೇಬೇಕಿಲ್ಲ. ಅರ್ಜು, ವಿನಾಕಾರಣ ತಲೆ ಕೆಡಿಸಿಕೊಳ್ಳುತ್ತಿದ್ದೀಯ ನೀನು. ಇದನ್ನೆಲ್ಲ ನಂಬಬೇಡ. ದಿನವಿಡೀ ಕುಳಿತು ಕೇಳಿದರೂ ನಿನ್ನತ್ತೆಯ ಸಾಹಸಗಳ ಪುರಾಣ ಮುಗಿಯುವುದಿಲ್ಲ."

"ಓಹೋ, ಪರವಾಗಿಲ್ಲ, ನೀವೂ ಕೂಡಾ ಅವರ ಹೊಗಳು ಭಟ್ಟರಾಗಿ ಬಿಟ್ಟರಲ್ಲ."

"ಹೊಗಳಿಕೆಯ ಮಾತುಗಳಲ್ಲ, ಅರವತ್ತು ಸಾವಿರ ಮನಸಬ್‌ದಾರರಾದ ನಿನ್ನ ಅತ್ತೆಯ ಬಗ್ಗೆ ಹೀಗೆಲ್ಲ ಯೋಚಿಸಬಾರದು. ರಾಜಕೀಯ ಬೇರೆ! ವ್ಯಕ್ತಿಯ ಯೋಗ್ಯತೆ

ಬೇರೆ. ಅವರಲ್ಲಿನ ದಯೆ, ಔದಾರ್ಯಗಳಿಂದ ಎಷ್ಟೊಂದು ಮಂದಿ ಅಸಹಾಯಕ ಹೆಣ್ಣು ಮಕ್ಕಳು ಬದುಕನ್ನು ಕಂಡುಕೊಂಡಿದ್ದಾರೆ. ನಿನಗೇ ಗೊತ್ತಿದೆ, ಜನಾನಾದ ಆವರಣದಲ್ಲಿಯೇ, ನಿರಕ್ಷರಿಗಳಾದ ಹೆಂಗಸರಿಗೆ ಮದರಸಾ ಪ್ರಾರಂಭಿಸಿದ್ದಾರೆ. ಝರೋಕಾದಲ್ಲಿ ಕುಳಿತು, ಎಷ್ಟು ಅದ್ಭುತವಾದ ರೀತಿಯಲ್ಲಿ ವಿಚಾರಣೆ ನಡೆಸಿ, ಯಾರಿಗೂ ಅನ್ಯಾಯವಾಗದಂತೆ ನೋಡಿಕೊಂಡಿದ್ದಾರೆ."

"ಅದೇ ಅದೇ ನನಗೆ ಚಿಂತೆ, ಅಷ್ಟೊಂದು ಅಧಿಕಾರವನ್ನು ಮೈಗೂಡಿಸಿ ಕೊಂಡಿರುವುದೇ ನನ್ನ ಭಯಕ್ಕೆ ಕಾರಣ. ತಾವು ಮಾತ್ರ ಅಧಿಕಾರ, ಸಂಪತ್ತುಗಳ ಒಡೆತನವನ್ನು ಅನುಭವಿಸುತ್ತಿದ್ದಾರೆ. ಆದರೆ ಬಡಪಾಯಿ ಹೆಣ್ಣುಮಕ್ಕಳಿಗೆ ಮದುವೆಯೇ ಕೂಡದೆಂದು ಶಾಸನ ಹೊರಡಿಸಿದ್ದಾರೆ. ಅವರಿಗೆ ತವರಿನ ಯಾವ ಹಕ್ಕೂ ಇಲ್ಲದಂತಾಗಿದೆ. ಆದರೆ ನೂರ್‌ಬೇಗಂ ಹೆಸರಲ್ಲಿ ರಾಜಮುದ್ರೆ! ನಾಣ್ಯಗಳು!!.... ಬಹಳ ಚೆನ್ನಾಗಿದೆ ನಿಮ್ಮ ನ್ಯಾಯ! ಅವರೇನು ತಪ್ಪುಮಾಡಿದ್ದಾರೆ? ಮೊಘಲ್ ದೊರೆಗಳಿಗೆ ಮಕ್ಕಳಾಗಿ ಹುಟ್ಟಿದ್ದೇ ತಪ್ಪೇನು?..... ಇವರಿಗ್ಯಾಕೆ ಇಂಥ ಕ್ರೂರ ಶಿಕ್ಷೆ? ಮುಂದೆ ನನ್ನ ಮಗಳು ಜಹಾಂನಾರಾಗೂ ಇದೇ ಶಿಕ್ಷೆ ಜಾರಿಯಾಗುವುದಾದರೆ, ಅವಳ ಸಂಕಟವನ್ನು ನೋಡುವವರು ಯಾರು?"

"ಇದರಲ್ಲಿ ನೂರ್ ಜಹಾನ್ ಬೇಗಂರ ತಪ್ಪೇನು? ಅವರೇನೂ ಈ ಶಾಸನ ಹೊರಡಿಸಿಲ್ಲ. ಇದು ಅಕ್ಬರ್ ಬಾದಶಾಹರ ಕಾಲದ್ದು. ಅಲ್ಲದೆ ಶಾಸನ, ಗೀಶನ......ಅವೆಲ್ಲ ಮೊಘಲ್ ದೊರೆಗಳ ಇಷ್ಟಾನಿಷ್ಟಕ್ಕೆ ಸಂಬಂಧಿಸಿದ್ದು.

"ಇಷ್ಟಾನಿಷ್ಟ ಎಂದು ಬಿಟ್ಟರೆ ಮುಗಿಯಿತೇನು? ಪೂರ್ವಗ್ರಹ ಪೀಡಿತ, ನ್ಯಾಯಾಧೀಶರ, ಅನ್ಯಾಯದ ತೀರ್ಪು, ಶಾಸನ ಜಾರಿಗಳಿಂದ ಮೊಘಲ್ ದೊರೆಗಳ ಹೆಣ್ಣು ಮಕ್ಕಳು ಅನುಭವಿಸುವ ಕ್ರೂರ ಯಾತನೆಯ ಕಲ್ಪನೆ ನಿಮಗಿದೆಯೇನು?!"

"ಇಲ್ಲದಿರಬಹುದು. ಆದರೆ ಈಗ ನಾವೇನೂ ಮಾಡುವ ಹಾಗಿಲ್ಲ."

"ಮಾಡುವ ಹಾಗಿಲ್ಲವೆಂದು ಕೈ ಕಟ್ಟಿ ಕುಳಿತುಕೊಳ್ಳುವುದಲ್ಲ. ನೀವೇನೇ ಹೇಳಿ, ನನ್ನ ಮನಸ್ಸಿಗೆ ರಾಜಕೀಯ ಪಿತೂರಿಗಳು ಬಹಳಷ್ಟು ನಡೆಯುತ್ತಿವೆ ಎನಿಸುತ್ತದೆ. ನನ್ನ ದಾದಾ ಇತಿ-ಮಿ-ದಾದ್‌ದೌಲ ಸಾಮಾನ್ಯರಲ್ಲ. ಅಸಫ್‌ಖಾನ್, ಮೆಹರುನ್ನೀಸಾ ಅವರ ಸ್ವಂತ ಮಕ್ಕಳಲ್ಲವೇ? ಅವರ ಬಗ್ಗೆ ಅವರ ಆಸಕ್ತಿ ಹೆಚ್ಚಾಗಿ ಇದ್ದೇ ಇರುತ್ತೆ. ದೂರದೇಶದಿಂದ ನಿರಾಶ್ರಿತರಾಗಿ, ಕಾಣದ ಈ ದೇಶಕ್ಕೆ ಬಂದು ಬಲವಾಗಿ ಬೇರು ಬಿಟ್ಟದ್ದು ನೋಡಿದರೆ ಆಶ್ಚರ್ಯವಾಗುತ್ತದೆ. ಅವರೆಲ್ಲ ಒಟ್ಟಿಗೆ ಸೇರಿ ಬಿಟ್ಟರೆ ಏನೇನಾಗುವುದೋ?"

"ಯಾಕೆ ಇಲ್ಲದ್ದನ್ನೆಲ್ಲ ಊಹಿಸುತ್ತೀ. ಅವರ ಮಂತ್ರಾಲೋಚನೆಗಳಲ್ಲಿ ನಾನೂ ಭಾಗವಹಿಸಿದ್ದೇನೆ. ಅವರು ಕರೆದರೆ ನಾನು ಇಲ್ಲವೆಂದು ಹೇಗೆ ಹೇಳಲಿ?"

"ನಿಮ್ಮ ನಡುವೆ ಮಂತ್ರಾಲೋಚನೆ, ಸಲಹೆ, ಚರ್ಚೆಗಳು ನಡೆದರೆ ನನ್ನ ಅಭ್ಯಂತರವಿಲ್ಲ. ಆದರೆ ಗಂಡಸರ ಮಧ್ಯೆ ನಮ್ಮತ್ತೆಯ ಪ್ರವೇಶ ಯಾಕೆ? ಎಂಬುದು ನನ್ನ ಪ್ರಶ್ನೆ."

"ನಿನ್ನತ್ತೆ, ನಿನ್ನ ತಂದೆಯ ತಂಗಿ. ಅಣ್ಣನ ಜೊತೆಗಿರಲು ಬಯಸಿದರೆ ತಪ್ಪೇನು? ಜನಾನಾದ ಮಾತುಗಳನ್ನು ಕೇಳಿಸಿಕೊಂಡು ತಲೆಕೆಡಿಸಿಕೊಳ್ಳಬೇಡ."

"ನಾನು ತಲೆಕೆಡಿಸಿಕೊಳ್ಳುವುದು ಅಪರಾಧ. ಅರವತ್ತು ಸಾವಿರ ಮನಸಬ್‌ದಾರರಾದ

ಅತ್ತೆಯವರು ಬೇಕಾದರೆ ತಲೆ ಕೆಡಿಸಿಕೊಳ್ಳಬಹುದು. ಹೌದಲ್ಲ!" ಮಾತು ಅಲ್ಲಿಗೆ ನಿಂತಿತು.

ನೂರ್ ಜಹಾನ್ ಮತ್ತು ತನ್ನ ನಡುವೆ ನಡೆದ ಮಾತಿನ ಚಕಮಕಿಯ ವಿವರಗಳನ್ನು ಅರ್ಜುಮಂದ್‌ಬಾನುಗೆ ತಿಳಿಸುವ ಪ್ರಯತ್ನ ಮಾಡಲಿಲ್ಲ. ಅನಿರೀಕ್ಷಿತವಾಗಿ ನಡೆದ ಘರ್ಷಣೆ, ತನ್ನೆದುರು ನಿಂತ ಸಮಸ್ಯೆ. ಅದಕ್ಕೆ ಪರಿಹಾರ, ನೂರ್ ಜಹಾನ್‌ಳ ಯೋಚನೆಗಳ ದಿಕ್ಕು-ಹೀಗೆ ಯಾವುದೂ ಹೇಗೆಂದು-ಅರಿಯಲಾಗದೆ ಚಡಪಡಿಸಿದ.

ನೂರ್ ಜಹಾನಳ ಅಧಿಕಾರದಾಹ ದಿನೇದಿನೇ ಹೆಚ್ಚುತ್ತಿತ್ತು. ಅವಳನ್ನು ಪ್ರಶ್ನಿಸುವ, ಮಾತಾಡುವ ಧೈರ್ಯ ಯಾರಿಗೂ ಇಲ್ಲದಾಯಿತು. ಖುರ್ರಂ ಹೊರತಾಗಿ ಸಿಂಹಾಸನ ಏರುವ ಯೋಗ್ಯತೆ ಬೇರೆ ಯಾರಿಗೂ ಇರಲಿಲ್ಲ. ಖುರ್ರಂನನ್ನೇ ಒಲಿಸಿ, ತನ್ನೆಡೆಗೆ ಸೆಳೆದುಕೊಳ್ಳುವ ಪ್ರಯತ್ನ ಹುಸಿಯಾಯಿತು. ಮೇವಾಡವನ್ನು ಗೆದ್ದು ಬಂದ ಮೇಲೆ, ಅವನಿಗೆ ದೊರೆತ 'ಶಹಜಹಾನ್' ಬಿರುದು, ಗೌರವ ಸನ್ಮಾನಗಳು, ತಂದೆಯಿಂದ ದೊರೆಯುತ್ತಿದ್ದ ಪ್ರಾಮುಖ್ಯತೆ, ಪ್ರಜೆಗಳಲ್ಲಿ ಅವನ ಪರವಾದ ಮೆಚ್ಚುಗೆಗಳು, ಅವನಿಗೆ ಗದ್ದುಗೆ ದೊರೆಯುವುದರಲ್ಲಿ ಅಪಾರ ಭರವಸೆ ಮೂಡಿಸಿತು. ಇದೆಲ್ಲವನ್ನೂ ಕಂಡ ನೂರ್ ಜಹಾನ್, ಖುರ್ರಂನನ್ನು ತಂದೆಯ ಸಮಕ್ಷಮದಿಂದ ದೂರವಿರಿಸಲು ಉಪಾಯವನ್ನು ಆಲೋಚಿಸಿದಳು. ದೂರದ ಖಾಂದಾಹಾರಕ್ಕೆ ಅವನನ್ನು ರವಾನಿಸಿ ಬಿಟ್ಟರೆ, ಅವನ ಜಾಗೀರೂ ಅವನ ಕೈ ತಪ್ಪಿಹೋಗುವುದೆಂದು ಭಾವಿಸಿ, ಅವನಿಗೆ ಆದೇಶಿಸಿದಾಗ, ಖುರ್ರಂ ಸುಲಭವಾಗಿ ಒಪ್ಪಿಕೊಳ್ಳಲಿಲ್ಲ. ನೇರವಾಗಿ ಇಂತಹ ಧೋರಣೆಗಳ ವಿರುದ್ಧ ದಂಗೆಯೇಳಬೇಕಾದ ಅನಿವಾರ್ಯತೆ ಸೃಷ್ಟಿಯಾಯಿತು.

ನೂರ್ ಜಹಾನಳ ಪ್ರಯತ್ನಗಳು ಸೋತಾಗ, ಖುರ್ರಂ ಪೂರ್ತಿಯಾಗಿ ತನ್ನ ವಿರುದ್ಧವಿರುವುದು ತಿಳಿದಾಗ ಅವಳಿಗೆ ಇದ್ದುದು ಶಹರಿಯಾರ್‌ನನ್ನು ಒಪ್ಪಿಕೊಳ್ಳುವುದೊಂದೇ ದಾರಿಯಾಯಿತು. ಗಂಡನಲ್ಲಿ ಅವನ ಬಗ್ಗೆ ಶಿಫಾರಸ್ಸು ಮಾಡಿಸಿ, ಅವನ ಮನಸಬ್ ಮೊತ್ತವನ್ನು ಹೆಚ್ಚಿಸಿದಳು. ಆದರೆ ಶಹರಿಯಾರ್ ಒಲ್ಲದ ಮನಸ್ಸಿನಿಂದಲೇ ಸ್ವೀಕರಿಸಿದ.

ಖುರ್ರಂಗೆ ವಾಸನೆ ಹತ್ತಿತ್ತು. ಅವನಿಗೂ ತನ್ನ ಹಾದಿ ಮುಳ್ಳುಗಳನ್ನು ಕಿತ್ತೊಗೆಯ ಬೇಕಿತ್ತು. ನೂರ್ ಜಹಾನ್ ರಾಜಕೀಯದ ಬಗ್ಗೆ ಅಪಾರ ಜ್ಞಾನವಿರಿಸಿಕೊಂಡದ್ದೇ ಅಲ್ಲದೆ ದೂರದೃಷ್ಟಿಯನ್ನೂ ಹೊಂದಿದವಳಾಗಿದ್ದುದರಿಂದ, ಮಗಳು ಮತ್ತು ಅಳಿಯನ ಸುರಕ್ಷತೆಯ ಬಗ್ಗೆ ಆಲೋಚಿಸುತ್ತಿದ್ದಳು. ಮುಗ್ಧಪ್ರೇಮಿಗಳಾದ ಇವರು, ರಾಜಕೀಯ ಪರಿಸ್ಥಿತಿಯನ್ನರಿಯದೆ ನಿರಾತಂಕವಾಗಿ, ಎಲ್ಲೆಂದರಲ್ಲಿ ಯಮುನಾ ತೀರದಲ್ಲಿ ತೋಟ ತುಡಿಕೆಗಳಲ್ಲಿ ಸ್ವಚ್ಛಂದವಾಗಿ ಅಲೆದಾಡುತ್ತಿದ್ದರು. ನೂರ್ ಜಹಾನಳಿಗೆ ಚಿಂತೆಯಾಯಿತು. ಯಾವ ಕ್ಷಣದಲ್ಲಿಯಾದರೂ ಖುರ್ರಂನಿಂದ ಅಪಾಯ ಎದುರಾಗಬಹುದಾಗಿತ್ತು. ಹುಡುಗುತನದ ಇವರು ಯಾವುದನ್ನೂ ಗಂಭೀರವಾಗಿ ತೆಗೆದುಕೊಳ್ಳುವುದಿಲ್ಲ ಎನಿಸಿ, ಶಹರಿಯಾರ್ ಮತ್ತು ಲಾಡ್ಲಿ ಇದ್ದಲ್ಲಿಗೆ ತಾನೇ ಹೋದಳು.

ಲಾಡ್ಲಿಗೆ ಅನಿರೀಕ್ಷಿತವಾಗಿ ತಮ್ಮಲ್ಲಿಗೆ ಬಂದ ತಾಯಿಯನ್ನು ನೋಡಿ ಅಚ್ಚರಿ ಮತ್ತು ಭಯಗಳು ಏಕಕಾಲದಲ್ಲಿ ಉಂಟಾದವು.

"ಅಮ್ಮೀಜಾನ್ ಈ ಹೊತ್ತಿನಲ್ಲಿ ಇಷ್ಟು ಅನಿರೀಕ್ಷಿತವಾಗಿ ಬಂದದ್ದೇಕೆ? ಏನಾದರೂ

ತುರ್ತಿನ ವಿಷಯವಿದೆಯೇ? ಹೇಳಿ ಕಳಿಸಿದ್ದರೆ ನಾವೇ ಬರುತ್ತಿದ್ದೆವಲ್ಲ."

"ಅದಕ್ಕೆಲ್ಲ ಸಮಯವಿಲ್ಲ. ಇನ್ನು ಮುಂದೆ ನೀವು ಹೀಗೆಲ್ಲಾ ಅಡ್ಡಾಡುವುದನ್ನು ನಿಲ್ಲಿಸಿ, ನಾನು ನಿಮಗೊಬ್ಬ ಬೆಂಗಾವಲಿಗನನ್ನು ಕಳಿಸಿಕೊಡುತ್ತೇನೆ. ಅವನು ನಿಮ್ಮ ರಕ್ಷಣೆಯನ್ನು ನೋಡಿಕೊಳ್ಳುತ್ತಾನೆ."

ಶಹರಿಯಾರ್ ಏನೋ ಭಯ ಆತಂಕಗಳಿಂದ ಕೂಡಿದ್ದ.

"ಬೇಗಂ ಹುಜೂರ್, ದಿಢೀರನೆ ಈ ವ್ಯವಸ್ಥೆಯೆಲ್ಲಾ ಯಾಕೆ ಅನ್ನುವುದು ಗೊತ್ತಿಲ್ಲ."

"ಗೊತ್ತು ಮಾಡುತ್ತೇನೆ. ನಿಮ್ಮ ಸುತ್ತಲೂ ಶತ್ರುಗಳು ಹೊಂಚು ಹಾಕುತ್ತಿದ್ದಾರೆ. ಯಾವ ಸಮಯದಲ್ಲಾದರೂ ನಿಮ್ಮ ಮೇಲೆ ಅಪಾಯ ಎರಗಬಹುದು. ಅದಲ್ಲದೆ ನೀವು ಮುಂದಿನ ಬಾದಶಾಹ್ ಆಗುವವರು. ನಿಮ್ಮ ರಕ್ಷಣೆ ನಮ್ಮ ಹೊಣೆ. ಅದಕ್ಕಾಗಿಯೇ ಅವಸರದಿಂದ, ನಿಮ್ಮ ಅಪ್ಪಣೆಯೂ ಇಲ್ಲದೆ ಬಂದುಬಿಟ್ಟೆ."

"ಬಾದಶಾಹ ಬೇಗಂ ಆಗಿರುವ ನಿಮಗೆ, ಅದೂ ಇಡೀ ಹಿಂದೂಸ್ತಾನವೇ ನಿಮ್ಮದಾಗಿರುವಾಗ, ನಿಮಗೆ ಯಾರ ಅಪ್ಪಣೆ ತಾನೇ ಬೇಕಿದೆ?"

"ಅದು ಹಾಗಲ್ಲ, ಯಾರೇ ಆಗಿರಲಿ ಅಪ್ಪಣೆಯಿಲ್ಲದೆ ಏಕಾಂತದಲ್ಲಿ ಇರುವವರನ್ನು, ನೋಡಲು ಬರುವುದು ಸೌಜನ್ಯವಲ್ಲ!"

"ಅಂದ ಮೇಲೆ ನೀವು ಹೀಗೆ ದಿಢೀರನೆ ಬರಲು ಏನಾದರೂ ತುರ್ತಿನ ಸಮಾಚಾರವಿದೆಯೇನು?

"ಅಂತಹ ತುರ್ತಿನ ಸಮಾಚಾರವಾದರೂ ಏನಿದೆ ಅಮ್ಮೀ?"

"ಇದೆ ಬೇಟಿ. ಅದನ್ನು ಹೇಳಲೆಂದೇ ಶಹಜಾದಾರನ್ನು ಹುಡುಕಿಕೊಂಡು ಬಂದೆ"

ನೂರ್ ಜಹಾನ್ ಮಾತಿನಲ್ಲಿ ತುರ್ತು, ಗಂಭೀರತೆಗಳು ಕಾಣಿಸಿದವು. ಹೇಳುವ ಮಾತುಗಳಲ್ಲಿ, ರೀತಿಯಲ್ಲಿ ವ್ಯತ್ಯಾಸವಿತ್ತು. ಯಾವುದೋ ನಿರ್ಧಾರವೊಂದನ್ನು ಘೋಷಿಸುವ ಶೈಲಿಯಿತ್ತು. ಸ್ವಲ್ಪ ಗಂಟಲು ಸರಿಪಡಿಸಿಕೊಂಡು.

"ನೋಡಿ ಮಕ್ಕಳೆ. ನೀವು ಇನ್ನೂ ಸಣ್ಣ ಮಕ್ಕಳಾಗಿ ಉಳಿದಿಲ್ಲ. ಅಲ್ಲದೆ ನೀವು ಸಾಮಾನ್ಯರ ಮಕ್ಕಳಲ್ಲ. ಬಾದಶಾಹ್ ಕುಟುಂಬದವರು. ನಿಮಗೆ ಗೌರವ, ಪ್ರತಿಷ್ಠೆ, ಜವಾಬ್ದಾರಿಗಳು ಇರುತ್ತವೆ. ಈ ವಯಸ್ಸಿನಲ್ಲಿ ಪ್ರೀತಿ, ಪ್ರೇಮ ಎಲ್ಲವೂ ಸಹಜ, ಸಾಮಾನ್ಯ. ಆದರೆ ಅದು ಹೀಗೆ ಬಹಿರಂಗವಾಗಿ ಕಾಣಿಸಿಕೊಳ್ಳಬಾರದು. ಇದರ ಜೊತೆಗೆ ರಾಜ ಮನೆತನದ ಮಕ್ಕಳಾದ ನೀವೂ ಸಾಮ್ರಾಜ್ಯದ ಆಗುಹೋಗುಗಳು, ಅರಮನೆಯ ಒಳಗೆ, ಹೊರಗೆ ಏನು ನಡೆಯುತ್ತಿದೆ ಎನ್ನುವುದರ ಬಗ್ಗೆಯೂ ಯೋಚಿಸಬೇಕು. ಕಡೆತನಕ ತಂದೆ ತಾಯಿಗಳೇ ಜೊತೆ ಇರುತ್ತಾರೆಂದು ಭಾವಿಸಬೇಡಿ. ನೀವಾಗಿ ಅದರಲ್ಲಿ ಆಸಕ್ತಿವಹಿಸದೆ ಹೋದಾಗ, ನಮ್ಮಂತಹವರು ಮಕ್ಕಳಿಗೆ ಜವಾಬ್ದಾರಿಗಳನ್ನು ಮನವರಿಕೆ ಮಾಡಿಕೊಡಬೇಕಾದ್ದು ಧರ್ಮ; ಕರ್ತವ್ಯ. ತಿಳಿದುಕೊಳ್ಳಬೇಕಾದ್ದು ಮತ್ತು ಅದಕ್ಕೆ ಸಿದ್ಧಗೊಳಿಸಿಕೊಳ್ಳಬೇಕಾದ್ದು ಅವರ ಕರ್ತವ್ಯ."

"ಅಮ್ಮೀ ಇಷ್ಟು ದೊಡ್ಡ ಭಾಷಣ ಮಾಡಬೇಕಾದ ಮತ್ತು ಇಷ್ಟೊಂದು ಉದ್ವಿಗ್ನರಾಗಬೇಕಾದ ಪರಿಸ್ಥಿತಿಯಾದರೂ ಏನಿದೆ ಹೇಳಿ ಅಮ್ಮೀ! ಸಾಮ್ರಾಜ್ಯಕ್ಕೇನಾದರೂ ಕಂಟಕ ಒದಗಿದೆಯೇ?"

"ನೀವು ತಿಳಿಯಲು ಪ್ರಯತ್ನಿಸಿದರೆ ತಾನೇ, ಏನೆಂದು ಗೊತ್ತಾಗುವುದು! ಏನೆಲ್ಲ ಗೊಂದಲಗಳು ಸೃಷ್ಟಿಯಾಗಿವೆ. ಅರಮನೆ ಒಳಗೇ ಕೋಲಾಹಲಗಳು ಹುಟ್ಟಿಕೊಂಡಿವೆ. ಗೊತ್ತೇನು?"

"ಬಾದಶಾಹ ಬೇಗಂ, ಅಂತಹ ಸಂಚಕಾರ ಏನು ಬಂದಿದೆ ಸಾಮ್ರಾಜ್ಯಕ್ಕೆ? ಅಬ್ಬಾ ಹುಜೂರ್ ಸುರಕ್ಷಿತವಾಗಿದ್ದಾರೆ ತಾನೇ?"

"ಬಾದಶಾಹರು ಸುರಕ್ಷಿತವಾಗಿ, ಜೀವಂತವಾಗಿ ಇದ್ದಾರೆ. ಸಮಸ್ಯೆ ಅದಲ್ಲ."

"ಹಾಗಿದ್ದ ಮೇಲೆ ಹೆದರಿಕೆ ಯಾಕೆ, ಅಬ್ಬಾ ಹುಜೂರ್ ಬದುಕಿರುವವರೆಗೂ, ಯಾವೊಂದು ಪಿಳ್ಳೆಯೂ ಎದೆ ಸೆಟೆಸಿ ನಿಲ್ಲುವುದಿಲ್ಲ. ಅಲ್ಲದೆ ಅವರ ಪರಾಕ್ರಮಿ ಮಕ್ಕಳಾದ ನನ್ನ ಭಾಯಿಜಾನ್‌ರಾದ ಪರವೇಜ್, ಖುರ್ರಂರು ಇದ್ದಾರೆ. ಶತ್ರುಗಳ ಸೊಕ್ಕಡಗಿಸಲು ಬಿಚ್ಚುಗತ್ತಿ ಹಿಡಿದು ನಿಂತಿರುತ್ತಾರೆ."

"ಅವರೆಲ್ಲಾ ಇದ್ದಾರೆ ನಿಜ. ಅದು ನಿನ್ನದೂ ಕರ್ತವ್ಯವೇ ಅಲ್ಲವೇ? ಶಹಜಾದೆ ನೀನಿನ್ನೂ ಚಿಕ್ಕವನು. ವಯಸ್ಸು ಮಾಗಿಲ್ಲ. ಭವಿಷ್ಯದ ಬಗ್ಗೆ ಯಾವುದೇ ಕಾಳಜಿಯಿಲ್ಲದೆ ಸುಖ, ಸಂತೋಷಗಳಲ್ಲಿ ಬದುಕನ್ನು ನಿರಾಯಾಸವಾಗಿ ಕಳೆಯುತ್ತಿದ್ದೀಯ. ರಾಜಮನೆತನಗಳಲ್ಲಿ ಯಾರೊಬ್ಬರಿಗೂ ನೆಮ್ಮದಿಯಾಗಿ ಬಾಳುವುದೆಂದರೆ, ಅದು ಕೈಗೆಟುಕದ ಕನಸು ಮಾತ್ರ! ಕ್ಷಣ ಕ್ಷಣವೂ ಒಳಗಿನ, ಹೊರಗಿನ ಶತ್ರುಗಳ ಭೀತಿ ಮಾತ್ರ ಸದಾ ಕಾಡುತ್ತಲೇ ಇರುತ್ತದೆ. ಸ್ವತಃ ತಂದೆ ಮಕ್ಕಳ ನಡುವೆ, ಅಣ್ಣ ತಮ್ಮಂದಿರ ನಡುವೆ, ತಖ್ತ್ ಮತ್ತು ತಾಜ್‌ಗಳಿಗಾಗಿ ಮೇಲಾಟಗಳು, ಸಂಘರ್ಷಗಳು ನಡೆಯುತ್ತಲೇ ಇರುತ್ತವೆ. ಅಂತೆಯೇ ಈಗ ನಮಗೆ ಭೀತಿ ಉಂಟಾಗಿರುವುದು ಹೊರಗಿನ ಶತ್ರುಗಳಿಂದಲ್ಲ; ಒಳಗಿನ ಶತ್ರುಗಳಿಂದ!!"

"ಏನು ಹೇಳುತ್ತಿರುವಿರಿ? ನಮಗೆ ಒಳಗಿನ ಶತ್ರುಗಳು ಎದುರಾದರೆ? ಯಾರು? ಯಾಕೆ?........ನಾವೆಲ್ಲ ಅಣ್ಣತಮ್ಮಂದಿರು!"

"ಇದೆಲ್ಲ ವಿವರಗಳನ್ನು ಬಿಡುವಾಗಿದ್ದಾಗ ಹೇಳುತ್ತೇನೆ. ನಾನು ಹೇಳುತ್ತಿರುವ ತಾಜ್ ಮತ್ತು ತಖ್ತ್‌ಗಳನ್ನು ನೀನು ಉಳಿಸಿಕೊಳ್ಳಲೇಬೇಕು. ಇದು ಮೊಘಲ್ ಸಾಮ್ರಾಜ್ಯದ ಬಾದಶಾಹ ಬೇಗಂರ 'ಹುಕುಮ್' ಎಂದೇ ಬೇಕಾದರೆ ತಿಳಿದುಕೋ. ನೀನು ಪ್ರಯತ್ನಿಸದಿದ್ದರೆ, ಕಾಪಾಡಿಕೊಳ್ಳದಿದ್ದರೆ, ನಿನ್ನಿಂದ ತಪ್ಪಿಹೋಗುತ್ತವೆ. ನಿನ್ನಣ್ಣಂದಿರಲ್ಲಿ ಯಾರಾದರೊಬ್ಬರು ದಕ್ಕಿಸಿಕೊಳ್ಳುತ್ತಾರೆ."

"ದಕ್ಕಿಸಿಕೊಳ್ಳಲಿ ಬಿಡಿ. ಅವರು ನನ್ನ ಅಣ್ಣಂದಿರೇ ಅಲ್ಲವೇ? ನನಗಿಂತ ಹಿರಿಯರಾದ ಅವರಿಗೇ ಅದರ ಹಕ್ಕು ಸಲ್ಲುತ್ತದೆ."

"ಶಹರಿಯಾರ್ ಬೇಟಾ, ನಾನು ಹೇಳುತ್ತಿರುವುದರ ಅಂತರಾರ್ಥ ನಿನ್ನ ಬುದ್ಧಿಗೆ ಹೋಗುತ್ತಿಲ್ಲ. ಸಾಮ್ರಾಜ್ಯವನ್ನಾಳುವ ಅವಕಾಶ ಎಲ್ಲರಿಗೂ ಸುಲಭವಾಗಿ ಸಿಗುವುದಿಲ್ಲ. ಅವಕಾಶ ಬಂದಾಗಲೇ ಅಧಿಕಾರ ಹಿಡಿಯಬೇಕು. ಅದನ್ನು ಹೇಳಲೆಂದೇ ಬಂದೆ. ಪರವೇಜ್, ಖುರ್ರಂ ಇಬ್ಬರೂ ಅಣ್ಣ ತಮ್ಮಂದಿರೇ ಅಲ್ಲವೇ? ಆದರೂ ಒಬ್ಬರ ಮೇಲೊಬ್ಬರು, ಅಧಿಕಾರಕ್ಕಾಗಿ ಕತ್ತಿ ಮಸೆಯುತ್ತಿದ್ದಾರೆ. ಹೇಗಾದರೂ ಸಿಯಾಸತ್ತನ್ನು ತಮ್ಮದಾಗಿಸಿಕೊಳ್ಳಬೇಕೆಂದಿದ್ದಾರೆ. ಹೀಗಿರುವಾಗ ನೀನೂ ಯಾಕೆ ಪ್ರಯತ್ನಿಸದೆ ಸುಮ್ಮನೆ

ಕುಳಿತಿರುವೆ. ನಿನಗೂ ತಖ್ತ್ ಮೇಲೆ ಹಕ್ಕಿದೆ. ನೀನೂ ಬಾದಶಾಹರ ಮಗನೇ ಅಲ್ಲವೇ? ಅವರ ನಡವಳಿಕೆ ನನಗೆ ಯಾಕೋ ಅನುಮಾನಾಸ್ಪದವಾಗಿದೆ. ನಿಮ್ಮ ಅಬ್ಬೂ ಅವರೂ ಅವರ ಪರವಾಗಿಯೇ ಇದ್ದಂತಿದೆ. ಖುಸ್ರೋ ಬದುಕಿದ್ದರೆ ಇದಕ್ಕೆಲ್ಲ ಅವಕಾಶವೇ ಇರುತ್ತಿರಲಿಲ್ಲ. ಹಿರಿಯನಾದ ಖುಸ್ರೋ, ಬಹಳ ಪರಾಕ್ರಮಿ, ಅದ್ಭುತ ಯೋಧ, ಜೊತೆಗೆ ಅಧಿಕೃತ ಹಕ್ಕುದಾರನೂ ಅವನೇ ಆಗಿದ್ದ. ಆದರೆ ದುರದೃಷ್ಟ, ಅವನಿಲ್ಲದೆ ಹೋದ ಅದೇ ಈಗಿನ ಸಮಸ್ಯೆಗಳಿಗೆ ಕಾರಣ. ಅಪ್ಪನ ವಿರುದ್ಧ ನಿಂತು ಶಿಕ್ಷೆಯ ರೂಪದಲ್ಲಿ ಕಣ್ಣು ಕಳೆದುಕೊಂಡ. ಮುಂದೆ ತಮ್ಮನಿಂದ ಕೊಲೆಯಾದರೂ, ಹೊಟ್ಟೆ ನೋವಿನಿಂದ ಸತ್ತನೆಂಬ ವದಂತಿಯ ಹುತ್ತದಲ್ಲಿ ಸತ್ಯವನ್ನು ಅಡಗಿಸಿಬಿಟ್ಟರು." ಧ್ವನಿ ಭಾವುಕವಾಗಿತ್ತು.

"ಹಾಗಾದರೆ ನಾವೇನು ಮಾಡಬೇಕು?" ಲಾಡ್ಲಿ ಪ್ರಶ್ನಿಸಿದಳು.

"ನೀವು ಮಾಡಬೇಕಾದ್ದಿಷ್ಟೆ. ಎಲ್ಲೆಂದರಲ್ಲಿ ಕಾಣಿಸಿಕೊಳ್ಳದೆ ಸುರಕ್ಷಿತ ಸ್ಥಳಗಳಲ್ಲಿ ಇರಿ. ಬೆಂಗಾವಲಿಲ್ಲದೆ ಅಡ್ಡಾಡಬೇಡಿ. ನಿಮ್ಮ ಪ್ರಾಣಕ್ಕೆ ಸಂಚಕಾರ ತಂದುಕೊಳ್ಳಬೇಡಿ, ನಿಮ್ಮಿಬ್ಬರನ್ನೂ ಮೊಘಲ್ ಸಾಮ್ರಾಜ್ಯದ ಬಾದಶಾಹ್ ದಂಪತಿಗಳಾಗಿ ನೋಡಬೇಕೆಂದು ನಮ್ಮಾಸೆ."

"ಅಮ್ಮೀಜಾನ್, ನಮಗೆ ಈ ರಾಜಕೀಯ, ಅದೂ ಇದೂ ಯಾವುದೂ ಬೇಡ. ನಾವಿಬ್ಬರೂ ಸುಖ ಸಂತೋಷಗಳಲ್ಲಿ ಬದುಕುತ್ತಿದ್ದೇವೆ. ಇದರ ಮುಂದೆ ತಾಜ್ ತಖ್ತ್‌ಗಳು ಬೆಲೆಯಿಲ್ಲದವು. ಇರುವುದರಲ್ಲಿ ತೃಪ್ತರಾಗಿರುವಾಗ, ಇಲ್ಲದ್ದಕ್ಕಾಗಿ ತಲೆಕೆಡಿಸಿಕೊಂಡು, ಶಾಂತಿ ನೆಮ್ಮದಿಗಳನ್ನು ಬಲಿಕೊಡುವ ಇಚ್ಛೆ ನಮಗಿಲ್ಲ."

"ಶಹರಿಯಾರ್ ಬೇಟಾ, ಸಾಮ್ರಾಜ್ಯಶಾಹಿ ಬದುಕಿನ ಬೆಲೆ ಅವಳಿಗೆ ಅರ್ಥವಾಗಿಲ್ಲ. ಆದರೆ ರಾಜರಕ್ತವನ್ನು ಹಂಚಿಕೊಂಡು, ಚುಗತಾಯಿ ವಂಶಪರಂಪರೆಯಲ್ಲಿ ಹುಟ್ಟಿದ ನಿನಗೆ ಅರ್ಥವಾಗಿದೆ ಎಂದು ಭಾವಿಸುತ್ತೇನೆ. ಅದಕ್ಕಾಗಿ ನೀನು ಈ ಮೊಘಲ್ ಸಾಮ್ರಾಜ್ಯದ ಬಾದ್‌ಶಾಹ್ ಆಗಲು ಪ್ರಯತ್ನಿಸಬೇಕು. ಮೊದಲು ಅಧಿಕಾರ. ನಂತರ ಪ್ರೀತಿ, ಪ್ರೇಮಗಳು."

"ಬಾದಶಾಹರು ಬದುಕಿರುವಾಗಲೇ ಮಕ್ಕಳು ಹೀಗೆ ತಖ್ತ್ ಹಿಡಿಯಲು ಪರಸ್ಪರ ಹೊಡೆದಾಡುವದು ಗುನಾಹ್ ಅಲ್ಲವೇ?"

"ನಿಜ, ಆದರೆ ಅವರ ಸ್ಥಿತಿ ಈಗ ಅಷ್ಟು ಚೆನ್ನಾಗಿಲ್ಲ. ವಯಸ್ಸು, ರೋಗಗಳು, ಯಾವ ಮನುಷ್ಯನನ್ನೂ, ಅವನು ಎಂಥವನೇ ಆಗಿರಲಿ ಬಿಡುವುದಿಲ್ಲ. ಯಾವ ಕ್ಷಣ ಹೇಗೋ ಏನೋ! .... ದುರದೃಷ್ಟವಶಾತ್ ಏನಾದರೂ ಅನಾಹುತ ಸಂಭವಿಸಿದ್ದಲ್ಲಿ ಸಾಮ್ರಾಜ್ಯದಲ್ಲಿ ಭಯಂಕರ ಅಲ್ಲೋಲ ಕಲ್ಲೋಲ ಸೃಷ್ಟಿಯಾಗುತ್ತದೆ."

"ಯಾಕೆ ಹಾಗೆ ಆಗುತ್ತೆ, ಬಾದಶಾಹ್ ಬೇಗಂ? ಅವರ ಉಳಿದ ಇಬ್ಬರು ಮಕ್ಕಳಲ್ಲಿ ಯಾರಾದರೂ ಒಬ್ಬರು, ಬಾದಶಾಹ್‌ರಾಗುತ್ತಾರೆ. ಸಮಸ್ಯೆ ನಿವಾರಣೆಯಾಗುತ್ತದೆ."

"ಬೇಟಾ, ನಿನಗೆ ರಾಜ್ಯಾಕಾಂಕ್ಷೆ ಏನೆಂಬುದೇ ತಿಳಿದಿಲ್ಲ. ಖುರ್ರಂ ಮಹತ್ವಾಕಾಂಕ್ಷಿ. ತನ್ನ ಹಾದಿ ಮುಳ್ಳುಗಳನ್ನು ಕಿತ್ತೆಸೆಯುವ ಪ್ರಯತ್ನದಲ್ಲಿ ಮೊದಲಿನಿಂದಲೂ ತೊಡಗಿದ್ದಾನೆ. ಖುಸ್ರೋನ ಕತೆ ಮುಗಿದ ನಂತರ! ಈಗ ಪರವೇಜ್. ಅವನನ್ನೂ ದಾರಿಯಿಂದ ಸರಿಸಲೆಂದೇ, ಅವನ ಮೇಲೆ ಯುದ್ಧ ಘೋಷಿಸಿ, ಸೈನ್ಯವನ್ನು ಅವನ

ಮೇಲೆ ಆಕ್ರಮಣ ಮಾಡಲೆಂದು ಕಳಿಸಿಕೊಟ್ಟಿದ್ದಾನೆ. ಆದರೆ ಅದೃಷ್ಟ! ಪರವೇಜ್‌ನ ವಿವೇಕ, ಸಾಹಸಗಳಿಂದಾಗಿ, ಖುರ್‍ರಂನನ್ನು ಹಿಮ್ಮೆಟ್ಟಿಸಿದ. ದಕ್ಷಿಣದ ಸುಬೇದಾರನಾಗಿ, ತನಗೆ ಜಾಗೀರಾಗಿ ದೊರೆತ ಆ ಪ್ರದೇಶಕ್ಕೆ ಹೊರಟಿದ್ದಾನೆ. ಮುಖಭಂಗ ಮಾಡಿಸಿಕೊಂಡ ಖುರ್‍ರಂ ಅವಕಾಶಕ್ಕಾಗಿ ಕಾಯುತ್ತಿದ್ದಾನೆ."

"ಹಾಗಾದರೆ ಶಹಜಾದಾ ಖುರ್‍ರಂ ಮುಂದೇನು ಮಾಡುತ್ತಾನೆ?"

"ಏನು ಮಾಡುತ್ತಾನೆ. ಸಾಮ್ರಾಜ್ಯದ ಮೇಲೆ ಕಣ್ಣಿರಿಸಿದ್ದಾನೆ. ಅದೂ ಬಾದಶಾಹರು ಬದುಕಿರುವಾಗಲೇ ಆಗ್ರಾದ ಮೇಲೆ ದಂಡೆತ್ತಿ ಬಂದು, ಅವರನ್ನು ಸೋಲಿಸಿ. ತಖ್ತ್ ಹಿಡಿಯಬೇಕೆಂದಿದ್ದಾನೆ."

"ಹಿಡಿಯಲಿ. ಅದು ಅವನಿಗೂ ಸೇರಬೇಕಲ್ಲವೇ? ಧೈರ್ಯ ಸಾಮರ್ಥ್ಯಗಳಿಂದ ಎಷ್ಟು ಜನ ಮೊಘಲ್ ಸುಲ್ತಾನರು ಪರಂಪರಾಗತ ಅನುಕ್ರಮವನ್ನು ಬದಿಗೆ ಸರಿಸಿ ಬಾದಶಾಹರಾಗಿಲ್ಲ, ಅದರಲ್ಲಿ ನನಗೆ ಯಾವ ದೋಷವೂ ಕಾಣಿಸುತ್ತಿಲ್ಲ....... ಬೇಗಂ ಸಾಹಿಬಾ ಈ ಒಂದು ಸಂದರ್ಭದಲ್ಲಿ ನಾನೊಂದು ಮಾತು ಹೇಳುತ್ತೇನೆ. ಮೊದಲೇ ಅದಕ್ಕಾಗಿ ಮಾಫಿ ಕೋರುತ್ತೇನೆ."

"ಹೇಳು ನಿಸ್ಸಂಕೋಚವಾಗಿ ಹೇಳು."

"ಅದು... ಅದು.... ಅದೆಂದರೆ (ತಡವರಿಸುತ್ತಲೇ), ವಾಸ್ತವದಲ್ಲಿ ನನಗೆ ಇಷ್ಟು ದೊಡ್ಡ ಸಾಮ್ರಾಜ್ಯವಾಗಿರುವ ಹಿಂದೂಸ್ತಾನವನ್ನು ಆಳುವ ಯೋಚನೆಯೇ ಭಯ ಹುಟ್ಟಿಸುತ್ತದೆ. ಅಲ್ಲದೆ ನನಗೆ ಅದರ ಮೇಲೆ ಮೋಹವೂ ಇಲ್ಲ. ನಿಮ್ಮ ನೆರಳಿನಲ್ಲಿ, ಮಾರ್ಗದರ್ಶನದಲ್ಲಿ ಏನು ಮಾಡಲು ಆದೇಶಿಸುತ್ತೀರೋ ಅದನ್ನು ತಲೆಬಾಗಿ ಸ್ವೀಕರಿಸಿ ಮಾಡುತ್ತೇನೆ. ನನ್ನ ಪ್ರೀತಿಯ ಲಾಡ್ಲಿಯೊಂದಿಗೆ ಸುಖ ಸಂತೋಷದಿಂದಿರಲು ಬಯಸುತ್ತೇನೆ."

"ಶಹರಿಯಾರ್ ನೀನಿನ್ನೂ ಅಪ್ರಬುದ್ಧ. ತಾಜ್ ತಖ್ತ್‌ಗಳ ಬೆಲೆ ಏನೆಂದು ನಿನಗೆ ಊಹಿಸಲೂ ಸಾಧ್ಯವಿಲ್ಲ. ಮುಂದೆ ದೊಡ್ಡವನಾದ ಮೇಲೆ ಪ್ರಬುದ್ಧ ವಯಸ್ಸು ಬಂದಾಗ, ಪಶ್ಚಾತ್ತಾಪ ಪಡುತ್ತೀಯ. ಅಷ್ಟು ಹೊತ್ತಿಗೆ ಅವಕಾಶ ಕೈ ಜಾರಿ ಹೋಗಿರುತ್ತದೆ. ಈಗಲೇ ಕಣ್ಣು ಬಿಡು, ಎಚ್ಚೆತ್ತುಕೋ. ಹೇಡಿಯಂತೆ ವರ್ತಿಸಬೇಡ."

"ಬೇಗಂ ಸಾಹಿಬಾ, ನಿಮಗೆ ಇನ್ನೂ ಒಂದು ಸತ್ಯವನ್ನು ಹೇಳುತ್ತೇನೆ. ಮೊದಲನೆಯದಾಗಿ, ನನಗೆ ಸಾಮ್ರಾಜ್ಯ, ಸಮರ ಯಾವುದೂ ಇಷ್ಟವಿಲ್ಲ. ಅಲ್ಲದೆ ನಾನೇನೂ ಪರಾಕ್ರಮಿ ಯೋಧನೂ ಅಲ್ಲ. ಜೊತೆಗೆ ತಾಯಿ ಯಾರೆಂದೇ ತಿಳಿಯದ ಒಬ್ಬ ಅನಾಥ ಶಿಶು. ಬಾದಶಾಹರ ಎಷ್ಟೋ ಮಕ್ಕಳಲ್ಲಿ ನಾನೂ ಒಬ್ಬ. ಬಾದಶಾಹರ ರಕ್ತ ನನ್ನಲ್ಲಿದೆ ಎನ್ನುವುದೇ ನನಗೊಂದು ಹೆಮ್ಮೆ. ಇದರ ಹೊರತು ನನಗೇನೂ ಬೇಕಿಲ್ಲ" ಎಂದು ಸ್ಪಷ್ಟವಾಗಿ, ನೇರವಾಗಿ ಘೋಷಿಸಿ ಹೇಳಿ ಬಿಟ್ಟ. ಲಾಡ್ಲಿಗೆ ಆಶ್ಚರ್ಯವಾಯಿತು. ತಾಯಿಯ ಸ್ಥಾನದಲ್ಲಿರುವ ಇವರು ಇಂತಹ ವಿದ್ರೋಹದ ಉಪದೇಶವನ್ನು ನೀಡುತ್ತಾರೆಯೇ? ಹಿಂದೂಸ್ತಾನದಲ್ಲಿ, ಚಲಾವಣೆಯಲ್ಲಿ ಇರುವ ನಾಣ್ಯಗಳಲ್ಲಿ ಹೆಸರನ್ನು ಕೆತ್ತಿಸಿಕೊಂಡ ಬಾದಶಾಹ ಬೇಗಂ, ಹೀಗಿರಲು ಸಾಧ್ಯವೇ? – ಎಂದೆಲ್ಲ ಯೋಚಿಸಿದಳು.

ನೂರ್ ಜಹಾನ್, ಶಹರಿಯಾರನ ಮನಸ್ಸನ್ನು ಒಲಿಸಲು ಹಲವು ರೀತಿಯಲ್ಲಿ ತಿಳಿಸಿ

ಹೇಳಿದಳು. ಅವನು ಈಗಲೇ ಪ್ರಯತ್ನಿಸದಿದ್ದಲ್ಲಿ ಎಂದಿಗೂ ಅವಕಾಶ ಸಿಗುವುದಿಲ್ಲ. ಖುರ್ರಂ ತಖ್ತ್ ಅಲಂಕರಿಸಿಯೇ ಅಲಂಕರಿಸುತ್ತಾನೆ. ತಂದೆ, ಮಗ... ತಂದೆ, ಮಗ–ಪರಂಪರೆ ಹೀಗೇ ಮುಂದುವರೆಯುತ್ತದೆ. ಶಹರಿಯಾರನ ಮೂಲಕವಾದರೂ ತಾನು ಸಾಮ್ರಾಜ್ಯದ ಸೂತ್ರಗಳನ್ನು ಹಿಡಿದು ಮುಂದುವರೆಸಬಹುದೆಂಬ ಕನಸಿನ ಗುಳ್ಳೆ ಒಡೆದು, ಸಿಡಿದುಹೋಯಿತು.

ತುಂಬಾ ಚಿಂತಿತಳಾದಳು. ಜಹಾಂಗೀರ್, ಬರಬರುತ್ತಾ, ತನ್ನ ಐಷಾರಾಮಿ ಮನಃಸ್ಥಿತಿಯಿಂದ ಮತ್ತು ನೂರ್ ಜಹಾನ್‌ಳ ಆಡಳಿತ ಸಾಮರ್ಥ್ಯದ ಮೇಲಿನ ಭರವಸೆಯಿಂದ, ಸಾಮ್ರಾಜ್ಯದ ಆಳ್ವಿಕೆಯ ಅಧಿಕಾರವನ್ನು ಹೆಚ್ಚು ಕಡಿಮೆ ಅವಳಿಗೆ ಬಿಟ್ಟುಬಿಟ್ಟಿದ್ದ. ಜಹಾಂಗೀರನ ಸಕ್ರಿಯ ಆಡಳಿತಾವಧಿಯಲ್ಲಿಯೂ ನೂರ್ ಜಹಾನ್ ಅವನ ಪರವಾಗಿ ಸಾಮ್ರಾಜ್ಯದ ಭದ್ರತೆ, ಸಮಗ್ರತೆ, ಐಕ್ಯತೆಗಳನ್ನು ಸಾಧಿಸಲು ಸಾಕಷ್ಟು ಶ್ರಮಿಸಿದಳು. ಜಹಾಂಗೀರನ ಆರೋಗ್ಯ ದಿನೇದಿನೇ ಕೆಡಲು ಶುರುವಾದಾಗಿನಿಂದ, ಸಂಪೂರ್ಣ ಜವಾಬ್ದಾರಿಯೊಂದಿಗೆ ಆಡಳಿತ ವಹಿಸಿಕೊಂಡು, ಪ್ರತಿಯೊಂದು ರಾಜಕೀಯ ಸಮಸ್ಯೆಯನ್ನೂ ಅದ್ಭುತವಾದ ರೀತಿಯಲ್ಲಿ ಪರಿಹರಿಸಿ, ಸುಭದ್ರತೆ ಮತ್ತು ಅಭಿವೃದ್ಧಿಯನ್ನು ಸಾಧಿಸಿದಳು. ಬರಬರುತ್ತಾ ಝರೋಕಾ ದರ್ಶನದಲ್ಲಿಯೂ ತಾನೇ ಜಹಾಂಗೀರನ ಸ್ಥಾನದಲ್ಲಿ ಕುಳಿತು ಸಮಸ್ಯೆಗಳಿಗೆ ಪರಿಹಾರವನ್ನು ನಿರ್ಧರಿಸಿ ಘೋಷಿಸುತ್ತಿದ್ದಳು. ಸಕ್ಷಮವಾದ ಆಡಳಿತದ ಸಹಾಯಕ್ಕಾಗಿ ಸಮರ್ಥರೂ ಯೋಗ್ಯರೂ ಆದ ಅಧಿಕಾರಿಗಳನ್ನು ನೇಮಿಸಿದಳು. ಎಲ್ಲಕ್ಕಿಂತ ಹೆಚ್ಚಾಗಿ ತಂದೆ ಘಿಯಾಸ್ ಬೇಗ್‌ನ ಮಾರ್ಗದರ್ಶನದಲ್ಲಿ ಯಶಸ್ವಿಯಾಗಿ ರಾಜಕೀಯ ವ್ಯವಹಾರಗಳನ್ನು ನಡೆಸುತ್ತಿದ್ದಳು. ರಾಜ ಪರಿವಾರಕ್ಕೆ ಅವಳ ಪರಿವಾರದ ಎಲ್ಲ ಸದಸ್ಯರೂ ಉನ್ನತ ಜವಾಬ್ದಾರಿಗಳನ್ನು ವಹಿಸಿಕೊಂಡು ಬಹು ದೊಡ್ಡ ಸಹಾಯಕ ಪಡೆಯಾಗಿ ನಿಂತು ಹೆಗಲು ಕೊಟ್ಟಿದ್ದರು. ರಾಜ ಬೊಕ್ಕಸವನ್ನು ವಿವೇಕದಿಂದ ಕಾಪಾಡಿದರು. ಅಣ್ಣ ಅಸಫ್‌ಖಾನ್ ಅತ್ಯಂತ ಸಮರ್ಥ ಮತ್ತು ಯೋಗ್ಯ ಸೇನಾಧಿಕಾರಿಯಾಗಿದ್ದು, ತಾಯಿ ಅಸ್ಮತ್ ಅತ್ಯಂತ ಸುಸಂಸ್ಕೃತ ಪರ್ಷಿಯನ್ ಮಹಿಳೆಯಾಗಿ, ಸುಗಂಧ ದ್ರವ್ಯಗಳ ತಯಾರಿಕೆಯಲ್ಲಿ ನೈಪುಣ್ಯವನ್ನು ಪಡೆದಿದ್ದರು. ಅವುಗಳಲ್ಲಿ ಇತ್ತ–ಇ–ಜಹಾಂಗೀರಿ ಹೆಸರಿನ ಸುಗಂಧ ದ್ರವ್ಯಕ್ಕೆ ಪ್ರಪಂಚದ ನಾನಾ ಭಾಗಗಳಲ್ಲಿ ಬಹಳವಾದ ಬೇಡಿಕೆಯಿತ್ತು.

ಹೆಂಡತಿಯಲ್ಲಿ ಸಂಪೂರ್ಣ ಭರವಸೆಯಿರಿಸಿ, ಅತ್ಯಂತ ಮಹತ್ವದ ರಾಜಕೀಯ ಸಮಸ್ಯೆಗಳನ್ನೆಲ್ಲ ಒಂದಿಷ್ಟೂ ಗೋಜಲುಗಳಿಲ್ಲದೆ ಪರಿಹರಿಸುತ್ತಿದ್ದ ರೀತಿಯಿಂದ ಜಹಾಂಗೀರ್ ಬೆರಗಾಗಿದ್ದ. ಪ್ರಪಂಚದಲ್ಲಿ ಯಾವ ಹೆಣ್ಣಿಗೂ ಸಾಧ್ಯವಿಲ್ಲದ ಗೌರವ, ಪ್ರಶಂಸೆ, ಭರವಸೆಗಳನ್ನು ಜಹಾಂಗೀರ್ ನೂರ್ ಜಹಾನಳ ವಿಚಾರದಲ್ಲಿ ಹೊಂದಿದ್ದ. ಜನಾನಾದಲ್ಲಿದ್ದುಕೊಂಡೇ ಅತ್ಯಂತ ಪ್ರಮುಖವಾದ ಆದೇಶಗಳು, ಶಾಸನಗಳು ಇತ್ಯಾದಿಗಳನ್ನು ಹೊರಡಿಸಲಾಗುತ್ತಿತ್ತು.

ಜಹಾಂಗೀರ್ ನಿರಾಳವಾಗಿ ಕುಳಿತು, ತನ್ನ ಆತ್ಮಚರಿತ್ರೆ ತುಜುಕ್–ಇ–ಜಹಾಂಗೀರಿ ಬರೆಯುವುದರಲ್ಲಿ ಮಗ್ನನಾಗಿದ್ದ. ಅದೇ ಸಮಯಕ್ಕೆ ತನ್ನ ಪ್ರಾಣಪ್ರಿಯೆಯಾಗಿದ್ದ ನೂರ್ ಜಹಾನ್ ಅಲ್ಲಿಗೆ ಆಗಮಿಸಿದಳು. ಯಾವ ಸೂಚನೆಯೂ ಇಲ್ಲದೆ ದಿಢೀರನೆ ಕಣ್ಣ

ಮುಂದೆ ಪ್ರತ್ಯಕ್ಷಳಾದ ಅವಳನ್ನು ನೋಡಿ ಅಚ್ಚರಿಗೊಂಡ. ಅವಳು ಬಂದರೆ ಏನಾದರೂ ಸಮಸ್ಯೆ ಇರಲೇಬೇಕು. ತನಗೆ ತಿಳಿದಂತೆ ಎಲ್ಲವೂ ಸರಿಯಾಗಿದೆ. ಗಲಭೆ, ಗೊಂದಲಗಳಿಂದ ಹಿಂದೂಸ್ತಾನ್ ಮುಕ್ತವಾಗಿದೆ. ಹೀಗಿರುವಾಗ ಯಾಕೆ ಬಂದಳೆಂದು ಯೋಚಿಸುತ್ತಿರುವಷ್ಟರಲ್ಲಿಯೇ,

"ಜಹಾಂಪನಾಹ್ ಕೂಡಲೇ ಮಹಬ್ಬತ್ ಖಾನನ್ನು ಕರೆಸಿ" ಎಂದು ಆದೇಶಿಸುವ ದನಿಯಲ್ಲಿ ಹೇಳಿದಳು.

ಮಹಬ್ಬತ್ ಖಾನನ ಅವಶ್ಯಕತೆ ಯಾಕೆ ಬಂತು ಎನ್ನುವುದು ಜಹಾಂಗೀರನಿಗೆ ಹೊಳೆಯಲಿಲ್ಲ. ಪರವೇಜ್ ದಕ್ಷಿಣ ಪ್ರದೇಶದ ಸುಬೇದಾರನಾಗಿದ್ದಾನೆ. ಖುರ್ರಂ..........? ನೆನಪಾಗುತ್ತಿದ್ದಂತೆ ಮನಸ್ಸಿಗೆ ನೋವಾಯಿತು. ನಾಲ್ಕು ಮಕ್ಕಳಲ್ಲಿ ತನ್ನ ಭರವಸೆಯಿದ್ದದ್ದು ಖುರ್ರಂನಲ್ಲಿ. ಆದರೆ ಈಗ ನೋಡಿದರೆ ತಂದೆಯ ವಿರುದ್ಧವೇ ಬಂಡೆದ್ದಿದ್ದಾನೆ. ನೂರ್ ಜಹಾನಳೂ ಕೂಡಾ ಅವನ ಗೆಲುವಿನಲ್ಲಿ ತನ್ನ ಸಂತೋಷ ಕಾಣುತ್ತಿದ್ದಳು. ಅವಳಿಗೂ ಸಾಕಷ್ಟು ಆಘಾತವಾಗಿದೆ. ಇತ್ತೀಚೆಗೆ ಅಣ್ಣ ಅಸಫ್‌ಖಾನನೂ ಬದಲಾಗಿರುವುದನ್ನು ಗಮನಿಸಿ ಬೇಸರಪಟ್ಟುಕೊಂಡಿದ್ದಾಳೆ. ನನ್ನ ಸ್ಥಿತಿಯೂ ಸರಿಯಾಗಿಲ್ಲ. ಪಾಪ ಅವಳು ಇಂತಹ ಪರಿಸ್ಥಿತಿಯಲ್ಲಿ ಮಾನಸಿಕ, ದೈಹಿಕ ಒತ್ತಡಗಳನ್ನು ಹೇಗೆ ತಾನೇ ಸಹಿಸಿಕೊಂಡಾಳು ಎಂದು ಚಿಂತಿಸಿದ.

ಇದೇ ಸಮಯದಲ್ಲಿ ಪಾದಶಾಹ್ ಬೇಗಂ ಆಗಿದ್ದ ರುಖೈಯ್ಯಾ ಅವರ ನೌಕೆಗಳೊಂದಿಗೆ ಬೇರೆ ನೂರಿಪ್ಪತ್ತು ಹಿಂದೂಸ್ತಾನದ ನೌಕೆಗಳನ್ನು ಪೋರ್ಚುಗೀಸರು ಸುಟ್ಟುಹಾಕಿದ್ದಾರೆ. ಆದರೆ ಅದೇ ಸಮಯದಲ್ಲಿ ನೂರ್ ಡಾಮನ್ ವೈಸರಾಯ್‌ಗೆ ಬುದ್ಧಿ ಕಲಿಸಿದ್ದಾಳೆ. ಈಗ ಮತ್ತೇನು ಸಮಸ್ಯೆಯೋ ಎಂದು ಚಿಂತಿತನಾದ.

ನೂರ್ ಜಹಾನ್, ಜಹಾಂಗೀರನ ಚಿಂತಾಜನಕ ಮುಖವನ್ನು ಗಮನಿಸಿದಳು. ಸಾಮಾನ್ಯವಾಗಿ ಸಮಸ್ಯೆಗಳ ಬಗ್ಗೆ ಜಹಾಂಗೀರನಿಗೆ ತಿಳಿಸದೆಯೇ, ಅವನ ಆರೋಗ್ಯದ ಮೇಲೆ ಒತ್ತಡ ಬೀಳುವುದನ್ನು ತಪ್ಪಿಸಲು, ತಾನೇ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿದ್ದಳು. ಅಂಥಾದ್ದರಲ್ಲೂ ಜಹಾಂಗೀರ್ ವಿಪರೀತ ಕುಡಿತ, ಅಫೀಮುಗಳ ಸೇವನೆಯಿಂದ ಮತ್ತಷ್ಟು ದುರ್ಬಲನಾಗುತ್ತಿದ್ದಾನೆ. ಆದರೆ ಇದೆಲ್ಲ ಅವಳು ಮನಸ್ಸಿನಲ್ಲಿ ಇರಿಸಿಕೊಂಡು ಚಿಂತಿತಳಾದಳೇ ಹೊರತು ತೋರಿಸಿಕೊಳ್ಳಲಿಲ್ಲ, ಎದೆಗೆಡಲಿಲ್ಲ.

"ಜಹಾಂಪನಾಹ್ ಇದಕ್ಕೆಲ್ಲ ನೀವು ಇಷ್ಟೊಂದು ಅಧೀರರಾಗಬೇಕಾದ ಅಗತ್ಯವಿಲ್ಲ. ರಾಜಕೀಯವೆಂದರೆ ಏಳುಬೀಳುಗಳು ಸಾಮಾನ್ಯವೆಂಬುದನ್ನು ನಾನು ಪ್ರತ್ಯೇಕವಾಗಿ ನಿಮಗೆ ಹೇಳಬೇಕಿಲ್ಲ. ಇಲ್ಲಿ ತನ್ನವರು, ಬೇರೆಯವರು ಎನ್ನುವ ವ್ಯತ್ಯಾಸವೇ ಇರುವುದಿಲ್ಲ. ಪ್ರತಿಯೊಬ್ಬರೂ ಅಧಿಕಾರಕ್ಕಾಗಿಯೇ ಹೊಡೆದಾಡುತ್ತಾರಲ್ಲವೇ? ಅದು ಸ್ವಾಭಾವಿಕ. ನೀವು ಯೋಚಿಸುವುದನ್ನು ಬಿಟ್ಟು, ನಿಮ್ಮ ಆರೋಗ್ಯವನ್ನು ಕಾಪಾಡಿಕೊಂಡು ಶಕ್ತಿ ಸಂಚಯ ಮಾಡಿಕೊಳ್ಳಿ. ನೀವಿದ್ದರೆ ನಾನು. ನಾವಿದ್ದರೆ ಹಿಂದೂಸ್ತಾನ. ಅದಕ್ಕಾಗಿಯಾದರೂ ನಾವು ನಮ್ಮನ್ನು ದುರ್ಬಲಗೊಳಿಸಿಕೊಳ್ಳಬಾರದು. ಆಗ್ರಾದ ಈ ಕೋಟೆಯಲ್ಲಿ ಒಂಟಿಯಾಗಿರುವುದನ್ನು ನೋಡಿದರೆ ಕರುಳು ಹಿಂಡಿದಂತಾಗುತ್ತದೆ. ನಾನೂ ನಿಮ್ಮ ಜೊತೆ ಇರುತ್ತೇನೆ. ಆಗ ನಿಮಗೆ ಬಂದಿಯಾಗಿದ್ದೇನೆ ಎನಿಸುವುದಿಲ್ಲ.

ನೀವಿಲ್ಲದಿದ್ದರೆ, ನಾನು ಎಲ್ಲಿಯೇ ಇರಲಿ, ನಿಮ್ಮ ಹಾಗೆ ಬಂದಿಯೇ" ...ಎಂದು ಒಂದೆರಡು ನಿಮಿಷ ಬಿಟ್ಟು,

"ಜಹಾಂಪನಾಹ್ ದೇಶದ್ರೋಹಿ ಖುರ್ರಂನ ವಿಚಾರ ಏನು ಮಾಡಿದಿರಿ?"

"ಏನೂ ಮಾಡಿಲ್ಲ. ಅವನೇನೋ ಕ್ಷಮೆ ಕೇಳುತ್ತಿದ್ದಾನೆ."

"ಓಹ್ ಹಾಗೋ! ಹಾಗಾದರೆ ಅವನನ್ನು ಕ್ಷಮಿಸಿಬಿಡಿ" ಮಾತಿನಲ್ಲಿ ವ್ಯಂಗ್ಯವಿತ್ತು.

ಜಹಾಂಗೀರ್ ಮಾತು ಮುಂದುವರೆಸಿದ.

"ಅವನಿಗೆ ತುಂಬಾ ಪಶ್ಚಾತ್ತಾಪವಾಗಿದೆ. ನಿನ್ನಿಂದಲೂ ಕ್ಷಮೆ ಬಯಸುತ್ತಿದ್ದಾನೆ."

"ಹಾಗಾದರೆ ಈ ವಿಷಯದಲ್ಲಿ ನಿಮ್ಮ ನಿಲುವೇನು?"

"ನೋಡು ನೂರ್ ಬೇಗಂ, ಅವನು ಮೊಘಲ ವಂಶದಲ್ಲಿಯೇ ಅತ್ಯಂತ ಪರಾಕ್ರಮಿ ಸೇನಾನಿ. ಚಿತ್ತೌರ್ ಕೋಟೆ ಗೆದ್ದದ್ದೇ ಅಲ್ಲದೇ ಅಂಬರ್‌ನಂತಹ ಮಹಾಯೋಧನನ್ನೇ ಮಣಿಸಿದ್ದಾನೆ. ರಾಶಿ ರಾಶಿ ಸಂಪತ್ತನ್ನು ತಂದು ಸುರಿದಿದ್ದಾನೆ. ನಮ್ಮ ತಿಜೋರಿಗಳನ್ನು ಸಂಪನ್ನಗೊಳಿಸಿದ್ದಾನೆ."

"ಇರಬಹುದು. ಅದೆಲ್ಲವನ್ನು ಮಾಡಿದ್ದಕ್ಕೆ ಅವನ ಬಗ್ಗೆ ಅಭಿಮಾನವಿದೆ; ಮೆಚ್ಚಿಗೆಯಿದೆ. ಆದರೆ ಈಗಿನ ಅವನ ಧೋರಣೆ ಏನಿದೆ? ಗೊತ್ತಿದೆಯಲ್ಲ ನೀವು ಅವನ ತಂದೆ, ಕ್ಷಮಿಸುತ್ತೀರಿ. ಖುಸ್ರೋನನ್ನು ಕ್ಷಮಿಸಿದ ಹಾಗೆ! ಅವನೊಂದು ವೇಳೆ ಮಾಲವಾ, ಗುರ್ಜರದ ಸೇನಾ ತುಕಡಿಗಳನ್ನು ಕರೆಸಿಕೊಂಡು ದಂಡೆತ್ತಿ ಬಂದಿದ್ದರೆ, ನಮ್ಮ ಗತಿ ಏನಾಗುತ್ತಿತ್ತು ಯೋಚಿಸಿದ್ದೀರಾ? ನೀವು ಬೇಕಾದರೆ ಕ್ಷಮಿಸಿ. ಆದರೆ ರಾಜದ್ರೋಹ ಮಾಡಿದವನೊಬ್ಬನನ್ನು, ಅವನು ಮಗನೇ ಆಗಿರಬಹುದು, ಕ್ಷಮಿಸುವುದಂತೂ ನನ್ನಿಂದ ಆಗುವುದಿಲ್ಲ. ನೀಯತ್ತಿನ ಮನುಷ್ಯರನ್ನು ಒಮ್ಮೆಯಾದರೆ ಕ್ಷಮಿಸಬಹುದು; ಆದರೆ ನೀಯತ್ತಿಲ್ಲದವರನ್ನು ಕ್ಷಮಿಸುವುದು ಮೂರ್ಖತನವಾಗುವುದಲ್ಲದೆ, ಬೇರೇನೂ ಪ್ರಯೋಜನವಾಗಲಾರದು" ಎಂದು ಹೇಳಿ, ಖುರ್ರಂನ ಒಂದೊಂದು ಕೆಲಸವನ್ನೂ ಅವನ ಮುಂದೆ ವಿವರಿಸಿ ಬಿಚ್ಚಿಟ್ಟಳು.

ಖುರ್ರಂ ಒಬ್ಬನೇ ಮಗನಲ್ಲ. ಅವನ ಮೇಲೆ ಇರಿಸಿರುವ ಅಭಿಮಾನ, ಪ್ರೀತಿಗಳು ಉಳಿದಿಬ್ಬರ ಮೇಲೆ ಯಾಕಿಲ್ಲ? ಅವರ ಏಳಿಗೆ ಇವರಿಗೆ ಬೇಕಿಲ್ಲವೇ? ಎಂದು ಯೋಚಿಸಿದಳು. ಈಗಂತೂ ಅಣ್ಣನೂ ಅಳಿಯನ ಪರವಾಗಿದ್ದಾನೆ. ಅವನೂ ಈಗ ಶತ್ರುವೇ! – ಇದೆಲ್ಲವೂ ಜಹಾಂಗೀರನ ಮುಂದೆ ತೆರೆದುಕೊಂಡಾಗ, ಜಹಾಂಗೀರನಿಗೆ ಅವರ ಸಂಬಂಧಗಳು ಅರ್ಥವಾಗತೊಡಗಿದವು. ಅಣ್ಣ–ತಂಗಿ ಇಬ್ಬರೂ ಅವರವರ ಸ್ವಾರ್ಥದ ಉದ್ದೇಶಗಳಿಗೇ ಅಂಟಿಕೊಂಡಿದ್ದಾರೆನ್ನುವುದು ಸ್ಪಷ್ಟವಾಯಿತು. ಆದರೆ ಯಾವ ರೀತಿಯಿಂದ ನೋಡಿದರೂ ಅದೂ ಹಿಂದೂಸ್ತಾನದ ಹಿತರಕ್ಷಣೆಯ ದೃಷ್ಟಿಯಿಂದ ಖುರ್ರಂ ಒಬ್ಬನೇ ಉತ್ತರಾಧಿಕಾರಿಯಾಗಲು ಯೋಗ್ಯನೆನ್ನುವುದು ನಿರ್ವಿವಾದ.

ನೂರ್ ಜಹಾನ್‌ಳಿಗೆ ಇದು ಒಪ್ಪಿತವಾಗಲಿಲ್ಲ. ಅವನೇ ಏನಾದರೂ ಸಿಂಹಾಸನ ಹಿಡಿದರೆ, ತನ್ನ ಮಹತ್ವಾಕಾಂಕ್ಷೆ ಮಣ್ಣುಪಾಲಾದಂತೆಯೇ ಎಂದು ಭಾವಿಸಿದಳು. ಒಳಗೊಳಗೇ ಕುದಿಯತೊಡಗಿದಳು. ಖುರ್ರಂನ ಬಗ್ಗೆ ಅಸಮಾಧಾನ, ಬೇಸರ, ತಿರಸ್ಕಾರಗಳು ಅವಳೆದೆಯಲ್ಲಿ ಮನೆಮಾಡಿದವು. ಆದರೆ ಇಷ್ಟೆಲ್ಲದರ ನಡುವೆ ಗಂಡ ಜಹಾಂಗೀರನನ್ನು

ಕಣ್ಣರೆಪ್ಪೆಗಳಲ್ಲಿಟ್ಟುಕೊಂಡು ಕಾಪಾಡುತ್ತಿದ್ದಳು. ಪತಿನಿಷ್ಠೆ ಪತಿಮೋಹಗಳು ರಾಜಕೀಯದ ನಡುವೆಯೂ ಸುಭದ್ರವಾಗಿದ್ದವು.

ಖುರ್ರಂ ಕೂಡಾ ತನ್ನಂತೆಯೇ ಮಹತ್ವಾಕಾಂಕ್ಷಿ. ತನಗೆ ಪ್ರತಿಸ್ಪರ್ಧಿಗಳು ಇರಬಾರದೆಂದೇ ಖುಸ್ರೋನನ್ನು ಮುಗಿಸಿ ಬಿಟ್ಟನಲ್ಲ! ಎಂದು ತನ್ನೊಳಗೇ ಹೇಳಿಕೊಂಡಳು. ಮತ್ತೊಮ್ಮೆ ಶಹರಿಯಾರನ ಮನಸ್ಸನ್ನು ಬದಲಿಸಲು ಪ್ರಯತ್ನಿಸಿದಳು. ಈ ಬಾರಿ ಅವನಂತೂ ನಿಷ್ಠುರವಾಗಿ, ತಮ್ಮನ್ನು ತಮ್ಮ ಪಾಡಿಗೆ ಬಿಡುವಂತೆ ಬೇಡಿಕೊಂಡು, ಖುದಾ ಹಾಫಿಜ್ ಹೇಳಿ, ಮುಖದ ಮೇಲೆ ಹೊಡೆದಂತೆ ಭರ್ರನೆ ಹೊರಟೇ ಬಿಟ್ಟ. ನೂರ್ ಜಹಾನ್ ಬೆರಗಾಗಿ ಕಣ್ಣರಳಿಸಿ ನೋಡುತ್ತಾ ನಿಂತೇಬಿಟ್ಟಳು.

ಜಹಾಂಗೀರ್‌ನ ಸ್ಥಿತಿ ಶೋಚನೀಯವಾಗಿತ್ತು. ದೇಹ ಅತಿಯಾಗಿ ಬಳಲಿಹೋಗಿತ್ತು. ತಲೆನೋವು, ಜ್ವರ ವಿಪರೀತವಾಗಿ, ಸಹಿಸಲಾಗದೆ ಹುಚ್ಚನಂತಾಗಿ ಬಿಟ್ಟಿದ್ದ. ಹಾಸಿಗೆ ಬಿಟ್ಟು ಏಳುವಷ್ಟು ಚೈತನ್ಯವೂ ಇರಲಿಲ್ಲ. ದೇಹ ಕಂಪಿಸತೊಡಗಿತು. ತೀರಾ ಒದ್ದಾಡುತ್ತಿದ್ದ. ಸೇವಕರು ಹತ್ತಿರ ಹೋದರೆ ಸಿಡಿಮಿಡಿಗೊಳ್ಳುತ್ತಿದ್ದ. ಅವನ ಚಡಪಡಿಕೆ, ಒದ್ದಾಟಗಳು ನಿಲ್ಲುವ ಸೂಚನೆಯೇ ಕಾಣಲಿಲ್ಲ. ಸೇವಕರು ಒಂದಿಷ್ಟು ಅಫೀಮು ಮತ್ತು ಸಕ್ಕರೆ ನೀಡಿದರು. ಸ್ವಲ್ಪ ಶಾಂತನಾದ.

ಸೇವಕರಿಗೆ ಏನು ಮಾಡಬೇಕೋ ಹೇಳುವವರಿರಲಿಲ್ಲ. ನೂರ್ ಜಹಾನ್ ಝುರೋಕ ಬಾಲ್ಕನಿಗೆ ಹೋಗಿದ್ದವಳು ಅದೇ ಸಮಯಕ್ಕೆ ಅಲ್ಲಿಗೆ ಬಂದಳು. ಜಹಾಂಗೀರನ ಸ್ಥಿತಿ ನೋಡಿ ಗಾಬರಿಯಾದಳು. ರಾತ್ರಿಯಲ್ಲಿಯೂ ಏನೇನೋ ಬಡಬಡಿಸುತ್ತಿದ್ದ. ಈಗ ನೋಡಿದರೆ ಕಣ್ಣು ಬಿಡಲಾಗುತ್ತಿಲ್ಲ. ಪ್ರಜ್ಞಾಹೀನ ಸ್ಥಿತಿಯಲ್ಲಿ ಬಿದ್ದುಕೊಂಡಿದ್ದಾನೆ. ಒಂದೆರಡು ಬಾರಿ ಬಾದಶಾಹ್ ಹುಜೂರ್ ಎಂದು ಅವನ ಕಿವಿಯ ಬಳಿ ಕರೆದರೂ ಪ್ರತಿಕ್ರಿಯೆಯಿಲ್ಲ. ಹತ್ತಿರಕ್ಕೆ ಹೋಗಿ ಉಸಿರಾಟವನ್ನು ಗಮನಿಸಿದಳು. ಅಫೀಮಿನ ವಾಸನೆ ಬಂತು. ಇಂಥ ಸ್ಥಿತಿಯಲ್ಲಿಯೂ ಅಫೀಮನ್ನು ತಿನ್ನಿಸಿದ್ದಕ್ಕೆ ಸೇವಕರ ಮೇಲೆ ರೇಗಾಡಿದಳು. ಮೈಯೆಲ್ಲಾ ಮುಟ್ಟಿನೋಡಿದಳು. ಒಂದೆರಡು ಕ್ಷಣಗಳ ಹಿಂದೆ ಬೆಂಕಿಯಂತಿದ್ದ ದೇಹ ಈಗ ಮಂಜಿನಂತೆ ಕೊರೆಯುತ್ತಿತ್ತು. ಗಾಬರಿಯಾದಳು. ಅಲ್ಲಾಹ್ ಇದೇನು ಮಾಡುತ್ತಿರುವಿ. ನನ್ನವರಿಗೆ ಏನೂ ಆಗದಿರಲಿ. ಅವರನ್ನು ಉಳಿಸಿಕೊಡು ಎಂದು ಆರ್ತವಾಗಿ ಪ್ರಾರ್ಥಿಸಿದಳು. ಅಷ್ಟು ಹೊತ್ತಿಗೆ ಆಗಲೇ ಜಹಾಂಗೀರನ ಗಂಭೀರ ಪರಿಸ್ಥಿತಿಯ ಸುದ್ದಿ ಗಾಳಿಯಲ್ಲಿ ತೇಲಿ ಎಲ್ಲರ ಕಿವಿ ಮುಟ್ಟಿತ್ತು.

ಹಕೀಮರಿಗೂ ಹೇಳಿ ಕಳಿಸಲಾಯಿತು. ಬಂದವರು ಪರೀಕ್ಷಿಸಿದರಾದರೂ ಕಾಯಿಲೆ ಏನೆಂದು ತಿಳಿಯಲು ಸಾಧ್ಯವಾಗಲಿಲ್ಲ. ಒಂದು ವೇಳೆ ಹೇಳಿದರೂ, ಅದು ಸರಿಯಲ್ಲವೆಂದು ತಿಳಿದ ಪಕ್ಷದಲ್ಲಿ ತಮ್ಮ ತಲೆಗಳೇ ಹಾರಿ ಹೋಗುತ್ತವೆ ಎಂದು ಮೌನ ಧರಿಸಿದರು. ಏನೂ ಮಾಡಲಾಗದ ಅಸಹಾಯಕತೆಯಲ್ಲಿದ್ದ ಹಕೀಮರ ಮೇಲೆ ಎಗರಿಬಿದ್ದು, ಹೊರದಬ್ಬಿದಳು.

ಎಂದೋ ಒಮ್ಮೊಮ್ಮೆ ಎಚ್ಚರಾಗುತ್ತಾ, ಮತ್ತೆ ಮೂರ್ಛೆ ಹೋಗುತ್ತಾ ಬಿದ್ದಿದ್ದ ಜಹಾಂಗೀರನನ್ನು ಕಾಪಾಡಲು, ಅಲ್ಲಾಹ್‌ನಿಗೆ ಹೊರತಾಗಿ ಬೇರಾರಿಗೂ ಸಾಧ್ಯವಿಲ್ಲವೆಂದು ಅವನನ್ನೇ ನಂಬಿ ಪ್ರಾರ್ಥಿಸತೊಡಗಿದಳು.

ಪವಾಡದಂತೆ, ಜಹಾಂಗೀರ್ ಎಚ್ಚರಗೊಂಡು ಸುತ್ತಲೂ ನೋಡಿದ. "ಓಹ್ ನೂರ್ ಬೇಗಂ, ಯಾವಾಗ ಬಂದಿರಿ? ನನಗೆ ತಿಳಿಯಲೇ ಇಲ್ಲ" ಎಂದು ಹೇಳುತ್ತಲೇ ಕಣ್ಣು ಮುಚ್ಚಿದ.

ಖುರ್ರಂಗೂ ತಂದೆಯ ಸ್ಥಿತಿಯ ಬಗ್ಗೆ ಸುದ್ದಿ ಮುಟ್ಟಿತು. ಕೂಡಲೇ, ತಂದೆಯನ್ನು ನೋಡಲು ಹೊರಟು ಬಂದಿದ್ದ. ಆದರೆ ನೂರ್ ಜಹಾನ್, ತಂದೆಮಕ್ಕಳ ಭೇಟಿಗೆ ಅವಕಾಶ ಕೊಡಲಿಲ್ಲ. ಅಲ್ಲದೆ ಜಹಾಂಗೀರ್ ಇನ್ನೂ ಅರೆ ಪ್ರಜ್ಞಾವಸ್ಥೆಯಲ್ಲಿದ್ದ. ಖುರ್ರಂ ಒಂದು ವೇಳೆ ಬಂದು ನೋಡಿದರೆ, ಉದ್ವಿಗ್ನತೆಗೆ ಒಳಗಾಗಿ, ಇನ್ನೇನಾದರೂ ಆದೀತೆನ್ನುವ ಭಯ ಒಂದು ಕಡೆಯಿದ್ದರೆ, ಅವನ ಮುಖವನ್ನೂ ನೋಡಬಾರದೆನ್ನುವ ದ್ವೇಷ ಮತ್ತೊಂದು ಕಡೆಗಿತ್ತು.

ನೂರ್ ಜಹಾನ್ ತನ್ನ ದುಃಖದಲ್ಲಿ ತಾನಿದ್ದರೆ, ಹೊರಗಿನ ಜನ ಮತ್ತು ಜನಾನಾದ ಮಂದಿ ಏನೇನೋ ಕಲ್ಪಿಸಿಕೊಳ್ಳುತ್ತಿದ್ದರು. ನೂರ್ ಜಹಾನಳ ಏಳಿಗೆಯನ್ನು ಸಹಿಸದ ಮಂದಿ, ಸ್ವತಃ ನೂರ್ ಜಹಾನಳೇ ಗಂಡನಿಗೆ ವಿಷಹಾಕಿರಬೇಕು ಎಂದು ಪುಕಾರು ಹುಟ್ಟಿಸುತ್ತಿದ್ದರು. ಆದರೆ ಅಂಥವರಲ್ಲಿ ಕೆಲವರು ಒಳ್ಳೆಯವರೂ ಇದ್ದರು. ಬಾದಶಾಹರಿಗೆ ಏನೂ ಆಗುವುದಿಲ್ಲ. ಪಾದಶಾಹ್‌ಬೇಗಂ ತುಂಬ ದೈವಭಕ್ತಿಯುಳ್ಳವರು. ಅಲ್ಲಾಹ್ ಅವರ ಮೊರೆ ಕೇಳಿ ಖಂಡಿತವಾಗಿಯೂ ರಕ್ಷಿಸುತ್ತಾನೆ ಎಂದು ಭಾವಿಸುತ್ತಿದ್ದರು.

ಖುರ್ರಂಗೆ ತಂದೆಯನ್ನು ನೋಡಲು ಅವಕಾಶ ಸಿಕ್ಕಿರಲಿಲ್ಲವಾದರೂ, ಪರಿಸ್ಥಿತಿ ಗಂಭೀರವಾಗಿರಬೇಕೆಂದು ಗ್ರಹಿಸಿದ. ಮೊದಲಿನಿಂದಲೂ ದೂರದೃಷ್ಟಿ ಉಳ್ಳವನಾಗಿದ್ದರಿಂದ, ಭವಿಷ್ಯದ ಬಗ್ಗೆ ಯೋಚಿಸಿ, ತನ್ನ ಆಪ್ತರನ್ನು ಪ್ರಮುಖ ಸಭಾಸದರನ್ನು ಅಜಮೇರದ ತನ್ನ ಖಾಸಗಿ ಕೋಣೆಗೆ ಬರಮಾಡಿಕೊಂಡು ತಂದೆಯ ಸ್ಥಿತಿಯನ್ನು ವಿವರಿಸಿದ. ಸದ್ಯಕ್ಕೆ ಅವರಿನ್ನೂ ಬದುಕಿದ್ದಾರೆ. ಅಂತಹ ತುರ್ತೇನೂ ಇಲ್ಲವಾದರೂ, ಒಂದು ವೇಳೆ ಏನಾದರೂ ಅನಾಹುತ ಸಂಭವಿಸಿದಲ್ಲಿ, ಅವರೆಲ್ಲರೂ ತನ್ನ ಪರವಾಗಿ ಇರಬೇಕೆಂದು ಬೇಡಿಕೊಂಡ.

ಇಪ್ಪತ್ತು ದಿನಗಳವರೆಗೂ ಜಹಾಂಗೀರನ ಜ್ವರ ಕಡಿಮೆಯಾಗಲಿಲ್ಲ. ನೂರ್ ಜಹಾನ್‌ಗೆ ದಿಕ್ಕುತೋಚಲಿಲ್ಲ. ಮತ್ತೆ ಅವನಲ್ಲಿ ಜೀವ ಸಂಚಾರವಾಗಬೇಕಾದರೆ ಅವನು ಅತಿಯಾಗಿ ಪ್ರೀತಿಸುವ ಮದಿರೆ ಮತ್ತು ಅಫೀಮನ್ನು ಕೊಟ್ಟು ನೋಡಿದರೆ ಹೇಗೆ? ಅದೃಷ್ಟದಿಂದ ಅವು ಸಂಜೀವಿನಿಯಾಗಿ ಕೆಲಸಮಾಡಿದರೂ ಮಾಡಬಹುದು ಎಂದುಕೊಂಡಳು.

ಮಾರನೆಯ ದಿನ ಬೆಳಗಾಗಿದ್ದು, ನೂರ್ ಜಹಾನ್ ಮಂಪರಿನಲ್ಲಿದ್ದವಳು ಥಟ್ಟನೆ ಎಚ್ಚರಗೊಂಡು ಜಹಾಂಗೀರನ ಸ್ಥಿತಿಯನ್ನು ಪರೀಕ್ಷಿಸಿದಳು. ಜ್ವರದ ತಾಪ ಕಡಿಮೆಯಾಗಿತ್ತು. ಆದರೆ ಮೈಮೇಲೆ ಅಲ್ಲಲ್ಲಿ ಸಣ್ಣ ಸಣ್ಣ ಕೆಂಪು ಗುಳ್ಳೆಗಳು ಕಾಣಿಸಿದವು. ಅವನ್ನು ಕಂಡದ್ದೇ ಹೌಹಾರಿದಳು. ಅದೇನಾದರೂ ಸಿಡುಬಾಗಿದ್ದಲ್ಲಿ?... ಎಂದು ಯೋಚಿಸಿ ನಡುಗಿದಳು ಮತ್ತೆ ಹಕೀಮರಿಗೆ ಹೇಳಿ ಕಳಿಸಿದಳು. ಹಕೀಮರು ಕೂಡಲೇ ಬಂದು ಜಹಾಂಗೀರನನ್ನು ಗಂಭೀರವಾಗಿ ಪರೀಕ್ಷಿಸಿದರು. ಅವರಿಗೆ ಕಾಯಿಲೆ ಏನೆಂದು ತೀರ್ಮಾನಕ್ಕೆ ಬರಲು ಸಾಧ್ಯವಾಗಲಿಲ್ಲ. ಯಾವ ಕಾಯಿಲೆ ಎಂದು ಖಚಿತವಾಗಿ

ಹೇಳಲು ಸಾಧ್ಯವಾಗಿರಲಿಲ್ಲ. ಏನಾದರೂ ಒಂದು ಹೆಸರು ಹೇಳಿ, ಅದು ಸುಳ್ಳೆಂದು ತಿಳಿದು ಬಂದರೆ ತಮ್ಮ ತಲೆಗಳು ಹಾರಿ ಹೋಗುತ್ತವೆಂದು ಸುಮ್ಮನೆ ಇದ್ದರು. ಕಾಯಿಲೆಯೇನೆಂದು ತಿಳಿಸಲೂ ಇಲ್ಲ; ಯಾವುದೇ ಪರಿಹಾರವನ್ನೂ ಹೇಳಲಿಲ್ಲ. ಕೈಕಟ್ಟಿಕೊಂಡು ವಿನಯದಿಂದ ನಿಂತು ಜಹಾಂಗೀರನ ಸ್ಥಿತಿಯನ್ನು ಗಮನಿಸುತ್ತಿದ್ದರು. ನೂರ್ ಜಹಾನಳಿಗೆ ಎಲ್ಲಿಲ್ಲದ ಸಿಟ್ಟುಬಂತು. ಒಮ್ಮೆಲೇ ಅವರ ಮೇಲೆ ಹಾರಿ ಬಿದ್ದಳು "ಎಂಥ ನಿಷ್ಪ್ರಯೋಜಕ ಹಕೀಮರು ನೀವು? ನಿಮ್ಮ ಬಾದಶಾಹ್ ಸಾಯುತ್ತಿದ್ದಾರೆ. ನಿಮಗೆ ಅವರನ್ನು ಕಾಪಾಡಬೇಕು. ಸರಿಯಾದ ಚಿಕಿತ್ಸೆ ಹೇಳಬೇಕು ಎನ್ನುವ ಪ್ರಜ್ಞೆಯೂ ಬೇಡವೇ? ದಂಡಪಿಂಡಗಳು! ಹೊರಡಿ ಇಲ್ಲಿಂದಾಚೆಗೆ. ನೀವು ನಿಂತಷ್ಟೂ ನನ್ನ ಕೋಪ ಹೆಚ್ಚುತ್ತೆ... ನನಗೆ ಗೊತ್ತು, ನನ್ನ ಗಂಡನನ್ನು ಹೇಗೆ ರಕ್ಷಿಸಿಕೊಳ್ಳಬೇಕೆಂದು" ಎಂದು ಹೇಳಿ ಕೂಡಲೇ ಜಹಾಂಗೀರನ ಪಕ್ಕದಲ್ಲಿ ಹೋಗಿ ಕುಳಿತಳು. ಪ್ರೀತಿಯಿಂದ, ತಲೆಯಿಂದ ಪಾದಗಳವರೆಗೆ, ಒಮ್ಮೆ ಮೃದುವಾಗಿ, ಯಾವುದೋ ಮಂತ್ರ ಹಾಕುತ್ತಿರುವಂತೆ, ನೇವರಿಸಿದಳು. ಕಣ್ಣುಗಳಿಂದ ಕಂಬನಿ ತೊಟ್ಟಿಕ್ಕುತ್ತಿತ್ತು. 'ದೇವರೇ ನನ್ನ ಬಾದಶಾಹರನ್ನು ಉಳಿಸಿ ಕೊಡು, ಅವರಿಲ್ಲದೆ ನಾನಿಲ್ಲ. ನಾನಿದ್ದರೂ ನನಗೆ ರಕ್ಷಣೆ ಇಲ್ಲ. ನನ್ನ ಸುತ್ತಲೂ, ನನ್ನ ವಿನಾಶಕ್ಕಾಗಿ ಹದ್ದುಗಳಂತೆ ಕಾಯುತ್ತಿರುವ ಮಂದಿಯಿದ್ದಾರೆ' ಎಂದು ಕಣ್ಣು ಮುಚ್ಚಿ ಅಲ್ಲಾಹ್‌ನನ್ನು ಜಪಿಸತೊಡಗಿದಳು.

ಮರುದಿನ ಜಹಾಂಗೀರ್ ಪ್ರಶಾಂತ ಮುಖದೊಂದಿಗೆ ಕಾಣಿಸಿಕೊಂಡ. ನೂರ್ ಜಹಾನ್ ರಾತ್ರಿಯೆಲ್ಲಾ ಎಚ್ಚರವಿದ್ದು ಕ್ಷಣಕ್ಷಣವೂ ಅವನ ಪರಿಸ್ಥಿತಿ ಹೇಗಿದೆಯೆಂದು ಗಮನಿಸುತ್ತಿದ್ದಳು. ಆದ್ದರಿಂದ ಇನ್ನೂ ತೂಕಡಿಕೆ ಸ್ಥಿತಿಯಲ್ಲಿ ಇದ್ದಳು. ಆದರೆ ಜಹಾಂಗೀರ್ ಪೂರ್ತಿಯಾಗಿ ಎಚ್ಚರಗೊಂಡಿದ್ದ. ಹಾಸಿಗೆಯಿಂದ ಎದ್ದು, ನೂರ್ ಜಹಾನ್ ಭುಜಗಳ ಮೇಲೆ ಕೈಯಿರಿಸಿ, 'ನೂರ್ ಮೇರಿ ಜಾನ್ ಕಣ್ಣುಬಿಡು, ನಾನು ನಾನು ಎದ್ದು ಬಿಟ್ಟಿದ್ದೇನೆ. ನನಗೇನೂ ಆಗಿಲ್ಲ' ಮಾತುಗಳು ಕನಸಿನಲ್ಲಿ ಕೇಳಿಬಂದಿದ್ದಿರಬೇಕೆಂದು, ಥಟ್ಟನೆ ಎಚ್ಚರಗೊಂಡು ನೋಡಿದಾಗ, ಅವಳ ಕಣ್ಣಿಗೆ ಬಿದ್ದದ್ದು ಜಹಾಂಗೀರನ ಗೆಲುವಿನ ಮುಖ! "ಜಹಾಂಪನಾಹ್, ನನ್ನ ಪ್ರೀತಿಯ ಜಹಾಂಪನಾಹ್, ಈಗ ಹೇಗಿದ್ದೀರಿ?" ಎಂದು ಕೇಳಿದಳು.

"ಗಾಬರಿಯಾಗಬೇಕಾದ್ದಿಲ್ಲ. ನೋಡು ಈಗ ನಾನು ಸ್ವಸ್ಥವಾಗಿದ್ದೀನಿ. ಜ್ವರ ತಲೆ ನೋವು ಯಾವುದೂ ಇಲ್ಲ. ಪ್ರಿಯ ಬೇಗಂ, ನನ್ನಿಂದ ನಿಮಗೆ ಬಹಳ ತೊಂದರೆಯಾಗಿರಬೇಕು."

"ಜಹಾಂಪನಾಹ್ ಆ ಮಾತುಗಳೆಲ್ಲ ಬೇಡ. ಗಂಡಹೆಂಡಿರ ಸಹಾಯ ಪರಸ್ಪರ ಅನಿವಾರ್ಯ. ಕೃತಜ್ಞತೆಗಳು, ಕ್ಷಮೆಗಳು ಕೂಡದು."

"ಬೇಗಂ ಬಹಳ ದಿನಗಳಿಂದ ಸಭೆಗೆ, ಝರೋಕಾಗೆ ಹೋಗಿಯೇ ಇಲ್ಲ. ನಾಳೆಯಿಂದ ನಮ್ಮ ಕಾರ್ಯಗಳಿಗೆ ಹೊರಡೋಣ. ಅಂದ ಹಾಗೆ ಖುರ್ರಂ ನಮ್ಮನ್ನು ನೋಡಲು ಬರಲಿಲ್ಲವೇನು?"

ಖುರ್ರಂ ಹೆಸರು ಕಿವಿಗೆ ಬೀಳುತ್ತಿದ್ದಂತೆ ನೂರ್ ಜಹಾನ್ ಅಸಮಾಧಾನಗೊಂಡಳು. ರಾಜದ್ರೋಹಿಯನ್ನು ಮತ್ತೆಮತ್ತೆ ನೆನಪಿಸಿಕೊಳ್ಳುವುದು ಅವಳಿಗೆ ಇಷ್ಟವಾಗಲಿಲ್ಲ.

ತಮ್ಮ ಶತ್ರುಗಳನ್ನು ಮಿತ್ರರಾಗಿ ತನ್ನೆಡೆಗೆ ಸೆಳೆದುಕೊಳ್ಳುತ್ತಿದ್ದಾನೆ. ಇತ್ತೀಚೆಗೆ ಪೋರ್ಚುಗೀಸರೊಂದಿಗೆ ಅವನು ಬಹಳವಾಗಿ ಬೆರೆಯುತ್ತಿದ್ದಾನೆ. ತಮ್ಮ ನೌಕೆಗಳೆಲ್ಲ ಸುಟ್ಟು ಭಸ್ಮವಾಗಿದ್ದರೂ ಅವನ ಒಂದು ನೌಕೆಗೂ ಹಾನಿಯಾಗಿಲ್ಲವೆಂದರೆ ಖುರ್ರಂನ ಪಿತೂರಿಯೂ ಇರಬಹುದಲ್ಲ. ಆದರೆ, ಜಹಾಂಗೀರ್ ಅದನ್ನೆಲ್ಲ ನಂಬುವುದಿಲ್ಲ ಎಂದು ಸುಮ್ಮನಾದಳು. ವಾಗ್ವಾದಕ್ಕೆ ಇಳಿದರೆ, ಗಂಡನ ಮನಸ್ಸಿನ ಮೇಲೆ ಒತ್ತಡ ಬಿದ್ದು, ಮತ್ತೇನಾದರೂ ಆದೀತು ಎಂದು ಹೆದರಿದಳು.

ನೂರ್ ಜಹಾನ್ ಸೇವಕರಿಗೆ ಜಹಾಂಗೀರನನ್ನು ನೋಡಿಕೊಳ್ಳಲು ಆದೇಶಿಸಿ ತನ್ನ ವಸತಿಗೆ ಹಿಂತಿರುಗಿದಳು.

ಜಹಾಂಗೀರ್ ಚೇತರಿಸಿಕೊಂಡು, ಮಾಮೂಲಿ ಸ್ಥಿತಿಗೆ ಬಂದಿದ್ದಾರೆ. ಎನ್ನುವ ಸುದ್ದಿ ಎಲ್ಲೆಡೆಯೂ ಹಬ್ಬಿ, ಅರಮನೆ ಮುಂದಿನ ಮೈದಾನದಲ್ಲಿ ದೊಡ್ಡ ಜನಸಾಗರವೇ ಸೇರಿ, 'ಜಹಾಂಪನಾಹ್ ಅಮರ್ ರಹೆ! ಅಲ್ಲಾಹ್ ಮೆಹರ್‌ಬಾನ್ ಉನ್‌ಪರ್ ರಹೆ!' ಎಂದು ಎತ್ತರದ ದನಿಯಲ್ಲಿ ಜಯಘೋಷ ಮಾಡಿದ್ದು, ಸಾಮ್ರಾಜ್ಯದ ಮೂಲೆ ಮೂಲೆಯಲ್ಲಿ ಅನುರಣಿಸಿತು. ಪೋರ್ಚುಗೀಸರ ಸಮಸ್ಯೆಯೆಡೆಗೆ ಗಮನ ಹರಿಸಬೇಕಾಯಿತು. ನೂರ್ ಜಹಾನ್‌ಗೆ ಗುಜರಾತಿನ ಸೂರತ್ ಜಾಗೀರಾಗಿ ಬಂದಿತ್ತು. ಅದು ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿನ ಬಂದರಾಗಿತ್ತು. ಪೋರ್ಚುಗೀಸರು, ಡಚ್ಚರು, ಬ್ರಿಟಿಷರು ಆ ಬಂದರನ್ನು ಸ್ವಾಧೀನಪಡಿಸಿಕೊಳ್ಳಲು ಪರಸ್ಪರ ಮೇಲಾಟವಾಡುತ್ತಿದ್ದರು. ವ್ಯಾಪಾರ ಒಪ್ಪಂದಗಳಿಗಾಗಿ ಹೆಣಗಾಡುತ್ತಿದ್ದರು. ಆ ಪ್ರದೇಶದಲ್ಲಿ ಕೋಟೆಗಳನ್ನು ಕಟ್ಟುವುದಕ್ಕಾಗಲಿ, ವ್ಯಾಪಾರ ವಹಿವಾಟು ನಡೆಸುವುದಕ್ಕಾಗಲಿ ಬ್ರಿಟಿಷರಿಗೆ ಅವಕಾಶ ದೊರೆತಿರಲಿಲ್ಲ. ಅದನ್ನು ಪಡೆಯುವುದಕ್ಕಾಗಿ ಪ್ರಯತ್ನಗಳನ್ನು ನಡೆಸುತ್ತಿದ್ದರಾದರೂ, ನೂರ್ ಜಹಾನ್ ಮತ್ತು ಖುರ್ರಂ ಅವಕಾಶವನ್ನು ನಿರಾಕರಿಸುತ್ತಿದ್ದರು. ವ್ಯಾಪಾರ ನಡೆಸಲು ಮಾತ್ರವೇ ಪರವಾನಗಿ ಕೊಡಬಹುದೇ ಹೊರತು ಕೋಟೆಗಳ ನಿರ್ಮಾಣದ ಅಗತ್ಯ ಏನಿದೆ ಎನ್ನುವುದು ಅವಳ ಪ್ರಶ್ನೆಯಾಗಿತ್ತು. ವ್ಯಾಪಾರ ಮಾಡಲು ಅಪ್ಪಣೆ ಬೇಕೇ ಹೊರತು, ಅವರಿಗೆ ಕೋಟೆಗಳ ಅಗತ್ಯ ಯಾಕೆ? ಎಂದು ಯೋಚಿಸಿ, ತೀರ್ಮಾನಗಳನ್ನು ತೆಗೆದು ಕೊಳ್ಳಬೇಕೆಂದುಕೊಂಡಳು.

ಜಹಾಂಗೀರನು ಪೋರ್ಚುಗೀಸರ ಬಗ್ಗೆ ಯಾವುದೇ ಅಭ್ಯಂತರ ಇರಿಸಿಕೊಳ್ಳದಿದ್ದರೂ ಸ್ವಲ್ಪ ಅಸಮಾಧಾನವಂತೂ ಇತ್ತು. ವ್ಯಾಪಾರ ನೌಕೆಗಳ ಮಾಲಿಕರು ಕಡಲ್ಗಳ್ಳರ ಬಗ್ಗೆ ಬೇಸತ್ತಿದ್ದರು. ಪೋರ್ಚುಗೀಸರು ಗುಲಾಮರನ್ನು ಕೊಂಡೊಯ್ಯಲು, ಸಾಮ್ರಾಜ್ಞಿಯ ನೌಕೆಗಳನ್ನು ಬಳಸಿಕೊಂಡು, ಅಮೂಲ್ಯವಾದ ರತ್ನಗಂಬಳಿಗಳು, ಒಣಹಣ್ಣುಗಳು ಮತ್ತು ಬೆಲೆಯುಳ್ಳ ವಸ್ತುಗಳನ್ನೆಲ್ಲಾ ನೌಕೆಗಳಲ್ಲಿ ತುಂಬಿರುತ್ತಿದ್ದರಾಗಿ, ಕಡಲ್ಗಳ್ಳರು ದೋಚುತ್ತಿದ್ದರು. ಇದನ್ನು ನಿಯಂತ್ರಿಸಲು ಪೋರ್ಚುಗೀಸರನ್ನು ಕೇಳಿಕೊಂಡಾಗಲೂ ಅವರಿಂದ ಯಾವುದೇ ರೀತಿಯ ಪ್ರತಿಕ್ರಿಯೆ ದೊರೆಯಲಿಲ್ಲ. ಮೊಘಲರಿಗೆ, ಈ ಕಡಲ್ಗಳ್ಳರನ್ನು ನಿಯಂತ್ರಿಸುವ ಸಾಮರ್ಥ್ಯವಿರಲಿಲ್ಲವಾಗಿ ಬ್ರಿಟಿಷರ ಕಡೆಗೆ ಹೊರಳಬೇಕಾಯಿತು. ಆದ್ದರಿಂದ ಸಭಾಸದರ ಅಭಿಪ್ರಾಯದ ಮೇರೆಗೆ ಬ್ರಿಟಿಷರಿಗೆ ಹೆಚ್ಚಿನ ಸೌಲಭ್ಯಗಳನ್ನು ಕಲ್ಪಿಸಿ, ಕಡಲ್ಗಳ್ಳರ ಸಮಸ್ಯೆಯ ನಿವಾರಣೆಯ ಜವಾಬ್ದಾರಿಯನ್ನೂ ಹೊರಿಸಿದರು.

ಸೂರತ್‌ನಲ್ಲಿದ್ದು ನಂತರ ಬೇಸರವಾಗಿ ಆಗ್ರಾ ಕಡೆಗೆ ಹೊರಟರು.

ಜಹಾಂಗೀರ್ ಮತ್ತು ನೂರ್ ಜಹಾನ್ ಮತ್ತೆ ಮಾಮೂಲಿನಂತೆ ಝುರೋಕಾ ಕರ್ತವ್ಯಕ್ಕೆ ಅಣಿಯಾದರು. ಇದನ್ನು ಬಹಳ ಶ್ರದ್ಧೆಯಿಂದ ಮಾಡುತ್ತಿದ್ದರು. ಅವರು ಎಲ್ಲಿಗೇ ಹೋಗಿ ಬೀಡು ಬಿಟ್ಟರೂ ನ್ಯಾಯದ ಗಂಟೆ ಜೊತೆಗೇ ಹೋಗುತ್ತಿತ್ತು.

ನೂರ್ ಜಹಾನ್‌ಳ ಸೌಂದರ್ಯ ಜಗತ್ಪ್ರಸಿದ್ಧವಾಗಿದ್ದು, ಒಮ್ಮೆಯಾದರೂ ಅವಳ ಸೌಂದರ್ಯದ ಝುಲಕು ಪಡೆಯುವ ಅವಕಾಶಕ್ಕಾಗಿ ಪ್ರಜೆಗಳು ಕಾಯುತ್ತಿದ್ದರು. ಒಮ್ಮೆ ಒಬ್ಬ ವ್ಯಕ್ತಿಗೆ ಅವಳ ಸೌಂದರ್ಯವನ್ನು ಹೇಗಾದರೂ ನೋಡಲೇಬೇಕೆನಿಸಿ ರಾತ್ರಿಯ ಹೊತ್ತಿನಲ್ಲಿ ಜನಾನಾದ ಭದ್ರ ಕಾವಲಿನ ನಡುವೆಯೂ ಬಹಳ ಹೊತ್ತು ಹೊಂಚಿ ಕಾದಿದ್ದು, ಭರ್ಚಿಗಳನ್ನು ಹಿಡಿದು ಕಾವಲಿದ್ದ ರಕ್ಷಕ ಭಟರ ಕಣ್ಣು ತಪ್ಪಿಸಿ ಜನಾನಾದ ಪ್ರವೇಶದ್ವಾರದವರೆಗೂ ಬಂದ. ಕಾವಲು ಭಟರ ಕಣ್ಣು ತಪ್ಪಿಸುತ್ತಲೇ, ರಾಣಿ ವಾಸಗಳನ್ನು ದಾಟುತ್ತಾ ಒಂದೊಂದಾಗಿ ಯಾರದಿರಬಹುದು ಎಂದು ಪರೀಕ್ಷಿಸುತ್ತಾ ಬಹಳ ಜಾಣ್ಮೆಯಿಂದ, ಎಚ್ಚರಿಕೆಯಿಂದ ಕಳ್ಳ ಹೆಜ್ಜೆಗಳಲ್ಲೇ ಸಾಗುತ್ತ ಅಂತಿಮವಾಗಿ ನೂರ್ ಜಹಾನ್ ಮಹಲಿದ್ದೆಡೆಗೆ ಬಂದ. ಸ್ತಂಭಗಳನ್ನು ಜಿಗಿಯುತ್ತಾ, ಸಾಗುತ್ತಿದ್ದಂತೆ, ಮುಖ್ಯ ದ್ವಾರದ ಬಳಿ ಬಂದಾಗ, ಸದ್ದುಗಳು ಕೇಳಿಸಿದವು. ನೂರ್ ಜಹಾನ್ ಎಲ್ಲಿ ಸಾಮಾನ್ಯವಾಗಿ ಮಲಗುತ್ತಾಳೆ ಎಂಬುದನ್ನು ತಿಳಿದುಕೊಂಡು ಸರಿಯಾಗಿ ಅಲ್ಲಿಗೇ ಬಂದ. ಕಪ್ಪು ಶಾಲೊಂದನ್ನು ಸುತ್ತಿಕೊಂಡು, ಮುಂದುವರಿದು ಮಲಗುವ ಕೋಣೆಯ ಬಳಿಗೆ ಬಂದ. ಆದರೆ ಒಳಗೆ ಹೋಗಲಿಲ್ಲ. ಮೂಲೆಯೊಂದರಲ್ಲಿ ಅಡಗಿ ಕುಳಿತ. ನಿದ್ದೆ ಹತ್ತಿತ್ತು. ಬೆಳಕು ಹರಿದರೂ ನಿದ್ದೆಯಿಂದ ಏಳಲಿಲ್ಲ. ಬೆಳಗಿನ ಚಟುವಟಿಕೆಗಳು ಪ್ರಾರಂಭವಾದವು. ಓಡಾಟವೂ ಹಾಗೆಯೇ ಶುರುವಾಯಿತು. ಎಲ್ಲರೂ ತಮ್ಮ ತಮ್ಮ ಕೆಲಸಗಳಲ್ಲಿ ಮಗ್ನರಾದರು. ಆ ವ್ಯಕ್ತಿ ಕಣ್ಣು ಬಿಟ್ಟು ನೋಡಿದಾಗ ಬೆಳಕು ಹರಿದದ್ದು ಕಂಡು ಅಚ್ಚರಿಗೊಂಡ. ಅವನ ಉದ್ದೇಶ ಸಫಲವಾಗಲಿಲ್ಲ. ಬದಲಾಗಿ ಕಾವಲು ಭಟರ ಕೈಗೆ ಸಿಕ್ಕಿ ಬಿದ್ದು, ನೂರ್ ಜಹಾನ್‌ಳಿಗೆ ಸುದ್ದಿಹೋಯಿತು. ಬಾಲ್ಕನಿಯಿಂದಲೇ ಆ ವ್ಯಕ್ತಿ ಪೊದೆಗಳ ನಡುವೆ ತಪ್ಪಿಸಿಕೊಂಡು, ಭಟರ ಕೈ ಬಿಡಿಸಿಕೊಂಡು, ಜಿಗಿಜಿಗಿಯುತ್ತಾ ಓಡಲು ಆರಂಭಿಸಿದ. ಅದನ್ನು ನೂರ್ ಜಹಾನ್ ಗಮನಿಸಿದಳು. ಕೂಡಲೇ ಬಿಲ್ಲು ಬಾಣ ತರಿಸಿದಳು. ಮೊದಲಿನಿಂದಲೂ ಒಳ್ಳೆಯ ಗುರಿಕಾರಳಾಗಿದ್ದರಿಂದ ಆ ಮನುಷ್ಯನಿಗೆ ಗುರಿಯಿಟ್ಟು ನಿಂತಲ್ಲಿಂದಲೇ ಬಾಣ ಬಿಟ್ಟಳು. ಗುರಿ ಮುಟ್ಟಿತು. ಆ ಮನುಷ್ಯ ಚೀರುತ್ತಾ ಕೆಳಗೆ ಬಿದ್ದು ಸತ್ತುಹೋದ. ಜನಾನಾದಲ್ಲಿ ನಡೆದ ಈ ಘಟನೆ, ದೊಡ್ಡದಾಗಿ ಸುದ್ದಿಮಾಡಿತು. ಅವಳನ್ನು ನೋಡುವ ಧೈರ್ಯ ಮಾಡಿದವನ ಬಗ್ಗೆ ಮೆಚ್ಚಿಗೆಯ ಮಾತುಗಳೂ ಬಂದವು. ಜನಾನಾಕ್ಕೆ ಪ್ರವೇಶಿಸಲು, ಸಂಬಂಧಪಟ್ಟವರ ಹೊರತು ಬೇರೆ ಯಾರಿಗೂ ಅಂದರೆ ಯಾವ ಪುರುಷರಿಗೂ ಅನುಮತಿಯಿಲ್ಲ. ಒಂದು ವೇಳೆ, ಆ ಶಾಸನವನ್ನು ಧಿಕ್ಕರಿಸಿ ಯಾರಾದರೂ ಸಾಹಸ ಮಾಡಿದರೆ ಪ್ರಾಣದಂಡನೆ ತಪ್ಪಿದ್ದಲ್ಲ. ಪ್ರಾಣದಂಡನೆಯೇನೋ ಆ ವ್ಯಕ್ತಿಗೆ ಲಭ್ಯವಾಯಿತು. ಆದರೆ ದೊರೆತ ರೀತಿ ಬೇರೆಯೇ ಆಗಿತ್ತು. ಹಿಂದು ಮುಂದು ನೋಡದೆ ನೂರ್ ಜಹಾನಳಿಂದ ಕೊಲೆ ನಡೆದುಹೋಗಿತ್ತು.

ಅಜಮೇರದಿಂದ ರಾಜದಂಪತಿಗಳು ಮಾಂಡು ಕಡೆಗೆ ಹೊರಟಿದ್ದರು. ಅವರು

ಹೋದಲ್ಲೆಲ್ಲ ರಾಜ ಪರಿವಾರ, ಅಧಿಕಾರಿಗಳು, ಸಾಮಗ್ರಿಗಳು ಬೇಕಾದ ಎಲ್ಲ ವಸ್ತುಗಳು, ಮನರಂಜನೆಗೆಂದು ವಿವಿಧ ಬಗೆಯ ಕಲಾವಿದರು, ಆನೆ, ಕುದುರೆ, ಒಂಟೆಗಳು–ಹೀಗೆ ಸಮಸ್ತವೂ ಅವರು ಹೋದಲ್ಲೆಲ್ಲ ಅನುಸರಿಸಿ ಹೋಗುವಂತೆ ನ್ಯಾಯದ ಗಂಟೆಯೂ ಜೊತೆಗಿರುತ್ತಿತ್ತು.

ಹಾಗಾಗಿ ಮಾಂಡುವಿನಲ್ಲಿಯೂ ನ್ಯಾಯದ ಗಂಟೆಯನ್ನು ತೂಗುಹಾಕಲಾಗಿತ್ತು. ರಾತ್ರಿ ಕಳೆದು ಬೆಳಗಾಗುವಷ್ಟು ಹೊತ್ತಿಗೆ, ಬಹಳ ದಿವಸಗಳಿಂದ ಮೌನವಾಗಿದ್ದ ನ್ಯಾಯದ ಗಂಟೆ ಜೋರಾಗಿ ಬಡಿದುಕೊಳ್ಳುತ್ತಿತ್ತು. ಕಿವಿ ಕಿವುಡಾಗುವಷ್ಟು ಜೋರಾಗಿ ಗಂಟೆ ಸದ್ದು ಕೇಳಿಬರುತ್ತಿತ್ತು. ಎಲ್ಲರಿಗೂ ದಿಗ್ಭ್ರಮೆಯಾಯಿತು. ಎಂದೂ ಇಲ್ಲದ ಗಂಟೆಯ ಸದ್ದು ಕೇಳಿ, ಏನೋ ಭಯಂಕರ ಘಟನೆ ಸಂಭವಿಸಿರಬೇಕೆಂದು ಜನ ಆಲೋಚಿಸತೊಡಗಿದರು.

ಜಹಾಂಗೀರ್ ದಂಪತಿಗಳಿದ್ದಲ್ಲಿಗೆ ಹೋಷಿಯಾರ್ ಏದುಸಿರು ಬಿಡುತ್ತಾ ಬಂದು, ತಮ್ಮನ್ನು ಕಾಣಲು ಹೆಂಗಸೊಬ್ಬಳು ಹಠ ಮಾಡುತ್ತಿದ್ದಾಳೆ ಎಂದು ತಿಳಿಸಿದ.

"ಇನ್ನೇನು ಸ್ವಲ್ಪ ಹೊತ್ತಿನಲ್ಲಿಯೇ ಝರೋಕಾ ದರ್ಶನಕ್ಕೆ ಬರುತ್ತೇವೆ. ಅಲ್ಲಿ ಭೇಟಿಯಾಗಲು ಹೇಳು" ಎಂದರು.

"ಜಹಾಂಪನಾಹ್, ಆಕೆ ಒಪ್ಪುತ್ತಿಲ್ಲ. ನೀವು ಕಾಣಿಸಿಕೊಳ್ಳುವವರೆಗೂ ನಿಲ್ಲಿಸುವುದಿಲ್ಲವಂತೆ."

ಹೋಷಿಯಾರನ ಮಾತು ಕೇಳಿ ಬೇಗಬೇಗನೆ ಝರೋಕಾಗೆ ನಡೆದರು.

ಆ ದಿನ ಹೆಚ್ಚಿನ ಅಹವಾಲುಗಳು, ಮೊಕದ್ದಮೆಗಳು ಇರಲಿಲ್ಲ. ಆದ್ದರಿಂದ ಆ ಹೆಂಗಸಿಗೆ ಕೂಡಲೇ, ಸಮಸ್ಯೆ ಹೇಳಿಕೊಳ್ಳಲು ಅವಕಾಶ ಸಿಕ್ಕಿತು.

ಜಹಾಂಗೀರ್ ಅವಳ ಸಮಸ್ಯೆ ಏನೆಂದೂ, ಅವಳು ಏನನ್ನು ಬಯಸುತ್ತಿದ್ದಾಳೆ ಎಂಬುದನ್ನೂ ತಿಳಿಸಲು ಆದೇಶಿಸಿದ.

ಆ ಹೆಣ್ಣು ಮಗಳು ದುಃಖಿಸುತ್ತಾ,

"ಜಹಾಂಪನಾಹ್, ನೀವು ನ್ಯಾಯಕ್ಕೆ ಹೆಸರಾದವರು. ನ್ಯಾಯ ನಿಷ್ಠುರರು ಎಂದೆಲ್ಲ ಕೇಳಿದ್ದೇನೆ....ಅದಕ್ಕಾಗಿ ನಾನೂ ನ್ಯಾಯ ಕೇಳಲು ಬಂದಿದ್ದೇನೆ."

"ಯಾವುದಕ್ಕಾಗಿ ನ್ಯಾಯ ಬೇಕೆಂಬುದನ್ನು ತಿಳಿಸದೆಯೇ ನ್ಯಾಯಕೊಡಲು ಕೇಳಿದರೆ ನಾನು ಏನು ಮಾಡಲಿ?"

"ಜಹಾಂಪನಾಹ್ ನನ್ನ ಮಗನ ಕೊಲೆಯಾಗಿದೆ."

"ಕೊಲೆ?... ಯಾರಿಂದ ಈ ಕೊಲೆ? ನಿಸ್ಸಂಕೋಚವಾಗಿ ಹೇಳು" ಎಂದಾಗ. ಆ ಹೆಣ್ಣು ಬಾಯಲ್ಲಿ ಹೆಸರಿಸಲು ಹೆದರಿ ಜಹಾಂಗೀರನ ಪಕ್ಕದಲ್ಲಿಯೇ ಕುಳಿತಿದ್ದ ನೂರ್ ಜಹಾನಳ ಕಡೆ ಬೆಟ್ಟು ತೋರಿಸಿದಳು.

ಜಹಾಂಗೀರ್ ಸ್ತಂಭಿಸಿ ಹೋದ.

"ಏನಮ್ಮಾ ನೀನು ಯಾರನ್ನು ತೋರಿಸುತ್ತಿದ್ದೀಯ. ಮೈ ಮೇಲೆ ಎಚ್ಚರವಿದೆಯೇನು?"

ನ್ಯಾಯಾಂಗಣದಲ್ಲಿ ಸೇರಿದ್ದ ಜನವೆಲ್ಲ ಒಮ್ಮೆಲೇ ಬೊಬ್ಬೆ ಹಾಕಿದರು. ಝರೋಕಾದ ಒಂದಿನ ಬಾಲ್ಕನಿಯಿಂದ, ನ್ಯಾಯಬೇಕು. ಅಪರಾಧಿಗೆ ಶಿಕ್ಷೆ ನೀಡಬೇಕು ಎನ್ನುವ ಕೂಗು

ಹೆಂಗಸರ ಕಡೆಯಿಂದ ಬಂತು. ಅಲ್ಲಿ ಸೇರಿದ್ದ ಸಭಾಸದರಲ್ಲಿ ಗುಸುಗುಸು ಪಿಸುಪಿಸು ಶುರುವಾಯಿತು. ಜಹಾಂಗೀರ್ ಸಂದಿಗ್ಧದಲ್ಲಿ ಸಿಲುಕಿದ. ಈಗ ಹೆಂಡತಿಯೇ ಅಪರಾಧಿ. ಅವಳ ಕಡೆನೋಡಿದ. ಅವಳಿಗೆ ತಾನು ಮಾಡಿದ ಅಪರಾಧದ ಗಂಭೀರತೆ ಅರ್ಥವಾಗಿರಲಿಲ್ಲ. ಮೊಘಲ್ ನ್ಯಾಯಾಲಯದ ನಿಯಮದಂತೆ 'ಪ್ರಾಣಕ್ಕೆ ಪ್ರಾಣವೆಂಬ' ನೀತಿ ಇದೆಯಾದರೂ, ವಿಚಾರಣೆಯಾಗದೆ ಶಿಕ್ಷಿಸುವಂತಿಲ್ಲ. ಆದರೆ ವಿಚಾರಣೆ ನಡೆಸಿಕೊಡುತ್ತಿರುವ ವ್ಯಕ್ತಿಗಳೇ ಅಪರಾಧಿಗಳಾದರೆ ಏನು ಮಾಡಬೇಕು? ಹೆಂಡತಿ ಎನ್ನುವ ಕಾರಣಕ್ಕಾಗಿ ರಿಯಾಯಿತಿ ನೀಡುವಂತಿಲ್ಲ. ಹಾಗೆಯೆ ವಿಚಾರಣೆಯೂ ಮಾಡುವಂತಿಲ್ಲ. ಬೇರೆ ಯಾರಾದರೂ ಈ ಪ್ರಸಂಗದ ವಿಚಾರಣೆ ಮಾಡಬೇಕು. ಜಹಾಂಗೀರ್ ಯಾವಾಗಲೂ ನ್ಯಾಯ ಪರವಾಗಿಯೇ ಇದ್ದವನು. ಅಪರಾಧಿ ಯಾರೇ ಆಗಿರಲಿ ಕಾನೂನು ಏನು ಹೇಳುತ್ತದೆ ಅದನ್ನು ಮಾಡಬೇಕಿತ್ತು. ಒಮ್ಮೆ ಅವನ ಆನೆಯ ಕಾಲತುಳಿತಕ್ಕೆ ಸಿಕ್ಕಿ ಸತ್ತು ಹೋದ ಮಗುವಿಗೆ ಬದಲಾಗಿ, ಆ ಮಗುವಿನ ತಂದೆತಾಯಿಗಳು ಪ್ರಾಣಕ್ಕೆ ಬದಲಾಗಿ ಪ್ರಾಣವೇ ಪರಿಹಾರವಾಗಬೇಕೆಂದು ನ್ಯಾಯ ಕೇಳಿದಾಗ, ನೂರ್ ಜಹಾನಳ ಸಂಬಂಧಿಯಾಗಿದ್ದರೂ ಪರಿಗಣಿಸದೆ ಆನೆಕಾಲಿನಿಂದ ತುಳಿಸಿ, ನ್ಯಾಯ ಸಲ್ಲಿಸಿರುವಾಗ, ಈಗ ಜಹಾಂಗೀರನಿಗೆ ಏನೂ ಸಮಾಧಾನ ಹೇಳಲಾಗಲಿಲ್ಲ. ಜನಾನಾದಿಂದ ಹಿಡಿದು ಸಾಮಾನ್ಯ ಪ್ರಜೆಗಳೆಲ್ಲರೂ ಇದೇ ಪರಿಹಾರವನ್ನು ಕೇಳುತ್ತಿದ್ದಾರೆ. ಅವರಿಗೆ ಸಮಾಧಾನ ಹೇಳುವುದಾದರೂ ಹೇಗೆ. ಇಷ್ಟಕ್ಕೂ ಅಪರಾಧದ ಸ್ವರೂಪವೇನೆಂದು ಇನ್ನೂ ತಿಳಿದಿಲ್ಲ. ಮೊರೆ ಹೋದ ಹೆಂಗಸನ್ನೇ ವಿಚಾರಿಸಲು ಮುಂದಾದ.

"ನಿನ್ನ ಮಗ ಮಾಡಿದ ತಪ್ಪೇನು ಎಂಬುದನ್ನು ಮೊದಲು ವಿವರಿಸು. ಅದನ್ನು ಆಧರಿಸಿ ನಿನಗೆ ನ್ಯಾಯ ನೀಡುತ್ತೇವೆ."

"ಜಹಾಂಪನಾಹ್ ನನ್ನ ಮಗ ದೊಡ್ಡ ತಪ್ಪೇನೂ ಮಾಡಿಲ್ಲ. ಪಾದಶಾಹ್ ಬೇಗಂರ ಸೌಂದರ್ಯದ ಬಗ್ಗೆ ಕೇಳಿ ಹುಚ್ಚನಾಗಿದ್ದ. ಒಮ್ಮೆಯಾದರೂ ಅವರ ದರ್ಶನ ಪಡೆಯಬೇಕೆಂದು ಜನಾನಾದೊಳಗೆ ಪ್ರವೇಶಿಸಿದ, ಅಷ್ಟೇ!"

ಸೇರಿದ ಜನಸಮೂಹ ಪೂರ್ತಿಯಾಗಿ ಅಪರಾಧವೇನೆಂದು ತಿಳಿಯದೆ, ಹೆಂಗಸರ ಕಡೆಯಿಂದ ಬಂದ ಕೂಗಿಗೆ ಕೂಡಲೇ ಪ್ರತಿಕ್ರಿಯಿಸಿದ್ದರು. ವಾಸ್ತವವಾಗಿ, ಯಾವ ಗಂಡಸೂ, ಪ್ರತಿಷ್ಠಿತ ಮಹಿಳೆಯರಾಗಲೀ, ಸಾಮಾನ್ಯ ಮಹಿಳೆಯರಾಗಲೀ ಇರುವ ಜನಾನಾದಲ್ಲಿ ಪ್ರವೇಶಿಸುವ ಹಾಗಿರಲಿಲ್ಲ. ಪ್ರವೇಶಿಸಿದವರಿಗೆ ಅದೇನೂ ದೊಡ್ಡ ಅಪರಾಧವೆನಿಸದೆ ಇರಬಹುದು. ಮೊಘಲರ ದೃಷ್ಟಿಯಲ್ಲಿ ಅದೂ ಮಹಾಪರಾಧವೇ! ಆದ್ದರಿಂದ ಅವಳು (ನೂರ್ ಜಹಾನ್) ಶಿಕ್ಷಿಸಿರುವುದು ತಪ್ಪಲ್ಲ. ಇದು ಪ್ರಜೆಗಳಿಗೆ ತಿಳಿದಿತ್ತು. ಆದ್ದರಿಂದ ಕೂಡಲೇ ಅವರೆಲ್ಲ ನೂರ್ ಜಹಾನ್ ಪರವಾಗಿ ನಿಂತರು. ಆದರೆ ಆ ಮಹಿಳೆ 'ಪ್ರಾಣ' ತೀರ್ಪನ್ನೇ ನಿರೀಕ್ಷಿಸುತ್ತಿದ್ದಳು. ಆದರೂ ಜಹಾಂಗೀರ್ ಅವಳಿಗೆ ನ್ಯಾಯ ನೀಡುವುದಾಗಿ ಭರವಸೆ ಕೊಟ್ಟು ಅಂದಿನ ಝುರೋಕಾ ಕಾರ್ಯಕ್ರಮವನ್ನು ಮುಕ್ತಾಯ ಮಾಡಿದ.

ಈ ಪ್ರಸಂಗ ಅತ್ಯಂತ ಸಂದಿಗ್ಧವೆನಿಸಿತು. ರಾಜ ಪರಿವಾರದ ಸದಸ್ಯರೊಬ್ಬರು,

ಅದರಲ್ಲೂ ಮಲಿಕಾ-ಎ-ಹಿಂದೂಸ್ತಾನ್ ಎಂದು ಕರೆಸಿಕೊಂಡ, ಜಹಾಂಗೀರ್ ಬಾದಶಾಹನ ಪ್ರಾಣ ಪ್ರಿಯ ನೂರ್ ಜಹಾನಳೇ ಅಪರಾಧಿ. ಹೀಗಿರುವಾಗ, ತಾನೇ ನ್ಯಾಯಾಧೀಶನಾಗಿ ವಿಚಾರಣೆ, ತೀರ್ಪುಗಳ ಹೊಣೆ ಹೊರಲಾರ. ಅದಕ್ಕಾಗಿಯೇ ಮರುದಿನ ಖಾಜಿಯೊಬ್ಬರ ನೇತೃತ್ವದಲ್ಲಿ ವಿಚಾರಣೆಯ ವ್ಯವಸ್ಥೆಯಾಗಿತ್ತು. ಜನ ಕಿಕ್ಕಿರಿದು ತುಂಬಿದ್ದರು. ನೂರ್ ಜಹಾನ್‌ಳನ್ನು ದ್ವೇಷಿಸುವ, ಅವಳ ಪತನ, ವಿನಾಶಕ್ಕಾಗಿ ಹಾತೊರೆಯುವ ಬಹಳಷ್ಟು ಹೆಂಗಸರಿಗೆ, ಗಂಡಸರಿಗೆ, ರಾಜ ಪರಿವಾರದವರಿಗೆ, ಮುಖ್ಯವಾಗಿ ಜಗತ್‌ಗೋಸಿನಿ, ಅರ್ಜುಮಂದ್, ಜಹಾಂಗೀರನ ಪ್ರಿಯಪುತ್ರ ಖುರ್‍ರಂ, ಕಡೆಗೆ ಅಣ್ಣನಾದ ಅಸಫ್‌ಖಾನ್ ಎಲ್ಲರೂ ತುದಿಗಾಲಿನಲ್ಲಿ ನಿಂತು ಕಣ್ಣೆಲ್ಲ ಕಿವಿಯಾಗಿಸಿಕೊಂಡು, ಹೊರಡುವ ತೀರ್ಪಿಗಾಗಿ ಎದುರು ನೋಡುತ್ತಿದ್ದರು.

ನೂರ್ ಜಹಾನಳನ್ನು ಹೋಷಿಯಾರ್ ಜೊತೆಯಲ್ಲಿ ಕರೆತಂದ. ಜಹಾಂಗೀರನಿಂದ ಒಂದು ಕೈಯಳತೆ ದೂರದಲ್ಲಿ ನಿಂತಿದ್ದಳು. ತೆಳುವಾದ ಮುಖ ಪರದೆಯೊಳಗೆ, ಮುಖ ಮರೆಯಾಗಿದ್ದು ಅವಳ ಮೊಗದ ಭಾವನೆಗಳು ಯಾರಿಗೂ ಕಾಣುವಂತೆ ಇರಲಿಲ್ಲ. ಗಂಡನಾದರೂ ತನ್ನ ಬಗ್ಗೆ ಸಹಾನುಭೂತಿ ತೋರಿಸಿ ರಕ್ಷಿಸುತ್ತಾನೆ ಎನ್ನುವ ನಂಬಿಕೆಯೂ, ಅವನ ವರ್ತನೆಯಿಂದ, ನಿರಾಶೆಯಾಗಿ ಪರಿವರ್ತನೆಯಾಯಿತು. ಒಳಗೊಳಗೇ ಅವಳೆದೆ ಆರ್ತವಾಗಿ ಚೀರುತ್ತಿತ್ತು. ಈ ತೀರ್ಪಿನೊಂದಿಗೆ ತನ್ನ ಕತೆ ಮುಗಿಯುತ್ತದೆ. ತನ್ನ ಮಹತ್ವಾಕಾಂಕ್ಷೆಗಳು, ಕನಸುಗಳು ಸಮಾಧಿಯಾಗಿ ಹೋಗುತ್ತವೆ. ಮೊಘಲ್ ಇತಿಹಾಸದ ಪುಟಗಳಲ್ಲಿ, ತನ್ನದೆಲ್ಲ ಸಾಧನೆಗಳೂ ಅಳಿಸಿಹೋಗಿ, ಅಪರಾಧಿಯಾಗಿ, ಮರಣದಂಡನೆಗೆ ಒಳಗಾದುದಷ್ಟು ಮಾತ್ರವೇ ದಾಖಲಾಗುತ್ತದೆ ಎನಿಸಿ ನೋವಾಯಿತಾದರೂ ಮರುಕ್ಷಣದಲ್ಲಿಯೇ ಅವಳ ಆತ್ಮಸ್ಥೈರ್ಯ, ಗರ್ವಗಳು ಹೆಡೆ ಬಿಚ್ಚಿದವು. ಸತ್ತರೂ ಸಾಮ್ರಾಜ್ಞಿಯಾಗಿ ಸಾಯುತ್ತಿದ್ದೇನೆ. ಮುಂದೆ ತನ್ನ ಹೆಸರು ಸಾವಿರಾರು ವರ್ಷಗಳ ಇತಿಹಾಸದಲ್ಲಿ ನಮೂದಾಗಿಯೇ ಆಗುತ್ತದೆ. ಯಾವುದೋ ಒಂದು ರೀತಿಯಲ್ಲಿ ತನ್ನ ಒಳ್ಳೆಯ ಕಾರ್ಯಗಳಿಂದಲೋ, ಇಲ್ಲವೇ ಇಂದಿನ ಸಾವಿನ ಶಿಕ್ಷೆಯಿಂದಲೋ, ಇತಿಹಾಸದಲ್ಲಿ ಖಂಡಿತವಾಗಿಯೂ ಹೆಸರು ಎದ್ದು ಕಾಣುವುದರಲ್ಲಿ ನನಗೆ ಭರವಸೆಯಿದೆ ಎಂದುಕೊಂಡು, ಖಿನ್ನತೆಯನ್ನು ಹೆದರಿಕೆಯನ್ನು ದೂರವಿರಿಸಿ, ಖಾಜಿಯ ಮುಂದೆ ಬಂದು ನಿಂತಳು. ಈ ಖಾಜಿಗೆ ತೀರಾ ವಯಸ್ಸಾಗಿತ್ತು. ಅತಿಶೀಘ್ರವಾದ ರೀತಿಯಲ್ಲಿ ವಿಚಾರಣೆ ನಡೆಸಿ ತೀರ್ಪುಗಳನ್ನು ಘೋಷಿಸುತ್ತಿದ್ದ.

ಅವನು ವಿಚಾರಣೆ ನಡೆಸಲಿಲ್ಲ. ಕಾರಣ ಯಾವುದೇ ಸಾಕ್ಷಿ - ಪುರಾವೆಗಳು ಇರಲಿಲ್ಲ. ವಾದ ಪ್ರತಿವಾದಗಳೂ ಇರಲಿಲ್ಲ. ಕೇವಲ ಮರಣದಂಡನೆ ಮಾತ್ರವಷ್ಟೇ ಘೋಷಿಸಬೇಕಿತ್ತು. ಜಹಾಂಗೀರ್ ಖಾಜಿಯನ್ನು ತೀರ್ಪನ್ನು ಘೋಷಿಸಲು ಆದೇಶಿಸಿದ. ಖಾಜಿಗೆ ಬಾಯಿ ಬರಲಿಲ್ಲ. ಮೊಘಲ್ ಸಾಮ್ರಾಜ್ಞಿಗೆ ಸಾವಿನ ದಂಡನೆಯೆ?! ....ಅವನ ಮನಸ್ಸು ಹಿಂಜರಿಯುತ್ತಿತ್ತು. ಜಹಾಂಗೀರ್, ಖಾಜಿಯನ್ನು ಆತುರ ಪಡಿಸುತ್ತಿದ್ದ. ಅಷ್ಟರಲ್ಲಿಯೇ ದೂರುದಾರಳಾದ ಹೆಂಗಸು, ಗುಂಪಿನ ಮಧ್ಯದಿಂದ ನುಸುಳಿಕೊಂಡು ಬಂದು, ಜಹಾಂಗೀರನ ಮುಂದೆ ಮೊಣಕಾಲೂರಿ ಕೈ ಮುಗಿದಳು. ಯಾಕೆಂದು ಜಹಾಂಗೀರ್ ವಿಚಾರಿಸಲು ಕಣ್ಣೀರಿಡುತ್ತಾ,

"ಜಹಾಂಪನಾಹ್. ನಾನು ನ್ಯಾಯ ಕೇಳಿದ್ದು ಸರಿಯೇ. ಆದರೆ ಬಾದ್‌ಶಾಹ್ ಬೇಗಂರ ಸಾವನ್ನಲ್ಲ. ಅದರಿಂದ ನನಗೆ ಯಾವ ಪ್ರಯೋಜನವೂ ಇಲ್ಲ. ಸತ್ತ ಮಗ ಸತ್ತ. ಇವರ ಸಾವಿನಿಂದ ನನ್ನ ಮಗ ಬದುಕಿ ಬರಲಾರ. ಇದ್ದವನು ಅವನೊಬ್ಬನೇ! ಅವನೇ ನನಗೆ ಆಧಾರವಾಗಿದ್ದವನು. ಮುಂದೆ ನಾನು ಜೀವಿಸುವುದು ಹೇಗೆಂಬ ಚಿಂತೆಯಿಂದ ನಿಮ್ಮ ಮೊರೆ ಹೊಕ್ಕೆ. ಇವರ ಸಾವಿನಿಂದ ನಾನು ಯಾವ ಸ್ವರ್ಗವನ್ನು ಅನುಭವಿಸಬಲ್ಲೆ?"

"ಹಾಗಾದರೆ, ಪ್ರಾಣಕ್ಕೆ ಬದಲಾಗಿ ನಿನಗೇನು ಬೇಕಿದೆ?"

"ಪ್ರಾಣಾಧಾರ ವ್ಯವಸ್ಥೆ. ಅಂದರೆ ಜೀವನೋಪಾಯಕ್ಕೆ ಒಂದು ಮಾರ್ಗ ತೋರಿಸಬೇಕೆಂಬ ಪ್ರಾರ್ಥನೆ ಜಹಾಂಪನಾಹ್."

"ಸರಿ, ಅಪರಾಧಿಯಿಂದ ನೀನು ಬಯಸಿದಷ್ಟು ಹಣವನ್ನು ಪರಿಹಾರವಾಗಿ ನೀಡುವಂತೆ ಆದೇಶಿಸಬಹುದಲ್ಲ? ಎಂದು ಹೇಳಿ, ಎರಡು ಸಾವಿರ ಬೆಳ್ಳಿ ನಾಣ್ಯಗಳನ್ನು ಆ ಹೆಂಗಸಿಗೆ ನೀಡುವಂತೆ. ನೂರ್ ಜಹಾನಳಿಗೆ ತಿಳಿಸಿ, ಖಾಜಿಯನ್ನು ಬೀಳ್ಕೊಟ್ಟ."

"ಜಹಾಂಪನಾಹ್, ಎರಡು ಸಾವಿರ ಬೆಳ್ಳಿ ನಾಣ್ಯಗಳಿಂದ ಜೀವನ ಪರ್ಯಂತ ಬದುಕು ನಡೆಸುವುದಾದರೂ ಹೇಗೆ? ನನ್ನ ಕಡೆಯಿಂದ, ನಿಮಗೊಂದು ನಿವೇದನೆ ನಮ್ಮ ಜನಾನಾದಲ್ಲಿದ್ದು ಸಣ್ಣಪುಟ್ಟ ಸೇವೆಗಳನ್ನು ಮಾಡಿಕೊಂಡಿರಲಿ ಎಂಬುದು ನಮ್ಮ ಆಲೋಚನೆ. ಇದಕ್ಕೆ ತಮ್ಮ ಒಪ್ಪಿಗೆಯಿದೆಯೇ?" ಎಂದು ನೂರ್ ಜಹಾನ್ ಕೇಳಿಕೊಂಡಳು.

ಜಹಾಂಗೀರನಿಗೆ, ನೂರ್ ಜಹಾನಳ ಔದಾರ್ಯ, ಕರುಣೆ ತುಂಬಿದ ಹೃದಯದ ಪರಿಚಯವಾಯಿತು. ಮೊದಲಿನಿಂದಲೂ ಹಲವು ಕಾರಣಗಳಿಂದ ಗಂಡಸರ ದೌರ್ಜನ್ಯಗಳಿಂದ ಬಡತನದಿಂದ ಬೀದಿಗೆ ಬಿದ್ದ ಹೆಂಗಸರಿಗೆಲ್ಲ ಹಲವೆಡೆಗಳಲ್ಲಿ ಆಶ್ರಯ ಧಾಮಗಳನ್ನು ನಿರ್ಮಿಸಿರುವ ಸಂಗತಿಯೂ ನೆನಪಿಗೆ ಬಂತು.

"ನೂರ್ ಬೇಗಂ, ನಿಮ್ಮ ಈ ನಿರ್ಧಾರ ನಿಜವಾಗಿಯೂ ಮೆಚ್ಚಬೇಕಾದ್ದೇ!"

ಆ ಹೆಂಗಸು ಹೃದಯ ತುಂಬಿ ಧನ್ಯವಾದಗಳನ್ನು ಹೇಳಿ ಸಾವಿರವರ್ಷ ಬಾಳೆಂದು ಆಶೀರ್ವದಿಸಿದಳು.

ರಾಜದಂಪತಿಗಳು ನಿರಾಳ ಮನಸ್ಸಿನಿಂದ ತಮ್ಮ ತಮ್ಮ ವಸತಿಗಳಿಗೆ ಹಿಂತಿರುಗಿದರು. ದುರಂತದಲ್ಲಿ ಪರ್ಯವಸಾನವಾಗಬೇಕಾದ್ದು ಸುಖಾಂತವಾದದ್ದು ಕೆಲವರಿಗೆ ಸಂತೋಷ, ಕೆಲವರಿಗೆ ಅಸಮಾಧಾನ ತಂದಿತ್ತು. ಎಲ್ಲವೂ ಸುಖಾಂತವಾಗಿಯೇ ಮುಗಿದಿತ್ತಾದರೂ ನೂರ್ ಜಹಾನಳ ಮನಸ್ಸು ಅಲ್ಲೋಲ ಕಲ್ಲೋಲವಾಗಿತ್ತು. ತನ್ನ ಬಗ್ಗೆ ಯಾರ ಯಾರ ಮನಸ್ಸು ಹೇಗಿದೆ ಎನ್ನುವ ಸತ್ಯ ಅರಿವಿಗೆ ಬರತೊಡಗಿತು. ಯಾಕೆ ಇವರೆಲ್ಲ ತನ್ನ ಬಗ್ಗೆ ಇಷ್ಟೊಂದು ದ್ವೇಷ, ಸೇಡು ತುಂಬಿಕೊಂಡಿದ್ದಾರೆ? ಅವಕಾಶ ಸಿಕ್ಕರೆ ಸಾಕು, ಸುದ್ದಿಗಳನ್ನು ವದಂತಿಗಳನ್ನು ಸೃಷ್ಟಿಸುತ್ತಾರೆ? ಅವರಿಗೆ ತಾನು ಮಾಡಿದ ಅನ್ಯಾಯವಾದರೂ ಏನು? ಅದರಲ್ಲೂ ಹೆಂಗಸರೇಕೆ ಹೀಗೆ ವರ್ತಿಸುತ್ತಿದ್ದಾರೆ. ನರಕವಾಗಿದ್ದ ಜನಾನಾದಲ್ಲಿ ಎಷ್ಟೆಲ್ಲ ಸುಧಾರಣೆ ತಂದೆ. ಬೇಸರ, ಹತಾಶೆಗಳಿದ್ದ ಮೊಗದಲ್ಲಿ ಸಂತೋಷ, ಆತ್ಮವಿಶ್ವಾಸಗಳನ್ನು ಅರಳಿಸಿದೆ, ಸ್ವಾವಲಂಬಿ ಬದುಕಿಗೆ ದಾರಿ ಮಾಡಿ ಕೊಟ್ಟೆ. ಇದೆಲ್ಲವನ್ನೂ ಮರೆತರೇಕೆ ಎಂದು ಯೋಚಿಸಿದಾಗ, ಇದಕ್ಕೆಲ್ಲ

ಪ್ರಚೋದನೆ ಉಂಟಾದದ್ದು ತನ್ನವರಿಂದಲೇ ಎನ್ನುವುದು ನಿಧಾನವಾಗಿ ತಿಳಿದುಬಂತು. ಅವರ ಪ್ರಗತಿಗೆ ತಾನು ಅಡ್ಡವಾಗಿದ್ದೇನೆಂದೇ ಅವರ ನಂಬಿಕೆ. ಅಲ್ಲದೆ ನನ್ನ ಏಳ್ಗೆಯೇ, ಅವರನ್ನು ಕರುಬುವಂತೆ ಮಾಡಿದೆ.

ಗಂಡಸರಲ್ಲಿಯೂ ತನ್ನನ್ನು ದ್ವೇಷಿಸುವವರು ಕಡಿಮೆಯಿಲ್ಲ. ನನ್ನ ಪರಿವಾರದವರೇ ನನ್ನನ್ನು ಸಹಿಸುತ್ತಿಲ್ಲವಾಗಿ ಬೇರೆಯವರ ಬಗ್ಗೆ ಹೇಳುವುದಾದರೂ ಏನನ್ನು? ತಖ್ತ್ ತಾಜ್‌ಗಳ ಮೋಹವೇ ಮನುಷ್ಯನನ್ನು ರಾಕ್ಷಸನನ್ನಾಗಿ ಪರಿವರ್ತಿಸುತ್ತದೆ ಎನ್ನುವ ಸತ್ಯಕ್ಕೆ ಯಾರೂ ಹೊರತಲ್ಲ. ನಾನು ಕೂಡಾ! ಅದಕ್ಕಾಗಿಯೇ ಆಗುತ್ತಿರುವುದನ್ನೆಲ್ಲ ಸಹಜವಾಗಿ ಸ್ವೀಕರಿಸಿ ಅದಕ್ಕೆ ಹೊಂದಿಕೊಂಡು ಬಾಳುವುದನ್ನು ಕಲಿಯಬೇಕಿದೆಯೇ ಹೊರತಾಗಿ ಬೇರೆ ದಾರಿಯಿಲ್ಲ. ಈಗ ನನ್ನ ಮುಂದಿರುವುದು ನನ್ನ ಗಂಡನನ್ನು ಆರೋಗ್ಯವಂತನನ್ನಾಗಿ, ಬಲಿಷ್ಠನನ್ನಾಗಿ, ದೀರ್ಘಾಯುವಂತನಾಗಿ, ಮೊಘಲ್ ಸಾಮ್ರಾಜ್ಯದ ಮಹಾನ್ ಸಾಮ್ರಾಟನಾಗಿ, ಇತಿಹಾಸದ ಪುಟಗಳಲ್ಲಿ ಚಿರಾಯುವಾಗುವಂತೆ ನೋಡಿ ಕೊಳ್ಳುವ ಬಹುದೊಡ್ಡ ಜವಾಬ್ದಾರಿ ನನ್ನ ಮುಂದಿದೆ ಎಂದು ಯೋಚಿಸುತ್ತಲೇ, ಕಣ್ಣು ಹತ್ತಿ ನಿದ್ದೆಗೆ ಇಳಿದಳು.

ಒಂದು ತಿಂಗಳು ಹಾಸಿಗೆ ಹಿಡಿದು, ಮತ್ತೆ ಚೇತರಿಸಿಕೊಂಡ ಮೇಲೆ ನಿತ್ಯದ ಕೆಲಸಗಳ ಕಡೆ ಗಮನ ಹರಿಸಿದ. ಬಾದಶಾಹರ ಆರೋಗ್ಯ ಸುಧಾರಿಸಿದ ವಿಷಯ ತಿಳಿದು ಜನರ ಮೊಗದಲ್ಲಿ ಕವಿದಿದ್ದ ಆತಂಕದ ಮೋಡಗಳು ಚದುರಿ, ಸಂತಸದ ಕಿರಣಗಳು ಪಸರಿಸಿದವು.

ಮಾಂಡುವಿನಿಂದ ಆಗ್ರಾಕ್ಕೆ ಹೋಗುವ ಯೋಚನೆ ಮಾಡಿದರು. ಆದರೆ ಅಷ್ಟರಲ್ಲಿಯೇ ಒಂದು ಭಯದ ಸುದ್ದಿ ಮುಟ್ಟಿತು. ಮೊದಲಿಗೆ ಪಶ್ಚಿಮ ಬಂಗಾಲದಲ್ಲಿ ಕಾಣಿಸಿಕೊಂಡು, ನಂತರ ಲಾಹೋರ್, ಆಗ್ರಾಗಳತ್ತ ವೇಗವಾಗಿ ಧಾವಿಸಿ ಅಪ್ಪಳಿಸಿತ್ತು ಪ್ಲೇಗ್! ಅಲ್ಲಿನ ನಿವಾಸಿಗಳು ಭಯತ್ರಸ್ಥರಾದರು. ಯಾವ ಕ್ಷಣದಲ್ಲಾದರೂ ಎರಗಬಹುದಾದ ಪ್ಲೇಗಿನ ಭೂತಕ್ಕೆ ಹೆದರಿ, ಇದ್ದಬದ್ದದ್ದನ್ನೆಲ್ಲಾ ಅಲ್ಲಲ್ಲಿಯೇ ಬಿಟ್ಟು, ಕೇವಲ ಪ್ರಾಣ ಉಳಿದರೆ ಸಾಕೆಂದು, ಅಲ್ಲಿಂದ ಓಡಿಹೋದರು. ಪ್ರತಿದಿನವೂ ನೂರಾರು ಮಂದಿಯ ಹೆಣಗಳು ಬೀಳುತ್ತಿದ್ದವು. ಬಿದ್ದ ಹೆಣಗಳೆಲ್ಲಾ ಕೊಳೆತು ನಾರುತ್ತಿದ್ದು, ಹೆಜ್ಜೆಯಿಡುವುದೂ ಕಷ್ಟವಾಗಿತ್ತು. ಹಾಗಾಗಿ ಸದ್ಯಕ್ಕೆ ಆಗ್ರಾಗೆ ಹೋಗುವ ಯೋಚನೆ ಹಿಂದುಳಿಯಿತು.

ಇದರ ಜೊತೆಗೆ, ದಕ್ಷಿಣದಲ್ಲಿ ಮತ್ತು ಖಾಂದಾಹಾರದಲ್ಲಿ ರಾಜಕೀಯ ಪರಿಸ್ಥಿತಿ ಬಹಳವಾಗಿ ಬಿಗಡಾಯಿಸಿತ್ತು. ಅಂಬರ್ ಮಲಿಕ್, ಮೊಘಲ್ ಸಾಮ್ರಾಜ್ಯಕ್ಕೆ ಸೇರಿದ ಹಲವು ಪ್ರದೇಶಗಳನ್ನು ಆಕ್ರಮಿಸಿಕೊಂಡ. ಶಹರಿಯಾರನೇ ಸೇನಾಪತಿ. ಆದರೆ ದುರ್ಬಲ. ಇದರಿಂದಾಗಿ ಮೊಘಲ್ ಸೈನ್ಯ ಭಯಂಕರ ಪರಾಜಯವನ್ನು ಅನುಭವಿಸಿತು. ಪ್ರತಿಯೊಂದು ಸಂಕಟ ಪರಿಸ್ಥಿತಿಯಲ್ಲೂ ಜಹಾಂಗೀರನಿಗೆ ಖುರ್ರಂನ ಮೇಲೆ ಎಷ್ಟೆ ಅಸಮಾಧಾನವಿದ್ದರೂ, ಅವನೇ ಆಪತ್ಬಾಂಧವ ಎನಿಸುತ್ತಿತ್ತು. ಅದಕ್ಕಾಗಿ ಅವನನ್ನೇ ದಕ್ಷಿಣದ ಕಡೆಗೆ ಕಳಿಸುವ ಆಲೋಚನೆ ಮಾಡಿದನಾದರೂ

ನೂರ್ ಜಹಾನಳಿಗೆ ಒಪ್ಪಿಗೆಯಾಗಲಿಲ್ಲ. ಲಾಡ್ಲಿಯ ಮದುವೆಯನ್ನು ನಿರಾಕರಿಸಿದಂದಿನಿಂದ ಅವಳ ಅಸಮಾಧಾನ ಅವನ ಮೇಲೆ ಇನ್ನೂ ಹೆಚ್ಚಾಗಿತ್ತು.

ಜಹಾಂಗೀರ್ ಸ್ವಲ್ಪ ದಿನಗಳ ಹಿಂದೆಯೇ ಆಗ್ರಾಕ್ಕೆ ಬಂದು ಅಲ್ಲಿಯೇ ಉಳಿದಿದ್ದ. ಕೆಲದಿನಗಳ ನಂತರ ನೂರ್ ಜಹಾನ್ ಬಂದು ಅವನನ್ನು ಸೇರಿಕೊಂಡಳು. ಇಲ್ಲಿಗೆ ಬಂದ ಮೇಲಂತೂ ಅವಳ ಸ್ವರೂಪವೇ ಬದಲಾಗಿ ಬಿಟ್ಟಿತ್ತು. ಜಹಾಂಗೀರ್ ಮಾತ್ರ ನಿರಾತಂಕವಾಗಿ, ಚದುರಂಗದಾಟದಲ್ಲಿ ಅಫೀಮು ಸೇವನೆಯಲ್ಲಿ ನಿರತನಾಗಿಬಿಟ್ಟಿದ್ದ. ಅವಳು ಬಂದಿದ್ದನ್ನು ಗಮನಿಸುವಷ್ಟು ವ್ಯವಧಾನವಿರಲಿಲ್ಲ. ಅವನ ಖಾಸಾದೋಸ್ತ್ ಮುತಾಮಿದ್‌ಖಾನ್ ಅವನ ಎದುರಾಳಿಯಾಗಿದ್ದ. ಚದುರಂಗ ಪಟದ ಕೋಣೆಗಳಲ್ಲಿ ಜೀವಂತ ವ್ಯಕ್ತಿಗಳನ್ನೇ ಕಾಯಿಗಳಾಗಿ ನಿಲ್ಲಿಸಲಾಗಿತ್ತು. ಆಟ ನಡೆದಂತೆ, ಆ ಗುಲಾಮರೇ ಆದೇಶವಿತ್ತ ಹಾಗೆ ಬೇರೆ ಬೇರೆ ಕೋಣೆಗಳಲ್ಲಿ ಜಿಗಿದು ಹೋಗಿ ನಿಲ್ಲುತ್ತಿದ್ದರು. ನೋಡುವಷ್ಟೂ ನೋಡಿದಳು. ಕಾಯುವಷ್ಟೂ ಕಾದಳು. ಸಹನೆ ಮೀರಿತು. ಥಟ್ಟೆಂದು, ಹೋಗಿ ಜಹಾಂಗೀರನ ಮುಂದೆ ನಿಂತಳು. ಮುತಾಮಿದ್‌ಖಾನನತ್ತ ಒಮ್ಮೆ ಕಣ್ಣೋಟ ಬೀರಿದಳು. ಅವನಿಗೆ ಅರ್ಥವಾಯಿತು. ಕೂಡಲೇ ಎದ್ದು ಸಲಾಂ ಹೊಡೆದು ಹಿಂದು ಹಿಂದಕ್ಕೆ ಹೆಜ್ಜೆ ಹಾಕಿ ಅಲ್ಲಿಂದ ಮರೆಯಾದ.

"ಏನಿದು ಬೇಗಂ ನಿಮ್ಮ ಹುಡುಗಾಟ. ಹೇಳದೆ ಕೇಳದೆ ಹೀಗೆಲ್ಲ ಬಾದಶಾಹರ ಮುಂದೆ ಬಂದು ನಿಲ್ಲಬಹುದೇ" ಆ ಮಾತುಗಳಲ್ಲಿ ತಮಾಶೆಯೂ ಇತ್ತು, ಗತ್ತೂ ಇತ್ತು.

"ಯಾಕೆ ಜಹಾಂಪನಾಹ್, ಈ ಮೊಘಲ್ ಸಾಮ್ರಾಜ್ಞಿಗೂ ನಿಮ್ಮ ಅಪ್ಪಣೆಗಾಗಿ ಕಾಯಬೇಕಾದ ಕರ್ಮ ಬಂತೇ?"

"ಛೆ! ಛೆ! ಹಾಗೇನಿಲ್ಲ. ನನಗಿಂತ ಖ್ಯಾತರಾಗಿರುವ ಮೊಘಲ್ ಸಾಮ್ರಾಜ್ಞಿ. ಜಗತ್ತಿನ ಬೆಳಕೇ ನೀವಲ್ಲವೇ?"

"ಜಹಾಂಪನಾಹ್, ಸದ್ಯಕ್ಕೆ ಛೇಡಿಸುವುದು, ನಗೆಯಾಡುವುದು ಮತ್ತು ಕೆಲಸಕ್ಕೆ ಬಾರದ ಶತರಂಜ್(ಚತುರಂಗ) ಆಡುವುದನ್ನು ಬಿಟ್ಟು, ನಾನು ಹೇಳುವುದನ್ನು ಸ್ವಲ್ಪ ಗಮನವಿರಿಸಿ ಕೇಳಿ, ವಿಷಯ ಬಹಳ ಗಂಭೀರವಾಗಿದೆ. ಯಾರೂ ನಾನಾಡುವ ಮಾತನ್ನು ಕೇಳಿಸಿಕೊಳ್ಳಬಾರದೆಂದು, ಮುತಾಮಿದರಿಗೆ ಸನ್ನೆಯಿಂದ ಹೋಗಲು ಆದೇಶಿಸಿದೆ."

"ನೀವು ಹಾಗೆ ಮಾಡಬಾರದಿತ್ತು. ಅವನು ನನಗೆ ಪರಮಾಪ್ತ, ನಾನು ಹೇಳಿದ್ದನ್ನು ನಿಷ್ಠೆಯಿಂದ ಮಾಡುತ್ತಾನೆ."

"ಅದೆಲ್ಲವೂ ನಿಜವಿರಬಹುದು. ಯಾವ ಮನುಷ್ಯ ಯಾವಾಗ ಬದಲಾಗುತ್ತಾನೊ ಹೇಳಲಾಗುವುದಿಲ್ಲ. ಪರಿಸ್ಥಿತಿಗಳ ಒತ್ತಡದಿಂದ ತಾವು ಹೇಳಬಹುದೋ ಹೇಳಬಾರದೋ ಎನ್ನುವ ವಿವೇಕವಿಲ್ಲದೆ, ದುರುದ್ದೇಶವಿಲ್ಲದೆಯೂ ಹೇಳಿಬಿಡಬಹುದು. ಈಗಿನ ಪರಿಸ್ಥಿತಿಯಲ್ಲಿ ನಾವು ಯಾರನ್ನೂ, ಯಾವುದನ್ನೂ ನಂಬಬಾರದು. ಒಂದು ವೇಳೆ ನಾನು ಹೇಳಿದ್ದನ್ನು ಕೇಳಿಸಿಕೊಂಡು ಅಸಫ್‌ಖಾನರಿಗೂ ಹೇಳಿಬಿಡಬಹುದಲ್ಲ."

"ಇಲ್ಲ ಬೇಗಂ ಅವನೆಂದೂ ನನ್ನ ವಿರುದ್ಧ ಒಂದೂ ಮಾತನಾಡುವುದಿಲ್ಲ."

"ಜಹಾಂಪನಾಹ್ ನಾನು ಹೇಳುವ ವಿಷಯ ಖುರ್ರಂಗೆ ಸಂಬಂಧಿಸಿದ್ದು. ಖುರ್ರಂ ಅಸಫ್‌ಖಾನನ ಅಳಿಯ."

"ಹಾಗಾದರೆ ಈ ಅಬ್ಬಾ ಹುಜೂರ್‌ಗೆ ಅವನು ಮಗನಲ್ಲವೇ?"

"ಮಗನೇ! ಅದೇ ನೀವು ಹೇಳುತ್ತಿರುವ ಆ ಮಗನೇ ನಿಮ್ಮ ವಿರುದ್ಧ ಬಂಡೆದ್ದಿದ್ದಾನೆ; ದ್ರೋಹ ಬಗೆಯುತ್ತಿದ್ದಾನೆ."

"ಇಲ್ಲ ಬೇಗಂ, ಅವನೆಂದೂ ದ್ರೋಹ ಬಗೆಯುವುದಿಲ್ಲ... ಇಷ್ಟಕ್ಕೂ ದ್ರೋಹ ಬಗೆಯಬೇಕಾದ ಅಗತ್ಯವಾದರೂ ಏನಿದೆ? ನನ್ನ ನಂತರ ಗಾದಿ ಅವನದೇ ಅಲ್ಲವೇ?"

"ಜಹಾಂಪನಾಹ್ ಹಾಗೇಕೆ ಹೇಳುತ್ತೀರಿ? ಅವನಲ್ಲದೆ, ಇನ್ನೂ ನಿಮ್ಮ ಇಬ್ಬರು ಮಕ್ಕಳು ಇದ್ದಾರಲ್ಲವೇ? ಆದ್ದರಿಂದಲೇ ಅವನಿಗೆ ಭಯ. ಎಲ್ಲಿ ಅಧಿಕಾರ ತನ್ನ ಕೈ ತಪ್ಪಿ ಅವರ ಕೈಗೆ ಸೇರಿದರೆ?–ಎನ್ನುವ ಅನುಮಾನ, ಭೀತಿಗಳೇ ಅವನನ್ನು ಈಗಲೇ ತನ್ನ ಸ್ಥಾನ, ಅಧಿಕಾರ ಭದ್ರ ಮಾಡಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದಾನೆ. ಅದು ಅವನ ಲೆಕ್ಕಾಚಾರದಲ್ಲಿ ಸ್ವಾಭಾವಿಕವೇ! ನೇರವಾಗಿ ಬಂಡೇಳದೆ ಮಾಲವಾ, ಗುರ್ಜರದ ಸೇನೆಗಳು ಒಟ್ಟಿಗೆ ಆಗ್ರಾದ ಮೇಲೆ ಮುತ್ತಿಗೆ ಹಾಕುವಂತೆ ಯೋಜಿಸಿದ್ದಾನೆ. ಅವೆಲ್ಲ ಒಟ್ಟಿಗೆ ಈ ಕೋಟೆಯನ್ನು ಮುತ್ತಿದರೆ ಮುಂದೇನಾಗುವುದೋ ಎನ್ನುವ ಚಿಂತೆ ಕಾಡುತ್ತಿದೆ."

"ನೀವು ಚಿಂತಿಸಬೇಡಿ ಬೇಗಂ, ಅವನನ್ನು ಕರೆಸಿ ಬುದ್ಧಿ ಹೇಳುತ್ತೇನೆ. ಸಾಮ್ರಾಜ್ಯದ ರಕ್ಷಣೆಯ ಹೊಣೆ ಏನೆಂಬುದನ್ನು ತಿಳಿಸಿ ವಿವರಿಸುತ್ತೇನೆ. ನನ್ನ ಮಾತನ್ನು ಕೇಳಿಸಿಕೊಳ್ಳುತ್ತಾನೆ. ಇನ್ನೂ ಅವನು ಹುಡುಗ ಅವನೇನು ತಾನೇ ಮಾಡುತ್ತಾನೆ?"

"ಜಹಾಂಪನಾಹ್, ರಾಜನೀತಿ, ರಾಜಕೀಯ ಮೇಲಾಟಗಳು ಹೇಗೆ ಇರುತ್ತವೆ ಎನ್ನುವುದನ್ನು ನಾನು ನಿಮಗೆ ತಿಳಿಸುವಷ್ಟು ಅನುಭವಸ್ಥಳಲ್ಲ. ಅಧಿಕಾರಕ್ಕಾಗಿ ಯಾರೂ ಕಾಯುತ್ತಾ ಕುಳಿತುಕೊಳ್ಳುವುದಿಲ್ಲ. ಅವರ ಸರದಿಗಾಗಿ ಕಾಯುವುದಿಲ್ಲ. ಅಧಿಕಾರಾಕಾಂಕ್ಷಿಗಳು, ಆದಷ್ಟು ಬೇಗ, ತಮ್ಮ ದಾರಿ ಮುಳ್ಳುಗಳನ್ನು ಪಕ್ಕಕ್ಕೆ ಸರಿಸಿ, ಅವಧಿಗೆ ಮೊದಲೇ ದಕ್ಕಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ನೀವು ಮಾಡಿದ್ದೂ ಕೂಡಾ ಹಾಗೆಯೇ ಅಲ್ಲವೇ? ನಿಮ್ಮ ತಂದೆಯವರಿಗೆ ವಿಷ ಹಾಕಿ, ಅವರು ನಿಮಗೆ ಅಧಿಕಾರ ಒಪ್ಪಿಸುವುದಕ್ಕೆ ಮೊದಲೇ ದಕ್ಕಿಸಿಕೊಳ್ಳಲು ಪ್ರಯತ್ನಸಲಿಲ್ಲವೇ. ಅವರ ನಂತರ ಸಿಂಹಾಸನ ನಿಮಗೇ ಎಂದು ಗೊತ್ತಿದ್ದರೂ ಹೀಗೆ ಮಾಡಿದಿರಿ. ಹಾಗೆಯೇ ನಿಮ್ಮ ಹಿರಿಯಮಗ ಖುಸ್ರೋ ಕೂಡಾ, ನಿಮ್ಮ ಹಿರಿಯ ಮಗನಾದರೂ ಕಾಯುವ ತಾಳ್ಮೆ ಇಲ್ಲದೆ ನಿಮ್ಮ ವಿರುದ್ಧ ಹೋಗಲಿಲ್ಲವೇ?"

"ಬೇಗಂ ನೀವು ಹೇಳುವ ಪ್ರತಿಯೊಂದು ಮಾತೂ ಅನುಭವಕ್ಕೆ ಬಂದ ಸತ್ಯವೆಂದೇ ಒಪ್ಪುತ್ತೇನೆ. ಅಂದು ಆಗಿರಬಹುದು. ಈಗಲೂ ಹಾಗೆಯೇ ಆಗುತ್ತದೆಂದು ಯಾಕೆ ನಂಬಬೇಕು? ಅವನನ್ನು ಕರೆಸಿ, ಇನ್ನು ಮುಂದೆ ಹೀಗೆಲ್ಲ ಮಾಡಬೇಡವೆಂದು ಬುದ್ಧಿ ಹೇಳಿ ಕ್ಷಮಿಸಿ ಬಿಡುತ್ತೇನೆ. ಕ್ಷಮೆಗಿಂತ ದೊಡ್ಡ ವಸ್ತು ಯಾವುದಾದರೂ ಇದೆಯೇನು?"

"ನಿಮ್ಮ ಸಂದರ್ಭ ಬೇರೆ, ಈಗಿನ ಸಂದರ್ಭ ಬೇರೆ. ಮೊದಲೇ ಅವನು ಮಹತ್ವಾಕಾಂಕ್ಷೆಯ ಹುಡುಗ. ಈಗ ಅವನನ್ನು ಎತ್ತಿಕಟ್ಟಲು ನನ್ನ ಅಣ್ಣ, ತಂದೆ ಮತ್ತು ಇನ್ನೂ ಹಲವಾರು ಅಧಿಕಾರಿಗಳು ಇದ್ದಾರೆ. ಅದೆಲ್ಲವನ್ನು ಮರೆತು, ನಿರ್ಲಕ್ಷಿಸಿ ಏನೇನೋ ಹುಚ್ಚು ಕನಸುಗಳನ್ನು ಕಾಣುತ್ತಾ ಕುಳಿತುಕೊಳ್ಳಬೇಡಿ. ಸ್ವಲ್ಪ ಕಣ್ಣು ಬಿಟ್ಟು ನೋಡಿ. ಅವನು ಈಗಾಗಲೇ ತಖ್ತ್‌ಗೆ ಬಹಳ ಹತ್ತಿರವಾಗಿಬಿಟ್ಟಿದ್ದಾನೆ. ಯಾರು

ನಮ್ಮವರು, ಯಾರು ಬೇರೆಯವರು ಎಂದು ಗುರುತಿಸುವುದೇ ಕಷ್ಟವಾಗಿ ಬಿಟ್ಟಿದೆ. ಪ್ರತಿಕ್ಷಣವೂ ಚಿಂತೆ ಕಾಡುತ್ತಿದೆ. ನಾನೆಲ್ಲಿ ಒಂಟಿಯಾಗಿ ಬಿಡುತ್ತೇನೋ ಎನ್ನುವ ಭೀತಿ ಉಂಟಾಗಿದೆ. ನೀವು ಸ್ವಲ್ಪ ಮದ್ಯಸೇವನೆ, ಅಫೀಮುಗಳಿಂದ ದೂರವಿದ್ದು ನಿಮ್ಮ ಆರೋಗ್ಯದ ಕಡೆ ಗಮನ ಕೊಡಿ. ನೀವು ಸಾಯುವುದನ್ನೇ ಕಾಯುತ್ತಿರುವವರು ಬಹಳ ಮಂದಿ ಇದ್ದಾರೆ."

"ಬೇಗಂ ನನ್ನುಸಿರಿರುವವರೆಗೆ ನಿಮಗೆ ಒಂಟಿತನದ ಭೀತಿ ಬೇಡ. ನನ್ನ ಆಯುಸ್ಸು ಅಲ್ಲಾಹ್‌ನ ಕೈಲಿದೆ. ಅದೆಲ್ಲ ಅವನ ಮರ್ಜಿ."

"ಜಹಾಂಪನಾಹ್, ನಾವು ಒಳ್ಳೆಯವರಾಗಿದ್ದರೆ ಅಲ್ಲಾಹ್ ನಮ್ಮ ಕಡೆ ಇರುತ್ತಾನೆ ಎನ್ನುವುದಕ್ಕೆ, ಮೊನ್ನೆಯೇ ನೀವು ಸಾವಿನ ಗಡಿ ಸಮೀಪಿಸಿ ಹಿಂತಿರುಗಿದಿರಿ. ಅದು ನಮ್ಮ ವಿನೀತ ಪ್ರಾರ್ಥನೆಯಿಂದ ಪವಾಡ ಸದೃಶವಾಗಿ ಎಲ್ಲವೂ ಸರಿಹೋಯಿತು. ಜಹಾಂಪನಾಹ್, ನೀವಿಲ್ಲದ ಮೇಲೆ ನಾನೇನು? ನನ್ನ ಅಸ್ತಿತ್ವವೇ ಅಳಿಸಿ ಹೋಗಬಹುದೇನೋ ಎನಿಸುತ್ತಿದೆ."

"ರಾಜಕೀಯ ವಂಶ ಪರಂಪರೆಯಲ್ಲಿ ಒಂಟಿ ಎಂಬ ಮಾತಿಗೆ ಬೆಲೆಯೂ ಇಲ್ಲ. ಮಹತ್ವವೂ ಇಲ್ಲ. ಯಾರೊಬ್ಬರಿಗೂ ಯಾರೂ ಬೇಕಾಗುವುದಿಲ್ಲ. ಸಂಬಂಧ ಸ್ನೇಹಗಳು, ರಕ್ತ ಸಂಬಂಧಗಳು, ಯಾವುದೂ ಮುಖ್ಯವಾಗುವುದಿಲ್ಲ. ಎಲ್ಲರಿಗೂ ಅವರವರ ಸ್ವಾರ್ಥವೇ ಮುಖ್ಯ, ಮೊಘಲ್ ರಾಜವಂಶದಲ್ಲಿ, ಪ್ರತಿಯೊಬ್ಬರಿಗೂ ಗಾದಿ ಯಾ ತಖ್ತ್‌ನ ಸೆಳೆತ ಬಿಡುವುದೇ ಇಲ್ಲ. ಎಲ್ಲರಿಗೂ ಅದರ ಬಗ್ಗೆ ಹುಚ್ಚು ಮೋಹ. ನಾನೂ ಮಾಡಿದ್ದನ್ನು ಖುರ್ರಂ ಮಾಡುತ್ತಿದ್ದಾನೆ. ನಾಳೆ ಅವನ ಮಕ್ಕಳೂ ಹೀಗೆಯೇ ಮಾಡುತ್ತಾರೆ. ಅಣ್ಣ ತಮ್ಮಂದಿರ ನಡುವೆ ಕಚ್ಚಾಟವಂತೂ ತಪ್ಪಿದ್ದೇ ಅಲ್ಲ. ಇವತ್ತಿಗೂ ಇದು ಹೀಗೇಕೆ ಎನ್ನುವುದು ನನಗೆ ಅರ್ಥವಾಗಿಲ್ಲ. ಇಂಥದ್ದೆಲ್ಲಾ ಇದ್ದದ್ದೇ, ಇದೆಲ್ಲಾ ಸರ್ವೇಸಾಮಾನ್ಯ ಎಂದುಕೊಳ್ಳುವುದಾದರೆ ಯಾರೂ ಅಪರಾಧಿಗಳೆಂದು ತೋರುವುದೇ ಇಲ್ಲ."

"ಜಹಾಂಪನಾಹ್, ಇಷ್ಟು ದೊಡ್ಡ ಭಾಷಣ ಮಾಡುವುದಕ್ಕಾಗಲೀ ಕೇಳುವುದಕ್ಕಾಗಲೀ ಇದು ಸಮಯವೂ ಅಲ್ಲ; ಸಮಯವೂ ಇಲ್ಲ.... ಒಟ್ಟಾರೆಯಾಗಿ, ನೀವು ನಿಮ್ಮ ಮಗನನ್ನು ಕ್ಷಮಿಸುವ ವಿಷಯ ಒತ್ತಟ್ಟಿಗಿರಲಿ. ಮುಂದೆ ನೋಡೋಣ. ಈಗ ನೀವು ಕೂಡಲೇ ವಿಲೋಚನಪುರಕ್ಕೆ ಹೊರಡುವ ಯೋಚನೆ ಮಾಡಿ. ಕೂಡಲೇ ಹೊರಟರೆ ಏನಾದರೂ ಒಳ್ಳೆಯ ಪರಿಣಾಮ ಆಗಬಹುದೆಂದು ಹೇಳಬಯಸುತ್ತೇನೆ."

ಜಹಾಂಗೀರನ ಮೇಲೆ ಅಫೀಮಿನ ಪರಿಣಾಮ ಹೆಚ್ಚಾಗುತ್ತಿದ್ದಂತೆ ಕಾಣಿಸಿತು. ನಿಲ್ಲಲೂ ಆಗುತ್ತಿರಲಿಲ್ಲ. ಮಾತು ತೊದಲುತ್ತಿತ್ತು. ಆದರೂ ಹೇಳಬೇಕೆಂದುಕೊಂಡು ಸ್ವಲ್ಪ ತಡವರಿಸುತ್ತಲೇ ಆರಂಭಿಸಿದ.

"ಬೇಗಂ ತಖ್ತ್ ಮತ್ತು ತಾಜ್‌ಗಳ ಬಗ್ಗೆ ಈಗ ನಮಗೆ ಯಾವ ಮೋಹವೂ ಇಲ್ಲ. ಅವು ಹೋದರೂ ನಮಗೆ ಚಿಂತೆಯಿಲ್ಲ. ನಷ್ಟವೂ ಇಲ್ಲ..... ಅವೇನು ಶಾಶ್ವತವೇ? ಹೋಗುತ್ತವೆ, ಬರುತ್ತವೆ. ಬಂದರೆ ಸಂತೋಷವೂ ಇಲ್ಲ; ಹೋದರೆ ದುಃಖವೂ ಇಲ್ಲ. ಅದಕ್ಕಾಗಿ ಚಿಂತೆಯೇಕೆ? ಫಿರ್‌ದೌಸಿಯ ಕವಿತೆ ನೆನಪಿದೆಯೇ? ಕೇಳು

**"ಓ ಜಗದ್ವಿಜೇತ ಮಹಮ್ಮದನೇ ಯಾರಿಗಂಜದಿದ್ದರೂ ಬೇಡ. ಆದರೆ ಆ ದೇವನಿಗೆ ಅಂಜಿ ನಡೆ / ನನಗೂ ಮೊದಲು ಈ ಭೂಮಂಡಲವನಾಳಿದವರೆಷ್ಟು / ಮಂದಿಯೋ ಲೆಕ್ಕವಿಲ್ಲ! ಸ್ಥಾನಮಾನ, ಅಧಿಕಾರ ಅಂತಸ್ತು / ಕಿರೀಟ ಸಿಂಹಾಸನ – ಕಿರೀಟ ಸಿಂಹಾಸನ ಸಿರಿತನಗಳಲ್ಲಿ ನಿನ್ನನ್ನೂ ಮೀರಿದ ಶ್ರೇಷ್ಠರೆಷ್ಟೆಲ್ಲಾ!/ಸ್ವರ್ಣ ಮೋಹದ ಸೆರೆಯಲ್ಲಿಹ ದೊರೆಯ ಮೆಚ್ಚುವುದಿಲ್ಲ"**

"ಇಷ್ಟಕ್ಕೂ ನಿಮಗೆ ಯಾವುದಕ್ಕೆ ಕಡಿಮೆಯಾಗಿದೆ? ನೀವು ಮಲಿಕಾ–ಎ–ಹಿಂದೂಸ್ತಾನ್, ಮೊಘಲ್ ಸಾಮ್ರಾಜ್ಯಾಧಿಪತಿ, ಜಹಾಂಗೀರನ ಅತ್ಯಂತ ಪ್ರೀತಿಯ ಬೇಗಂ, ನಿಮ್ಮ ಹೊರತು ಯಾರಿಗೆ ತಾನೇ ಈ ಅದೃಷ್ಟವಿದೆ?"

–ಎಂದು ತೂರಾಡುತ್ತಲೇ ಮಾತು ಮುಂದುವರೆಸಿದ್ದ. ದೇಹ ದುರ್ಬಲವಾಗಿ, ನಿಶ್ಶಕ್ತವಾಗಿ, ಅಸ್ಥಿರವಾಗಿತ್ತಾದರೂ ಅವನ ಆಲೋಚನೆಗಳು ಸ್ವಸ್ಥವಾಗಿತ್ತು.

"ಜಹಾಂಪನಾಹ್, ನಿಮಗೆ ಮದಿರೆ, ಮಾದಕತೆಗಳು ಹೆಚ್ಚಾಗಿವೆ. ಬುದ್ಧಿ ವಿವೇಕದ ಹದ್ದು ಮೀರಿದೆ. ಆದ್ದರಿಂದ ನೀವು ಯೋಚನೆ ಮಾಡದೆ ಕೇವಲ ಬಡಬಡಿಸುತ್ತಿದ್ದೀರಿ."

"ಇದು ಬಡ ಬಡಿಕೆಯಲ್ಲ ಬೇಗಂ, ಸಾಮ್ರಾಜ್ಯ ಸಂಪತ್ತುಗಳು ಇಲ್ಲದಿದ್ದರೂ ನನಗೆ ಚಿಂತೆಯಿಲ್ಲ. ನೀವೊಬ್ಬರಿದ್ದರೆ ಸಾಕು. ಪ್ರಪಂಚವೇ ನೀವಾಗಿರುವಾಗ ನನಗೇನು ಬೇಕು?"

"ನಿಮ್ಮ ಹುಚ್ಚು ಪ್ರೀತಿಯನ್ನು ಬದಿಗಿರಿಸಿ, ಕೂಡಲೇ ಕಾರ್ಯೋನ್ಮುಖರಾಗಿ ತಖ್ತ್‌ತಾಜ್‌ಗಳ ಪರಿಸ್ಥಿತಿ ಏನು ಹೇಳಿ."

"ಹೇಳುವುದೇನಿದೆ. ಇದು ಸೇರಬೇಕಾದ್ದು ಖುರ‍್ರಂಗೆ! ಅಲ್ಲದೆ ಸೇರಬೇಕಾದ್ದೂ ಕೂಡಾ ಅವನಿಗೇ! ತನ್ನ ಸ್ವಂತ ಶಕ್ತಿ ಸಾಮರ್ಥ್ಯ, ಭುಜಬಲ ಪರಾಕ್ರಮಗಳಿಂದ ಯೋಗ್ಯತೆಯನ್ನು ಗಳಿಸಿಕೊಂಡಿದ್ದಾನೆ. ಆದ್ದರಿಂದ ಹಿಂದು–ಮುಂದು ನೋಡಬೇಕಾದ್ದಿಲ್ಲ. ನಾಳೆ ಆಗಬೇಕಾದ್ದು, ಈಗಲೇ ಆಗುತ್ತಿದೆ. ಅಷ್ಟೆ!"

ನೂರ್ ಜಹಾನಳಿಗೆ ಏನು ಉತ್ತರ ಕೊಡಬೇಕೋ ಹೊಳೆಯಲಿಲ್ಲ. ಪ್ರತಿ ಸಲವೂ ತನಗೆ ಸೋಲೇ ಎದುರಾಗುತ್ತಿದೆ ಎನಿಸಿತು. ಒಮ್ಮೆ ಅಧಿಕಾರ ಯಾರ ಕೈಗಾದರೂ ಹೋದರೆ, ಬಂಧುತ್ವಗಳು ಉಳಿಯುವುದೇ ಇಲ್ಲ. ಬಾದಶಾಹರ ಅನುಭವಕ್ಕೇ ಬಂದಿರುವ ಸತ್ಯ ಇದಾಗಿದೆ. ಆದರೆ ಖುರ‍್ರಂ ವಿಚಾರದಲ್ಲೇಕೆ ಇಷ್ಟು ನಿರಾಳವಾಗಿದ್ದಾರೆ? ನಿಜವಾಗಿಯೂ ಅವರು ಅತಿಯಾದ ಅಮಲು ಏರಿಸಿಕೊಂಡಿರಬೇಕು. ಆದ್ದರಿಂದಲೇ ಅವರು ವಿವೇಕ, ವಿಚಾರ ಶಕ್ತಿಗಳನ್ನು ಪೂರ್ತಿಯಾಗಿ ಕಳೆದುಕೊಂಡಿದ್ದಾರೆ. ನಾನು ನನ್ನ ಕಡೆಯ ಪ್ರಯತ್ನವಾಗಿ ಅವರನ್ನು ಎಚ್ಚರಿಸುತ್ತೇನೆ. ಈ ಬಾರಿ ಅವರನ್ನು ಮೆದುವಾಗಿ ಮಾತಾಡಿಸಿ ನೋಡುತ್ತೇನೆ. ನಾನು ಆಗ ಆಡುವ ಮಾತುಗಳಿಗೆ ಕಿವಿಗೊಡುತ್ತಾರೆ. ನಾನೂ ಸ್ವಲ್ಪ ನಾಟಕ ಆಡಬೇಕು ಎಂದೆಲ್ಲ ಯೋಚಿಸುತ್ತಿದ್ದವಳಿಂದ ಜಹಾಂಗೀರನ ಮಾತುಗಳಿಗೆ ಥಟ್ಟನೆ ಉತ್ತರ ಸಿಗಲಿಲ್ಲ. ಜಹಾಂಗೀರನೇ ಮೌನ ಮುರಿದ.

"ಯಾಕೆ ಬೇಗಂ ಸುಮ್ಮನಾಗಿ ಬಿಟ್ಟಿರಿ?"

"ಮೌನವಲ್ಲ ಜಹಾಂಪನಾಹ್. ನಿಮಗೆ ಪರಿಸ್ಥಿತಿಯ ಗಂಭೀರತೆಯನ್ನು ಹೇಗೆ ಮನವರಿಕೆ ಮಾಡಿಕೊಡಲಿ ಎಂದು ಯೋಚಿಸುತ್ತಿದ್ದೇನೆ. ನೀವು ಅವನಲ್ಲಿ ಅತಿಯಾದ ಭರವಸೆ ಇರಿಸಿಕೊಂಡಿದ್ದೀರಿ. ನನಗೇನೂ ತಖ್ತ್‌ನ ಅವಶ್ಯಕತೆಯಿಲ್ಲ. ನಿಮ್ಮ ಅನನ್ಯ

ಪ್ರೀತಿಯ ಸ್ವರ್ಣ ಸಂಕೋಲೆಯಲ್ಲಿ ಬಂದಿಯಾಗಿ ಸ್ವರ್ಗಸುಖವನ್ನು ಅನುಭವಿಸುತ್ತಿದ್ದೇನೆ. ಅಷ್ಟು ಸಾಕು. ಆದರೆ ನಮ್ಮಿಬ್ಬರ ಸುಖ, ಸಂತೋಷಗಳಷ್ಟೇ ಮುಖ್ಯವಲ್ಲ. ಇಡೀ ಹಿಂದೂಸ್ತಾನದ ಭದ್ರತೆ, ಯೋಗಕ್ಷೇಮ ಶಾಂತಿಗಳ ಬಗ್ಗೆ ಯೋಚಿಸುವುದು ನಮ್ಮ ಫರ್ಜ್ ಅಲ್ಲವೇ? ಹಾಗಾಗಬೇಕಾದರೆ ನೀವೆಂದರೆ ಹಿಂದೂಸ್ತಾನ; ಹಿಂದೂಸ್ತಾನವೆಂದರೆ ನೀವಾಗಿ ಉಳಿಯಬೇಕೆಂಬುದು ನಮ್ಮ ಆಸೆ ಮತ್ತು ನಮ್ಮ ಪ್ರಯತ್ನ. ನೀವು ಪ್ರಯತ್ನಿಸದಿದ್ದಲ್ಲಿ ತಖ್ತ್, ತಾಜ್‌ಗಳೂ ನಿಮ್ಮದಾಗಿ ಇರುವುದಿಲ್ಲ; ಹಿಂದೂಸ್ತಾನವೂ ನೀವಾಗಿರುವುದಿಲ್ಲ; ಸಾಮ್ರಾಜ್ಯದ ಕನಸುಗಳೂ ಇರುವುದಿಲ್ಲ. ನಿಮ್ಮ ಜಾಗದಲ್ಲಿ ಖುರ್ರಂ ಇರುತ್ತಾನೆ. ಅವನೇ ಹಿಂದೂಸ್ತಾನವಾಗುತ್ತಾನೆ. ನಿಮ್ಮನ್ನು ಕೇಳುವವರು ಇಲ್ಲವಾಗುತ್ತಾರೆ. ಆಗ ನಿಮ್ಮ ಗತಿ ಏನಾಗಬಹುದೆಂಬ ಕಲ್ಪನೆಯಿದೆಯೇ? ಅವನದೇ ಶಾಸನ! ಅವನ ಇಷ್ಟಗಳೇ ಪರಮಾಧಿಕಾರದ ಅಸ್ತ್ರಗಳಾಗುತ್ತವೆ." ಜಹಾಂಗೀರ್ ಸ್ವಲ್ಪಮಟ್ಟಿಗೆ ಭಾವುಕತೆಯ ಮಾತುಗಳಿಂದ ಹೊರಬಂದು ಸಮಚಿತ್ತನಾಗಿ ಯೋಚಿಸಿದ. ಬದುಕಿರುವವರೆಗಾದರೂ ಅಧಿಕಾರ ಇರಬೇಕಲ್ಲವೇ? ಅದು ಕಳೆದು ಹೋದರೆ ನಾನೇನು? ನಾನೊಬ್ಬ ಫಕೀರನಾಗಿ ಅಲೆಯಬೇಕಾಗುತ್ತದೆ ಎನಿಸಿ–

"ಬೇಗಂ ನೀವು ಹೇಳುತ್ತಿರುವುದೆಲ್ಲ ನಿಜವಿರಬಹುದು ಎನಿಸುತ್ತದೆ."

"ಕಾದು ನೋಡಿ ... ಆದರೆ ಕಾಯುವುದಕ್ಕೆ ನಮ್ಮ ಬಳಿ ಸಮಯವಿಲ್ಲ; ಕಾಯುವ ಸಮಯವೂ ಅಲ್ಲ. ನಿಮ್ಮ ಚಟಗಳು, ನಿಮ್ಮ ಅನಾರೋಗ್ಯ, ನಿಮ್ಮ ಬುದ್ಧಿ ಬಲಗಳನ್ನು ಬತ್ತಿಸಿಬಿಟ್ಟಿವೆ. ಕೂಡಲೇ ನೀವು ಕಾರ್ಯೋನ್ಮುಖರಾಗಲು ಸಿದ್ಧರಾಗಿ, ಅವಕಾಶ ಕೈಮೀರಿ ಹೋದರೆ ಮುಂದೆ ಪಶ್ಚಾತ್ತಾಪ ಪಡಬೇಕಾಗುತ್ತದೆ."

"ಹೌದೌದು ಬೇಗಂ. ನೀವು ನನ್ನ ಕಣ್ಣು ತೆರೆಸಿದಿರಿ. ಹೇಳಿ ಈಗೇನು ಮಾಡಬೇಕು.... ನನ್ನ ಆಪ್ತ ಗೆಳೆಯ, ಮಂತ್ರಿಯಾದ ಮಹಬ್ಬತ್ ಖಾನನಿಗೆ ಬರಲು ಹೇಳಿ ಕಳಿಸಿ."

"ಜಹಾಂಪನಾಹ್ ಆತುರ ಬೇಡ. ಬೇರೆಯವರ್‍ಯಾರಿಗಾದರೂ ಹೇಳಿ ಕಳಿಸಿ. ಮಹಬ್ಬತ್‌ಖಾನ್ ಈಗ ಮೊದಲಿನಂತಿಲ್ಲ."

ನೂರ್ ಜಹಾನ್ ಮತ್ತು ಮಹಬ್ಬತ್ ಖಾನರ ನಡುವಿನ ಸಂಬಂಧ ಇತ್ತೀಚೆಗೆ ಅಷ್ಟು ಸೌಹಾರ್ದಯುತವಾಗಿ ಇರಲಿಲ್ಲ. ಅವನು ತನ್ನ ಸವತಿ ಜಗತ್‌ಗೋಸಿನಿಯ ಖಾಸಾ ಮನುಷ್ಯ. ಆಪ್ತ ಸಲಹಾಕಾರ, ಅವಳ ಕಡೆಯ ಗೂಢಚಾರ. ಅದೂ ಅಲ್ಲದೆ ಮೊದಲಿನಿಂದಲೂ ಅವನಿಗೆ, ಅವಳು ರಾಜ ಪರಿವಾರಕ್ಕೆ ಸೇರುವುದು ಇಷ್ಟವಿರಲಿಲ್ಲ. ಅವಳ ಸೌಂದರ್ಯ, ಮಹತ್ವಾಕಾಂಕ್ಷೆಗಗಳು ಎಲ್ಲರಿಗೂ ಹಿಡಿಸಿರಲಿಲ್ಲ. ಎಲ್ಲಿಂದಲೋ ನಿರಾಶ್ರಿತರಾಗಿ ಬಂದು ಇಲ್ಲಿ ಆಶ್ರಯಪಡೆದು ಅವರ ಬುದ್ಧಿವಂತಿಕೆ, ಸಾಮರ್ಥ್ಯ ನಿಷ್ಠೆಗಳಿಂದ ಅಕ್ಬರ್ ಬಾದಶಾಹರ ಅನುಗ್ರಹದಿಂದ ಮೇಲೇರುತ್ತಾ, ಕಡೆಗೆ ಮೆಹರುನ್ನೀಸಾಳಾಗಿ ಜನಾನಾದಲ್ಲಿ ರುಖೈಯ್ಯಾ ಬೇಗಂ ಸೇವೆಯಲ್ಲಿದ್ದವಳು. ಮೊಘಲ್ ಸಾಮ್ರಾಜ್ಞಿಯಾಗಿ ರೂಪಾಂತರಗೊಂಡು ಮಲಿಕಾ–ಎ–ಹಿಂದೂಸ್ತಾನ್ ಎನಿಸಿಕೊಂಡದ್ದೇ ಅಲ್ಲದೆ, ಅಣ್ಣನ ಮಗಳು ಅರ್ಜುಮಂದಳನ್ನು ಜಹಾಂಗೀರನ ಮಗ ಖುರ್ರಂನ ಹೆಂಡತಿಯಾಗಿ ಮಾಡಿ, ಮುಂದಿನ ಸಾಮ್ರಾಜ್ಞಿಯಾಗುವ ವೇದಿಕೆ ಸೃಷ್ಟಿಸಿದ್ದಳು. ಇನ್ನು ತಂದೆ ತಾಯಿಯರೂ ರಾಜ ಪರಿವಾರಕ್ಕೆ ಬಹಳ ಹತ್ತಿರವಾಗಿದ್ದರು. ಇದೆಲ್ಲವೂ

ಅನೇಕರಿಗೆ, ನೂರ್‌ಳ ಬಂಧು ಬಳಗಕ್ಕೂ ಅಸೂಯೆಯ ವಿಷಯವಾಗಿತ್ತು. ಹಾಗಾಗಿಯೇ ಮಹಬ್ಬತ್ ಖಾನನನ್ನು ನೆಚ್ಚಿಕೊಳ್ಳುವುದು ಅಷ್ಟಾಗಿ ಸರಿಯಲ್ಲವೆನಿಸಿತು. ಅವನಿಂದ ಅಪಾಯವಿದೆ ಎನಿಸಿತು. ಜಹಾಂಗೀರ್ ಹೇಳಿದ ಮಾತ್ರಕ್ಕೆ ಮಹಬ್ಬತ್ ಖಾನ್ ಖಂಡಿತವಾಗಿಯೂ ಖುರ್ರಂನ ವಿರುದ್ಧ ಆಕ್ರಮಣಕ್ಕಾಗಿ ವಿಲೋಚನಪುರಕ್ಕೆ ಹೋಗುವುದಿಲ್ಲವೆನಿಸಿ, ಬೇರೆ ರೀತಿಯಲ್ಲಿ ಆಲೋಚಿಸಬೇಕು ಎಂದುಕೊಂಡಳು.

ಈ ಯೋಚನೆಗಳಲ್ಲಿ ಇರುವಾಗಲೇ ಜಹಾಂಗೀರನಿಗೆ ಖುರ್ರಂನ ಸಹಾಯದ ಅವಶ್ಯಕತೆ ಎದುರಾಯಿತು. 1606ರಲ್ಲಿ ಮೊದಲ ಬಾರಿಗೆ ಖಾಂದಾಹಾರದ ಮೇಲೆ ಮೊಘಲ್ ಆಕ್ರಮಣವಾಗಿ, ತಲೆ ತಲಾಂತರದಿಂದ ಅದು ಮೊಘಲ್‌ರ ವಶದಲ್ಲಿತ್ತು. ವ್ಯಾಪಾರ ವಾಣಿಜ್ಯ ದೃಷ್ಟಿಯಿಂದ ಅತ್ಯಂತ ಪ್ರಮುಖ ಪ್ರದೇಶವಾಗಿ ಪರಿಗಣಿತವಾಗಿತ್ತು. ಮೊಘಲ್ ಆಸ್ಥಾನದಲ್ಲಿ, ಪರ್ಷಿಯಾದ ರಾಯಭಾರಿಯಾಗಿ ಇದ್ದವರು ಮೊಘಲ್ ಬಾದಶಾಹರನ್ನು ಅಮೂಲ್ಯವಾದ ಉಡುಗೊರೆಗಳನ್ನು ಕೊಟ್ಟು ಒಳ್ಳೆಯ ಸಂಬಂಧವನ್ನು ಮುಂದುವರೆಸಿದ್ದರು. ಮೊಘಲರು ಅವರ ವಾಸಕ್ಕೆಂದು ನಿವಾಸಗಳನ್ನು ನಿರ್ಮಿಸಿ ಕೊಟ್ಟಿದ್ದರು. ಆದರೆ ಈಗ ಪರ್ಷಿಯಾದ ದೊರೆ ಮತ್ತೆ ಅದನ್ನು ವಶಪಡಿಸಿಕೊಳ್ಳಲು ಸಿದ್ಧನಾದ. ಈಗ ಅದನ್ನು ಉಳಿಸಿಕೊಳ್ಳಲೇಬೇಕು. ಅದು ಸಾಧ್ಯವಾಗುವುದು ಖುರ್ರಂನಿಂದ ಮಾತ್ರವೇ! ಹಾಗಾಗಿ, ಜಹಾಂಗೀರ್ ಖುರ್ರಂಗೆ ಪತ್ರ ಬರೆದು, ಕೂಡಲೇ ಖಾಂದಾಹಾರಕ್ಕೆ ಸೈನ್ಯ ತೆಗೆದುಕೊಂಡು ಹೋಗಲು ಆದೇಶಿಸಿದ. ತನ್ನ ಈ ಆದೇಶವನ್ನು ಪಾಲಿಸಿದರೆ, ಅವನ ರಾಜದ್ರೋಹದ ಅಪರಾಧವನ್ನು ಕ್ಷಮಿಸಲಾಗುತ್ತದೆ ಎನ್ನುವ ಸಂದೇಶವನ್ನೂ ರವಾನಿಸಿದ. ಆದರೆ ಖುರ್ರಂ ಉದ್ಧಟತನದಲ್ಲಿ, ತಂದೆಯ ಆದೇಶವನ್ನು ಸಾರಾಸಗಟಾಗಿ ನಿರಾಕರಿಸಿದ. ಅವನ ನಿರಾಕರಣೆ ನೂರ್ ಜಹಾನಳ ಉಪಯೋಗಕ್ಕೆ ಬಂತು. ಖುರ್ರಂನ ಉದ್ಧಟತನವನ್ನು ಇನ್ನಷ್ಟು ದೊಡ್ಡದು ಮಾಡಿ, ಜಹಾಂಗೀರನ ಮನಸ್ಸನ್ನು ಕೆಡಿಸಲು ಪ್ರಯತ್ನಿಸಿದಳು. ಈಗ ಅವಳು ಭಾವಿ ಅಳಿಯ ಶಹರಿಯಾರನನ್ನು ಖಾಂದಾಹಾರಕ್ಕೆ ಕಳಿಸಲು ಯೋಚಿಸಿದಳು. ಅವನ ಸಾಮರ್ಥ್ಯವನ್ನು ಮನವರಿಕೆ ಮಾಡಲು ಪ್ರಯತ್ನಿಸಿದಳು. ಅವನು ಗೆದ್ದು ಬಂದರೆ, ಅಧಿಕಾರವನ್ನು ಯಾರಿಗೆ ಕೊಡಬೇಕೆನ್ನುವ ಸಮಸ್ಯೆಯಲ್ಲಿ ಇವನದೇ ಆಯ್ಕೆಯಾಗಬಹುದೆಂದು ಭಾವಿಸಿ, ಅವನನ್ನು ಸೈನ್ಯದೊಂದಿಗೆ ಖಾಂದಾಹಾರಕ್ಕೆ ಕಳಿಸಿಕೊಡಲು ಒಪ್ಪಿಸಿದಳು.

ವಿಷಯ ಅಸಫ್‌ಖಾನನಿಗೆ, ಖುರ್ರಂಗೆ ತಿಳಿಯಿತು. ಮಾವ ಅಳಿಯನನ್ನು ಎಚ್ಚರಿಸಿದ. ನೂರ್ ಜಹಾನಳ ಕೈವಾಡವೇ ಇದರಲ್ಲಿರುವುದನ್ನು ಕಂಡು ......., ಬೇರೆ ರೀತಿಯಲ್ಲಿ ಪ್ರಯತ್ನಿಸಿ, ಅವಳ ಯೋಜನೆಗಳನ್ನು ಹತ್ತಿಕ್ಕಲು ಪ್ರಯತ್ನಿಸಿದ. ಮೊದಲಿಗೆ ನೂರ್ ಜಹಾನ್ ಮತ್ತು ಶಹರಿಯಾರರ ಜಾಗೀರುಗಳನ್ನು ಕಸಿದುಕೊಳ್ಳಲು ಪ್ರಯತ್ನಿಸುತ್ತಿರುವುದು ಜಹಾಂಗೀರನ ಗಮನಕ್ಕೆ ಬಂದು ಸಿಟ್ಟಾದ. ಕೂಡಲೇ ಖುರ್ರಂನ, ಪಂಜಾಬಿನಲ್ಲಿದ್ದ ಜಾಗೀರುಗಳನ್ನು ಶಹರಿಯಾರ್ ಹೆಸರಿಗೆ ಬದಲಾಯಿಸಿದ.

ಖಾಂದಾಹಾರಕ್ಕೆ ಶಹರಿಯಾರ್‌ನನ್ನು ಕಳಿಸಲು, ಜಹಾಂಗೀರ್ ಮೊದಲು ಒಪ್ಪಲಿಲ್ಲವಾದರೂ, ನಂತರ ಒಪ್ಪಿಗೆ ನೀಡಿದ. ಮಹಬ್ಬತ್ ಖಾನನನ್ನೂ ಜೊತೆಗೆ ಕಳಿಸಲು ನೀಡಿದ ಸೂಚನೆಯನ್ನು ನೂರ್ ಜಹಾನ್ ತಳ್ಳಿಹಾಕಿದಳು. ಶಹರಿಯಾರನ

ಸಹಾಯಕ್ಕೆಂದು ಮೀರ್ ಕಮ್ರಾನ್ ಮತ್ತು ಅಂಬರ್‌ನ ರಾಜಕುಮಾರ ವಿಜಯ ಪ್ರತಾಪರನ್ನು ಅವನ ಜೊತೆ ಕಳಿಸಲಾಯಿತು. ಸರಿಯಾದ ಮಾರ್ಗದರ್ಶನದಲ್ಲಿ ಶಹರಿಯಾರ್ ಗೆದ್ದು ಬರುತ್ತಾನೆಂಬ ಭರವಸೆಯನ್ನು ಇರಿಸಿಕೊಂಡರು.

ಅದೇ ಸಮಯದಲ್ಲಿ, ಖುರ್ರಂನ ಮತ್ತೊಬ್ಬ ಸೋದರ ಪರವೇಜ್ ಮತ್ತು ಮಂತ್ರಿ, ಸೇನಾಪತಿಯಾದ ಮಹಬ್ಬತ್ ಖಾನರು ಒಟ್ಟಿಗೆ ಖುರ್ರಂನ ಸೈನ್ಯದ ಮೇಲೆ ಆಕ್ರಮಣ ಮಾಡಿದರು. ಮೊದಲಿನಿಂದಲೂ ಮದ್ಯವ್ಯಸನಿ ಮತ್ತು ವಿಲಾಸಿಯಾಗಿ ಸಮಯವನ್ನು ಹಾಳುಮಾಡಿಕೊಂಡಿದ್ದ ಪರವೇಜನಿಗೆ ತಂದೆ ಜಹಾಂಗೀರ್, ಅಧಿಕಾರವನ್ನು ತನಗೆ ನೀಡುವ ಸಾಧ್ಯತೆಯ ಅರಿವಾದಾಗ, ತನ್ನನ್ನು ಸುಧಾರಿಸಿಕೊಂಡು ಮಹಬ್ಬತ್‌ಖಾನನ ನೆರವಿನೊಂದಿಗೆ, ಖುರ್ರಂನ ವಿರುದ್ಧ ಬಂಡೆದ್ದು, ತಖ್ತ್‌ನ ಮೇಲಾಟದಿಂದ ತಮ್ಮನನ್ನು ದೂರವಿರಿಸಲು ಯೋಚಿಸಿದ.

ಬಾದಶಾಹ್ ಜಹಾಂಗೀರನಿಗೂ ಖುರ್ರಂ ಒಂದು ದೊಡ್ಡ ತಲೆನೋವಾಗಿ ಬಿಟ್ಟಿದ್ದ. ಈಗ ಪರವೇಜನಲ್ಲಿ ಆಶಾಭಾವನೆ ಮೂಡಿತು. ಆ ಘಟಿಂಗನನ್ನು ಪೂರ್ತಿಯಾಗಿ ಹತ್ತಿಕ್ಕಬೇಕೆನಿಸಿ, ಮೂರು ಕಡೆಯಿಂದ ಸೈನಿಕದಳಗಳನ್ನು ಅವನ ಮೇಲೆ ಆಕ್ರಮಣ ಮಾಡಲು ಯೋಜಿಸಿದ್ದ. ಒಂದು ದಳ ಮಾಂಡುಕಡೆಗೆ, ಖುಸ್ರೋನ ಮಕ್ಕಳಾದ ದಾವರ್‌ಬಕ್ಷ್‌ನ ಜೊತೆಯಲ್ಲಿ ಮತ್ತೊಂದು ದಳ ಅಹಮದ್‌ನಗರದ ಕಡೆಗೆ ಮತ್ತು ಕಡೆಯದಾಗಿ, ಸ್ವತಃ ಜಹಾಂಗೀರ್, ಕಾರ್ಯಾಚರಣೆಯ ಸಮೀಪದಲ್ಲಿ ಇರಲು, ಅಜಮೇರಕ್ಕೆ ಹೊರಟ.

ಖುರ್ರಂ ಶಾಹಿ ಸೈನ್ಯಗಳ ಕಣ್ಣು ತಪ್ಪಿಸಿ, ತನ್ನ ಕೃಪಾಪೋಷಣೆಯಲ್ಲಿದ್ದ ಮಲಿಕ್ ಅಂಬರ್‌ನ ಸಹಾಯ ಕೋರಿದ. ಆದರೆ ಅಲ್ಲಿ ನಿರೀಕ್ಷಿಸಿದ ಸಹಾಯ ದೊರೆಯಲಿಲ್ಲವಾಗಿ, ಬಂಗಾಳದ ಕಡೆಗೆ ಪರಾರಿಯಾದ.

ಖುರ್ರಂ ಕೂಡಾ ಬಹಳವಾಗಿ ದಣಿದುಹೋಗಿದ್ದ. ಅನ್ನಾಹಾರಗಳು, ರಕ್ಷಣೆ ಯಾವುದೂ ಇಲ್ಲದೆ, ಓಡುತ್ತಲೇ ಇರಬೇಕಾದ ಸ್ಥಿತಿ ಅವನನ್ನು ಹಣ್ಣುಗಾಯಿ ನೀರುಗಾಯಿ ಮಾಡಿಬಿಟ್ಟಿತ್ತು. ಅದೃಷ್ಟಕ್ಕೆ ಮೇವಾಡದ ರಾಣಾ ಕರಣ್‌ಸಿಂಗ್ ಅವನಿಗೆ ಸಹಾಯಹಸ್ತ ಚಾಚಿದ. ಅವನಿಗೆ ನಿರಾತಂಕವಾಗಿ, ಯಾರ ಕಣ್ಣಿಗೂ ಬೀಳದಿರುವ ರೀತಿಯಲ್ಲಿ ಅಮೃತಶಿಲೆಯ ಮಹಲನ್ನು ನಿರ್ಮಿಸಿ, ಅವನು ಅವನ ಪರಿವಾರ ಇರುವ ವ್ಯವಸ್ಥೆ ಮಾಡಿದ.

ಸುದ್ದಿ ತಿಳಿದ ಜಹಾಂಗೀರ್ ರಾಣಾಗೆ ಸಂದೇಶ ಕಳಿಸಿದ. ತನ್ನ ಆಶ್ರಯದಲ್ಲಿರಿಸಿ ಕೊಂಡಿರುವ ಖುರ್ರಂನನ್ನು ಒಪ್ಪಿಸಬೇಕು, ಇಲ್ಲವಾದಲ್ಲಿ ಮೊಘಲ್ ಸೈನ್ಯವನ್ನು ಎದುರಿಸಬೇಕು ಎಂದು ಎರಡು ಆಯ್ಕೆಗಳನ್ನು ಮುಂದಿರಿಸಿದ್ದ. ತನ್ನ ಇಷ್ಟು ಒಳ್ಳೆಯ ಗೆಳೆಯನನ್ನು ಸಂಕಷ್ಟಕ್ಕೆ ಸಿಲುಕಿಸಲು ಮನಸ್ಸು ಒಪ್ಪಲಿಲ್ಲವಾಗಿ, ತಂದೆಯ ಮುಂದೆ ಶರಣಾಗಲು ನಿರ್ಧರಿಸಿದ. ತಂದೆಗೆ ಒಂದು ಪತ್ರ ಬರೆದ. ಅದರಲ್ಲಿ ತನ್ನ ದ್ರೋಹಕ್ಕಾಗಿ ಕ್ಷಮೆನೀಡಬೇಕೆಂದು ಯಾಚಿಸಿದ್ದ ಮತ್ತು ತನ್ನ ಸೋಲನ್ನು ಒಪ್ಪಿಕೊಂಡಿದ್ದ.

ಅದಕ್ಕೆ ಉತ್ತರವಾಗಿ ಜಹಾಂಗೀರ್, ಮಗ ಖುರ್ರಂಗೆ ಅವನ ಇಬ್ಬರು ಮಕ್ಕಳಾದ ದಾರಾಶಿಕೋಹ್ ಮತ್ತು ಔರಂಗಜೇಬರನ್ನು ಆಸ್ಥಾನಕ್ಕೆ ಕಳಿಸಿಕೊಡಬೇಕೆಂದೂ ಅವನ

ವಶದಲ್ಲಿರುವ ರೋಹಟಾ ಮತ್ತು ಆಸೀರ್ ಕೋಟೆಗಳನ್ನೂ ಒಪ್ಪಿಸಬೇಕೆಂದೂ ತಿಳಿಸಿ, ಇದನ್ನೆಲ್ಲ ಪೂರೈಸಿದಲ್ಲದೆ ಕ್ಷಮೆ ಸಾಧ್ಯವಿಲ್ಲವೆಂದಿದ್ದ.

ಪತ್ರದ ಒಂದೊಂದು ಅಕ್ಷರದ ಹಿಂದೆಯೂ ನೂರ್ ಜಹಾನಳ ದುರ್ಬೋಧೆಯ ನೆರಳಿತ್ತು. ಆದರೂ ಅವನು ಸದ್ಯಕ್ಕೆ ತೀರಾ ಅಸಹಾಯಕ ಸ್ಥಿತಿಯಲ್ಲಿದ್ದ.

ಜಹಾಂಗೀರ್ ದಂಪತಿಗಳ ನಿರೀಕ್ಷೆ ಸುಳ್ಳಾಗುವಂತೆ, ಶಹರಿಯಾರ್ ಸೋಲಿನಿಂದಾಗಿ ಜೋಲು ಮುಖ ಹಾಕಿಕೊಂಡು ಬಂದ. ಆದರೆ ನೂರ್ ಜಹಾನ್ ಅದಕ್ಕೂ ಖುರ್ರಂನೇ ಕಾರಣವೆಂದು ಬಿಂಬಿಸಿದಳು. ಮೊಘಲ್ ಸಾಮ್ರಾಜ್ಯದ ಹೃದಯ ಭಾಗವಾಗಿದ್ದ ಖಾಂದಾಹಾರ್ ಅನ್ಯಾಯವಾಗಿ ಕಳೆದು ಹೋಗಲು ಖುರ್ರಂ, ಸೈನ್ಯ ತೆಗೆದುಕೊಂಡು ಹೋಗಲು ನಿರಾಕರಿಸಿದ್ದೇ ಮಹಾಪರಾಧವೆಂದು ಅತಿಯಾದ ನೋವಿನಿಂದ, ಸಂಕಟದಿಂದ ಹೇಳಿ ಜಹಾಂಗೀರನ, ಮಗನ ಮೇಲಿನ ದ್ವೇಷವನ್ನು ಇನ್ನಷ್ಟು ಹೆಚ್ಚಿಸಿದಳು.

ಖುರ್ರಂನನ್ನು ಸೋಲಿಸಿದ ಮೇಲೆ ಮಹಬ್ಬತ್‌ಖಾನನ ಮಹತ್ವಾಕಾಂಕ್ಷೆ ಚಿಗುರೊಡೆಯಿತು. ಒಂದು ಕಡೆ ಸಿಂಹಾಸನ ಯಾರಿಗೆಂಬ ಸಮಸ್ಯೆ ಜಹಾಂಗೀರ್, ನೂರ್ ಜಹಾನರನ್ನು ಕಾಡುತ್ತಿದ್ದರೆ, ಮತ್ತೊಂದು ಕಡೆ, ನೂರ್ ಜಹಾನ್‌ಳ ಮೇಲೆ ಸೇಡುತೀರಿಸಿಕೊಳ್ಳಲು, ತಾನೇ ಸಿಂಹಾಸನ ಕಸಿದುಕೊಳ್ಳಲು ಮಹಬ್ಬತ್‌ಖಾನ್ ಮನಸ್ಸು ಮಾಡುತ್ತಿದ್ದ. ನೂರ್ ಜಹಾನ್ ಕೂಡಾ ಈ ಪ್ರಯತ್ನದಲ್ಲಿ ಹಿಂದಿರಲಿಲ್ಲ. ತನಗೆ ಬೇಕಾದವರಿಗೆಲ್ಲ ಒಳ್ಳೊಳ್ಳೆ ಅಧಿಕಾರ ಸ್ಥಾನಗಳನ್ನು ಹಣ, ಸಂಪತ್ತನ್ನು ಲಂಚವಾಗಿ ಕೊಟ್ಟು ತನ್ನ ಕಡೆಗೆ ಇರಿಸಿಕೊಂಡಿದ್ದಳು. ಇದೆಲ್ಲವನ್ನೂ ಜಹಾಂಗೀರನಿಗೆ ಮನವರಿಕೆ ಮಾಡಿಕೊಟ್ಟಿದ್ದ. ಅಧಿಕಾರ ತನ್ನ ಕೈಗೆ ಬಂದರೆ ಎಲ್ಲವನ್ನೂ ಸುವ್ಯವಸ್ಥೆಗೊಳಿಸುತ್ತೇನೆಂದು ಹೇಳಿಕೊಂಡಿದ್ದ. ಎಷ್ಟೊಂದು ಮಂದಿ ಸಲಹಾಕಾರರು, ಸಮರ್ಥ ಮಂತ್ರಿಗಳು ಇರುವಾಗ ಬಾದಶಾಹರೇಕೆ ಆಕೆಯ ಕೈಗೊಂಬೆಯಾಗಿ ವರ್ತಿಸುತ್ತಿದ್ದಾರೆ ಎನ್ನುವುದು ಅವನಿಗೆ ಅರ್ಥವಾಗಲಿಲ್ಲ. ಜಹಾಂಗೀರನ ಗಮನಕ್ಕೂ ಇದೆಲ್ಲ ಬಂತಾದರೂ ಗೆಳೆಯನ ಬುದ್ಧಿವಾದವನ್ನು ಕೇಳಬೇಕೆನಿಸಿದರೂ ನೂರ್ ಜಹಾನಳ ಸೆಳೆತದ ಮುಂದೆ ದಾಸನಾಗಿ ಬಿಡುತ್ತಿದ್ದ. ಅವನಿಗೆ ಸಾಮ್ರಾಜ್ಯಕ್ಕಿಂತಲೂ ಸಾಮ್ರಾಜ್ಞಿಯ ಚುಂಬಕ ಶಕ್ತಿಯೇ ಮಹತ್ವದ್ದಾಗಿತ್ತು.

ಮಹಬ್ಬತ್‌ಖಾನನ ಅಸಮಾಧಾನ, ದ್ವೇಷಗಳು ಹೆಚ್ಚುತ್ತಿದ್ದವು. ಎಳೆತನದಿಂದಲೂ ಜೊತೆಗೆ ಬೆಳೆದು, ಸ್ವಂತ ಅಣ್ಣ ತಮ್ಮಂದಿರಿಗಿಂತಲೂ ಹೆಚ್ಚಿನ ಆಪ್ತ ಗೆಳೆತನದಲ್ಲಿದ್ದರೂ, ನೂರ್ ಜಹಾನಳ ಪ್ರವೇಶದೊಂದಿಗೆ ಅವರ ನಡುವಿನ ಆತ್ಮೀಯತೆ ದುರ್ಬಲವಾಗಿತ್ತು. ಎಂಥ ಸಮರ್ಥ ಯೋಧ, ಆಡಳಿತಗಾರ, ಈಗ ಹೆಂಡತಿಯ ಗುಲಾಮನಂತೆ ವರ್ತಿಸುತ್ತಾ, ಅವಳು ಹೇಳುವ, ಸಲಹೆ ನೀಡುವ ಮಾತುಗಳ ಹಿಂದುಮುಂದನ್ನು ಆಲೋಚಿಸದೆ ಒಪ್ಪಿಕೊಳ್ಳುವ, ದುರ್ಬಲ ಮನಃಸ್ಥಿತಿಗೆ ಬಂದದ್ದು ಬೇಸರವೂ ದುಃಖವೂ ಆಗಿತ್ತು. ಒಬ್ಬಳು ಹೆಣ್ಣಾಗಿ ಸಾಮ್ರಾಜ್ಯದ ಆಡಳಿತದಲ್ಲಿ ಮಧ್ಯೆ ಪ್ರವೇಶಿಸುವುದು ಅವನಿಗೂ ಅವನ ಸಮುದಾಯಕ್ಕೂ ಅಸಹನೀಯವಾಗಿತ್ತು.

ಮಹಬ್ಬತ್‌ಖಾನನನ್ನು ಹಾದಿಗೆ ಹಚ್ಚಲು ಯೋಚಿಸುತ್ತಿದ್ದ ನೂರ್ ಮೊದಲಿನಿಂದಲೂ ಅವನ ಮೇಲೆ ಕಣ್ಣಿರಿಸಿದ್ದು ಅವನಿಗೆ ಸಲ್ಲಬೇಕಾಗಿದ್ದ ಪದೋನ್ನತಿಗಳನ್ನು ತಡೆಹಿಡಿದಳು.

ಕೆಲಸಕ್ಕೆ ಬಾರದ ಸಣ್ಣಪುಟ್ಟ ಸೈನಿಕ ಕಾರ್ಯಾಚರಣೆಗಳಿಗಷ್ಟೇ ಅವನನ್ನು ಕಳಿಸಿ ಅವಮಾನಗೊಳಿಸುತ್ತಿದ್ದಳು. ಆದರೆ ಈಗ ಇಷ್ಟೆಲ್ಲದರ ನಡುವೆ ಖುರ್ರಂನನ್ನು ಹತ್ತಿಕ್ಕಿ ಬಾದಶಾಹರ ದೃಷ್ಟಿಯಲ್ಲಿ ಬಹಳ ಎತ್ತರಕ್ಕೆ ಬೆಳೆದಿದ್ದ ಮುಂದಿನ ಚಕ್ರವರ್ತಿಯ ಸಾಧ್ಯತೆಯಿದ್ದ ಪರವೇಜನಿಗೆ ಬಹಳ ಹತ್ತಿರದವನಾಗಿ ಬಿಟ್ಟಿದ್ದ. ಇದನ್ನೂ ನೂರ್ ಜಹಾನಳಿಗೆ ಸಹಿಸಲು ಆಗಲಿಲ್ಲ. ಮತ್ತೆ ಜಹಾಂಗೀರನ ಕಿವಿಯೂದಿದಳು. ಹಲವು ವರ್ಷಗಳು. ಅವನನ್ನು ಯಾವುದಾದರೂ ನೆಪದಿಂದ ಜಹಾಂಗೀರನ ಸಂಪರ್ಕದಿಂದ ದೂರವಿರುವಂತೆ ನೋಡಿಕೊಂಡಿದ್ದಳು. ಆದರೆ ಈಗ ಪರವೇಜನ ಪಕ್ಷ ಸೇರಿ, ಖುರ್ರಂನ ಬಂಡಾಯವನ್ನು ಹತ್ತಿಕ್ಕಿದ್ದ. ಆದ್ದರಿಂದ ಜಹಾಂಗೀರನ ವಿಶ್ವಾಸಪಾತ್ರನಾದ ಮಹಬ್ಬತ್‌ಖಾನ್ ನೂರ್ ಜಹಾನಳ ಕಣ್ಣಿಗೆ ಬಹಳ ಅಪಾಯಕಾರಿಯಾಗಿ ಕಾಣಿಸುತ್ತಿದ್ದ. ಆದ್ದರಿಂದ ಆಗ್ರಾದಿಂದ ದೂರವಿರಲು, ಅವನನ್ನು ಬಂಗಾಳದ ಗವರ್ನರ್ ಆಗಿ ಕಳಿಸಿಬಿಟ್ಟಳು. ಸಾಲದೆಂಬಂತೆ, ಅವನು ಬಾದಶಾಹರ ವಿರುದ್ಧ ಪಿತೂರಿ ಮಾಡುತ್ತಿದ್ದಾನೆಂದು ಆರೋಪ ಹೊರಿಸಿ, ಅವನ ಸಿಟ್ಟಿಗೆ ತುಪ್ಪ ಎರೆದಳು. ಕೂಡಲೇ ಜಹಾಂಗೀರ್ ಅವಳ ಮಾತನ್ನು ನಂಬಿ, ಕೂಡಲೇ ಬಂಗಾಳದ ಕಡೆಗೆ ಹೊರಡಬೇಕೆಂದೂ ಇಲ್ಲವಾದಲ್ಲಿ, ಕೂಡಲೇ ದರಬಾರಿನಲ್ಲಿ ಕಾಣಿಸಿಕೊಳ್ಳಬೇಕೆಂದೂ ಆದೇಶವನ್ನು ಕಳಿಸಿಕೊಟ್ಟ.

ಎಂದೂ ಇಲ್ಲದ ಅವಮಾನ, ಅನುಮಾನಗಳು, ಮಹಬ್ಬತ್‌ಖಾನನ್ನು ಅತಿಯಾಗಿ, ಮಾನಸಿಕವಾಗಿ ಘಾಸಿಗೊಳಿಸಿತು. ಇಷ್ಟು ವರ್ಷಗಳು ಜಹಾಂಗೀರನ ಸೇವೆಯಲ್ಲಿದ್ದರೂ ತಾನೇನೆಂದು ಅರ್ಥಮಾಡಿಕೊಳ್ಳದೆ ಹೆಂಡತಿಯ ಮಾತಿಗೆ ಕಿವಿಗೊಡುವಷ್ಟು ಹೆಂಡತಿಯ ಗುಲಾಮನಾದನೇ! ಇನ್ನು ಈ ಇಬ್ಬರನ್ನೂ ಸಹಿಸಿಕೊಳ್ಳುವುದು ಸಾಧ್ಯವಿಲ್ಲವೆನಿಸಿ, ತನ್ನ ಮೇಲಿನ ಆರೋಪಗಳಿಗೆ ಪ್ರತಿಯಾಗಿ, ಸರಿಯಾದ ಪಾಠಕಲಿಸುವ ನಿರ್ಧಾರ ಮಾಡಿದ. 4000 ರಾಜಪೂತ ಯೋಧರೊಂದಿಗೆ ಆಗ್ರಾ ತಲುಪಿದ. ಅಷ್ಟು ಹೊತ್ತಿಗೆ ಅವನ ಮೇಲೆ ಇನ್ನಷ್ಟು ಆರೋಪಗಳನ್ನು ಸಂಗ್ರಹಿಸಿ ಹೇಳಿದಳು. ಒಂದು ಹಣಕಾಸಿನ ವ್ಯವಹಾರದಲ್ಲಿ ಏರುಪೇರಾಗಿದೆ ಎಂಬ ಆರೋಪ, ಮತ್ತೊಂದು, ಬಾದಶಾಹರ ಅಪ್ಪಣೆ ಪಡೆಯದೆಯೇ ಮಗಳ ಮದುವೆಯನ್ನು ಖ್ವಾಜಾ ಉಮರ್‌ಬಕ್ಷ್ ಬಂದಿಯ ಜೊತೆ ಮಾಡಿದನೆಂಬ ಆರೋಪ. ಇದರಿಂದ ಜಹಾಂಗೀರನಿಗೆ ಮದುವೆಯ ವಿಚಾರದಲ್ಲಿ ಹೊರಡಿಸಿದ ನೀತಿ ನಿಯಮವನ್ನು ಮೀರಿದನೆಂಬ ಆಕ್ರೋಶ. ಪರಿಣಾಮವಾಗಿ ಮದುಮಗನನ್ನು ಸೆರೆಯಲ್ಲಿರಿಸಿದ. ಮಹಬ್ಬತ್‌ಖಾನ್ ವರದಕ್ಷಿಣೆ ರೂಪದಲ್ಲಿ ಹುಡುಗನಿಗೆ ಕೊಟ್ಟಿರಬಹುದಾದ ಹಣವನ್ನು ವಶಕ್ಕೆ ಪಡೆದು, ರಾಜಬೊಕ್ಕಸದಲ್ಲಿ ಇರಿಸುವಂತೆ ಆದೇಶಿಸಿದ.

ದಿನಂಪ್ರತಿ ಆಗುತ್ತಿದ್ದ ಅವಮಾನ ಸಹಿಸಲಾಗಲಿಲ್ಲ. ಇದೆಲ್ಲ ನೂರ್ ಜಹಾನ್‌ಳ ಪ್ರಚೋದನೆ ಎಂಬುದು ಸ್ಪಷ್ಟವಾಯಿತು. ಶಹರಿಯಾರನನ್ನು ಸಿಂಹಾಸನಕ್ಕೆ ಏರಿಸಲು, ತನ್ನ ದಾರಿಗೆ ಅಡ್ಡವಾಗಬಹುದಾದ ಎಲ್ಲರನ್ನೂ ಒಬ್ಬೊಬ್ಬರನ್ನೂ ಒಂದೊಂದು ಕಾರಣವನ್ನು ಮುಂದಿಟ್ಟುಕೊಂಡು, ದೂರಮಾಡುವ ಗಂಭೀರ ಪ್ರಯತ್ನದಲ್ಲಿ ನಿರತಳಾದಳು. ಪರವೇಜ್‌ನನ್ನು ಬೆನ್ನಿಗೆ ಇಟ್ಟುಕೊಂಡು ಮಹಬ್ಬತ್‌ಖಾನ್ ಹೋರಾಡುತ್ತಿದ್ದರೆ, ಖುರ್ರಂನನ್ನು ಹಿಂದಿಕ್ಕಿಕೊಂಡು, ಅಣ್ಣ ಅಸಫ್‌ಖಾನ್ ಅಳಿಯನಿಗೆ ಸಿಂಹಾಸನ ದಕ್ಕಿಸಿಕೊಡಲು

ಪ್ರಯತ್ನಿಸುತ್ತಿದ್ದ. ಮಹಬ್ಬತ್‌ಖಾನನಿಗೆ ಸ್ವಲ್ಪ ಮಟ್ಟಿಗೆ ಪಾಠ ಕಲಿಸಿದ್ದಾಯಿತು. ಈಗ ಅಣ್ಣ ಅಸಫ್‌ಖಾನನಿಗೆ ಪಾಠ ಕಲಿಸಬೇಕಿತ್ತು. ಆದರೆ ಅವನನ್ನು ಎದುರುಹಾಕಿಕೊಳ್ಳುವುದು ಅಷ್ಟು ಸುಲಭವಾಗಿರಲಿಲ್ಲ. ಒಂದು ಕಡೆ ರಕ್ತ ಸಂಬಂಧ. ಮತ್ತೊಂದು ಕಡೆ ಪ್ರಧಾನಮಂತ್ರಿ. ಸಾಮ್ರಾಜ್ಯಕ್ಕೆ ಅವನದು ಅಪಾರಸೇವೆ! ಜೊತೆಗೆ ತಂದೆ ಏನೆಂದುಕೊಳ್ಳುತ್ತಾರೋ ಎನ್ನುವ ಅಳುಕು, ಆದರೂ ರಾಜಕಾರಣದಲ್ಲಿ ಅವೆಲ್ಲ ಅಷ್ಟು ಮುಖ್ಯವಲ್ಲ.

ತಂದೆ ಘಿಯಾಸ್‌ನ ಮಾರ್ಗದರ್ಶನಗಳು ದೊರೆಯುತ್ತಿದ್ದುವಾದರೂ ಅಧಿಕಾರ ಹೆಚ್ಚಾದಂತೆ, ಸಲಹೆ, ಮಾರ್ಗದರ್ಶನಗಳನ್ನು ಮೀರಿ ತನ್ನ ನಿರ್ಧಾರಗಳಿಗೇ ಅಂಟಿಕೊಳ್ಳುತ್ತಿದ್ದಳು. ಒಂದು ಸಂದರ್ಭದಲ್ಲಿ ಶಹರಿಯಾರನ ಜೊತೆ ಲಾಡ್ಲಿಯ ಮದುವೆ ವಿಷಯವಾಗಿ ಚರ್ಚಿಸಲು ಬಂದಿದ್ದಳು. ಆದರೆ ಘಿಯಾಸ್‌ಗೆ ಅವನೊಂದಿಗೆ ಲಾಡ್ಲಿಯ ಮದುವೆ ಸರಿಯಲ್ಲ, ಅವನೊಬ್ಬ ಹೆಣ್ಣಿಗ ಯಾವುದಕ್ಕೂ ಪ್ರಯೋಜನವಿಲ್ಲದವನು. ಈ ಮದುವೆಯ ಹಿಂದೆ ನಿನ್ನ ಸ್ವಾರ್ಥವಿದೆಯೇ ಹೊರತಾಗಿ ನಿನ್ನ ಮಗಳ ಭವಿಷ್ಯದ ಆಲೋಚನೆಯಿಲ್ಲ ಎಂದು ಎಷ್ಟೇ ಬುದ್ಧಿ ಹೇಳಿದರೂ ಕೇಳಿಸಿಕೊಳ್ಳಲಿಲ್ಲ. ಅವನ ದೌರ್ಬಲ್ಯವನ್ನೇ ಬಂಡವಾಳ ಮಾಡಿಕೊಂಡು, ಹಿನ್ನೆಲೆಯಿಂದ ತಾನೇ ಆಳುವುದಕ್ಕೆ ಸಾಧ್ಯವೆಂಬ ಆಲೋಚನೆ ಈ ನಿರ್ಧಾರಕ್ಕೆ ದೂಡಿತ್ತು. ಪರವೇಜ್, ಖುರ್ರಂ-ಇಬ್ಬರು ಪ್ರಬಲ ಸ್ಪರ್ಧಿಗಳು ಇದ್ದರೂ ಶಹರಿಯಾರನಿಗೇ ಸಿಂಹಾಸನ ದೊರೆಯುವುದೆಂಬ ಕನಸು ಕಾಣುತ್ತಿದ್ದಳು.

ತನ್ನ ಹಠದಂತೆ ಮಗಳ ಮದುವೆಯನ್ನು ಅದ್ದೂರಿಯಾಗಿ ಮಾಡಿದಳು. 1621ರಂದು, ರಾಜಪರಿವಾರ ಆಗ್ರಾಗೆ ಹಿಂತಿರುಗಿದ ಕೂಡಲೇ ಅವಳ ಮದುವೆಯ ಸಮಾರಂಭ ನಡೆಯಿತು. ಸಾಂಪ್ರದಾಯಿಕವಾದ ರೀತಿಯಲ್ಲಿ ಖಾಜಿಯವರು ಮದುವೆಯ ವಿಧಿ ವಿಧಾನಗಳೊಂದಿಗೆ ಮುಗಿಸಿ ಇಬ್ಬರಿಂದಲೂ ಕಬೂಲಾತಿಯನ್ನು ಹೇಳಿಸಿದರು.

ಲಾಡ್ಲಿಯ ಮದುವೆಯ ಸುದ್ದಿ ಖುರ್ರಂಗೆ ತಲುಪಿತ್ತು. ಅವನಿಗೆ ಸಂತೋಷಕ್ಕೆ ಬದಲಾಗಿ ಸಂಕಟವಾಯಿತು. ಆ ನಪುಂಸಕ, ಅಯೋಗ್ಯ, ಅಸಮರ್ಥನಾದವನಿಗೆ, ಮಗಳನ್ನು ಮದುವೆ ಮಾಡಿಸಲು, ನೂರ್ ಜಹಾನ್ ಬೇಗಂಗೆ ಮನಸ್ಸು ಬಂತಾದರೂ ಹೇಗೆ ಎಂದು ಯೋಚಿಸಿದ. ಪ್ರತಿ ಕೆಲಸದ ಹಿಂದೆ ನೂರ್ ಜಹಾನ್‌ಳ ಸ್ವಾರ್ಥವಿದ್ದೇ ಇರುತ್ತಿತ್ತು. ಎಲ್ಲವನ್ನೂ ಲೆಕ್ಕಾಚಾರದ ದೃಷ್ಟಿಯಿಂದಲೇ ನೋಡುತ್ತಿದ್ದಳು.

ಖುರ್ರಂಗೆ ಕೂಡಲೇ ತನ್ನ ಕಾರ್ಯಾಚರಣೆ ಆರಂಭಿಸಬೇಕು ಎಂದುಕೊಂಡು ತನ್ನ ಸೇನಾಧಿಪತಿಗಳನ್ನು, ಮುಖ್ಯ ಸಲಹಾಗಾರರನ್ನು ತನ್ನ ಖಾಸಾಸಭೆಗೆ ಕರೆಸಿಕೊಂಡ. ಪರಿಸ್ಥಿತಿಯ ಅವಲೋಕನ, ಮುಂದಿನ ಹೆಜ್ಜೆ ಹೇಗೆ ಎಂಬುದನ್ನು ಚರ್ಚಿಸಬೇಕಿತ್ತು. ಬಾದಶಾಹ್ ಜಹಾಂಗೀರನನ್ನು ದಕ್ಷಿಣದ ಕಡೆಗಿನ ದಂಡೆಯಾತ್ರೆಯ ಸಮಯದಲ್ಲಿ, ಮೊಘಲ್ ದಂಡನಾಯಕ ಅಬ್ದುರ್ ರಹೀಮರನ್ನು ತನ್ನೊಂದಿಗೆ ಕಳಿಸಿಕೊಡಬೇಕೆಂದು ಬೇಡಿಕೊಂಡಿದ್ದ. ಆದ್ದರಿಂದ ಪರವೇಜ್‌ನ ಸೈನ್ಯದ ಜೊತೆಗಿದ್ದ ಅಬ್ದುರ್ ರಹೀಮ್, ಬಾದಶಾಹ್‌ರ ಆದೇಶದ ಮೇರೆಗೆ ಖುರ್ರಂನನ್ನು ಬಂದು ಸೇರಿದ್ದ. ಬಂದವರೆಲ್ಲರೂ ಕೋರ್ನಿಶ್ ಮಾಡಿ, ರತ್ನಗಂಬಳಿ ಮೇಲೆ ಮೊಣಕಾಲೂರಿ ತಮ್ಮ ತಮ್ಮ ಆಸನಗಳನ್ನು

ಗ್ರಹಿಸಿದರು. ಖುರ್ರಂ ದಿವಾನ್ ಮೇಲೆ ಆಸೀನನಾದ. ಸಭೆಯಲ್ಲಿ ಗಂಭೀರ ಮೌನ ತುಂಬಿತ್ತು. ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಖುರ್ರಂ ಬಾದಶಾಹನಲ್ಲವಾಗಿದ್ದರೂ, ಭಾವಿ ಬಾದಶಾಹನೆಂದೇ ಪರಿಗಣಿಸಿಬಿಟ್ಟಿದ್ದರು. ಏನು ಆದೇಶ ಬರುವುದೋ ಎಂದು ಕುತೂಹಲದಿಂದ ಎದುರು ನೋಡುತ್ತಿದ್ದರು.

"ನಿಮ್ಮನ್ನೆಲ್ಲ ಕರೆಸಿರುವುದು ರಹಸ್ಯಮಂತ್ರಣಕ್ಕೆ. ಇಲ್ಲಿ ನಡೆಯುವ ಮಾತುಕತೆಯಲ್ಲಿನ ಒಂದಕ್ಷರವೂ ಹೊರಗೆ ಹೋಗಕೂಡದು. ಅರ್ಥವಾಯಿತೇ?" ಎಂದಾಗ ಎಲ್ಲರೂ ತಲೆತೂಗಿದರು. ".......ನೋಡಿ ನನ್ನ ಅಬ್ಬಾಜಾನರ ಆರೋಗ್ಯ ಬಹಳ ದಿನಗಳಿಂದಲೂ ಕೆಟ್ಟಿದೆ. ಈಗ ಸಾವಿನಂಚಿನಲ್ಲಿದ್ದಾರೆ" ಎಂದಾಗ ಎಲ್ಲರೂ ಪರಸ್ಪರ ಒಂದು ರೀತಿಯಲ್ಲಿ ಅನುಮಾನಾಸ್ಪದರಾಗಿ ನೋಡಿದರು. ಜಹಾಂಗೀರ್ ಖುರ್ರಂ ಹೇಳಿದಷ್ಟು ಗಂಭೀರಸ್ಥಿತಿ ತಲುಪಿರಲಿಲ್ಲ. ಅನಾರೋಗ್ಯದಿಂದ ಚೇತರಿಸಿಕೊಂಡು ದೈನಂದಿನ ಕೆಲಸಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದರು. ನೂರ್ ಜಹಾನ್ ಬಹಳ ಎಚ್ಚರಿಕೆಯಿಂದ ಗಂಡನನ್ನು ನೋಡಿಕೊಳ್ಳುತ್ತಿದ್ದಳು.

"ದಾದಾ ಬಾದಶಾಹರು ನನ್ನ ಮೇಲೆ ಅತಿಯಾದ ಮಮತೆ ಇರಿಸಿಕೊಂಡು, ನನ್ನನ್ನೇ ಮುಂದಿನ ಬಾದಶಾಹರಾಗಿಸಬೇಕೆಂಬ ಕನಸು ಕಂಡಿದ್ದರು. ಈಗ ಅವರ ಆಸೆ ಪೂರೈಸುವ ಕ್ಷಣಗಳು ಬಂದಿವೆ."

ಅಬ್ದುರ್ ರಹೀಮ್ ಎದ್ದು ನಿಂತು "ಶಹಜಾದೆ ಶಹನ್‌ಶಾಹ್, ಶಹಜಾದೆ ಶಹರಿಯಾರ್‌ಗೆ ಬಾದಶಾಹ್, ಪಾದಶಾಹ್ ಬೇಗಂ ಇಬ್ಬರದೂ ಬೆಂಬಲವಿದೆಯಲ್ಲಾ!"

"ಅದೇನೋ ನಿಜವೇ. ಆದರೆ ಅದು ಬಹಳ ಹಿಂದೆ. ಈಗ ಪರಿಸ್ಥಿತಿಗಳು ಪೂರ್ತಿಯಾಗಿ ಬದಲಾಗಿವೆ." "ಸಿಂಹಾಸನಕ್ಕಾಗಿ ಸ್ಪರ್ಧಿಗಳು ಇದ್ದಾರಲ್ಲವೆ?......ನಿಮ್ಮ ಹಾಗೇ ಪರವೇಜ್, ಶಹರಿಯಾರರೂ ಅಧಿಕಾರವನ್ನು ಪಡೆದುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಪ್ರಬಲ ಸ್ಪರ್ಧಿಯಾಗಿದ್ದ ಶಹಜಾದೆ ಖುಸ್ರೋ ಈಗಿಲ್ಲ ಎನ್ನುವುದೇ ಸಮಾಧಾನ. ಹುಜೂರ್ ಸ್ವಲ್ಪ ನಿಧಾನವಾಗಿ ಯೋಚಿಸಿ ಹೆಜ್ಜೆ ಇಡುವುದು ಒಳ್ಳೆಯದೆನಿಸುತ್ತದೆ. ಯಾಕೆಂದರೆ, ನಿಮಗೆ ನಮ್ಮ ಬೆಂಬಲ ಇರುವ ಹಾಗೆಯೇ, ಅವರಿಗೂ ನಿಷ್ಠಾವಂತ ಬೆಂಬಲಿಗರು ಇರಬಹುದಲ್ಲವೇ. ನನ್ನ ಹಲವಾರು ವರ್ಷಗಳ ಅನುಭವದಿಂದ, ಸಿಯಾಸತ್‌ಗೆ ನಾನಿರಿಸಿದ ನಿಷ್ಠೆಯಿಂದ ಇದನ್ನು ಹೇಳುತ್ತಿದ್ದೇನೆಯೇ ಹೊರತು, ಅನ್ಯಥಾ ಭಾವಿಸಬಾರದೆಂದು ನನ್ನ ಪ್ರಾರ್ಥನೆ" ಎಂದ ಅಬ್ದುರ್‌ರಹೀಮ್.

ಇದರಿಂದಲೇ, ಖುರ್ರಂಗೆ ತನ್ನ ಪರ ಯಾರಿದ್ದಾರೆ ಎಂದು ತಿಳಿಯಲು ಸಾಧ್ಯವಾಯಿತು.

ಅಸಫ್‌ಖಾನ್, ಅಳಿಯ ಖುರ್ರಂನ ಶೌರ್ಯ, ಸಾಹಸ, ಸಾಮರ್ಥ್ಯಗಳ ಬಗ್ಗೆ ಹೆಮ್ಮೆಯಿರಿಸಿಕೊಂಡಿದ್ದರೂ, ರಾಜನಿಷ್ಠೆ, ತಂಗಿ ಮೇಲಿನ ಅಭಿಮಾನವನ್ನು ಪೂರ್ತಿಯಾಗಿ ತೊರೆದಿರಲಿಲ್ಲ. ತಂದೆ ಬದುಕಿರುವವರೆಗಾದರೂ ಅವನ ಮುಂದೆ ಅನ್ಯೋನ್ಯವಾಗಿರಬೇಕೆಂದುಕೊಂಡರು.

ಆದರೂ ಪರಿಸ್ಥಿತಿಗಳು ಆತ್ಮೀಯರಾದವರನ್ನೂ ಬದ್ಧಶತ್ರುಗಳಾಗಿಸುತ್ತವೆ. ಅಸಫ್‌ಖಾನನ ಸಂಬಂಧವನ್ನು ಕಡಿದುಕೊಳ್ಳುವುದು ಸದ್ಯಕ್ಕೆ ಸಾಧ್ಯವಿರಲಿಲ್ಲ. ಲಾಡ್ಲಿಯ

ಮದುವೆಯಾದ ಆರು ತಿಂಗಳಿಗೆ ಅಸ್ಮತ್ ತೀರಿಕೊಂಡಿದ್ದು ಘಿಯಾಸ್‌ಬೇಗ್ ಬೇರೆ ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದ. ಯಾವ ಕ್ಷಣದಲ್ಲಾದರೂ ಉಸಿರಾಟ ನಿಲ್ಲಬಹುದೆನಿಸಿತ್ತು. ಜಹಾಂಗೀರ್ ಮತ್ತೆ ಅನಾರೋಗ್ಯಕ್ಕೆ ತುತ್ತಾಗಿದ್ದ, ಖುರ್ರಂ ಗಾದಿಗಾಗಿ ಸಕಲೋಪಾಯಗಳನ್ನು ಆಲೋಚಿಸುತ್ತಿದ್ದ. ಇಂಥ ಸಮಯದಲ್ಲಿ ತನ್ನ ಕಡೆಗೆ ಗಂಡನ ಹೊರತು ಬೇರಾರೂ ಇರಲಿಲ್ಲವಾಗಿ, ಅಸಫ್‌ನೊಂದಿಗೆ ತಿಕ್ಕಾಟ ಬೇಡವೆಂದು ಸುಮ್ಮನಿದ್ದಳು.

ಜಹಾಂಗೀರನ ಆರೋಗ್ಯ ಸುಧಾರಿಸಬಹುದೆಂದು ಕಾಶ್ಮೀರದಲ್ಲಿ ಬಿಡಾರ ಹೂಡಿದ್ದ ದಂಪತಿಗಳು ಹಲವಾರು ಸಮಸ್ಯೆಗಳಿಂದ ತೀರಾ ಬಳಲಿಹೋಗಿದ್ದರು. ಜಹಾಂಗೀರನಾದರೂ ಕುಡಿತ, ಅಫೀಮುಗಳ ಸೇವನೆಯಿಂದ, ಒತ್ತಡಗಳಿಂದ ಸ್ವಲ್ಪ ಮಟ್ಟಿಗಾದರೂ ಬಿಡಿಸಿಕೊಳ್ಳುತ್ತಿದ್ದ. ಆದರೆ ಬಡಪಾಯಿ ನೂರ್ ಜಹಾನ್, ಧೈರ್ಯ ಗೆಡದೆ ಎಲ್ಲವನ್ನೂ ಸಂಭಾಳಿಸಿಕೊಂಡು ಹೋಗುತ್ತಿದ್ದಳು. ಕಾಶ್ಮೀರದಲ್ಲಿಯೂ ನೆಮ್ಮದಿಯಿಂದ ಇರಲಾಗದ ಒಂದು ಸುದ್ದಿ ಬಂತು. ತಂದೆ ಘಿಯಾಸ್‌ನ ಪರಿಸ್ಥಿತಿ ತೀರಾ ಗಂಭೀರವಾಗಿದೆ ಎನ್ನುವುದು ತಿಳಿದು ಕೂಡಲೇ ಅಲ್ಲಿಂದ ಹೊರಟರು. ಘಿಯಾಸ್‌ನ ಬಿಡಾರ ತಲುಪಿದರು. ಅಸಫ್ ಕೂಡಾ ಅಲ್ಲಿಯೇ ಅವನ ಜೊತೆಗಿದ್ದ. ಕಷ್ಟದಿಂದ ಉಸಿರಾಡುತ್ತಿದ್ದ ಘಿಯಾಸ್ ಮೊಘಲ್ ಸಾಮ್ರಾಜ್ಯದ ದಿವಾನ ಎಂತಹ ಅಸಹಾಯಕ ಸ್ಥಿತಿಯಲ್ಲಿ ಇದ್ದಾನೆ ಎಂದು ನೋಡಿದಾಗ, ನೂರ್ ಜಹಾನ್‌ಳ ಕಠಿಣ ಹೃದಯದಲ್ಲೂ ಮಾರ್ದವತೆಯಿದ್ದು, ಕಂಬನಿಯಾಗಿ ಹರಿಯಿತು. ಪರಿಸ್ಥಿತಿ, ದಿನಗಳಷ್ಟು ಮುಂದುವರೆಯಲಾರದು ಎನಿಸಿತು. ಎಷ್ಟೇ ಪ್ರಯತ್ನಿಸಿದರೂ ಅವನು ಕಣ್ಣು ತೆರೆಯಲಿಲ್ಲ. ಅಣ್ಣ–ತಂಗಿಯರು ತಂದೆಯ ಪರಿಸ್ಥಿತಿಯೆದುರು, ದ್ವೇಷ ಅಸೂಯೆಗಳನ್ನು ಮರೆತು ಅಪ್ಪಿಕೊಂಡರು.

ರಾತ್ರಿಯ ಹೊತ್ತಿಗೆ ಘಿಯಾಸ್‌ನ ಉಸಿರಾಟ ನಿಂತಿತು. ತಂದೆಯ ಅಂತಿಮ ಸಂಸ್ಕಾರಗಳ ವಿಚಾರದಲ್ಲಿ ಮತ್ತೆ ಇಬ್ಬರ ನಡುವೆ ಭಿನ್ನಾಭಿಪ್ರಾಯಗಳು ಸೃಷ್ಟಿಯಾದವು. ಖುರ್ರಂನನ್ನು ಕರೆಸಬೇಕೆಂಬುದು ಅಸಫ್‌ನ ಆಸೆಯಾಗಿದ್ದರೆ, ನೂರ್ ಜಹಾನ್ ಅವನ ಹೆಸರನ್ನೂ, ನೆರಳನ್ನೂ ದ್ವೇಷಿಸುತ್ತಿದ್ದುದರಿಂದ, ಅವನು ಬರುವುದು ಬೇಡವೆಂದು ಹಠ ಹಿಡಿದಳು.

ಜಹಾಂಗೀರ್ ಮತ್ತೇ ಕೆಮ್ಮಿನಿಂದ ತೀರಾ ಅನಾರೋಗ್ಯದಿಂದ ಹಾಸಿಗೆ ಹಿಡಿದಿರುವುದು ಖುರ್ರಂಗೆ ತಿಳಿದದ್ದೇ, ಅವನ ಆಲೋಚನೆಗಳು ಕುದುರೆ ವೇಗದಲ್ಲಿ ಓಡುತ್ತಿದ್ದವು. ಈಗ ಏನೇ ಆದರೂ ತಾನು ತಂದೆಯ ಬಳಿ ಇರುವುದೇ ಕ್ಷೇಮ. ಶಹರಿಯಾರ್ ತಂದೆಯ ಬಳಿಯೇ ಇರುವುದರಿಂದ, ಸತ್ತ ಕ್ಷಣದಲ್ಲಿಯೇ ಗಾದಿ ಅವನದಾಗುತ್ತದೆ. ತಂದೆಗೆ ಪ್ರಿಯವಾಗುವ ದಿಗ್ವಿಜಯಗಳನ್ನು ಸಾಧಿಸಿ, ಮೆಚ್ಚಿಸಿದರೆ, ಒಂದು ವೇಳೆ ತಂದೆ ಬದುಕಿದರೂ ತನ್ನ ಒಳ್ಳೆಯತನವನ್ನು, ಸಾಹಸಗಳನ್ನು ಗುರುತಿಸಿ ಖಂಡಿತವಾಗಿಯೂ ತನ್ನನ್ನೇ ಗಾದಿಯಲ್ಲಿ ಕೂರಿಸುತ್ತಾನೆ ಎಂದು ತರ್ಕಿಸಿದ. ಮಾವ ಅಸಫ್‌ಖಾನರೂ ಅವರ ಜೊತೆಯೇ ಇರುವುದರಿಂದ ಅವರಿಗೂ ಒಂದು ಪತ್ರ ಬರೆದು, ತನ್ನ ಬಗ್ಗೆ ಶಿಫಾರಸ್ಸು ಮಾಡುವಂತೆ ಕೇಳಿಕೊಂಡ. ಆದರೆ ಮರುಕ್ಷಣವೇ, ಸಂದೇಹ

ಮನೆಮಾಡಿತು. ಅಸಫ್‌ಖಾನರು ಸಾಮ್ರಾಜ್ಯದ ಅತ್ಯಂತ ನಿಷ್ಠಾವಂತ ಸೇವಕರು, ರಾಜಕುಟುಂಬದ ಹಿತೈಷಿಗಳು. ಎಂದೆಂದಿಗೂ ದ್ರೋಹದ ಯೋಚನೆ ಮಾಡುವುದಿಲ್ಲ. ಆದ್ದರಿಂದ ಈ ಪ್ರಯತ್ನಗಳ ಜೊತೆಗೆ ತಾನೂ ಆಗ್ರಾದಲ್ಲಿರುವುದೇ ಕ್ಷೇಮವೆಂದು ಭಾವಿಸಿದ.

ಕೂಡಲೇ ಬುರಹಾನ್‌ಪುರಕ್ಕೆ ಹೊರಟು ಬಂದು ತಂದೆಗೆ ಸುದೀರ್ಘ ಪತ್ರವೊಂದನ್ನು ಬರೆದ. ಉತ್ತರದ ನಿರೀಕ್ಷೆಯಲ್ಲಿ ಕಾದು ಕುಳಿತನಾದರೂ ಜಹಾಂಗೀರನಿಂದ ಮರಳಿ ಬರುವಂತೆ ಆಹ್ವಾನ ಬರಲಿಲ್ಲ. ಅವನಿಗೆ ಸ್ಪಷ್ಟವಾಗಿ ಅರ್ಥವಾಗಿ ಹೋಯಿತು. ತಂದೆ, ಹೆಂಡತಿಯ ಕೈಗೊಂಬೆಯಾಗಿರುವುದರಿಂದ, ಎಂದಿಗೂ ತನ್ನ ವಿಚಾರದಲ್ಲಿ ದಯೆ ಕ್ಷಮೆಗಳು ಸಾಧ್ಯವಿಲ್ಲವಾದ್ದರಿಂದ, ತನ್ನ ಹಕ್ಕಿಗೆ ತಾನೇ ಹೋರಾಡಬೇಕೆಂದು ನಿರ್ಧರಿಸಿದ. ಶಹರಿಯಾರನಂಥ ನರವಿಲ್ಲದವನನ್ನು ತನ್ನ ದಾರಿಯಿಂದ ಪಕ್ಕಕ್ಕೆ ಸರಿಸುವುದು ದೊಡ್ಡ ಸಾಹಸವೇನಲ್ಲ! ಖುಸ್ರೋ ಅಂಥವನನ್ನೇ ಮುಗಿಸಿದ. ತನಗೆ ಇದು ಯಾವ ಮಹಾಕೆಲಸ ಎಂದುಕೊಳ್ಳುತ್ತಾ ಇನ್ನೊಂದಷ್ಟು ಮದಿರೆಯನ್ನು ಒಳಗಿಳಿಸಿಕೊಂಡ. ಆ ಸ್ಥಿತಿಯಲ್ಲೂ ತಂದೆ ಒಮ್ಮೆ ಹೇಳಿದ ಮಾತು ನೆನಪಿಗೆ ಬಂತು "ರಾಜತ್ವದ ಮುಂದೆ ರಕ್ತ ಸಂಬಂಧಗಳು ಯಾವುವೂ ಮಹತ್ವದ್ದಲ್ಲ."

ಈಗ ಅವನು ಅಂತಹ ಸಂಬಂಧಗಳ ಬಗ್ಗೆ ತಲೆಕೆಡಿಸಿಕೊಳ್ಳದೆ ತನ್ನ ದಾರಿಯ ಮುಳ್ಳುಗಳನ್ನು ಮುರಿದು ಪಕ್ಕಕ್ಕೆ ಎಸೆದು ದಾರಿಯನ್ನು ಸುಗಮಮಾಡಿಕೊಳ್ಳುವುದೇ ಆದ್ಯ ಕರ್ತವ್ಯ ಎಂದುಕೊಂಡ. ಖುರ್ರಂನ ವಿಷಯವಾಗಿ ಅಣ್ಣ-ತಂಗಿಯರ ನಡುವೆ ಭಿನ್ನಾಭಿಪ್ರಾಯಗಳು ಮುಂದುವರೆಯುತ್ತಲೇ ಇದ್ದವು. ಲಾಡ್ಲಿಯನ್ನು ಖುರ್ರಂ ಮದುವೆಯಾಗಿದ್ದರೆ, ಯಾವುದೇ ಸಮಸ್ಯೆ, ಘರ್ಷಣೆಗಳಿಲ್ಲದೆ, ಅಧಿಕಾರವನ್ನು ದಕ್ಕಿಸಿಕೊಳ್ಳಬಹುದಾಗಿತ್ತು. ಅದು ಸಾಧ್ಯವಾಗದಿದ್ದುದಕ್ಕೆ ಖುರ್ರಂ ಮತ್ತು ಅಸಫ್‌ರ ಮೇಲೆ ಅಸಮಾಧಾನ ಹೊಗೆಯಾಡುತ್ತಲೇ ಇತ್ತು.

ಮೊಘಲರ ನಿಯಮದ ಪ್ರಕಾರ, ಘಿಯಾಸ್ ಬೇಗ್‌ನ ಎಸ್ಟೇಟ್ ಅವನು ತೀರಿಕೊಂಡ ನಂತರ ರಾಜ್ಯಕ್ಕೆ ಸೇರಬೇಕು. ರಾಜನಾದವನು ಬೇಕಾದರೆ ತನ್ನ ಸ್ವಇಚ್ಛೆಯಿಂದ, ತೀರಿಕೊಂಡ ವ್ಯಕ್ತಿಯ ಆರ್ಥಿಕ ಪರಿಸ್ಥಿತಿಯನ್ನು ಗಮನಿಸಿ, ಅವರಿಗೇ ಜೀವನೋಪಾಯಕ್ಕೆಂದು ಮರಳಿಸಬಹುದು. ಎಲ್ಲವೂ ರಾಜನಾದವನ ಜೊತೆಗಿನ ಸಂಬಂಧಗಳು ಹೇಗಿರುತ್ತವೆಂಬುದನ್ನು ಆಧರಿಸಿರುತ್ತವೆ. ಜಹಾಂಗೀರ್‌ನಿಗೆ ಎಸ್ಟೇಟನ್ನು ಅಸಫ್ ಹಿರಿಯ ಮಗನಾದ್ದರಿಂದ ಅವನಿಗೇ ಕೊಡಬೇಕೆನಿಸಿತು, ಕೊಟ್ಟು ಬಿಟ್ಟ. ಆದರೆ ನೂರ್‌ಗೆ ಅದು ಸಹಿಸಲಿಲ್ಲ.

ಇದೇ ಹೊತ್ತಿನಲ್ಲಿ ಒಂದು ಆಘಾತಕಾರಿ ಸುದ್ದಿ ಜಹಾಂಗೀರನಿಗೆ ತಲುಪಿತು. ತಾನು ನಂಬಿದಂತೆ, ಖುಸ್ರೋನ ಸಾವು ಸಹಜವಾಗಿರಲಿಲ್ಲ; ಅದು ಕೊಲೆಯಾಗಿತ್ತು. ಈ ವಿಷಯದಲ್ಲಿ ಖುರ್ರಂನನ್ನು ತರಾಟೆಗೆ ತೆಗೆದುಕೊಳ್ಳಬೇಕೆಂದು ಕೂಡಲೇ ಸಭೆಯ ಮುಂದೆ ಹಾಜರಾಗಲು ಆದೇಶಿಸಿ ಪತ್ರ ಬರೆದ.

ಖುರ್ರಂ, ತಾನು ನಿರಪರಾಧಿ ಎಂದು ವಿವರಗಳನ್ನು ತಿಳಿಸಿ ಬರೆದನಾದರೂ ಜಹಾಂಗೀರ್ ಅದಕ್ಕೆ ಒಪ್ಪಲಿಲ್ಲ. "ಅಸಫ್‌ಖಾನನ ಕುಟುಂಬವೂ ಶಿಕ್ಷೆ ಅನುಭವಿಸಲಿದ್ದಾರೆ. ಯಾಕೆಂದರೆ

ಅವನಂತಹ ದೇಶದ್ರೋಹಿಗೆ ಬೆಂಬಲ ನೀಡುತ್ತಿದ್ದಾನೆ. ಘಿಯಾಸ್‌ಬೇಗನ ಎಲ್ಲ ಸಂಪತ್ತು, ಎಸ್ಟೇಟುಗಳು ಮೆಹರುನ್ನೀಸಾಳಿಗೆ, (ನೂರಜಹಾನಳಿಗೆ) ನೀಡಲಾಗುತ್ತದೆ" ಎಂದು ಪತ್ರ ಬರೆದ.

ಈ ಬೆದರಿಕೆಯ ಪತ್ರಗಳಿಂದ, ಖುರ್ರಂನ ಕಡೆಯ ಆಸ್ಥಾನಿಕರು, ಅಧಿಕಾರಿಗಳು, ವಿಶ್ವಾಸ ಪಾತ್ರ ಮಿತ್ರರು, ಬಾದಶಾಹರನ್ನು ಎದುರು ಹಾಕಿಕೊಳ್ಳುವುದು ಅಪಾಯವೆಂದು, ಆಸ್ಥಾನಕ್ಕೆ ಬಂದು ರಾಜ ದಂಪತಿಗಳ ಮುಂದೆ ತಪ್ಪೊಪ್ಪಿಕೊಂಡು, ಅವನ ಕೆಲಸಗಳಲ್ಲಿ ತಮ್ಮ ಪಾತ್ರವೇನೂ ಇಲ್ಲವೆಂದು ತಿಳಿಸಿ, ಕ್ಷಮೆ ಕೋರಿದರು.

ಖುರ್ರಂನ ರಾಜದ್ರೋಹಗಳು ಮಿತಿಮೀರಿದವು.

ಜಹಾಂಗೀರನ ಆಸ್ತಮಾ ದಿನೇ ದಿನೇ ಹೆಚ್ಚುತ್ತಿತ್ತು. ಭಯಂಕರ ಕೆಮ್ಮು ಯಾವುದಕ್ಕೂ ಜಗ್ಗುತ್ತಿರಲಿಲ್ಲ. ಇದಕ್ಕೆ ಮೊದಲೂ ಇಂಥದ್ದೇ ಪರಿಸ್ಥಿತಿಯನ್ನು ಎದುರಿಸಿದ್ದಳು. ಈಗ ಇನ್ನೂ ಹದಗೆಟ್ಟಿತ್ತು. ಸಾಯುವ ಹಂತವನ್ನು ತಲುಪಿದ್ದ. ಕೆಮ್ಮಿನ ಹಿಂಸೆಯನ್ನು ಸಹಿಸಿಕೊಳ್ಳುವ ಶಕ್ತಿ ಈಗ ಜಹಾಂಗೀರನಲ್ಲಿ ಇರಲಿಲ್ಲ. ಆಡಳಿತದ ಕೆಲಸಗಳನ್ನು ನೂರ್ ಜಹಾನಳೇ ನೋಡಿಕೊಳ್ಳುತ್ತಿದ್ದಳು. ಝುರೋಕಾ ದರ್ಶನಕ್ಕೂ ಕೂಡಾ ಅವಳೇ ಹೋಗುತ್ತಿದ್ದಳು. ರಾಜಾದೇಶಗಳಿಗೆ ಸಹಿಯನ್ನೂ ಅವಳೇ ಮಾಡುತ್ತಿದ್ದಳು. ಈಗ ಹೆಸರಿಗೆ ಜಹಾಂಗೀರ್ ಬಾದಶಾಹನೇ ಹೊರತು, ಅವನ ಹಿನ್ನೆಲೆಗೆ ನಿಂತು ರಾಜ್ಯಾಡಳಿತವನ್ನು ಮುನ್ನಡೆಸುತ್ತಿದ್ದವಳು ಅವಳೇ ಆಗಿದ್ದಳು. ಖುರ್ರಂನ ಅಪರಾಧಗಳಿಗಾಗಿ ಅಸಫ್‌ಖಾನನನ್ನೂ ಶಿಕ್ಷಿಸುತ್ತಿದ್ದಳು. ಹೇಗಾದರೂ ಖುರ್ರಂನನ್ನು, ಎಸ್ಟೇಟುಗಳನ್ನು ತಾವು ವಶಪಡಿಸಿಕೊಳ್ಳುವುದಾಗಿ ಬೆದರಿಕೆ ಒಡ್ಡಿದಳು. ಅಸಫ್ ಇದರಿಂದ ಹೆದರಲಿಲ್ಲ. ಅಳಿಯನನ್ನು ಹುಡುಕಲೂ ಹೋಗಲಿಲ್ಲ. ಅದಕ್ಕಾಗಿ ನೂರ್ ಜಹಾನ್ ಇನ್ನೊಂದು ಬೇರೆಯೇ ಉಪಾಯವನ್ನು ಯೋಚಿಸಿದಳು.

ಅಸಫ್‌ನನ್ನು ಕರೆದು, ಆಗ್ರಾದಲ್ಲಿನ ಖಜಾನಾವನ್ನು ಲಾಹೋರಿಗೆ ತರಬೇಕೆಂದು ಆದೇಶಿದಳು. ಅಸಫ್ ತಂಗಿಯ ಜೊತೆಗಿನ ಸಲುಗೆಯಿಂದ,

"ನೀಸಾ ನೀನು ಮಾಡಲು ಹೊರಟಿರುವ ಈ ಕೆಲಸ ಅಷ್ಟು ಒಳ್ಳೆಯದಲ್ಲ. ಅಲ್ಲಿಂದ ಖಜಾನಾವನ್ನು ಸ್ಥಳಾಂತರಿಸುವುದು ಬಹಳ ಅಪಾಯ. ಇಷ್ಟಕ್ಕೂ ಸ್ಥಳಾಂತರಿಸಬೇಕಾದ ಅಗತ್ಯವಾದರೂ ಏನಿದೆ?"

"ಎಲ್ಲಿ ಬಾದಶಾಹರು ಇರುತ್ತಾರೋ, ಖಜಾನಾ ಅಲ್ಲಿರುವುದೇ ಕ್ಷೇಮಕರ."

ಅಸಫ್‌ಗೆ ಏನು ಹೇಳಬೇಕೆಂದೇ ತೋಚಲಿಲ್ಲ. ಅವನ ಮೌನವನ್ನು ಗಮನಿಸಿದಳು. "ಯಾಕೆ ಸಲಹೆ ನಿನಗೆ ಇಷ್ಟವಾಗಲಿಲ್ಲವೇನು?"

"ಇಷ್ಟದ ಪ್ರಶ್ನೆಯಲ್ಲ. ಅದು ಯಾಕೋ ಸರಿಯಲ್ಲವೇನೋ ಎನಿಸುತ್ತೆ" ಆದರೂ ಬಾದಶಾಹರ ಆಜ್ಞೆಯನ್ನು ಪಾಲಿಸಬೇಕಾದ್ದು ನನ್ನ ಧರ್ಮ. 'ರಾಜ ಖಜಾನೆಯನ್ನು' ಯಾರಿಗೆ ತಾನೇ ಮುಟ್ಟಲು ಸಾಧ್ಯ? ಆಗ್ರಾದಲ್ಲಿಯೇ ಸಾಕಷ್ಟು ಸುರಕ್ಷಿತವಾಗಿದೆಯಲ್ಲ!"

"ಸುರಕ್ಷಿತವಾಗಿದೆ ನಿಜ. ಬಾದಶಾಹರು, ರಾಜ್ಯಭಾರದ ಕೆಲಸಗಳಿಂದ ಸ್ವಲ್ಪ ಬಿಡುವು ಮಾಡಿಕೊಂಡು ಕಾಶ್ಮೀರಕ್ಕೆ ಹೋಗಿ ಒಂದಷ್ಟು ದಿನ ಅಲ್ಲಿರಲು ಯೋಚಿಸುತ್ತಿದ್ದಾರೆ. ಆಗ್ರಾದಿಂದ ದೂರ ಇರಬೇಕಾಗುತ್ತದೆ. ಇದು ಖುರ್ರಂಗೆ ಒಳ್ಳೆಯ ಅವಕಾಶ ಕಲ್ಪಿಸಿದಂತಾಗುತ್ತದೆ."

"ನೀಸಾ ಅವನು ಇಂತಹ ........ಕೆಲಸಗಳನ್ನು ಮಾಡುವುದಿಲ್ಲ."

"ಮಾಡುವುದಿಲ್ಲವೆಂದು ಹೇಗೆ ತಾನೇ ನಂಬುವುದು. ಯಾವ ಅವಕಾಶವನ್ನೂ ಬಿಡದವನು, ಈ ಅವಕಾಶವನ್ನು ಬಿಟ್ಟುಕೊಡುತ್ತಾನೆನ್ನುವುದಕ್ಕೆ ಖಾತ್ರಿಯೇನು?"

ತಂಗಿಯ ಈ ಆರೋಪಗಳು ಸರಿಯಲ್ಲ. ವಾಸ್ತವವಾಗಿ ಕೆಲವರ್ಷಗಳಿಂದ ಖುರ್‍ರಂನನ್ನು ನೋಡಿರಲೇ ಇಲ್ಲ ಮತ್ತು ಪತ್ರಮುಖೇನ ಸಂಪರ್ಕವೂ ಇರಲಿಲ್ಲ.

"ಕೂಡಲೇ ಹೊರಟು, ಇತಿಬಾರ್‌ಖಾನನಿಂದ ಖಜಾನೆಯನ್ನು ಪಡೆದು, ಸೈನ್ಯದ ಬೆಂಗಾವಲಿನಲ್ಲಿ ಬಂದು ನಾನು ಹೇಳಿದ ಕಡೆ ಸುರಕ್ಷಿತವಾಗಿ ತಲುಪಿಸಲು ನೋಡು" ಎಂದು ಆದೇಶಿಸಿದಳು.

ಅಸಫ್‌ಖಾನನಿಗೆ ಹೇಳಿಕೊಳ್ಳಲಾಗದ ಸಂಕಟ. ತನ್ನ ಪ್ರೀತಿಯ ತಂಗಿ ನೀಸಾ ಈ ರೀತಿಯಲ್ಲಿ, ಅವಮಾನಿಸುತ್ತಾ, ನರಸತ್ತವನಂತೆ ನಪುಂಸಕನಂತೆ, ನನ್ನನ್ನು ರೂಪಿಸುತ್ತಿದ್ದಾಳೆ. ನಿಜ, ಸಾಮ್ರಾಜ್ಞಿ ಆದ ಮೇಲೆ ತಮಗೆಲ್ಲರಿಗೂ ಸಾಕಷ್ಟು ಸವಲತ್ತುಗಳನ್ನು ಅಧಿಕಾರ ಸ್ಥಾನಗಳನ್ನು ಕೊಡಿಸಿದ್ದಾಳೆ. ತನ್ನ ಮಗಳನ್ನು ಭಾವಿ ಬಾದಶಾಹನಾಗುವಂತಹ ಸಮರ್ಥನಾದ ಖುರ್‍ರಂ ಜೊತೆ ನಿಕಾಹ್ ಮಾಡಿಸಿ ರಾಜಪರಿವಾರದ ಭಾಗವಾಗಿಸಿದ್ದಾಳೆ. ಆದರೆ ಈಗ ಅವಳ ಅಧಿಕಾರ ಅಹಂಕಾರಗಳು ಅವಳ ತಲೆ ತಿರುಗಿಸಿವೆ. ಅಧಿಕಾರ ಲಾಲಸೆಯೊಂದೇ ಅವಳಿಗೆ ಮುಖ್ಯ. ಅದನ್ನು ತೀರಿಸಿಕೊಳ್ಳಲು, ಏನನ್ನು ಬೇಕಾದರೂ ಮಾಡುವುದಕ್ಕೆ ಮುಂದಾಗುತ್ತಾಳೆ. ಅವಕಾಶ ಸಿಕ್ಕಾಗಲೆಲ್ಲ ತನ್ನ ವೈಭವ, ಶ್ರೀಮಂತಿಕೆಗಳನ್ನು ಮೆರೆಸುತ್ತಾಳೆ. ಅಪ್ಪನ ವೈಭವಯುತ ಸಮಾಧಿ ಕಟ್ಟಿಸಿ, ತನ್ನ ಮುಂದೆ ಅದನ್ನು ಪ್ರದರ್ಶಿಸಿ, ತಾನು ಮಾಡಬೇಕಾದ್ದನ್ನು ಅವಳು ಮಾಡಿ, ತನ್ನನ್ನು ಅಲ್ಪ, ಕನಿಷ್ಠನೆನ್ನುವುದನ್ನು ಪರೋಕ್ಷವಾಗಿ ತಿಳಿಸುತ್ತಾಳೆ. ಇಂತಹ ತಂಗಿಗೆ ನಿಷ್ಠನಾಗಿರುವುದಕ್ಕೆ ಅರ್ಥವಿದೆಯೇನು?.... ಇನ್ನು ಮುಂದೆ ತನ್ನೆದೆಯಲ್ಲಿ ಭದ್ರವಾಗಿರಿಸಿಕೊಂಡಿದ್ದ ಮಧುರ, ಮೃದು ಭಾವನೆಗಳನ್ನು ಕತ್ತು ಹಿಸುಕಿ ಕೊಂದುಬಿಡಬೇಕು ಎನ್ನುವಷ್ಟರ ಮಟ್ಟಿಗೆ ರೋಷವುಕ್ಕಿತು. ತಾನೂ ಅವಳಿಗೆ ಬುದ್ಧಿ ಕಲಿಸಬೇಕು ಎಂದು ಮನಸ್ಸಿನಲ್ಲಿಯೇ ನಿರ್ಧರಿಸಿದ.

ಆಗ್ರಾ ತಲುಪುತ್ತಲೇ ಇತಿಬಾರ್‌ಖಾನನನ್ನು ಭೇಟಿಯಾದ. ಇಬ್ಬರೂ ಒಬ್ಬರನ್ನೊಬ್ಬರು, ಸಲಾಮುಗಳೊಂದಿಗೆ ಗೌರವವನ್ನು ವಿನಿಮಯ ಮಾಡಿಕೊಂಡರು. ಅಸಫ್‌ಖಾನ್ ಅಂತಿಮವಾಗಿ ತಾನು ಬಂದ ಉದ್ದೇಶವನ್ನು ವಿವರಿಸಿದ. ಲಾಹೋರಿಗೆ ಅಲ್ಲಿನ ಖಜಾನಾವನ್ನು ಹೊತ್ತೊಯ್ಯುವ ಆದೇಶವನ್ನು ಬಾದಶಾಹರು ನೀಡಿದ್ದಾರೆಂದಾಗ ಇತಿಬಾರ್‌ಖಾನ್, ಯಾವುದಾದರೂ ಪ್ರಮಾಣ ಪತ್ರವಿದೆಯೇ ಎಂದು ವಿಚಾರಿಸಿದ.

ಅಸಫ್‌ಖಾನ್ ಜಹಾಂಗೀರ್ ಬಾದಶಾಹರು ನೀಡಿದ್ದ ಆದೇಶದ ಪತ್ರವನ್ನು ನೀಡಿದ. ಇತಿಬಾರ್‌ಖಾನ್ ಅದನ್ನು ಒಂದು ಸಾಲೂ ಬಿಡದಂತೆ ಓದಿಕೊಂಡ.

"ಮಿರ್ಜಾ ಅಸಫ್‌ಖಾನ್ರೇ, ಇದೇನಿದು ಪೂರ್ತಿ ಖಜಾನಾವನ್ನು ಕೊಡಲು ಹೇಳಿರುವರೇ?"

"ಹೌದು ಪೂರ್ತಿಯಾಗಿ ಲಾಹೋರಿಗೆ ರವಾನೆಯಾಗಬೇಕು."

"ಕೂಡಲೇ ಆ ಕೆಲಸ ಸಾಧ್ಯವಾಗುವುದಿಲ್ಲ ಮಿರ್ಜಾ ಅವರೆ. ಇಲ್ಲಿರುವ ಆಸ್ತಿಪಾಸ್ತಿ

ಹಣಕಾಸು ಇವೆಲ್ಲದರ ಪಟ್ಟಿಯನ್ನು ತಯಾರಿಸಲು ಸಮಯಬೇಕು. ತೀರಾ ತುರ್ತು ಎಂದೆನಿಸಿದರೂ ಕೂಡಾ ಒಂದು ವಾರಕ್ಕಿಂತಲೂ ಹೆಚ್ಚಿನ ಸಮಯವೇ ಪಟ್ಟಿ ತಯಾರಿಸಲು ಬೇಕಾಗುವುದು. ಅಲ್ಲಿಯವರೆಗೆ ತಮಗೆ ಕಾಯಲೇಬೇಕಾಗುತ್ತದೆ."

ಅಸಫ್‌ಖಾನ್, ನೇರವಾಗಿ ಖಜಾನೆಯನ್ನು ಇರಿಸಿದ್ದಲ್ಲಿಯೇ ಹೋಗಿ ಕುಳಿತ. ಅಬ್ಬ! ದಿಗ್ಭ್ರಾಂತನಾದ! ಎಲ್ಲೆಲ್ಲೂ ಅಮೂಲ್ಯವಾದ ಮುತ್ತು, ರತ್ನ, ಹವಳ, ವಜ್ರ, ಚಿನ್ನದ ನಾಣ್ಯಗಳು ರಾಶಿ! ರಾಶಿ! ಆ ರತ್ನಗಳೂ ಕೂಡ ಬೇರೆಬೇರೆ ಗಾತ್ರದವಾಗಿದ್ದವು. ಇಷ್ಟೊಂದು ರಾಶಿ! ಖುರ್ರಂ ಕೈಗೆ ದಕ್ಕಿದರೆ, ತಾನೇ ಒಂದು ಸಾಮ್ರಾಜ್ಯವನ್ನು ಕಟ್ಟಬಹುದು...... ಎರಡು ವಾರಗಳಾಗುತ್ತಾ ಬಂದರೂ ಖುರ್ರಂನ ಸುಳಿವಿಲ್ಲ. ಖಜಾನೆಯನ್ನು ರೇಶಿಮೆಯ ಚೀಲಗಳಲ್ಲಿ ತುಂಬಿ ಭದ್ರಪಡಿಸಿದರು. ಲೆಕ್ಕದ ಪುಸ್ತಕಗಳಲ್ಲಿ ಎಲ್ಲ ವಿವರಗಳನ್ನೂ ದಾಖಲು ಮಾಡಿದರು.

ಅಸಫ್‌ಖಾನ್ ಆದಷ್ಟು ಬೇಗ ಖಜಾನೆಯೆಲ್ಲವನ್ನೂ ಹೇರಿಕೊಂಡು ಹೋಗಬೇಕೆನ್ನುವ ಆತುರ ತೋರಿಸಿದರೆ, ಇತಿಬಾರ್‌ಖಾನ್, ಕೂಡಲೇ ಅನುಸರಿಸಬೇಕಾದ ವಿಧಿ ವಿಧಾನಗಳಿರುವುದರಿಂದ ಹೊರಡಲು ಸಾಧ್ಯವಿಲ್ಲವೆಂದು ತಡೆ ಹಿಡಿದ. ಒಂದು ಮೂರು ನಾಲ್ಕು ಗಂಟೆಗಳಲ್ಲಿ ಅದೆಲ್ಲವನ್ನು ಪೂರೈಸಿ, ಲೆಕ್ಕದ ಪುಸ್ತಕಗಳನ್ನು ಅವನ ಮುಂದೆ ಸಹಿಗಾಗಿ ಇರಿಸಿದರೆ, ಅಸಫ್ ಅದನ್ನು ದೂರತಳ್ಳಿ, ಕೂಡಲೇ ಕುದುರೆಯೇರಿ, ಆನೆಗಳ ಮೇಲೆ ಹೇರಿದ ಚಿನ್ನ, ಬೆಳ್ಳಿ, ರತ್ನ, ಹಣದ ಮೂಟೆಗಳ ಹಿಂದೆ ದೌಡಾಯಿಸಿದ. ಇತಿಬಾರ್ ಸುಮ್ಮನಿರಲಿಲ್ಲ. ಸಹಿಗೆ ನಿರಾಕರಿಸಿದಾಗಲೇ ಅವನಿಗೆ ಅನುಮಾನ ಬಂದಿತು. ಒಂದು ಓಟ ಕೀಳುವಷ್ಟರಲ್ಲಿ, ಇತಿಬಾರ್‌ಖಾನ್ ಕೂಗು ಹಾಕಿ, ಮಿರ್ಜಾ, ಈ ಪುಸ್ತಕದಲ್ಲಿ ಸಹಿಹಾಕದೆ ಇಲ್ಲಿಂದ ಹೊರಡಲು ಸಾಧ್ಯವಿಲ್ಲವೆಂದ. ಆದರೂ ಕೇಳಿಸಿಕೊಳ್ಳದೆ, ನಿಧಾನವಾಗಿ ಸಾಗುತ್ತಿದ್ದ ಖಜಾನಾ ಚೀಲಗಳನ್ನು ಹೊತ್ತ ಆನೆ, ಒಂಟೆಗಳ ಹಿಂದೆ ಸಾಗಿದ. ಇನ್ನೊಂದು ನಾಲ್ಕು ಗಂಟೆಗಳ ಪ್ರಯಾಣ. ಆಗ್ರಾದ ಹೊರಭಾಗ ಅಥವಾ ಹೆಬ್ಬಾಗಿಲು ದಾಟಿ ಬಿಟ್ಟರೆ, ರಾಜ ಸೈನ್ಯಕ್ಕೆ ನಮ್ಮನ್ನು ಹಿಂಬಾಲಿಸಲು ಸಾಧ್ಯವಿಲ್ಲವೆಂದುಕೊಂಡ. ಆದರೆ ಸೈನ್ಯದ ದೃಷ್ಟಿಗೆ ಬಿದ್ದು, ನಿಲ್ಲಬೇಕಾಯಿತು. ತಾನು ಬಾದಶಾಹರ ಕಡೆಯಿಂದ ಬಂದವನು. ಖಜಾನಾವನ್ನು ಅವರಲ್ಲಿಗೆ ಕೊಂಡೊಯ್ಯಬೇಕೆಂದಾಗ, ಒಬ್ಬ ಸೈನಿಕ, 'ಹುಜೂರ್, ಖಜಾನೆ ಈ ಕೋಟೆಯಿಂದ ಹೊರಗೆ ಹೋಗುವಂತಿಲ್ಲವೆಂದು ಆದೇಶ ಕಳಿಸಿದ್ದಾರೆ' ಎಂದ.

ಆದರೆ ಅಸಫ್ ಅದು ಯಾವುದನ್ನೂ ಕಿವಿ ಮೇಲೆ ಹಾಕಿಕೊಳ್ಳದೆ ಒಂದೇ ಉಸುರಿನಲ್ಲಿ, ಕುದುರೆ ಓಡಿಸುತ್ತಾ, ಎಲ್ಲ ಸೈನಿಕರನ್ನು, ರಕ್ಷಕ ಭಟರನ್ನು ಹಿಂದಕ್ಕಿ ಸಾಗಿದ. ಆದರೂ ಇತಿಬಾರ್‌ಖಾನ್ ಅವನನ್ನು ತಡೆಹಿಡಿದು, ಶಹಜಾದಾಖುರ್ರಂ, ಈಗಾಗಲೇ ಹಾದಿಯಲ್ಲಿರುವುದರಿಂದ ಖಜಾನೆಯೊಂದಿಗೆ ಹೋಗುವುದು ಸುರಕ್ಷಿತವಲ್ಲ. ಖುರ್ರಂ ಶಹಜಾದೆಯವರಿಗೆ, ಕತ್ತಲಲ್ಲಿ ಕೋಟೆ ಕಾಣಿಸುವುದಿಲ್ಲ. ನಿಮ್ಮ ಜೊತೆ ಮಾರ್ಗಮಧ್ಯದಲ್ಲಿ ಖಜಾನೆ ಇದ್ದಲ್ಲಿ. ಅದು ಲೂಟಿಯಾಗುವುದಕ್ಕಿಂತ ಆಗ್ರಾ ಕೋಟೆಯಲ್ಲಿ ಇರುವುದೇ ಕ್ಷೇಮಕರ. ಬಾದಶಾಹರಿಗೆ ಈಗಾಗಲೇ ಶಹಜಾದೆಯ ಕಾರ್ಯಾಚರಣೆಯ ಬಗ್ಗೆ ಸುದ್ದಿ

ಮುಟ್ಟಿಸಲಾಗಿದೆ, ಎಂದು ಮತ್ತೆ ಖಜಾನೆಯನ್ನು ಕೋಟೆಯಲ್ಲಿ ಅದಿದ್ದ ಜಾಗದಲ್ಲಿಯೇ ಭದ್ರಪಡಿಸಲಾಯಿತು. ಅಸಫ್‌ಖಾನನನ್ನು ರಕ್ಷಕ ಭಟನೊಂದಿಗೆ ವಿಶ್ರಾಂತಿಮಹಲಿಗೆ ಕಳಿಸಲಾಯಿತು ಮತ್ತು ಖುರ್ರಂ ಜೊತೆ ಸಂಪರ್ಕವಿಲ್ಲದಂತೆ ನೋಡಿಕೊಳ್ಳಲು ಆದೇಶಿಸಲಾಯಿತು. ಅಸಫ್‌ಗೆ ನೂರ್ ಜಹಾನ್ ಮತ್ತು ಜಹಾಂಗೀರ್ ಆಗ್ರಾಕೋಟೆಯ ಕಡೆ ಬರುತ್ತಿದ್ದಾರೆಂಬ ಸುದ್ದಿ ತಿಳಿಯಿತು. ಇದೆಲ್ಲವೂ ತನ್ನ ತಂಗಿಯ ಕೆಲಸವೆಂದು ಊಹಿಸಿದ. ತನ್ನನ್ನು ಸಿಲುಕಿಸುವುದಕ್ಕಾಗಿಯೇ ಹೂಡಿದ ತಂತ್ರವೆಂಬುದು ಸ್ಪಷ್ಟವಾಯಿತು.

ಖುರ್ರಂ ಅಂತೂ ಇಂತೂ ಆಗ್ರಾ ತಲುಪಿದನಾದರೂ, ಆಗ್ರಾದ ಬೀದಿಗಳಲ್ಲಿ ಸ್ಮಶಾನ ಮೌನವಿತ್ತು. ನರಪಿಳ್ಳೆಯ ಸುಳಿವೂ ಕಾಣಲಿಲ್ಲ. ಇಳಿದುಕೊಳ್ಳಲು ಯಾವ ವ್ಯವಸ್ಥೆಯೂ ಇರಲಿಲ್ಲ. ಅನ್ನ ಆಹಾರ ನೀರೂ ಕೂಡಾ ಸಿಗುವ ಪರಿಸ್ಥಿತಿ ಕಾಣಲಿಲ್ಲ. ಜಹಾಂಗೀರನನ್ನು ಬಹುಶಃ ಇಲ್ಲಿಯೇ ಇದೇ ಸ್ಥಿತಿಯಲ್ಲಿಯೇ ಎದುರಾಗಬೇಕಾದೀತು ಎಂದುಕೊಂಡ. ಮಾವ ಅಸಫ್‌ಖಾನನ ಸುಳಿವೂ ಇರಲಿಲ್ಲ. ನಂತರ ಅವನನ್ನು ಬಂಧನದಲ್ಲಿ ಇರಿಸಿದ್ದಾರೆಂಬ ಮಾಹಿತಿ ದೊರೆಯಿತು.

ಖುರ್ರಂನ ಸೈನಿಕರು, ಇತಿಬಾರ್‌ಖಾನನ ರಕ್ಷಣಾ ಪಡೆಯ ಸೈನಿಕರ ಮೇಲೆ ಗುಂಡು ಹಾರಿಸಲು ಆರಂಭಿಸಿದಾಗ, ಅವರ ಕಡೆಯಿಂದಲೂ ತೋಪುಗಳಿಂದ ಹೊರಟ ಗುಂಡುಗಳು ಖುರ್ರಂನ ಹಲವಾರು ಸೈನಿಕರನ್ನು ಧರೆಗುರುಳಿಸಿದವು. ಮಿಕ್ಕ ಸೈನಿಕರನ್ನಾದರೂ ಉಳಿಸಿಕೊಳ್ಳಬೇಕೆಂದು ಖುರ್ರಂ ಸೈನಿಕರೊಂದಿಗೆ ದೂರ ನಡೆದ ಮತ್ತು ರಹಸ್ಯ ಸ್ಥಳದಲ್ಲಿ ಎಲ್ಲರೂ ಅಡಗಿ ಕುಳಿತರು.

ನೂರ್ ಜಹಾನ್‌ಳ ನಿವಾಸಕ್ಕೆ ಅಸಫ್‌ನನ್ನು ಸರಪಳಿಗಳೊಂದಿಗೆ ಬಂಧಿಸಿ ತಂದು, ಅವಳ ಮುಂದೆ ನಿಲ್ಲಿಸಿದರು.

ಒಳಗೊಳಗೇ ಅಸಫ್ ಬೆಂಕಿ ಉಗುಳುತಿದ್ದ. ಎಷ್ಟು ಸಿಟ್ಟಿನಲ್ಲಿ ಇದ್ದನೆಂದರೆ, ಕೈಕೋಳಗಳು ಇಲ್ಲದಿದ್ದ ಪಕ್ಷದಲ್ಲಿ ಅವಳನ್ನು ಅಲ್ಲಿಯೇ ಕತ್ತು ಹಿಸುಕಿ ಕೊಂದುಬಿಡುತ್ತಿದ್ದ. ಬೆಂಕಿಯುಗುಳುವ ದನಿಯಲ್ಲಿ ಕೇಳಿದ–

"ಏನಿದು ಮೆಹರುನ್ನೀಸಾ, ಅಧಿಕಾರ ಇದೆಯೆಂದು, ನನ್ನವರು ತನ್ನವರು ಎನ್ನುವ ಪ್ರಜ್ಞೆಯಿಲ್ಲದೆ, ಹೀಗೆ ಬಂಧಿಸುವುದೇ? ಇದು ಯಾವ ನ್ಯಾಯ? ನಾನೇನು ಅಪರಾಧ ಮಾಡಿದ್ದೀನಿ? ನೀನು ಹೇಳಿದ ಕೆಲಸವನ್ನು ಮಾಡಲು ತಾನೇ ನಾನಿಲ್ಲಿಗೆ ಬಂದದ್ದು? ಕಾರಣವಿಲ್ಲದೆ, ನಿನ್ನಿಷ್ಟದಂತೆ ಸರ್ವಾಧಿಕಾರಿಯಾಗಿ ವರ್ತಿಸುತ್ತಿದ್ದೀಯಲ್ಲ!"

ಅವನ ಕಿರುಚಾಟ, ಅರಚಾಟಗಳು ಯಾವುವೂ ಅವಳನ್ನು ಕದಲಿಸಲಿಲ್ಲ. ನಿರ್ಲಕ್ಷ್ಯದಿಂದ ತಾಂಬೂಲ ಜಗಿಯುತ್ತಾ ಕುಳಿತಳು. ಹೋಷಿಯಾರ್‌ಖಾನ್ ಅವಳ ರಕ್ಷಣೆಗೆಂದು ಪಕ್ಕದಲ್ಲಿಯೇ ನಿಂತಿದ್ದ.

ಅವಳ ಧೋರಣೆ, ತನ್ನ ಭಾವಾವೇಶಗಳಿಗೆ ನಿಸ್ಪಂದಳಾಗಿ ಕುಳಿತಿದ್ದ ರೀತಿಯನ್ನು ನೋಡಿ ಅವನಿಗೆ ಭಯವಾಯಿತು. ತನ್ನ ಉದ್ಧಟ ವರ್ತನೆಯಿಂದ ಪ್ರಯೋಜನಕ್ಕಿಂತ, ಹಾನಿಯೇ ಹೆಚ್ಚುವುದೆಂಬ ಜ್ಞಾನೋದಯವಾಗಿ, ಈಗ ಧ್ವನಿಯನ್ನು ತಗ್ಗಿಸಿ "ಮೆಹರುನ್ನೀಸಾ" ಎಂದು ಕರೆದು ಅವಳತ್ತ ನೋಡಿದ. ಅವಳೂ ಅಣ್ಣನನ್ನೇ ದಿಟ್ಟಿಸಿ

ನೋಡಿದಳು. ಮುಖದಲ್ಲಿ ಯಾವುದೇ ಭಾವನೆಗಳು ಕಾಣಿಸಲಿಲ್ಲ. ನಿರ್ಭಾವುಕಳಾಗಿ, ಕೇವಲ ಒಂದೇ ಒಂದು ಪ್ರಶ್ನೆಯನ್ನು ಕೇಳಿದಳು "ಖುರ್ರಂಗೆ ಖಜಾನೆಯ ಬಗ್ಗೆ ಸುದ್ದಿ ಕೊಟ್ಟವರು ಯಾರು?" ಎಂದು.

"ಮೆಹರುನ್ನೀಸಾ ಖಂಡಿತಾ ನಾನಲ್ಲ" ಎಂದು ಅಳುವ ದನಿಯಲ್ಲಿ ಹೇಳಿದ. "ನನ್ನ ಮಾತನ್ನು ನಂಬು" – ಎಂದು ಮುಂದುವರೆಸಿದ.

ಅಣ್ಣನ ಮಾತಿನಲ್ಲಿ ಸ್ವಲ್ಪ ನಂಬಿಕೆ ಬಂದಂತೆ ಕಾಣಿಸಿತು. ಹಾಗಾದರೆ ಖುರ್ರಂಗೆ ಸುದ್ದಿ ತಲುಪಿದ್ದಾದರೂ ಹೇಗೆಂದು ಮತ್ತೆ ಪ್ರಶ್ನಿಸಿದಳು. "ಮೆಹರುನ್ನೀಸಾ, ಸುದ್ದಿ ನೀಡಿದವರು ಯಾರೆಂದು ಗೊತ್ತಿಲ್ಲ. ಆದರೆ ದಿಲ್ಲಿಯನ್ನು ವಶಪಡಿಸಿಕೊಳ್ಳಲು ಹೊರಟಿದ್ದಾನೆ ಎನ್ನುವ ಸುದ್ದಿ ಬಂದಿದೆ" ಎಂದು ತಿಳಿಸಿದ.

ಅಣ್ಣನ ಮಾತುಗಳು ಸತ್ಯವಾದಲ್ಲಿ, ಖುರ್ರಂನ ಪಕ್ಷದಲ್ಲಿ ನಿಜವಾಗಿಯೂ ಇರದಿದ್ದಲ್ಲಿ, ಅವನನ್ನೇ ಖುರ್ರಂನನ್ನು ಎದುರಿಸಲು ದಿಲ್ಲಿ ಕಡೆಗೆ ಕಳಿಸಬೇಕೆಂದು ಯೋಚಿಸಿ, ವಿಷಯ ಹೇಳಿದಾಗ ಅಸಫ್ ಕೂಡಲೇ ಅಳಿಯನ ಮೇಲೆ ದಂಡೆತ್ತಿ ಹೋಗಲು ಒಪ್ಪಿಕೊಂಡ. ಕೂಡಲೇ ಅವನನ್ನು ಸರಪಳಿಗಳಿಂದ ಬಿಡಿಸಿ, ತನ್ನ ಪಕ್ಕದಲ್ಲಿ ಕುಳಿತುಕೊಳ್ಳಲು ಹೇಳಿದಳು. ಖುರ್ರಂನ ವಿರುದ್ಧ ಹೋರಾಡಲು ಅಸಫ್‌ಖಾನನನ್ನು ಒಪ್ಪಿಸಿ ಕಳಿಸಿದರೂ ಅವಳಿಗೆ ನಂಬಿಕೆ ಇರಲಿಲ್ಲ. ತನ್ನ ರಕ್ಷಣೆಗಿಂತ ಖುರ್ರಂನ ರಕ್ಷಣೆಯೇ ಅವನಿಗೆ ಮುಖ್ಯವೆಂದು ತಿಳಿದಿತ್ತು. ಸೈನಿಕರಿಗೂ ಸೂಕ್ಷ್ಮವಾಗಿ, ಅಸಫ್ ಪಕ್ಷಾಂತರಗೊಂಡಲ್ಲಿ ಕೂಡಲೇ ಅವನನ್ನು ಸಾಯಿಸಲು ಆದೇಶಿಸಿದ್ದಳು. ಏನೇ ಆದರೂ ಖುರ್ರಂನನ್ನು ಎದುರಿಸಲು ಇಷ್ಟು ಸಾಲದು. ನಿಜವಾದ ಸಮರ್ಥರೂ, ಬಲಿಷ್ಠರೂ ಆದ ಯೋಧರನ್ನು, ಪ್ರಭುತ್ವಕ್ಕೆ ನಿಷ್ಠರಾದವರನ್ನು ಕಳಿಸಬೇಕೆಂದುಕೊಂಡಳು. ಅವಳಿಗೆ ಆ ಕೂಡಲೇ ನೆನಪಾದದ್ದು ಮಹಬ್ಬತ್‌ಖಾನ್, ಖಾನ್–ಇ–ಖಾನನ್. ಆದರೆ ಇವರೆಲ್ಲರೂ ತನ್ನ ವಿರುದ್ಧವಿದ್ದರು. ಅದರಲ್ಲಿಯೂ ಮಹಬ್ಬತ್‌ಖಾನ್‌ಗಂತೂ ತನ್ನನ್ನು ಕಂಡರೆ ಆಗುತ್ತಿರಲಿಲ್ಲ. ಆದರೂ ಬಾದಶಾಹರ ಬಗ್ಗೆ ಅಪಾರ ನಿಷ್ಠೆ. ಅವರಿಗೆ ಸಂಕಟ ಬಂದಿದೆ ಎಂದು ತಿಳಿದರೆ ಕೂಡಲೇ ಬರುತ್ತಾನೆಂಬ ನಂಬಿಕೆ ಅವಳಿಗಿದ್ದುದರಿಂದ, ಕಾಬೂಲಿನ ಗವರ್ನರ್ ಆಗಿ ಅಧಿಕಾರವಹಿಸಿಕೊಂಡಿದ್ದ ಮಹಬ್ಬತ್‌ಖಾನನಿಗೆ ಕೂಡಲೇ ಪತ್ರ ಬರೆದು, ಖುರ್ರಂನ ವಿರುದ್ಧ ದಂಡೆತ್ತಿ ಹೋಗಬೇಕೆಂದು ತಿಳಿಸಿದಳು. ಮಹಬ್ಬತ್‌ಖಾನನೂ ಕೂಡಾ ಕೆಲಸವಿಲ್ಲದೆ ಕಾಬೂಲಿನ ಜೀವನಕ್ಕೆ ಬೇಸತ್ತಿದ್ದ. ಹಿಂದಿನ ದ್ವೇಷ ಮರೆತು, ಮತ್ತೆ ತನ್ನ ಕಾರ್ಯ ಚಟುವಟಿಕೆಗೆ, ಸಾಮರ್ಥ್ಯ ಪ್ರದರ್ಶನಕ್ಕೆ ಅವಕಾಶ ಸಿಕ್ಕಿದೆಯೆಂದು ಕೂಡಲೇ ಹೊರಟು ಬಂದ. ಶಹರಿಯಾರನನ್ನೂ ಅದೇ ಸಮಯದಲ್ಲಿ ಖಾಂದಾಹಾರದ ಕಾರ್ಯಾಚರಣೆಯಲ್ಲಿದ್ದವನನ್ನು ಕರೆಸಿಕೊಂಡಳು.

ಎಲ್ಲಾ ನಿಶ್ಚಿತವಾದಂತೆ, ಅಸಫ್‌ಖಾನ್, ಶಹರಿಯಾರ್, ಮಹಬ್ಬತ್‌ಖಾನರ ಮೂರು ಸೈನ್ಯದ ಪಡೆಗಳನ್ನು ಎದುರಿಸಿ ನಿಲ್ಲುವುದಕ್ಕೆ ಖುರ್ರಂನ ಸೈನಕ್ಕೆ ಸಾಧ್ಯವಾಗಲಿಲ್ಲ. ಖುರ್ರಂನ ವಿಶ್ವಾಸಪಾತ್ರ ಯೋಧ, ಸೇವಕ, ಸ್ನೇಹಿತ ವಿಕ್ರಮಜೀತ್‌ನ ಸಾವು, ಅಪಾರ ಸಂಖ್ಯೆಯ ಸೈನಿಕರ ಸಾವು– ಖುರ್ರಂನನ್ನು ಯುದ್ಧರಂಗದಿಂದ ಹಿಮ್ಮೆಟ್ಟಿಸಿತು.

ಖುರ್ರಂನ ವಿರುದ್ಧ ಹೋರಾಡಿದ ಯೋಧರನ್ನು ಸನ್ಮಾನಿಸಿದಳು. ಆದರೆ

ಅಸಫ್‌ನನ್ನು ತನ್ನ ಜೊತೆಯಲ್ಲಿಯೇ ಇರಿಸಿಕೊಂಡಳು. ಅವನನ್ನು ಪೂರ್ತಿಯಾಗಿ ನಂಬುವ ಹಾಗಿರಲಿಲ್ಲ. ಯಾವ ಕ್ಷಣದಲ್ಲಾದರೂ ಪಕ್ಷಾಂತರಗೊಂಡು, ದ್ರೋಹ ಬಗೆಯಬಹುದು. ಖುರ್ರಂ ತಲೆತಪ್ಪಿಸಿಕೊಂಡು ಹೋಗಿದ್ದ. ಅವನನ್ನು ಬಿಡುವ ಹಾಗೆಯೇ ಇರಲಿಲ್ಲ. ಅನಿರೀಕ್ಷಿತವಾಗಿ, ಯಾವ ಸಮಯದಲ್ಲಾದರೂ ಯಾವ ದಿಕ್ಕಿನಿಂದಾದರೂ ಆಕ್ರಮಣ ಮಾಡಬಹುದು ಎಂದು ಭಾವಿಸಿ, ಪರವೇಜ್ ಮತ್ತು ಮಹಬ್ಬತ್‌ಖಾನ್ ಇಬ್ಬರನ್ನೂ ಖುರ್ರಂನನ್ನು ಹಿಂಬಾಲಿಸಿ ಹೋಗಲು ಆದೇಶಿಸಲಾಯಿತು. ಕಡೆಗೆ ಬುರಹಾನ್‌ಪುರದ ಹೊರಭಾಗದಲ್ಲಿ ಎರಡೂ ಕಡೆಯ ಸೈನ್ಯಗಳು ಮುಖಾಮುಖಿಯಾದವು.

ಆದರೆ ಜಹಾಂಗೀರ್ ಮತ್ತೊಮ್ಮೆ ಕಾಯಿಲೆಗೆ ತುತ್ತಾದ. ದಿಲ್ಲಿಯಿಂದ ಅಜ್‌ಮೇರಕ್ಕೆ ಹೋಗಲು ನಿರ್ಧರಿಸಿದರು. ಅಲ್ಲಿ ಸ್ವಲ್ಪ ಸುಧಾರಣೆಯಾಗಬಹುದೆಂದು ಭಾವಿಸಿದರು.

ಮತ್ತೆ ಖುರ್ರಂನ ಸೈನ್ಯ ಶಾಹಿ ಸೈನ್ಯದ ಮುಂದೆ ನಿಲ್ಲಲು ಆಗಲಿಲ್ಲ. ಯುದ್ಧದಿಂದ ಹಿಮ್ಮೆಟ್ಟಿದ. ಮಹಬ್ಬತ್‌ಖಾನ್ ಖುರ್ರಂನನ್ನು ಮತ್ತೂ ದುರ್ಬಲಗೊಳಿಸಲು, ಅಸಹಾಯಕನನ್ನಾಗಿ ಮಾಡಲು, ಅವನ ಕಡೆಯ ಸಮರ್ಥ ಯೋಧನಾಯಕರಿಗೆ ರಹಸ್ಯವಾಗಿ ಪತ್ರ ಬರೆದು, ಅವರೆಲ್ಲರೂ ತಮ್ಮ ಕಡೆಗೆ ಬಂದಲ್ಲಿ, ಬಾದಶಾಹರಿಂದ ಕ್ಷಮೆ ಕೊಡಿಸುವುದಾಗಿಯೂ ಉಡುಗೊರೆಗಳನ್ನು ಕೊಡಿಸುವುದಾಗಿಯೂ ಭರವಸೆ ನೀಡಿದ.

ವಿಪರೀತ ಮಳೆ ಸುರಿಯುತ್ತಿರುವುದನ್ನೂ ಲೆಕ್ಕಿಸದೆ, ತನ್ನ ಸೈನ್ಯ ಪಡೆಗಳನ್ನು ಮುನ್ನಡೆಸುತ್ತಾ ಖುರ್ರಂ ದಕ್ಷಿಣದ ಕಡೆಗೆ ಪ್ರಯಾಣಿಸುತ್ತಿದ್ದನಾದರೂ, ಮಹಬ್ಬತ್‌ಖಾನ್, ಅವನು ತಪ್ಪಿಸಿಕೊಳ್ಳಲು ಅವಕಾಶಕೊಡದೆ, ಅವನೂ ಕೂಡಾ ಆ ಮಳೆಯಲ್ಲಿಯೇ ಅವನನ್ನು ಹಿಂಬಾಲಿಸಿದ. ಸೈನ್ಯದ ಹೆಜ್ಜೆಗುರುತುಗಳನ್ನೆ ಅನುಸರಿಸಿ, ಗೋಲ್ಕೊಂಡ ಕಡೆಗೆ ಖುರ್ರಂ ಹೊರಟಿರುವುದನ್ನು ಪತ್ತೆ ಹಚ್ಚಿದ. ಆದರೆ ಖುರ್ರಂ ಅವರನ್ನು ದಾರಿ ತಪ್ಪಿಸಲು ಒಂದಷ್ಟು ದೂರ ಹೋಗಿ, ತಲೆ ತಪ್ಪಿಸಿಕೊಂಡು ಬೇರೆ ದಿಕ್ಕಿಗೆ ತನ್ನ ಕುಟುಂಬದೊಂದಿಗೆ ಹೊರಟಿದ್ದ. ಮಹಬ್ಬತ್‌ಖಾನ್ ಅವನನ್ನು ಸೆರೆಹಿಡಿದು ತರುವಲ್ಲಿ ಅಸಫಲನಾಗಿದ್ದರಿಂದ ಮರಳಿ, ಬುರಹಾನ್‌ಪುರಕ್ಕೆ ಬಂದ. ಖುರ್ರಂ ಪರದೇಶಿಯಂತೆ ಹೆಂಡತಿ ಮಕ್ಕಳೊಡನೆ ಅಲೆದಲೆದು ಸಾಕಾಗಿ ತಂದೆಗೆ ಶರಣಾಗುವ ಯೋಚನೆ ಮಾಡಿದ. ಕೂಡಲೇ ತಂದೆಗೆ ಪತ್ರಬರೆದ. ಬರೆದದ್ದು ತಂದೆಗೇ ಆದರೂ, ನಿರ್ಧಾರಗಳು ನೂರ್ ಜಹಾನಳದೇ ಆಗಿತ್ತು. ಖುರ್ರಂ ನಿಯತ್ತಿನ ಮನುಷ್ಯ ಅಲ್ಲ. ಎಷ್ಟೋ ಸಲ ಕ್ಷಮೆ ಕೇಳುವ ನಾಟಕ ಆಡಿದ್ದಾನೆ. ಅವನನ್ನು ಮುಗಿಸಿಬಿಡದ ಹೊರತು, ತನ್ನ ಕನಸು ಪೂರೈಸದು, ಶಹರಿಯಾರನನ್ನು ಗಾದಿ ಮೇಲೆ ಕೂರಿಸಿ ರಾಜ್ಯಭಾರ ಮಾಡುವ ಮಹತ್ವಾಕಾಂಕ್ಷೆ ಪರಿಸ್ಥಿತಿಗಳನ್ನು ಗಮನಿಸಿದರೆ, ಅನುಮಾನಾಸ್ಪದವಾಗಿ ಕಾಣುತ್ತಿದ್ದವು. ಸಾಮಾನ್ಯಕ್ಕೆ ಖುರ್ರಂ ಸೋಲುವವನಲ್ಲವೆಂಬುದು ಮನಸ್ಸಿಗಿಳಿಯುತ್ತಿತ್ತು. ಎಷ್ಟೇ ಧೈರ್ಯ ತಂದುಕೊಂಡರೂ ಒಳಗೆ ಭೀತಿ ಇದ್ದೇ ಇತ್ತು. ಎಲ್ಲಕ್ಕಿಂತ ಹೆಚ್ಚಾಗಿ ಈ ಭೀತಿಗೆ ಜಹಾಂಗೀರನ ಅನಾರೋಗ್ಯವೇ ಕಾರಣವಾಗಿತ್ತು. ಎಷ್ಟೇ ಪ್ರಯತ್ನಿಸಿದರೂ ಚಟಗಳಿಂದ ದೂರವಿರಿಸುವುದು ಸಾಧ್ಯವಾಗುತ್ತಲೇ ಇರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಖುರ್ರಂನ ಕ್ಷಮೆಯ ಪ್ರಾರ್ಥನೆಯನ್ನು ಷರತ್ತುಗಳನ್ನು ಮುಂದುರಿಸಿ, ಕ್ಷಮೆ ನೀಡಬಹುದೆಂಬ

ನಿರ್ಧಾರಕ್ಕೆ ಬಂದಳು. ಜಹಾಂಗೀರ್ ಈಗ ಕೇವಲ ಹೆಸರಿಗೆ! ಎಲ್ಲ ರಾಜಕೀಯ ವ್ಯವಹಾರಗಳನ್ನು ನಡೆಸುತ್ತಿದ್ದವಳೇ ಇವಳು. ಎಷ್ಟರ ಮಟ್ಟಿಗೆ ನೂರ್ ಜಹಾನಳ ವರ್ಚಸ್ಸು ಬೆಳೆಯಿತೆಂದರೆ, ನೂರ್ ಜಹಾನ್ ಮತ್ತು ಜಹಾಂಗೀರ್ ಹೆಸರುಗಳು ಸಮೀಕರಣಗೊಂಡಿದ್ದವು. ನೂರ್ ಜಹಾನ್ ಎಂದರೆ ಜಹಾಂಗೀರ್, ಜಹಾಂಗೀರ್ ಎಂದರೆ ನೂರ್ ಜಹಾನ್ ಆಗಿ, ಅನನ್ಯ ಬಂಧವನ್ನು ಹೊಂದಿತ್ತು. ಹಾಗಾಗಿ ಅವಳು ಖುರ್‍ರಂ ಮುಂದೆ ಒಂದೆರಡು ಮಹತ್ವದ ಷರತ್ತುಗಳನ್ನು ಇರಿಸಿದಳು. ಈ ಹಿಂದೆಯೇ ಅವನ ಮಕ್ಕಳಿಬ್ಬರು ಒತ್ತೆಯಾಳುಗಳಾಗಿರುವುದನ್ನು ಮುಂದುವರೆಸಲು ಒಪ್ಪಿಕೊಳ್ಳಬೇಕು. ತಮ್ಮ ವಶದಲ್ಲಿರುವ ರೋಹಟಾ ಮತ್ತು ಆಸೀರ್ ಕೋಟೆಗಳನ್ನು ಹಿಂಪಡೆಯಲು ಯಾವುದೇ ರೀತಿಯ ಪ್ರಯತ್ನಗಳನ್ನು ಮಾಡಬಾರದೆಂದು ಸಾಬೀತು ಮಾಡಿ ಷರತ್ತನ್ನು ನವೀಕರಿಸಿದ್ದಳು.

ಖುರ್‍ರಂನ ಬಂಡಾಯವನ್ನು ಹತ್ತಿಕ್ಕಿದ ಮೇಲೆ, ಉಳಿದಿದ್ದ ಮಹಬ್ಬತ್ ಖಾನನನ್ನು ದಾರಿಯಿಂದ ಪಕ್ಕಕ್ಕೆ ತಳ್ಳಬೇಕಿತ್ತು. ಖುರ್‍ರಂನನ್ನು ಹಿಮ್ಮೆಟ್ಟಿಸುವಲ್ಲಿ ಅವನ ಸಹಾಯ ಪಡೆದಿದ್ದರೂ ಕೂಡಾ, ತಮ್ಮ ಸ್ವಾರ್ಥ ಮುಗಿದ ಮೇಲೆ, ಮುಂದಿನ ಅಪಾಯ, ಅಡ್ಡಿ ಆತಂಕಗಳನ್ನು ದೂರಮಾಡಿಕೊಳ್ಳಲು ಅವರ ಮೇಲೆ ಯಾವುದಾದರೂ ಆರೋಪ ಹೊರಿಸಿ, ಪಕ್ಕಕ್ಕೆ ಸರಿಸುವುದರಲ್ಲಿ ನೂರ್ ಜಹಾನ್ ನಿಷ್ಣಾತಳಾಗಿದ್ದಳು.

ಅವಳಿಗಿದ್ದ ಈಗಿನ ಭಯವೆಂದರೆ, ಪರವೇಜ್‌ನ ಜೊತೆ ತೀರಾ ಆಪ್ತನಾಗಿ ಸಂಬಂಧ ಹೊಂದಿದ್ದ, ಸೈನಿಕ ಕಾರ್ಯಾಚರಣೆಗಳಲ್ಲಿ ತನ್ನ ಜೊತೆ ಅವನನ್ನು ತೊಡಗಿಸಿಕೊಂಡಿದ್ದವನು, ಪರವೇಜ್‌ನನ್ನು ಗಾದಿ ಮೇಲೆ ಕೂರಿಸಿ, ತಾನೇ ರಾಜ್ಯಾಡಳಿತವನ್ನು ನಡೆಸುವ ಹುನ್ನಾರ ಅವನದಾಗಿದೆ ಎಂಬುದನ್ನು ಊಹಿಸಿದಳು. ನ್ಯಾಯಯುತವಾಗಿ ಪರವೇಜ್ ಹಿರಿಯ ಮಗನಾಗಿರುವುದರಿಂದ ಅವನು ಅಧಿಕಾರಕ್ಕೆ ಬರುವುದರಲ್ಲಿ ಯಾವ ಅಭ್ಯಂತರವೂ ಇರಲಿಲ್ಲ. ಅದು ಅವನ ಹಕ್ಕೂ ಕೂಡಾ ಆಗಿತ್ತು.

ಬಾದಶಾಹ್ ಜಹಾಂಗೀರನೇ ಮುಂದುವರೆದಿದ್ದರೆ, ಎಂದಿಗೂ ಅವನಲ್ಲಿ ಅಧಿಕಾರದ ಆಸೆಮೂಡುತ್ತಿರಲಿಲ್ಲ. ಅವನಿಗೆ ತನ್ನ ಭುಜಬಲ ಪರಾಕ್ರಮ, ನಿಷ್ಠೆಗಳನ್ನು ಅರ್ಪಿಸಿ, ಮೊಘಲ್ ಚಕ್ರವರ್ತಿಗಳಲ್ಲಿ ಮಹಾನ್ ಚಕ್ರವರ್ತಿಯೆನಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ. ಆದರೆ ಹೆಣ್ಣಾದ ನೂರ್ ಜಹಾನ್‌ಳ ಅಧಿಕಾರಶಾಹಿ ವರ್ತನೆ ಅವನನ್ನು ಕೆರಳಿಸಿತ್ತು. ಅವಳಿಂದಾಗಿ ಜಹಾಂಗೀರ, ತನ್ನನ್ನು ಕನಿಷ್ಠವಾಗಿಸಿಕೊಂಡ. ಅವಳ ಆದೇಶಗಳೇ ಶಿಲಾಶಾಸನಗಳಾಗುತ್ತಿದ್ದವು.

ಜಹಾಂಗೀರನ ಬಗ್ಗೆ ಅತಿಯಾದ ಗೌರವ, ಹೆಮ್ಮೆಗಳನ್ನು ಹೊಂದಿದ್ದವನಿಗೆ, ಹೆಂಡತಿಯ ಗುಲಾಮನಾಗಿ ವರ್ತಿಸುವುದು, ಬಾದಶಾಹನ ಆತ್ಮ ಪ್ರತಿಷ್ಠೆ, ಗೌರವಗಳಿಗೆ ಮಸಿ ಬಳಿದಂತೆ ಆಗುತ್ತದೆ ಎನ್ನುವುದು ಅವನ ಭಾವನೆಯಾಗಿತ್ತು. ಆ ಭಾವನೆಗಳನ್ನು ಹೀಗೆ ವ್ಯಕ್ತಪಡಿಸಿದ್ದಾನೆ. "ಗೌರವನೀಯ ಬಾದಶಾಹರಿಗೆ ಮತ್ತು ಇಡೀ ಜಗತ್ತಿಗೇ ಗೊತ್ತಿರುವ ವಿಷಯವೆಂದರೆ, ಈ ಸೇವಕ ಮಹಬ್ಬತ್‌ಖಾನ್‌ನನ್ನು ಬಾದಶಾಹರೇ ಪೋಷಿಸಿ, ಬೆಳೆಸಿದ್ದು, ಆದ್ದರಿಂದ ಅವನಿಗೆ ಬಾದಶಾಹರ ಹೊರತಾಗಿ ಬೇರೆ ಯಾರೂ ಮುಖ್ಯವಲ್ಲ. ಮಹಬ್ಬತ್‌ಖಾನ್ ಬದುಕುತ್ತಿರುವುದೇ ಬಾದಶಾಹರ ದಯೆಯಿಂದ,

ಆದ್ದರಿಂದ ಅವನಿಗೆ ಈಗ ಸರಿತೋಚಿದ್ದನ್ನು ಅವನ ನಿಷ್ಠೆ, ಪ್ರಾಮಾಣಿಕತೆಗಳಿಂದಾಗಿ ಹೇಳಿಕೊಳ್ಳುವುದಕ್ಕೆ ಅವಕಾಶ ಕೊಡಬೇಕೆಂಬುದು ಪ್ರಾರ್ಥನೆಯಾಗಿದೆ. ಅದೂ ಅವರು ಗಳಿಸಿರುವ ಹೆಸರು ಉಳಿಯಬೇಕೆಂಬ ಕಾರಣಕ್ಕಾಗಿ... ವಿಚಾರವಂತರೂ ಪ್ರಜ್ಞಾವಂತ(ಚಕ್ರವರ್ತಿಗಳೂ) ಬಾದಶಾಹರೂ ಆಗಿರುವ ಜಹಾಂಗೀರ್, ತಮ್ಮ ಮೇಲೆ ಇಷ್ಟೊಂದು ಪ್ರಭಾವ ಬೀರಲು ಅವಕಾಶ ಕಲ್ಪಿಸಿರುವುದನ್ನು ಕಂಡು ಜಗತ್ತು ಅಚ್ಚರಿಪಡುತ್ತಿದೆ."

ಅವನ ಮನಸ್ಸಿನಲ್ಲಿ, ಹೆಣ್ಣು ಹೆಣ್ಣಾಗಿ, ಗೃಹಿಣಿಯಾಗಿ ಇರುವುದು ಬಿಟ್ಟು ರಾಜಕೀಯ ವ್ಯವಹಾರಗಳಲ್ಲಿ ಪ್ರವೇಶಿಸುವ ಹಕ್ಕು ಎಲ್ಲಿದೆ. ಅವಳಿಗೆ ಈ ಅಧಿಕಾರ ದಕ್ಕಿರುವುದು ತನ್ನ ಸ್ವಂತ ಪ್ರಯತ್ನಗಳಿಂದ ಅಲ್ಲ. ಬಾದಶಾಹ ಜಹಾಂಗೀರನ ಹೆಂಡತಿಯಾಗಿ ಬಂದಿರುವ ಕಾರಣದಿಂದಷ್ಟೇ!

ನೂರ್ ಜಹಾನ್ ಯಾವುದೇ ಅಪಪ್ರಚಾರಗಳಿಗೆ ಹೆದರಲಿಲ್ಲ. ಅವಳು ಇನ್ನಷ್ಟು ತನ್ನನ್ನು ಗಟ್ಟಿಗೊಳಿಸಿಕೊಳ್ಳುತ್ತಾ, ದೊಡ್ಡ ಅಧಿಕಾರಶಾಹಿಯಾಗಿ ಬೆಳೆದು ಬಲಗೊಳ್ಳುತ್ತಿದ್ದಳು. ತನ್ನ ಹಾದಿಗೆ ಅಡ್ಡಬಂದವರನ್ನು ಉಪಾಯಾಂತರದಿಂದ, ಬಡಿದು ಪಕ್ಕ ಸರಿಸುತ್ತಿದ್ದಳು.

ಶಹಜಹಾನ್ ಅಥವಾ ಖುರ್ರಂನ ವಿರುದ್ಧ ಶಾಹಿ ಸೈನ್ಯದ ಪರವಾಗಿ ಪರಾಕ್ರಮತೋರಿ ಗೆಲುವನ್ನು ತಂದುಕೊಂಡಿದ್ದ. ಆದರೆ ಅದರಿಂದ ತನಗೆ ಬರುವ ಲಾಭವಾದರೂ ಏನು? ಜಹಾಂಗೀರ್ ಮತ್ತೊಮ್ಮೆ ಅಧಿಕಾರ ಕೈಹಿಡಿದು, ಹೆಂಡತಿಯ ಮುಷ್ಟಿಯಿಂದ ಬಿಡಿಸಿಕೊಂಡು ಮೊದಲಿನಂತೆ ರಾಜ್ಯಭಾರಕ್ಕೆ ಮುಂದಾದರೆ ಮಾತ್ರವೇ, ತನ್ನ ವಿರೋಧಕ್ಕೆ ವಿರಾಮ. ಹೆಣ್ಣಿನ ಅಧಿಕಾರದಡಿ ಕೆಲಸ ಮಾಡುವುದೇ ತನ್ನ ಗಂಡಸುತನಕ್ಕೆ ಅವಮಾನ, ಸವಾಲು! ಹಾಗಾಗಿ ತನ್ನ ಪ್ರಯತ್ನಗಳು ಮುಂದುವರೆಯಬೇಕು. ಪರವೇಜನ ಮೂಲಕ ಅಧಿಕಾರ ಹಿಡಿದರೂ ಸರಿ! ಒಂದು ವೇಳೆ ಅದಾಗಲಿಲ್ಲವಾದಲ್ಲಿ ತಾನೇ ಗಾದಿ ಏರುವುದು! ಬಾದಶಾಹರ ಸ್ಥಿತಿಯೂ ಡೋಲಾಯಮಾನ ಯಾವ ಕ್ಷಣ ಹೇಗೋ ಏನೋ ಎಂದುಕೊಳ್ಳುತ್ತಿದ್ದರೆ, ನೂರ್ ಜಹಾನ್ ಇವನ ದ್ರೋಹ ಚಿಂತನೆಗಳನ್ನು ಮತ್ತು ಪ್ರಯತ್ನಗಳನ್ನು ಗಮನಿಸಿದ್ದಳು. ಯಾವುದಾದರೂ ನೆಪದಿಂದ ಅವನನ್ನು ಅಧಿಕಾರದಿಂದ ದೂರವಿಡಬೇಕೆಂದುಕೊಂಡಳು.

ಕೂಡಲೇ ಬಂಗಾಳದ ಗವರ್ನರ್ ಆಗಿ ಹೋಗಬೇಕೆಂಬ ಆದೇಶವನ್ನು ಪರವೇಜನ ಮೂಲಕ ಕಳಿಸಿಕೊಟ್ಟಳು. ಪರವೇಜ್‌ಗೂ ಈ ಆದೇಶ ಸರಿಯೆನಿಸಲಿಲ್ಲ. ಮಹಬ್ಬತ್‌ಖಾನ್‌ನಿಂದ ದೂರವಿರಲು ಮನಸ್ಸು ಒಪ್ಪಲಿಲ್ಲ. ಮಹಬ್ಬತ್‌ಖಾನನಿಂದಲೂ ಈ ಆದೇಶ ಒಪ್ಪಿಗೆಯಾಗಲಿಲ್ಲ. ನೂರ್ ಜಹಾನ್ ತನ್ನ ಸಿಟ್ಟನ್ನೆಲ್ಲ ಪರವೇಜ್‌ನ ಮೇಲೆ ಕಾರಿದಳು. ಅವನು ಬಂಗಾಳಕ್ಕೆ ಹೋಗದಿದ್ದಲ್ಲಿ ಕೂಡಲೇ ರಾಜಸಭೆಗೆ ಬರಲು ತಿಳಿಸುವಂತೆಯೂ, ಪರವೇಜ್ ಅವನ ಸಹವಾಸ ಬಿಟ್ಟು ಬುರಹಾನ್ ಪುರದಲ್ಲಿ ಮಂತ್ರಿಗಳ ಜೊತೆ ಇರಬೇಕೆಂದು ಎಚ್ಚರಿಕೆಯ ದನಿಯಲ್ಲಿ ಪತ್ರ ಬರೆದು ಕಳಿಸಿದಳು. ಆ ಪತ್ರದ ತುಂಬ ಬೆದರಿಕೆಯ ಮಾತುಗಳೇ ಇದ್ದವು.

ಮಹಬ್ಬತ್‌ಖಾನ್‌ನಿಗೆ ಸ್ವಲ್ಪ ಹೆದರಿಕೆ ಆಯಿತು. ಮನಸ್ಸಿನಲ್ಲಿ ನೂರ್ ಜಹಾನಳನ್ನು ರಾಕ್ಷಸಿ, ಹೆಣ್ಣು ಸೈತಾನ್ ಎಂದೆಲ್ಲಾ ಬೈದುಕೊಳ್ಳುತ್ತಲೇ ಅವಳ ಆದೇಶವನ್ನು

ಒಪ್ಪಿಕೊಂಡು ಬಂಗಾಳದ ಕಡೆಗೆ ಹೊರಟು ಹೋಗುವಾಗಲೂ ಒಂದು ಷರತ್ತನ್ನು ಅವನ ಮುಂದೆ ಇಟ್ಟಳು. ಶಹಜಹಾನನ ಬಂಡಾಯದ ಸಮಯದಲ್ಲಿ ಗೆದ್ದುಕೊಂಡ ಆಸ್ತಿಪಾಸ್ತಿ, ಆನೆಗಳು ಎಲ್ಲವನ್ನೂ ಬಾದಶಾಹರಿಗೆ ಹಿಂತಿರುಗಿಸಬೇಕು ಎನ್ನುವುದು ಅವಳ ಷರತ್ತಾಗಿತ್ತು. ಅವುಗಳನ್ನು ವಶಪಡಿಸಿಕೊಂಡು ಬರಲು ತನ್ನ ಕಡೆಯವನೊಬ್ಬನನ್ನು ಕಳಿಸಿಕೊಟ್ಟಳು.

ಮಹಬ್ಬತ್‌ಖಾನನಿಗೆ ಪ್ರತಿಸಲವೂ ನೂರ್ ಜಹಾನಳು ಮಾಡುತ್ತಿರುವ ಅವಮಾನಗಳನ್ನು, ಆರೋಪಗಳನ್ನು, ಟೀಕೆಗಳನ್ನು ಸಹಿಸಿಕೊಳ್ಳುವುದು ಇನ್ನು ಸಾಧ್ಯವೇ ಇಲ್ಲವೆನಿಸಿ, ನೇರವಾದ ಆಕ್ರಮಣದ ಅಗತ್ಯವನ್ನು ಗ್ರಹಿಸಿದ.

ಕೂಡಲೇ 5000 ರಾಜಪೂತಯೋಧರ ಪಡೆಯೊಂದಿಗೆ, ಝೀಲಂ ನದಿಯ ಪೂರ್ವದಡದಲ್ಲಿ ಬೀಡುಬಿಟ್ಟಿದ್ದ. ಬಾದಶಾಹರನ್ನು ಕಂಡು ಗೌರವ ಸಲ್ಲಿಸಿ, ತನ್ನ ಮೇಲಿನ ಆರೋಪಗಳನ್ನು ನಿರಾಧಾರವೆಂದು ತೋರಿಸಿಕೊಡಬೇಕೆಂದು ಭಾವಿಸಿ, ಜಹಾಂಗೀರ್ ಬಾದಶಾಹರಿಗೆ ಪತ್ರ ಬರೆದ. ಆದರೆ ಅಷ್ಟು ಹೊತ್ತಿಗೆ, ಜಹಾಂಗೀರನಿಗೆ, ಮಹಬ್ಬತ್‌ಖಾನ್ ಸೈನ್ಯದೊಂದಿಗೆ ಬಂದಿರುವ ಸುದ್ದಿ ಮುಟ್ಟಿತ್ತು. ಸೈನ್ಯದೊಂದಿಗೆ ಬರಬೇಕಾದ ಅಗತ್ಯವೇನೆಂಬುದೇ ಜಹಾಂಗೀರನ ಪ್ರಶ್ನೆಯಾಗಿತ್ತು. ಅದಕ್ಕಾಗಿ ಸೈನ್ಯವನ್ನು ಹಿಂದೆ ಬಿಟ್ಟು ಒಬ್ಬನೇ ಬರುವುದಾದರೆ ಬರಬಹುದೆಂದು ಜಹಾಂಗೀರ್ ಉತ್ತರವನ್ನು ಕಳಿಸಿಕೊಟ್ಟ. ಮಹಬ್ಬತ್‌ಗೆ ತಾನೊಬ್ಬ ಅಪರಾಧಿ ಎನ್ನುವಂತೆ ಅವನ ಮುಂದೆ ಕಾಣಿಸಿ ಕೊಳ್ಳಲು ಇಷ್ಟವಾಗಲಿಲ್ಲ. ಪತ್ರ ಸಂದೇಶಗಳನ್ನು ತಂದ ಬರ್‌ಖುರ್‌ದಾರ್, ಬೇರೆ ಯಾರೂ ಆಗಿರದೆ, ಮಹಬ್ಬತ್‌ಖಾನನ ಅಳಿಯನಾಗಿದ್ದ. ಮಹಬ್ಬತ್‌ಖಾನನೂ ಹಠವಾದಿ, ಜಹಾಂಗೀರ್ ತನ್ನನ್ನು ಕ್ಷಮಿಸಿದ್ದೇನೆ ಎನ್ನುವ ಭರವಸೆ ಕೊಡುವವರೆಗೂ ಬಾದಶಾಹರ ಮುಂದೆ ಅಪರಾಧಿಯಾಗಿ ನಿಲ್ಲಲು ನಿರಾಕರಿಸಿದ. ಅವನ ಈ ಉದ್ಧಟತನ ಬಾದಶಾಹ್ ದಂಪತಿಗಳಿಗೆ ತೀರಾ ಅವಮಾನವೆನಿಸಿತು. ಕೂಡಲೆ ಇಬ್ಬರೂ ಕ್ರುದ್ಧರಾದರು. ನೂರ್ ಜಹಾನ್‌ಳಿಗಂತೂ ಅವನಿಗೆ ಶಿಕ್ಷೆಯಾಗಲೇಬೇಕೆಂದು ಹಠವಿತ್ತು. ಆದರೆ ಪ್ರಬಲ ಕಾರಣವಿಲ್ಲದೆ ಅದು ಸಾಧ್ಯವಿರಲಿಲ್ಲ. ಅದಕ್ಕಾಗಿ, ಸಂದೇಶವಾಹಕನಾಗಿ ಬಂದ ಬರ್‌ಖುರ್‌ದಾರ್‌ನ ಜೊತೆ ಮಹಬ್ಬತ್‌ಖಾನ್, ತನ್ನ ಮಗಳ ಜೊತೆ ರಾಜಾದೇಶವಿಲ್ಲದೆ ಗಮನಕ್ಕೂ ತಾರದೆ ನಿಕಾಹ್ ಮಾಡಿದ್ದಾನೆಂದು ಚಾಡಿ ಹೇಳಿ ಜಹಾಂಗೀರನ ಮನಸ್ಸನ್ನು ಕೆಡಿಸಿದಳು. ಬಾದಶಾಹ್ ಜಹಾಂಗೀರ್, ತನ್ನ ಶಾಸನ, ನಿಯಮಕ್ಕೆ ವಿರುದ್ಧವಾಗಿ ಮಾಡಿದ ಈ ಕೆಲಸವನ್ನು ತನಗೆ ಮಾಡಿದ, ಪ್ರಭುತ್ವಕ್ಕೆ ಮಾಡಿದ ಅವಮಾನವೆಂದು ಭಾವಿಸಿ, ಕೂಡಲೇ ಅವನ ಅಳಿಯ ಬರ್‌ಖುರ್‌ದಾರನನ್ನು ಸೆರೆಮನೆಯಲ್ಲಿ ಇರಿಸಿದ ಮತ್ತು ವರದಕ್ಷಿಣೆ ರೂಪವಾಗಿ ನೀಡಿದ್ದ ಆಸ್ತಿಪಾಸ್ತಿಗಳನ್ನೆಲ್ಲಾ ಕಸಿದುಕೊಂಡು ರಾಜಬೊಕ್ಕಸಕ್ಕೆ ತುಂಬಿಸಿದ.

ಅಸಹಾಯಕತೆ, ರೋಷಗಳಿಂದ ಮೈ ಪರಚಿಕೊಳ್ಳುತ್ತಿದ್ದ ಮಹಬ್ಬತ್‌ಖಾನನಿಗೆ, ಅಳಿಯ ಬಂಧಿಯಾಗಿರುವ ವಿಷಯ ತಿಳಿದು ಬಂತು.

ಮಹಬ್ಬತ್‌ಖಾನನ ಒಳಗೆ ಲಾವಾ ಕುದಿಯುತ್ತಿತ್ತು. ಬಾದಶಾಹರನ್ನು ಒಂಟಿ ಆಗಿ ಕಂಡು, ಸಮಾಧಾನದಿಂದ ನಡೆದದ್ದೆಲ್ಲವನ್ನೂ ವಿವರವಾಗಿ ತಿಳಿಸಿದಲ್ಲಿ ಇಬ್ಬರ ನಡುವೆ

ಇರುವ ತಪ್ಪು ಕಲ್ಪನೆಗಳು ನಿವಾರಣೆಯಾಗುತ್ತವೆ ಎಂದು ಭಾವಿಸಿದ. ಆದರೆ ಜಹಾಂಗೀರನನ್ನು ಒಂಟಿಯಾಗಿ ಭೇಟಿಯಾಗುವುದೇ ಒಂದು ದೊಡ್ಡ ಸಮಸ್ಯೆ. ಕುತಂತ್ರಿ ರಾಜಕಾರಣಿ ನೂರ್ ಜಹಾನಳ ಸರ್ಪಕಾವಲಿನಿಂದ ಅವನನ್ನು ಬಿಡಿಸಬೇಕಿತ್ತು. ಜಹಾಂಗೀರನ ಮೇಲೆ ಒಂದಿಷ್ಟೂ ದ್ವೇಷವಿಲ್ಲ. ಅವನ ಮಾತು, ನಿರ್ಧಾರಗಳು, ತೀರ್ಪುಗಳು, ವಿಚಾರಣೆಗಳು, ದಂಡನೆಗಳು ಎಲ್ಲವೂ ನೂರ್ ಜಹಾನಳ ಆದೇಶದಿಂದಲೇ ಹೊರಡುತ್ತಿದ್ದವು. ಅದಕ್ಕಾಗಿ ಹೇಗಾದರೂ ಅವನು ಒಂಟಿಯಾಗಿರುವ ಸಮಯ ನೋಡಿ ಭೇಟಿಯಾಗಬೇಕೆಂದು ತೀರ್ಮಾನಿಸಿ ಒಮ್ಮೆಲೆ ಝೀಲಂ ನದಿಯ ಪೂರ್ವದ ಬಿಡಾರದಲ್ಲಿ ಇರುವ ಸುದ್ದಿ ತಿಳಿದು ಒಮ್ಮೆಲೆ ಆ ದಿಕ್ಕಿಗೆ ಕುದುರೆ ಓಡಿಸಿದ.

ಜಹಾಂಗೀರನ ರಾಜಪರಿವಾರ (ಸೈನ್ಯ ಪಡೆಗಳು, ಸೇವಕರೂ, ಜನಾನಾದ ಹೆಂಗಸರು ಎಲ್ಲಾ ಸೇರಿ) ಅಸಫ್‌ಖಾನನ ಸುಪರ್ದಿಯಲ್ಲಿ ಮತ್ತೊಂದು ಬಿಡಾರದಲ್ಲಿ, ರಾಜದಂಪತಿಗಳ ಬಿಡಾರದಿಂದ ಸ್ವಲ್ಪ ದೂರದಲ್ಲಿ ಬಿಡಾರಬಿಟ್ಟಿತ್ತು. ರಾಜದಂಪತಿಗಳ ರಕ್ಷಣೆಗೆಂದು ಒಂದಷ್ಟು ಮಂದಿ ರಾಜಪೂತ ಸೈನಿಕ ಪಡೆಯನ್ನು, ಅವರೊಂದಿಗೆ ಉಳಿಸಲಾಗಿತ್ತು.

ಮಹಬ್ಬತ್‌ಖಾನನೂ ಕೂಡಾ ತನ್ನ ಯೋಜನೆಯಂತೆ, ಅವರು ಬಿಡಾರದಲ್ಲಿದ್ದ ಸ್ಥಳವನ್ನು ತಲುಪಿದ. ಕೂಡಲೇ, ತನ್ನ ಸೇನಾಪತಿಯೊಬ್ಬನಿಗೆ ಪಶ್ಚಿಮದಡದಲ್ಲಿ ಬೀಡು ಬಿಟ್ಟಿರುವ ಯಾರೊಬ್ಬರೂ ನದಿಯನ್ನು ದಾಟಿಬರಲು ಸಾಧ್ಯವಾಗದಂತೆ, ಬಂದೋಬಸ್ತ್ ಮಾಡಬೇಕೆಂಬ ಉದ್ದೇಶದಿಂದ ಸೇತುವೆಯನ್ನೆ ಸುಟ್ಟುಹಾಕಲು ಆದೇಶಿಸಿದ. ಕೆಲವೇ ಕೆಲವು ಮಂದಿ ಸೈನಿಕರನ್ನು ಬೆನ್ನಿಗೆ ಇರಿಸಿಕೊಂಡು, ಜಹಾಂಗೀರ್ ಉಳಿದುಕೊಂಡಿದ್ದ ಬಿಡಾರದತ್ತ ಓಡಿದ. ಇವನ ಈ ಆಕ್ರಮಣ ತೀರಾ ತೀರಾ ಅನಿರೀಕ್ಷಿತವೂ ಆಕಸ್ಮಿಕವೂ ಆಗಿತ್ತು. ಯಾವುದೇ ಅಪಾಯದ ಸೂಚನೆಯೂ ಇಲ್ಲದೆ, ದಿಢೀರನೆ ಆದ ಆಕ್ರಮಣದ ಕಲ್ಪನೆಯಿಲ್ಲದೆ ನಿದ್ರಿಸುತ್ತಿದ್ದ ರಾಜಪರಿವಾರ, ಸೈನಿಕರು, ಒಮ್ಮೆಲೇ ಎಚ್ಚೆತ್ತುಕೊಂಡು ಚೀರತೊಡಗಿದರು, ಅಯ್ಯೋ ಅಯ್ಯೋ ಮಹಬ್ಬತ್‌ಖಾನ್ ಬರುತ್ತಿದ್ದಾನೆ ಎಂದು ಹುಯಿಲೆದ್ದಿತು. ಎಲ್ಲರೂ ನಿರಾಯುಧರಾಗಿ, ಸುಖನಿದ್ರೆಯಲ್ಲಿದ್ದರು. ಮಹಬ್ಬತ್‌ಖಾನನ ಸೈನಿಕರು ರಾಜಪರಿವಾರವಿದ್ದ ನಿವಾಸದೆಡೆಗೆ ನುಗ್ಗಿದರು. ಎಚ್ಚೆತ್ತುಕೊಂಡ ಸೈನಿಕರು ಮಹಬ್ಬತ್‌ಖಾನನ ಸೈನಿಕರೊಂದಿಗೆ ಹಣಾಹಣಿಗೆ ನಿಂತರು. ಎಷ್ಟೇ ಪ್ರಯತ್ನಪಟ್ಟರೂ ಮಹಬ್ಬತ್‌ಖಾನನ ಸೈನಿಕರನ್ನು ಎದುರಿಸಲು ಸಾಧ್ಯವಾಗಲಿಲ್ಲ. ಇಷ್ಟೆಲ್ಲಾ ಆಗುತ್ತಿದ್ದಾಗ, ಜಹಾಂಗೀರ್ ಸುಖನಿದ್ರೆಯಲ್ಲಿದ್ದ. ಬಾದಶಾಹರ ರಕ್ಷಣೆಗಿದ್ದ ಸೈನಿಕರು, ತಮ್ಮ ಬಾದಶಾಹರನ್ನು ನಿದ್ದೆಯಿಂದ ಎಬ್ಬಿಸಿ ನಡುಗುತ್ತ "ಹುಜೂರ್ ಮಹಬ್ಬತ್ ಖಾನ್" ಎಂದಷ್ಟೇ ಹೇಳಿದರು.

ಕಣ್ಣುಬಿಟ್ಟು, ಏನಾಗುತ್ತಿದೆ ಎಂಬುದನ್ನು ಸೂಕ್ಷ್ಮವಾಗಿ ಗ್ರಹಿಸಿದ. ತಾನೂ ಅಲ್ಲಿಂದ, ತನ್ನ ಪರಿವಾರವಿದ್ದ, ಮತ್ತೊಂದು ದಡದೆಡೆಗೆ ಹೊರಡುವ ಸಿದ್ಧತೆಯಲ್ಲಿದ್ದ, ಅವನಿಗಾಗಿ ಪಲ್ಲಕ್ಕಿಯೂ ಸಿದ್ಧವಾಗಿತ್ತು. ತನ್ನೆದುರು ಮಹಬ್ಬತ್‌ಖಾನ್ ನಿಂತಿದ್ದ. ಜಹಾಂಗೀರ್ ಕಾಣಿಸಿಕೊಂಡ ಕೂಡಲೇ ತಸ್ಲೀಮ್ ಮಾಡಿದ. ನಿರಾಳವಾಗಿ ಜಹಾಂಗೀರ್ ಪಲ್ಲಕ್ಕಿಯೊಳಗಿನ ಆಸನದಲ್ಲಿ ಕುಳಿತುಕೊಂಡ, ಮಹಬ್ಬತ್ ಜಹಾಂಗೀರನನ್ನು ಸಮೀಪಿಸಿ.

"ಜಹಾಂಪನಾಹ್ ನಾನು ಯಾವ ತಪ್ಪೂ ಮಾಡಿಲ್ಲವಾದರೂ ಸುಳ್ಳು ಆರೋಪಗಳನ್ನು ಹೊರೆಸಿ ನಿಮ್ಮ ಮನಸ್ಸು ಕೆಡಿಸಿದ್ದಾರೆ. ಎಂದಿನಿಂದಲೂ ನಾನು ನಿಮ್ಮ ಸೇವಕ. ಸೇವಕನಾಗಿಯೇ ಉಳಿಯಲು ಸಿದ್ಧ. ಆದರೆ ಬಾದಶಾಹ್ ಬೇಗಂ, ಅಸಫ್‌ಖಾನರಿಬ್ಬರೂ, ನಾನು ಅವರ ಅಧಿಕಾರಕ್ಕೆ ಅಡ್ಡಿಯಾಗುತ್ತೇನೆನ್ನುವ ಕಾರಣಕ್ಕೆ ಸಂಪೂರ್ಣವಾಗಿ ನನ್ನನ್ನು ಮುಗಿಸಿಬಿಡುವ ಉದ್ದೇಶವನ್ನು ಹೊಂದಿದ್ದಾರೆ. ನನಗೆ ಗೊತ್ತಿದೆ ಅವರ ದ್ವೇಷ, ನನ್ನನ್ನು ಸಾವಿನತ್ತ ದೂಡುವುದರ ಹೊರತು ಬೇರೇನೂ ಮಾಡಲಾರದು. ಆ ಸಾವು ನನ್ನ ಗೌರವ, ಪ್ರತಿಷ್ಠೆಗಳಿಗೂ ಮಾರಕವಾಗುತ್ತದೆ. ನನ್ನ ನಿಷ್ಠೆ, ಪ್ರಾಮಾಣಿಕತೆಗಳನ್ನು ಬಲ್ಲಿರಾದ್ದರಿಂದ ನಿಮ್ಮ ಶರಣು ಬಂದಿದ್ದೇನೆ, ಸತ್ಯಾಸತ್ಯತೆಯ ವಿಚಾರಣೆಯಾದ ಮೇಲೆ, ನೀವೂ, ನಾನು ಸಾವಿಗೆ ಅರ್ಹನೆಂದರೆ, ನಿಮ್ಮ ಮುಂದೆಯೇ 'ಆ ಸಾವು ಬರಲಿ' ಎಂಬುದು 'ನನ್ನ ಪ್ರಾರ್ಥನೆ' ಎಂದು ವಿನಂತಿಸಿಕೊಂಡ. ಜಹಾಂಗೀರ್‌ನಿಗೆ ಏನು ಮಾಡಬೇಕೆಂದು ತೋಚಲಿಲ್ಲ. ತನ್ನ ಸುತ್ತಲೂ ರಕ್ಷಣೆಗೆಂದು ಇದ್ದ ಅಹದಿಗಳಾಗಲೀ, ಸೈನಿಕರಾಗಲೀ ಕಾಣುತ್ತಿಲ್ಲ ತನ್ನ ಹೆಂಡತಿಯೂ ಕೂಡಾ ಕಾಣುತ್ತಿಲ್ಲ; ಯಾವ ಪ್ರತಿಭಟನೆಯ ಸೂಚನೆಯೂ ಕಾಣುತ್ತಿಲ್ಲ ಎಂದು ಗ್ರಹಿಸಿದ ಮೇಲೆ ಒಳಗೊಳಗೇ ಕಂಪಿಸತೊಡಗಿದ. ನೂರ್ ಭದ್ರತೆಯ ಬಗ್ಗೆ ಚಿಂತೆಯಾಯಿತು.

ಮಹಬ್ಬತ್‌ಖಾನ್, ಜಹಾಂಗೀರನನ್ನು ಕುದುರೆಯೇರಿ ತನ್ನ ಜೊತೆ, ತನ್ನ ಬಿಡಾರಕ್ಕೆ ಬರಲು ಆದೇಶಿಸಿದ. ಆದರೆ ಜಹಾಂಗೀರ್ ತನ್ನ ಪ್ರೀತಿಯ ಅರಬ್ಬಿ ಕುದುರೆಯನ್ನೇ ಬೇಕೆಂದು ಹಠಹಿಡಿದ. ಮಹಬ್ಬತ್‌ಖಾನ್ ಅವನ ಮನವೊಲಿಸಲು ಪ್ರಯತ್ನಿಸಿದ. ಕೂಡಲೇ ಹೊರಡಬೇಕೆಂದು ಆತುರಪಡಿಸಿದ. ತಡವಾದಲ್ಲಿ ನದಿಯ ಪಶ್ಚಿಮಕ್ಕಿರುವ ಬಿಡಾರಕ್ಕೆ ಸುದ್ದಿ ತಲುಪಿ, ಎಚ್ಚೆತ್ತುಕೊಂಡರೆ, ಅಪಾಯ ಕಾದಿರುತ್ತದೆ ಎಂದು ಮಹಬ್ಬತ್ ಲೆಕ್ಕಾಚಾರ ಹಾಕಿದ. ಕಡೆಗೆ ಆನೆಯ ಮೇಲಿನ ಅಂಬಾರಿಯಲ್ಲಿ ಕುಳಿತುಕೊಳ್ಳಲು ಒಪ್ಪಿದ. ಜಹಾಂಗೀರನ ಅಂಬಾರಿಯ ಸುತ್ತಲೂ ರಾಜಪೂತ ಸೈನಿಕರ ಪಡೆಯಿತ್ತು. ಅಂಬಾರಿಯಲ್ಲಿದ್ದರೂ ನೂರ್ ಜಹಾನಳಿಗಾಗಿ ಸುತ್ತಲೂ ಕಣ್ಣಾಡಿಸಿದ. ಬಹುಶಃ ಅವಳು ತಪ್ಪಿಸಿಕೊಂಡು ತಲೆ ಮರೆಸಿಕೊಂಡಿರಬೇಕು. ಖಂಡಿತವಾಗಿಯೂ ಅವಳು ಏನಾದರೂ ಉಪಾಯಮಾಡಿ ನನ್ನನ್ನು ಬಿಡಿಸಿಕೊಳ್ಳುತ್ತಾಳೆ. ಈಗಲೂ ಪ್ರತಿರೋಧಕ್ಕಾಗಿ ಪ್ರಯತ್ನಿಸುತ್ತಿರಬೇಕು – ಎಂದೆಲ್ಲಾ ಜಹಾಂಗೀರ್ ಯೋಚಿಸುತ್ತಿದ್ದ.

ಜಹಾಂಗೀರನಂತೆಯೇ ಮಹಬ್ಬತ್‌ಖಾನನೂ ನೂರ್ ಜಹಾನಳ ಬಗ್ಗೆ ಯೋಚಿಸುತಿದ್ದ. ಅವಳನ್ನು ಬಿಡಬಾರದು. ಈಗಾಗಲೇ ಅವಳು ತನ್ನನ್ನು ಹತ್ತಿಕ್ಕಲು ಉಪಾಯಗಳನ್ನು ಯೋಚಿಸುತ್ತಿರಬೇಕು. ಜಹಾಂಗೀರನನ್ನು ಯಾವ ರೀತಿಯಿಂದಲಾದರೂ ಅಪಹರಿಸಿಕೊಂಡು ಹೋಗುವಷ್ಟು ಸಮರ್ಥಳಾಗಿರುವುದರಿಂದ ಭದ್ರವಾದ ಕಾವಲಿನಲ್ಲಿಯೇ ಇರಿಸಬೇಕು ಎಂದುಕೊಂಡು ಹೇಗೆಂಬ ವ್ಯವಸ್ಥೆಯ ಬಗ್ಗೆ ಯೋಚಿಸತೊಡಗಿದ. ಕೂಡಲೇ ಜಹಾಂಗೀರನನ್ನು ಜೊತೆಯಾಗಿ ಇರಿಸಿಕೊಂಡೇ ಬಿಡಾರಕ್ಕೆ ಹಿಂತಿರುಗಿ ನೋಡಿದರೆ, ನೂರ್ ಜಹಾನ್ ನಾಪತ್ತೆ. ವೇಷಾಂತರದೊಂದಿಗೆ ಚತುರತೆಯಿಂದ ತಪ್ಪಿಸಿಕೊಂಡು ಬಿಟ್ಟಿದ್ದಳು. ಉಳಿದಿದ್ದ ರಾಜಪರಿವಾರದವರನ್ನಾದರೂ ಬಂಧಿಸೋಣವೆಂದುಕೊಂಡರೆ, ಶಹರಿಯಾರ್ ಕೂಡಾ ಕಾಣಿಸಲಿಲ್ಲ.

ಮಹಬ್ಬತ್‌ಖಾನ್ ಊಹಿಸಿದಂತೆ, ಸಿಡುಬಿಗೆ ಒಳಗಾದವಳಂತೆ ಕಾಣಿಸಿಕೊಂಡು, ಹಾದಿಯಲ್ಲಿ ಅಡ್ಡಹಾಕಿದವರಿಗೆಲ್ಲಾ, ದಾರಿ ತಪ್ಪಿಸಿ ಅಸಹಾಯಕ ಹೆಣ್ಣಿನಂತೆ ನಟಿಸುತ್ತಾ, ಸೇತುವೆ ದಾಟಿ ಬಂದುಬಿಟ್ಟಿದ್ದಳು.

ಕೂಡಲೇ ಅಸಫ್‌ಖಾನನ ಬಿಡಾರ ಪ್ರವೇಶಿಸಿ, ನಡೆದದ್ದೆಲ್ಲವನ್ನೂ ವಿವರಿಸಿದಳು. ಬಾದಶಾಹ್ ಮಹಬ್ಬತ್‌ಖಾನನಿಗೆ ಸೆರೆಸಿಗಲು ಕಾರಣ, ಅಸಫ್‌ಖಾನನೇ ಎಂದು ದೂರಿದಳು. ಸಾಕಷ್ಟು ಸೈನಿಕರು ರಕ್ಷಣೆಗೆ ಇಲ್ಲದ ಕಾರಣವೇ, ಜಹಾಂಗೀರ್ ಸೆರೆಯಾದನೆಂಬುದು ಅವಳ ಆರೋಪ. ಈಗ ಕೂಡಲೇ ಜಹಾಂಗೀರನ ರಕ್ಷಣೆಗೆ ಯತ್ನಿಸಬೇಕು ಎಂದುಕೊಂಡು, ನಿದ್ರಾವಸ್ಥೆಯಲ್ಲಿದ್ದ ಸೈನಿಕರನ್ನು ಎಬ್ಬಿಸಿದಳು. ಕೂಡಲೇ ಪ್ರಮುಖ ಅಧಿಕಾರಿಗಳನ್ನು ಸಲಹಾಮಂತ್ರಿಗಳನ್ನು ಕರೆಸಿ, ತಮ್ಮ ತಮ್ಮ ಕರ್ತವ್ಯಗಳ ಸರಿಯಾದ ನಿರ್ವಹಣೆಯಾಗದ ಕಾರಣವೇ, ಬಾದಶಾಹರು ಮಹಬ್ಬತ್‌ಖಾನನ ಬಂದಿಯಾದರೆಂದು ಅವರ ಮೇಲೆಲ್ಲಾ ಸಿಡಿಮಿಡಿಗೊಂಡಳು.

"ಯಾವುದನ್ನು ನಾವು ನಿರೀಕ್ಷಿಸಿರಲಿಲ್ಲವೋ, ಅದು ಈಗ ನಮ್ಮ ಮುಂದೆ ಸಂಭವಿಸಿದೆ. ನೀವು ನೋಡಿದರೆ, ನಿಮ್ಮ ನಿರ್ಲಕ್ಷ್ಯದಿಂದ ನಾಚಿಕೆಪಟ್ಟು ದೇವರ ಮುಂದೆ ಮನುಷ್ಯರ ಮುಂದೆ, ಅಪರಾಧಿಗಳಂತೆ ನಿಲ್ಲಬೇಕಾಗಿ ಬಂದಿದೆ. ನಿಮ್ಮಿಂದಾದ ಅನಾಹುತವನ್ನು ನೀವೇ ಸರಿಪಡಿಸಬೇಕು ಎಂಬುದನ್ನು ಮರೆಯದೆ, ಮುಂದೆ ಯಾವ ಕ್ರಮ ಕೈಗೊಳ್ಳಬೇಕೆಂಬುದನ್ನು ಯೋಚಿಸಿ ಹೇಳಿ" ಎಂದು ಸಂಕಟದಿಂದಲೇ ಸ್ವಲ್ಪ ಗದರಿಸಿ ಹೇಳಿದಳು. ನೂರ್ ಜಹಾನ್‌ಳ ಸಿಟ್ಟಿನಿಂದ ಅವರೆಲ್ಲ ಸಿಟ್ಟುಗೊಳ್ಳಲಿಲ್ಲ. ಬದಲಾಗಿ, ತಮ್ಮ ಅಸಮರ್ಥತೆ, ನಿರ್ಲಕ್ಷ್ಯಗಳಿಗೆ ನಾಚಿದರು. ತಮ್ಮಲ್ಲಿ ಮಹಬ್ಬತ್‌ಖಾನನ ಬಳಿ ಇರುವಷ್ಟು ಸೈನ್ಯ ಇಲ್ಲದಿದ್ದರೂ ಇದ್ದಷ್ಟೇ ಸೈನ್ಯವನ್ನು ತೆಗೆದುಕೊಂಡು, ಪ್ರಸ್ತುತ ಸಂಕಟವನ್ನು ಎದುರಿಸಲು ಸಿದ್ಧರಾದರು. ಮತ್ತೊಂದು ದಡದಲ್ಲಿದ್ದ ಜಹಾಂಗೀರ್ ಚಿಂತಾಸ್ಥಿತಿಯಲ್ಲಿಯೇ ಸೈನಿಕರ ಚಟುವಟಿಕೆಗಳನ್ನು ದೂರದಿಂದಲೇ ಗಮನಿಸುತ್ತಿದ್ದ. ಸಂದೇಶವಾಹಕನೊಬ್ಬನ ಕೈಲಿ ನೂರ್ ಜಹಾನ್‌ಗೆ ಸಂದೇಶವೊಂದನ್ನು ಕಳಿಸಿದ. ಸೈನ್ಯದೊಂದಿಗೆ, ಇಲ್ಲಿಗೆ ಬರುವುದು ಬೇಡ. ಮಹಬ್ಬತ್‌ಖಾನನಿಂದ ತನಗೇನೂ ಅಪಾಯವಿಲ್ಲವೆಂದು ತಿಳಿಸಿದನಾದರೂ, ಅವಳು ತನ್ನ ಮಾತನ್ನು ಕೇಳಿಸಿಕೊಳ್ಳುವುದೇ ಇಲ್ಲವೆಂದೂ, ಬಲ್ಲವನಾಗಿದ್ದ. ಮಹಬ್ಬತ್‌ಖಾನನ ಕಡೆಯ ಸಂದೇಶವಾಹಕ, ಸಂದೇಶವನ್ನು ಹೊತ್ತೊಯ್ಯುತ್ತಲೇ ಸೇತುವೆಗೆ ಬೆಂಕಿಹಾಕಿದರು. ಏನಾದರಾಗಲಿ ಜಹಾಂಗೀರನನ್ನು ಅವನಿಂದ ಬಿಡಿಸಬೇಕೆಂಬ ಪ್ರಯತ್ನವನ್ನು ಮಾತ್ರ ನಿಲ್ಲಿಸಲಿಲ್ಲ. ಮಹಬ್ಬತ್‌ಖಾನನ ರಾಜಪೂತ ಸೈನಿಕರನ್ನು ಎದುರಿಸುವುದು ನೂರ್ ಜಹಾನ್‌ಗೆ ಅಷ್ಟು ಸುಲಭವಾಗಿರಲಿಲ್ಲ.

ಮಹಬ್ಬತ್‌ಖಾನ್ ಬಹಳ ಸಮರ್ಥ ಮುತ್ಸದ್ದಿಯಾಗಿದ್ದ. ಜಹಾಂಗೀರನೇ ನೂರ್ ಜಹಾನಳ ಕಪಿಮುಷ್ಟಿಯಿಂದ ಬಿಡಿಸಿಕೊಳ್ಳಲು ಸ್ವತಃ ತಾನೇ ಬಂದು, ತನ್ನಲ್ಲಿ ರಕ್ಷಣೆ ಪಡೆದಿದ್ದಾನೆ ಎನ್ನುವಂತೆ, ತನ್ನ ಕೆಲಸವನ್ನು ಬಿಂಬಿಸಿದ. ಇದರ ಹಿಂದೆ, ನೂರ್ ಜಹಾನಳನ್ನು ಜಹಾಂಗೀರನಿಂದ ದೂರಮಾಡುವ ಮತ್ತು ಅಸಫ್‌ಖಾನ್, ಶಹರಿಯಾರರನ್ನು ಯಾವುದೇ ಪ್ರಭಾವ ಬೀರದಂತೆ ಮಾಡುವ ಉದ್ದೇಶವಿತ್ತು.

ಜಹಾಂಗೀರನ ಕಡೆಯಿಂದ, ಮುಖಾರಬ್‌ಖಾನನ ಮೂಲಕ ನೂರ್ ಜಹಾನಳಿಗೆ ಸಂದೇಶಗಳನ್ನು, ಹಲವು ಬಾರಿ ಕಳಿಸಿಕೊಡುವ ವ್ಯವಸ್ಥೆ ಮಾಡಿದ. ಮಹಬ್ಬತ್‌ಖಾನನನ್ನು ಎದುರಿಸುವ ಸಲುವಾಗಿ ನದಿಯನ್ನು ದಾಟಿ ಬರುವುದರಿಂದ ಯಾವ ಪ್ರಯೋಜನವೂ ಇರುವುದಿಲ್ಲವಾಗಿ, ಅಂತಹ ಸಾಹಸಕ್ಕೆ ಮುಂದಾಗಿ ಅಪಾಯ ಆಹ್ವಾನಿಸುವುದು ಬೇಡವೆಂದು ಎಚ್ಚರಿಕೆಯ ಮಾತುಗಳನ್ನು ಹೇಳಿದ್ದ. ತನ್ನ ಸಂದೇಶಗಳು, ಅಧಿಕೃತವಾದದ್ದೆಂದು ಮನವರಿಕೆ ಮಾಡಲು, ಜಹಾಂಗೀರ್ ತನ್ನ ಮುದ್ರೆಯುಂಗುರವನ್ನು ಜೊತೆಗೆ ಕಳಿಸಿದ್ದ. ಆದರೆ ಹಠಮಾರಿ ನೂರ್ ಜಹಾನ್, ಜಹಾಂಗೀರನ ಬುದ್ಧಿವಾದವನ್ನು ನಿರ್ಲಕ್ಷಿಸಿದಳು. ಅಲ್ಲದೆ ಅವಳ ಜೊತೆಗೆ ಇದ್ದ ರಾಜಕುಮಾರ ಜೈ ಸಿಂಗ್ ಮತ್ತು ಆತನ ಸೈನಿಕರು, ನೂರ್ ಜಹಾನಳ ಚುಚ್ಚು ಮಾತುಗಳಿಂದ ಅವಮಾನಿತರಾಗಿದ್ದವರು, ಎಷ್ಟೇ ಕಷ್ಟವಾದರೂ ಬಾದಶಾಹ್ ಜಹಾಂಗೀರನನ್ನು ಮಹಬ್ಬತ್‌ಖಾನನ ಸೆರೆಯಿಂದ ಬಿಡಿಸಿ, ತಮ್ಮ ಮೇಲಿನ ಕಳಂಕವನ್ನು ತೊಳೆದುಕೊಳ್ಳಬೇಕೆಂದು ಕಾಯುತ್ತಿದ್ದರು. ಮುಂದೆ ಎದುರಿಸಬೇಕಾದ ಅಪಾಯಗಳ ಅರಿವಿದ್ದರೂ ಪೌರುಷದಿಂದ, ನೂರ್ ಜಹಾನ್ ಬೇಗಂರ ಸಾಹಸದಿಂದ ಪ್ರಚೋದಿತರಾಗಿ ಮುಂದುವರೆದರು. ಕಾಲು ನಡಿಗೆಯಲ್ಲಿಯೇ ನದಿಯನ್ನು ದಾಟ ಬೇಕಿತ್ತು. ನೂರ್ ಜಹಾನ್ ಹೌಡಾದಲ್ಲಿ ನಿರ್ಭೀತಳಾಗಿ, ಲಾಡ್ಲಿಯ ಮಗಳನ್ನೂ ಮಡಿಲಲ್ಲಿ ಇರಿಸಿಕೊಂಡು, ನದಿ ದಾಟುವ ಸಾಹಸದಲ್ಲಿ ಇದ್ದಳು. ಕುಳಿತದಲ್ಲಿಂದಲೇ ಸೈನಿಕರಿಗೆ ಆದೇಶ ನೀಡುತ್ತಾ, ಎತ್ತ ಕಡೆ ಹೋಗಬೇಕೆಂದು ಮಾರ್ಗದರ್ಶನ ನೀಡುತ್ತಿದ್ದಳು. ಸೈನಿಕರೆಲ್ಲ ತಮ್ಮ ತಮ್ಮ ಕುದುರೆಗಳೊಂದಿಗೆ ನದಿಗೆ ಇಳಿದು ಸಾಗುತ್ತಿದ್ದರು. ಕೈಯಲ್ಲಿ ರಕ್ಷಣೆಗಾಗಿ ಬಿಚ್ಚುಗತ್ತಿಗಳನ್ನು ಹಿಡಿದಿದ್ದರು.

ಮತ್ತೊಂದು ದಡದಲ್ಲಿ ನಿಂತು, ಮಹಬ್ಬತ್‌ಖಾನ್ ಅವರ ಪರದಾಟವನ್ನು ತಮಾಷೆಯಿಂದ ಗಮನಿಸುತ್ತಿದ್ದ. ನೂರ್ ಜಹಾನಳ ಕಡೆಯ ಸೈನಿಕರಿಗೆ, ಮಹಬ್ಬತ್‌ಖಾನನ ಕಡೆಯಿಂದ ಬಂದ ಬಾದಶಾಹರ ಸಂದೇಶ ಸೂಚನೆಗಳಲ್ಲಿ ನಂಬಿಕೆ ಇಲ್ಲದಿದ್ದರೂ, ತಮ್ಮ ನಿಷ್ಠೆಯ ಬಗೆಗಿನ ನಂಬಿಕೆಯನ್ನು ಹಾಳು ಮಾಡಬಾರದೆಂದು ಈ ದುಸ್ಸಾಹಸಕ್ಕೆ ಮುಂದಾಗಿದ್ದರು.

ನೂರ್ ಜಹಾನಳ ಮಗಳು ಲಾಡ್ಲಿ. ಅವಳ ಮಗಳು ಅರ್ಜಾನಿ, ಶುಶ್ರೂಷಕಿ ಎಲ್ಲರೂ ಹೌಡಾದಲ್ಲಿದ್ದರು. ಪರಿಸ್ಥಿತಿ ಭಯಾನಕವಾಗಿತ್ತು. ಮಹಬ್ಬತ್‌ಖಾನನ ಸೈನ್ಯ, ಇದ್ದ ಕಡೆಯಿಂದಲೇ ತಮ್ಮ ಶೌರ್ಯ ಪ್ರದರ್ಶಿಸುತ್ತಿದ್ದರು. ನೂರ್ ಜಹಾನಳ ಸೈನಿಕರಲ್ಲಿ ಎತ್ತ ಕಡೆ ಹೋಗಬೇಕೆಂದು ತಿಳಿಯದೆಯೇ ಗೊಂದಲದಲ್ಲಿದ್ದರೂ ತನ್ನ ಸೈನಿಕರನ್ನು ಒಂದು ರೀತಿ ಶಿಸ್ತಿಗೆ ಒಳಪಡಿಸಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ನದಿ ದಾಟುವ ಪ್ರಯತ್ನದಲ್ಲಿದ್ದ ಬಹಳಷ್ಟು ಮಂದಿ ಸೈನಿಕರು, ಮಹಬ್ಬತ್‌ಖಾನನ ಸೈನಿಕರ ಬಾಣಾ ಘಾತಗಳಿಗೆ ಗುರಿಯಾಗಿ, ರಕ್ತ ಹರಿದು–ಸತ್ತು ಹೆಣಗಳಾಗಿ ಹೋದರು. ನದೀ ನೀರೆಲ್ಲವೂ ಕೆಂಪಾಯಿತು. ನೂರ್ ಜಹಾನಳೂ ತನ್ನ ಬಾಣಗಳಿಂದ ಶತ್ರುಗಳನ್ನು ಎದುರಿಸುತ್ತಲೇ ಸಾಗಿದಳು. ಪರಸ್ಪರ ಬಾಣ ಪ್ರಯೋಗದ ರಭಸದಲ್ಲಿ ಅರ್ಜಾನಿಯ ಶುಶ್ರೂಷಕಿಗೂ, ತೋಳಿಗೆ ಬಾಣ ಬಂದು ಎರಗಿ ಭಯಂಕರವಾಗಿ ಕಿರುಚಿಕೊಂಡಳು.

ಮಹಬ್ಬತ್‌ಖಾನನ ಸೈನಿಕರು ನೂರ್ ಜಹಾನಳ ಬೆನ್ನಟ್ಟಿದರು. ಅವಳ ಆನೆಯನ್ನು

ನಡೆಸುತ್ತಿದ್ದ ಮಾವುತನ ಸಾವಿನಿಂದ ಸ್ವತಃ ತಾನೇ ಆನೆಯನ್ನು ನಡೆಸಿದಳು. ಅವಳ ಉಡುಪೆಲ್ಲ ರಕ್ತದಿಂದ ತೊಯ್ದು ಹೋಗಿತ್ತು. ಅವಳ ಸಹಾಯಕ್ಕೆಂದು ಬಂದ ಫಿದಾಯತ್‌ಖಾನನೂ ಹಿಮ್ಮೆಟ್ಟಿ ಹೋದ. ಸೈನಿಕರು ಸೋಲಿನ ಸಾವಿನ ಭೀತಿಯಿಂದ ಹಿಂದಕ್ಕೆ ಓಡಿದರು. ತಪ್ಪಿಸಿಕೊಳ್ಳುವ ಪ್ರಯತ್ನದಲ್ಲಿ ಎಷ್ಟೋ ಮಂದಿ ಸಾವಿಗೆ ಈಡಾದರು.

ತನ್ನ ಕಣ್ಣ ಮುಂದೆಯೇ ಇಷ್ಟೊಂದು ಸಾವು, ನೋವು, ನಷ್ಟ ಸಂಭವಿಸುತ್ತಿರುವಾಗ, ವ್ಯರ್ಥ ಪ್ರಯಾಸದಿಂದ ಪ್ರಯೋಜನವಿಲ್ಲವೆಂದು ನೂರ್ ಜಹಾನ್, ಗಾಯಗೊಂಡ ಸಿಂಹವಾಗಿದ್ದರೂ ಸದ್ಯದ ಪರಿಸ್ಥಿತಿಯಲ್ಲಿನ ಅಸಹಾಯಕತೆಯಿಂದ ಮಹಬ್ಬತ್‌ಖಾನನ ಸೈನಿಕರಿಗೆ ಶರಣಾದಳು. ಸೈನಿಕನೊಬ್ಬ ನೂರ್ ಜಹಾನಳ ಆನೆಯನ್ನೇರಿ ಕುಳಿತು ಅವಳನ್ನು ಮಹಬ್ಬತ್‌ಖಾನನ ಬಿಡಾರದ ಕಡೆಗೆ ಕರೆದೊಯ್ದ.

ಜಹಾಂಗೀರನನ್ನು ರಕ್ಷಿಸಬೇಕೆನ್ನುವ ಪ್ರಯತ್ನಗಳು ವಿಫಲವಾದವು. ಸೇನೆಯ ನಾಯಕತ್ವ ವಹಿಸಿದವರಲ್ಲಿ ಯಾರಿಗೂ ಅಲ್ಲಲ್ಲಿ ಚದುರಿಹೋಗಿದ್ದ ಸೈನಿಕರನ್ನು ಮತ್ತೆ ಒಟ್ಟುಗೂಡಿಸಲು ಸಾಧ್ಯವಾಗಲಿಲ್ಲ. ಎಲ್ಲರಿಗೂ ತಮ್ಮ ತಮ್ಮ ಪ್ರಾಣರಕ್ಷಣೆಯೇ ಮುಖ್ಯವಾಗಿತ್ತು. ಹೆಂಗಸರನ್ನು, ಮಕ್ಕಳನ್ನು ಸುರಕ್ಷಿತ ಸ್ಥಳಗಳಿಗೆ ತಲುಪಿಸುವುದೇ ಸವಾಲಾಗಿತ್ತು. ಮೊಟಾಮಿದ್‌ಖಾನ್ ಮತ್ತು ಇನ್ನೂ ಕೆಲವರು ಸ್ವಲ್ಪ ಮಟ್ಟಿಗೆ, ಶತ್ರುಗಳು ತಮ್ಮೆಡೆಗೆ ಬರುವುದನ್ನು ತಡೆ ಹಿಡಿದರು. ಅಸಫ್‌ಖಾನನೂ ಹೇಡಿಯಂತೆ, ತನ್ನ ಪ್ರಾಣರಕ್ಷಣೆಯ ಬಗ್ಗೆ ಯೋಚಿಸಿದನೇ ಹೊರತು, ತಂಗಿಯ ರಕ್ಷಣೆಯಾಗಲೀ ಜಹಾಂಗೀರನ ಬಿಡುಗಡೆಯಾಗಲೀ ಮುಖ್ಯವಾಗಿ ಪರಿಗಣಿಸಲ್ಲಿಲ್ಲ. ಬಿಡಾರದಲ್ಲಿ ಮತ್ತು ಅಲ್ಲಿ ಇಲ್ಲಿ ಉಳಿದಿರುವವರ ಬಗ್ಗೆಯೂ ಯೋಚಿಸಲಿಲ್ಲ. ತನ್ನ ಒಂದಿನ್ನೂರು ಸೈನಿಕರನ್ನು, ತನ್ನ ಅನುಯಾಯಿಗಳನ್ನು ಕೆಲ ಸೇವಕರನ್ನು ಕೂಡಿಸಿಕೊಂಡು ಅಲ್ಲಿಂದ ಕಾಲ್ತೆಗೆದು ತನ್ನ ಜಾಗೀರಾದ ಅಟೋಕ್ ಕಡೆ ಪಲಾಯನ ಮಾಡಿದ.

ನೂರ್ ಜಹಾನಳ ನಿಷ್ಠಾವಂತ, ನಂಬಿಕಸ್ತ ಬೆಂಬಲಿಗರಾದ ಖ್ವಾಜಾ ಅಬುಲ್ ಹಸನ್ ಕೂಡಾ ಅಂತಿಮ ಕ್ಷಣಗಳಲ್ಲಿ ಮಹಬ್ಬತ್‌ಖಾನನ ಕಡೆ ಸೇರಿಕೊಂಡ. ಹೀಗೆ ಈ ದಂಪತಿಗಳಿಗೆ ಬೆಂಬಲಿಗರಾಗಿದ್ದ ಹಲವಾರು ಸೇವಕರು, ಸೈನಿಕರು, ಸೇನಾಪತಿಗಳು, ಬಂಧುಗಳು ಕೂಡಾ, ನಡುನೀರಿನಲ್ಲಿ ಕೈ ಬಿಟ್ಟು ಪ್ರಾಣ ರಕ್ಷಣೆಗೆಂದು ಪಲಾಯನ ಮಾಡಿದರು. ಅಲ್ಲದೆ ಮಹಬ್ಬತ್‌ಖಾನನ ಪಕ್ಷ ವಹಿಸಿದರು. ನೂರ್ ಜಹಾನ್ ಈಗ ಅಸಹಾಯಕಳೂ ಒಂಟಿಯೂ ಆಗಿಬಿಟ್ಟಿದ್ದಳು. ಮಹಬ್ಬತ್‌ಖಾನನನ್ನು ಯುದ್ಧದಲ್ಲಿ ಎದುರಿಸಿ ನಿಲ್ಲಲು ಸಾಧ್ಯವಿಲ್ಲವೆಂಬ ಸತ್ಯ ಮನದಟ್ಟಾದಾಗ, ರಾಜನೀತಿಯ ದಾಳ ಹಿಡಿದಳು. ಹೇಗಾದರೂ ಮಹಬ್ಬತ್‌ಖಾನನನ್ನು, ತಾವು ಶರಣಾದಂತೆ ನಂಬಿಸಿ, ಮುಂದೆ ಯೋಚಿಸುವುದೆಂದು, ಜಹಾಂಗೀರನನ್ನು ಏಕಾಂತದಲ್ಲಿ ಭೇಟಿಯಾಗಲು ಒಪ್ಪಿಗೆ ಕೇಳಿದಳು.

ಮಹಬ್ಬತ್‌ಖಾನ್ ಈಗ ಸಂಪೂರ್ಣ ಸುರಕ್ಷಿತನೂ, ವಿಜೇತನೂ ಆಗಿಬಿಟ್ಟಿದ್ದ. ಆಗಲೇ ಮೊಘಲ್ ಸಾಮ್ರಾಜ್ಯದ ಅಧಿನಾಯಕನೆಂದು ತನ್ನನ್ನು ಭಾವಿಸಿಕೊಳ್ಳಲು ತೊಡಗಿದ. ಈ ಭಾವನೆಗೆ ಇನ್ನಷ್ಟು ನೀರೆರೆದು ಬಲಿಯುವುದಕ್ಕೆ, ಒಂದು ಕಾಲದಲ್ಲಿ, ನೂರ್ ಜಹಾನಳ ತಂದೆಯ ಆಪ್ತ ಮಿತ್ರನೂ ನೂರ್ ಜಹಾನಳ ಮನೆವಾಳ್ತೆ ಅಥವಾ ಉಸ್ತುವಾರಿ

ನೋಡಿಕೊಳ್ಳುತ್ತಿದ್ದ ಗೋವರ್ಧನ್ ಸುರಾಧ್ವಜ್ ಎಂಬುವನು, ಅವಳ ಪಕ್ಷ ಬಿಟ್ಟು ಮಹಬ್ಬತ್‌ಖಾನನ, ಸೇನಾನಾಯಕನಾಗಿ ಸೇರಿಕೊಂಡ. ಅವನಿಂದಲೇ ಗುಪ್ತನಿಧಿಯ ರಹಸ್ಯ ತಿಳಿದು ಕಿತ್ತುಕೊಳ್ಳಲಾಯಿತು. ಕಡೆಗೆ, ತನಗೆ ಪ್ರತಿ ಸ್ಪರ್ಧಿಯಾಗಿ ಉಳಿದಿದ್ದವನು ಅಸಫ್‌ಖಾನ್ ಮಾತ್ರವೇ ಆಗಿದ್ದ. ಅವನನ್ನು ಬಗ್ಗುಬಡಿದರೆ, ತನಗೆ ಬೇರೆ ಯಾರೂ ಎದುರಿಲ್ಲವೆಂದು ಮಹಬ್ಬತ್‌ಖಾನ್ ಭಾವಿಸಿದ. ಕೂಡಲೇ ತನ್ನ ನಿಷ್ಠಾವಂತ ಸೈನಿಕರನ್ನು, ನೆರೆಹೊರೆಯ ಸೇನಾಪತಿಗಳನ್ನು, ರಾಜಪೂತರನ್ನು ಅಸಫ್‌ಖಾನನು ತಲೆ ಮರೆಸಿಕೊಂಡಿದ್ದ ಅಟೋಕ್‌ಗೆ ಕಳಿಸಿಕೊಟ್ಟ. ಜೊತೆಗೆ, ಅವನು ಶರಣಾಗತನಾದ ಪಕ್ಷದಲ್ಲಿ ಅವನ ಪ್ರಾಣ, ಮಾನ, ಹಣ, ಆಸ್ತಿ ಯಾವುದಕ್ಕೂ ಹಾನಿ ಮಾಡುವುದಿಲ್ಲವೆಂದು ರಹಸ್ಯವಾಗಿ ಭರವಸೆ ಪತ್ರವನ್ನೂ ಕಳಿಸಿಕೊಟ್ಟ. ಅಸಫ್‌ಖಾನ್ ಹೆದರಿಕೊಂಡು ಹತಾಶೆ ಸ್ಥಿತಿಯಲ್ಲಿ ಇದ್ದವನು ಮಹಬ್ಬತ್‌ಖಾನನ ಭರವಸೆಗಳನ್ನು ಪೂರ್ತಿಯಾಗಿ ನಂಬಿದ.

ಜಹಾಂಗೀರ್ ದಂಪತಿಗಳು ಕಾಬೂಲಿಗೆ ಸ್ಥಳಾಂತರವಾದರು. ಮೊದಲಿನಂತೆ ಸಭೆಯ ಕಲಾಪಗಳು ಮುಂದುವರೆದವು. ಮಹಬ್ಬತ್ ಖಾನನಿಗೆ ಜಹಾಂಗೀರನ ಜೊತೆ ಯಾವುದೇ ಕೆಟ್ಟ ಭಾವನೆ ಇರಲಿಲ್ಲ. ಈಗ ತನ್ನ ಮಾತಿನಂತೆ ನಡೆಯುವಂತೆ ದಂಪತಿಗಳಿಗೆ ತಾಕೀತು ಮಾಡಿದ್ದ. ಆದರೂ ಒಳಗಿನ ಭಯ ಇದ್ದೇ ಇತ್ತು. ನೂರ್ ಜಹಾನ್ ಬದುಕಿರುವವರೆಗೆ ಅವಳ ಭೀತಿ ಇದ್ದೇ ಇತ್ತು. ಇಷ್ಟು ದೊಡ್ಡ ಸಾಮ್ರಾಜ್ಯ ಮತ್ತೊಬ್ಬರ ಕೈಗೆ ಹೋಗುವುದನ್ನು ಎಂದೂ ಸಹಿಸುವವಳಾಗಿರಲಿಲ್ಲ. ಸ್ವಂತ ಜಹಾಂಗೀರನ ಮಕ್ಕಳನ್ನೇ ಅವರ ಹಕ್ಕಿನಿಂದ ದೂರವಿಡಲು ಪ್ರಯತ್ನಿಸುತ್ತಿದ್ದವಳು, ಈಗ ಇವನನ್ನು ನಿರ್ಲಕ್ಷಿಸಿ, ಸುಮ್ಮನೆ ಸಹಿಸಿಕೊಂಡಿರುವ ಸ್ವಭಾವ ಅವಳದಾಗಿರಲಿಲ್ಲ. ಅದಕ್ಕಾಗಿ ಮಹಬ್ಬತ್‌ಖಾನ್, ಜಹಾಂಗೀರನಿಂದ ಆಕೆ ದೂರವಿರುವಂತೆ ನೋಡಿಕೊಂಡ. ಆಡಳಿತದ ವಿಷಯದಲ್ಲಿ ಮಧ್ಯೆ ಪ್ರವೇಶಿಸುವುದನ್ನು ಮತ್ತು ಝರೋಕಾದಲ್ಲಿ ಬಂದು ಕುಳಿತುಕೊಳ್ಳುವುದನ್ನು ತಪ್ಪಿಸಿದ. ಹೆಂಗಸು ಹೆಂಗಸಾಗಿಯೇ ಉಳಿದುಕೊಂಡು, ಗಂಡನಿಗೆ ನಿಷ್ಠೆಯಾಗಿ, ಸಂಸಾರವನ್ನು ನೋಡಿಕೊಂಡು, ಮನೆಯೊಳಗೇ ಇದ್ದುಕೊಂಡು ಗಂಡನ ಆಸೆಗಳನ್ನು ಪೂರೈಸಿಕೊಂಡು, ಅವನ ಹೊರಗಿನ ವ್ಯವಹಾರಗಳಲ್ಲಿ, ಹೆಂಗಸರಿಗೆ ಸಂಬಂಧಪಡದ ವಿಷಯಗಳಲ್ಲಿ ತಲೆಹಾಕದಿದ್ದರೆ, ಅವಳ ವಿರುದ್ಧ ಅವನಿಗೆ ಯಾವ ಅಭ್ಯಂತರವೂ ಇರಲಿಲ್ಲ. ಅವಳನ್ನೇ ಅಲ್ಲದೆ, ಜಹಾಂಗೀರನನ್ನೂ ಅಂಕೆಯಲ್ಲಿ ಇರಿಸಿಕೊಂಡ. ತನ್ನ ಯಾವುದೇ ನಿರ್ಧಾರಗಳಿಗೆ ಪ್ರತಿ ಹೇಳದೆ ಇರಬೇಕೆಂದು ಆದೇಶಿಸಿದ. ಒಟ್ಟಿನಲ್ಲಿ ನಿರಂಕುಶ ಅಧಿಕಾರಿಯಾಗಿ ನಡೆದುಕೊಳ್ಳುತ್ತಿದ್ದ. ನಿಜವಾಗಿಯೂ ಮಹಬ್ಬತ್‌ಖಾನನಿಗೆ ಜಹಾಂಗೀರನನ್ನು ಇಷ್ಟು ನಿರ್ಬಂಧಗಳನ್ನು ಹೇರಿ ಕ್ರೂರವಾಗಿ ನಡೆಸಿಕೊಳ್ಳಬೇಕೆಂಬ ಅನಿವಾರ್ಯತೆಯಿರಲಿಲ್ಲ. ಬಾಲ್ಯಸ್ನೇಹಿತರು ಒಟ್ಟಿಗೆ ಇದ್ದವರು. ಆದರೆ ಈಗ ಒಬ್ಬರಿಗೊಬ್ಬರು ಬದ್ಧ ಶತ್ರುಗಳಂತೆ ಕಾಣಿಸಿಕೊಳ್ಳುತ್ತಿದ್ದಾರೆ. ಅವನಿಗೆ ಬೇಕಾದ್ದು ತನ್ನ ಮೇಲಿನ ಭ್ರಷ್ಟಾಚಾರದ ಆರೋಪದಿಂದ ಮುಕ್ತಿ. ನಿಜವಾಗಿಯೂ ತನ್ನ ಗೆಳೆಯನ ಗಾದಿಯನ್ನು ಕಸಿದುಕೊಳ್ಳುವ ಉದ್ದೇಶವೇನೂ ಬಲವಾಗಿರಲಿಲ್ಲ.

ಜಹಾಂಗೀರನಿಗೆ ಮತ್ತೆ ಅನಾರೋಗ್ಯ ಕಾಡಲು ಆರಂಭಿಸಿತು. ಅವನಿಗೆ ಈಗ ಮೆಹರುನ್ನೀಸಾ ಉರುಫ್ ನೂರ್ ಜಹಾನಳ ಅಗತ್ಯವಿತ್ತು. "ಮಹಬ್ಬತ್‌ಖಾನ್ ನನಗೆ ನೂರ್ ಜಹಾನಳನ್ನು ಕಾಣಬೇಕೆಂದಿದೆ. ದಯವಿಟ್ಟು ಅವಳನ್ನು ಕರೆಸು" ಎಂದು ಬೇಡಿಕೊಂಡರೂ ಅದು ಅವನ ಮನಸ್ಸನ್ನು ಕರಗಿಸಲಿಲ್ಲ. ನೂರ್ ಜಹಾನ್ ಈ ಸ್ಥಿತಿಯಲ್ಲಿ ಜಹಾಂಗೀರನ ಮೇಲೆ ಪ್ರಭಾವ ಬೀರಿ ಕೆಲಸಕ್ಕೆ ಬಾರದ ಶಹರಿಯಾರನನ್ನು ಅಧಿಕಾರಕ್ಕೆ ಕರೆತರಲು ಗಂಡನನ್ನು ಒಪ್ಪಿಸುವ ಪ್ರಯತ್ನ ಮಾಡುತ್ತಾಳೆಂಬುದನ್ನು ತಿಳಿದೇ ಇದ್ದ. ಆದರೂ ಜಹಾಂಗೀರನ ಶೋಚನೀಯ ಸ್ಥಿತಿಯನ್ನು ಗಮನಿಸಿ ಕೆಲ ರಾಜಪೂತ ಸೈನಿಕರನ್ನು ಅವಳ ನಿವಾಸಕ್ಕೆ ಕಳಿಸಿ, ಕರೆತರಲು ಆದೇಶಿಸಿದ. ಆದರೆ ಒಂದು ಷರತ್ತನ್ನು ಇರಿಸಿದ. ಮುಖ ಕಾಣುವಂತೆ ತೆಳುವಾದ ಬುರ್ಖಾಬಿಟ್ಟು ದಪ್ಪನೆಯ ಬಟ್ಟೆಯೊಂದಿಗೆ ಬರಬೇಕೆಂದು ಹೇಳಿ ಕಳಿಸಿದ.

ನೂರ್ ಜಹಾನಳ ದರ್ಪ, ಅಹಂಕಾರಗಳೆಲ್ಲವನ್ನೂ ಕಸಿದುಕೊಂಡು ಬಿಟ್ಟಿದ್ದ. ಅಸಹಾಯಕತೆಯಿಂದ ಒಳಗೊಳಗೇ ಕುದಿಯುತ್ತಾ, ಅವನ ವಿನಾಶಕ್ಕಾಗಿ ಹಾತೊರೆಯುತ್ತಿದ್ದಳು.

ಅವನು ನಿರ್ದೇಶಿಸಿದಂತೆ ನಡೆದುಕೊಳ್ಳುವುದೇ ಕ್ಷೇಮಕರವೆಂದು, ನೇರವಾಗಿ ಪ್ರತಿಭಟಿಸಲು ಮುಂದಾಗಲಿಲ್ಲ. ತನ್ನನ್ನು ಒಂಟಿಯಾಗಿ, ಗೃಹಬಂಧನದಲ್ಲಿ ಇರಿಸಿರುವುದು ಒಂದು ಬಗೆಯ ಸಂಕಟಕ್ಕೆ ಕಾರಣವಾಗಿದ್ದರೆ, ಅನಾರೋಗ್ಯ ಪೀಡಿತನಾಗಿ ನರಳುತ್ತಿರುವ ಗಂಡನ ಬದಿಯಲ್ಲಿದ್ದು, ಅವನ ಸೇವೆಮಾಡಲಾಗುತ್ತಿಲ್ಲವೆನ್ನುವ ಸಂಕಟ ಮತ್ತೂ ಭಯಂಕರವೆನಿಸುತ್ತಿತ್ತು. ಅವನಿಲ್ಲದ ಕೊರತೆ ಅತಿಯಾಗಿ ಕಾಡುತ್ತಿತ್ತು.

ಜಹಾಂಗೀರನಿದ್ದ ಕೊಠಡಿ ಪ್ರವೇಶಿಸುತ್ತಿದ್ದಂತೆ, ದುರ್ಬಲನಾಗಿ, ಕೆಮ್ಮುತ್ತಾ ಸಂಕಟಪಡುತ್ತಾ ಹಾಸಿಗೆಯಲ್ಲಿ ಬಿದ್ದುಕೊಂಡಿದ್ದುದು ಕಣ್ಣಿಗೆ ಬಿದ್ದಕೂಡಲೇ ನೂರ್ ಜಹಾನಳ ದುಃಖ ಕಟ್ಟೆಯೊಡೆದುಕೊಂಡು ಕಂಬನಿಯಾಗಿ ಹೊರಹೊಮ್ಮಿತು. ಓಡಿ ಹೋಗಿ 'ಜಹಾಂಪನಾಹ್' ಎಂದು ಅಳುತ್ತಾ ಅವನ ಮೇಲೆ ಬಿದ್ದಳು. ಜಹಾಂಗೀರನಿಗೆ ಮುಖ ತೋರಿಸುವ ಹಾಗಿರಲಿಲ್ಲ. ಜಹಾಂಗೀರನಿಗೆ ಬುರ್ಖಾದೊಳಗಿಂದಲೇ ತೊಟ್ಟಿಕುತ್ತಿದ್ದ ಬಿಸಿಕಂಬನಿ ಹನಿಗಳು, ಜಹಾಂಗೀರನ ಕೆನ್ನೆ ತೋಯಿಸಿತು. ಅವನ ಉಮ್ಮಳವೂ ಅತಿಯಾಯಿತು. ಅವಳನ್ನು ನೋಡಿ ಯುಗವೇ ಆಯಿತೆಂಬಂತೆ ವರ್ತಿಸಿದ. ಭಾವುಕನಾದ, "ಮೆಹ್ರೂ! ಮೆಹ್ರೂ! ಯಾಕೆ ನನ್ನಿಂದ ದೂರವಾಗಿದ್ದೀ? ಇದೇನು ಶಿಕ್ಷೆ ಅನುಭವಿಸುತ್ತಿದ್ದೇವೆ? ನಾವು ಮಾಡಿದ ಯಾವ ತಪ್ಪಿಗೆ ಇದು?" ಎಂದು ಬಿಕ್ಕಿ ಬಿಕ್ಕಿ ಅಳುತ್ತಿದ್ದುದನ್ನು ನೋಡಿದರೆ ಮೊಘಲ್ ಸಾಮ್ರಾಜ್ಯದ ಬಾದಶಾಹ್-ಎ-ಜಹಾಂಗೀರ್‌ಗೆ ಈ ಸ್ಥಿತಿಯೇ? ಎಂದು ಯೋಚಿಸಿ ಕರುಳಿರಿದಂತೆ ಅನಿಸುತ್ತಿತ್ತು. ಆದರೆ ಮಹಬ್ಬತ್‌ಖಾನ್ ಈ ದೃಶ್ಯವನ್ನು ನಿರ್ಭಾವುಕತೆಯಿಂದ ನೋಡುತ್ತಾ ನಿಂತಿದ್ದ. ಅವರ ಸಮಕ್ಷಮ ಬಿಟ್ಟು ಹೋಗುವುದು ಅವನಿಗೆ ಸಾಧ್ಯವಿರಲಿಲ್ಲ. ನೂರ್ ಜಹಾನಳ ತಲೆ ಎಷ್ಟು ಫಲವತ್ತಾಗಿತ್ತೆಂದರೆ, ಸೂಜಿ ಮೊನೆಯಷ್ಟು ಆಲೋಚನೆ ಹೊಳೆದರೂ ಅದು ಬೃಹತ್ತಾಗಿ ಬೆಳೆದು ಅರಳುತ್ತಿತ್ತು. ಅದೇ ಅವನಿಗೆ ಇದ್ದ ಭಯ!

"ಮಹಬ್ಬತ್, ನಿನ್ನನ್ನು ಕಾಲು ಹಿಡಿದು ಬೇಡಿಕೊಳ್ಳುತ್ತೇನೆ. ನನ್ನ ಗಂಡನ ಜೊತೆ

ಇರಲು ಅವಕಾಶ ಕೊಡು. ಕಾಯಿಲೆ ಮನುಷ್ಯ. ಹೇಗೋ ಏನೋ?! ಇವರಿಗೆ ಏನಾದರೂ ಆದಲ್ಲಿ ದೇವರು ನಿನ್ನನ್ನು ಕ್ಷಮಿಸುವುದಿಲ್ಲ" ಎಂದು ಮೊರೆಯಿಟ್ಟು ಕೇಳಿಕೊಳ್ಳುತ್ತಿರುವಾಗಲೇ ಒಳಬಂದ ಸೈನಿಕರು, ಅವಳನ್ನು ಎಬ್ಬಿಸಿ, ಅಲ್ಲಿಂದ ಹೊರಕ್ಕೆ ಕರೆದೊಯ್ಯಲು ಮುಂದಾದರು.

"ಮಹಬ್ಬತ್ ನೀನೊಬ್ಬ ದೇಶದ್ರೋಹಿ, ರಾಜದ್ರೋಹಿ! ಒಂದು ವೇಳೆ ನಿನ್ನ ಅಧೀನದಲ್ಲಿ ಇರುವಾಗಲೇ ಬಾದಶಾಹರು ಸಾವನ್ನಪ್ಪಿದರೆ ಅದಕ್ಕೆ ನೀನೇ ಹೊಣೆ. ಆಗ ನಿನ್ನ ಗತಿ ಏನಾಗುವುದೋ ನೋಡುತ್ತಿರು" ಎಂದು ಬೆದರಿಕೆ ಹಾಕಿದಳು. ಆಕ್ರೋಶ, ಆವೇಶಗಳೊಂದಿಗೆ ತನ್ನ ನಿವಾಸಕ್ಕೆ ಮರಳಿದ ನೂರ್ ಜಹಾನ್ ಯಾರೊಂದಿಗೂ ಮಾತಾಡದೆ ಮೌನಪ್ರತಿಮೆಯಾದಳು. ಅವಳ ಸೇವೆಯಲ್ಲಿದ್ದ ಅಹದಿಗಳು, ಅವಳ ಆಪ್ತಸಹಾಯಕ ಹೋಷಿಯಾರ್ ಚಿಂತೆಗೆ ಒಳಗಾದರು. ಅನ್ನಾಹಾರಗಳನ್ನು ನಿರಾಕರಿಸಿದಳು. ತನ್ನನ್ನು ಏಕಾಂತದಲ್ಲಿ ಇರಲು ಬಿಡುವಂತೆ ಆದೇಶಿಸಿದಳು. ಹೋಷಿಯಾರ್ ಅವಳ ಮನಃಸ್ಥಿತಿಯನ್ನು ಸ್ವಭಾವವನ್ನು, ವರ್ಷಗಳಿಂದ ಅವಳ ಸಾಂಗತ್ಯದಲ್ಲಿದ್ದು ಚೆನ್ನಾಗಿ ಬಲ್ಲವನಾಗಿದ್ದ. ಅವನಿಗೆ ಅನಿಸಿತು. ಅವಳ ಈ ಮೌನ ಯಾವುದೋ ವಿಸ್ಫೋಟಕ್ಕೆ ಸಿದ್ಧವಾಗುತ್ತಿದೆ ಎಂದು ಅರ್ಥೈಸಿಕೊಂಡ.

ಹೋಷಿಯಾರ್‌ನ ಆಲೋಚನೆ ನಿಜವೆಂಬುದು ಸಾಬೀತಾಗುವಂತೆ ಸೂಚನೆಗಳು ಕಾಣಿಸಿಕೊಂಡವು. ನೂರ್ ಜಹಾನ್‌ಗೆ ಮಹಬ್ಬತ್‌ಖಾನನನ್ನು ಹತ್ತಿಕ್ಕಲು ಬಹಳ ಯಶಸ್ವಿಯಾಗಬಲ್ಲ ಆಲೋಚನೆ ಹೊಳೆಯಿತು. ಆಕ್ರಮಣ, ಯುದ್ಧಗಳ ಮೂಲಕ, ಅವನನ್ನು ಗೆಲ್ಲುವುದು ಸಾಧ್ಯವಿಲ್ಲ. ಆದ್ದರಿಂದ ತನ್ನ ಬೆರಳಿನಿಂದ ತಾನೇ ಕಣ್ಣು ಚುಚ್ಚಿಕೊಳ್ಳುವಂತಹ ಉಪಾಯ ಯೋಚಿಸಿದಳು. ಅವನ ಸೈನ್ಯದಲ್ಲಿ ಅಧಿಕಾರಿಗಳ ಮಧ್ಯದಲ್ಲಿ ಒಡಕುಂಟುಮಾಡುವುದು! ಅಸಮಾಧಾನ ಸೃಷ್ಟಿಸುವುದು! – ಅಷ್ಟೇ ಸಾಕು. ಮುಂದಿನದು ತನಗೆ ತಾನೇ ನಡೆಯುತ್ತದೆ ಎಂದು ಲೆಕ್ಕಾಚಾರ ಹಾಕಿಕೊಂಡಳು.

ಮಹಬ್ಬತ್‌ಖಾನನಲ್ಲಿ ಅಧಿಕಾರಶಾಹಿ ಅಮಲು ಕೆಲಸಮಾಡುತ್ತಿತ್ತು. ರಾಜಪೂತರಿಗೆ ದೊರೆಯುತ್ತಿದ್ದ ಅಧಿಕಾರ, ಗೌರವಗಳು, ಹೆಚ್ಚುತ್ತಿದ್ದ ಅವರ ವರ್ಚಸ್ಸು, ಅಹದಿಗಳಲ್ಲಿ, ಮುಸ್ಲಿಮರಲ್ಲಿ, ಆಸ್ಥಾನಿಕರಲ್ಲಿ ಅವರ ಬಗ್ಗೆ ಅಸೂಯೆ, ಅಸಮಾಧಾನಗಳನ್ನು ಹುಟ್ಟು ಹಾಕಿತ್ತು. ಅವರಿಗೆಲ್ಲ ಪದೋನ್ನತಿಗಳು ದೊರೆಯುತ್ತಿದ್ದವು. ಅವರು ತುಂಬ ಪ್ರಭಾವಿ ಗುಂಪಾಗಿ ಕಾಣಿಸಿಕೊಂಡರು. ಇದೆಲ್ಲದರ ವಿರುದ್ಧ ಪ್ರತಿಭಟನೆ ಮಾಡಬೇಕೆಂಬ ಪ್ರಚೋದನೆ ಉಂಟಾಯಿತು. ಈ ಸುದ್ದಿ ನೂರ್ ಜಹಾನಳ ಕಿವಿಗೆ ಬಿದ್ದದ್ದೇ ಪರಿಸ್ಥಿತಿಯ ಲಾಭವನ್ನು ಪಡೆದುಕೊಳ್ಳುವ ಆಲೋಚನೆಗೆ ಮುಂದಾದಳು. ಅವನ ಬಗ್ಗೆ ಅಸಮಾಧಾನಗೊಂಡಿದ್ದ ವರಿಷ್ಠ ಅಧಿಕಾರಿಗಳು ಮತ್ತು ಸೈನಿಕರು (ಅವರಲ್ಲಿ ರಾಜಪೂತ ಸೈನಿಕರೂ ಸೇರಿದ್ದರು) ಮೊದಲಾದವರನ್ನೆಲ್ಲ ತನ್ನೆಡೆಗೆ ಸೆಳೆದುಕೊಂಡು ಅವರವರಿಗೆ ಯೋಗ್ಯ ಹುದ್ದೆಗಳನ್ನೂ ಹೆಚ್ಚಿನ ಸಂಬಳವನ್ನೂ ಕೊಟ್ಟು ನೇಮಿಸಿಕೊಂಡಳು. ಒಂದು ಸಂದರ್ಭದಲ್ಲಿ ಕಾಬೂಲ್ ಬಳಿಯ ಮೃಗಯಾ ವಿಹಾರ ಸ್ಥಾನದಲ್ಲಿ, ಒಂದಷ್ಟು ಮಂದಿ ರಾಜಪೂತ ಸೈನಿಕರು, ನಿಷಿದ್ಧವಾದ ಆ ಪ್ರದೇಶದಲ್ಲಿ ತಮ್ಮ ಕುದುರೆಗಳನ್ನು ಮೇಯಲು ಬಿಟ್ಟಿದ್ದನ್ನು ವಿರೋಧಿಸಿದ ಅಲ್ಲಿನ ಮೇಲುಸ್ತುವಾರಿ ನೋಡಿಕೊಳ್ಳುತ್ತಿದ್ದ ಅಹದಿಗಳಲ್ಲಿ

ಒಬ್ಬರನ್ನು ಬಾಣದಿಂದ ಹೊಡೆದು ಸಾಯಿಸಿದ್ದೇ ದೊಡ್ಡ ಹಗರಣವಾಯಿತು. ಮಹಬ್ಬತ್‌ಖಾನನ ಕಿವಿಗೂ ಈ ಸುದ್ದಿ ತಲುಪಿತು. ಎರಡೂ ಗುಂಪುಗಳ ನಡುವೆ ರಾಜಿ ಮಾಡಿಸಲು ಪ್ರಯತ್ನಿಸಿದ. ವಿಚಾರಣೆ ನಡೆಸಿ, ತಪ್ಪಿತಸ್ತನನ್ನು ಶಿಕ್ಷಿಸುವುದಾಗಿ ಭರವಸೆ ನೀಡಿದನಾದರೂ ಪ್ರಯೋಜನವಾಗಲಿಲ್ಲ.

ನೂರ್ ಜಹಾನ್ ಈ ಸಂದರ್ಭವನ್ನು ಬಹಳ ಸಮರ್ಥವಾಗಿ ಬಳಸಿಕೊಂಡಳು. ಅಹದಿಗಳು, ಮುಸ್ಲಿಂ ಅಧಿಕಾರಿಗಳು ಸೇಡು ತೀರಿಸಿಕೊಳ್ಳಲು ಕಾಯುತ್ತಿದ್ದರು. ಕಾಬೂಲಿನಲ್ಲಿ ರಾಜಪೂತರ ಈ ರೀತಿಯ ದಬ್ಬಾಳಿಕೆಯಿಂದ ಅಲ್ಲಿನ ಜನರೂ ಕಂಗೆಟ್ಟು ಹೋಗಿದ್ದರು. ಅವರಿಂದ ಹಿಂಸೆ, ದೌರ್ಜನ್ಯ ಅನುಭವಿಸಿದವರೆಲ್ಲರೂ ಒಟ್ಟಾದರು. ಸೇಡು ತೀರಿಸಿಕೊಳ್ಳಲೇಬೇಕೆಂಬ ದೃಢ ನಿರ್ಧಾರಕ್ಕೆ ಬಂದು, ಅಹದಿಯ ಮೇಲಿನ ಹಲ್ಲೆ, ಕೊಲೆ ನಡೆದ ಸ್ಥಳದಲ್ಲಿಯೇ ಬೀಡುಬಿಟ್ಟದ್ದ. 800ರಿಂದ 900ರ ಸಂಖ್ಯೆಯಲ್ಲಿದ್ದ ರಾಜಪೂತರ ಮೇಲೆ ಒಮ್ಮೆಲೇ ದಾಳಿಮಾಡಿ ಅವರೆಲ್ಲರನ್ನೂ ಕೊಲೆಮಾಡಿಬಿಟ್ಟರು. ಇನ್ನೂ ಉಳಿದಿದ್ದ ನೂರಾರು ಮಂದಿಯನ್ನು ಸೆರೆಹಿಡಿದು, ಹಿಂದೂ ಕುಷ್ ಪ್ರಾಂತದ ಹೊರಗೆ ಗುಲಾಮರನ್ನಾಗಿ ಮಾರಿದರು.

ರಾಜಪೂತರ ಮೇಲಿನ ಹಲ್ಲೆ ಮತ್ತು ಮಹಬ್ಬತ್‌ಖಾನನ ನಿರಂಕುಶ ಆಡಳಿತದಿಂದ ಬೇಸತ್ತಿದ್ದರು. ಈ ಬಗೆಯ ದಂಗೆಗೆ ಕಾರಣರಾದವರನ್ನೆಲ್ಲ ಪತ್ತೆ ಹಚ್ಚಿ ಶಿಕ್ಷೆಗೆ ಗುರಿಮಾಡಿದ. ಅನೇಕರಿಗೆ ಆಜೀವನ ಪರ್ಯಂತ ಜೈಲು ಶಿಕ್ಷೆಗೆ ಆದೇಶಿಸಿದ. ಪ್ರಮುಖ ಪಾತ್ರವಹಿಸಿದವರ ಆಸ್ತಿ ಪಾಸ್ತಿಗಳನ್ನು ಮುಟ್ಟುಗೋಲು ಹಾಕಿ ಕಸಿದುಕೊಂಡ. ಅವನಿಗೆ ಆದ ದೊಡ್ಡ ನಷ್ಟವೆಂದರೆ, ಅತ್ಯಂತ ಬಲಶಾಲಿಯಾಗಿದ್ದ ರಾಜಪೂತ ಸೈನಿಕಪಡೆ, ಹೆಚ್ಚು ಕಡಿಮೆ ಆ ಪಡೆಯ ಸುಮಾರು ಸಂಖ್ಯೆಯ ಸೈನಿಕರು ಸಾವನ್ನಪಿದ್ದರು. ಆಫ್ಘಾನಿಸ್ತಾನದ ಪ್ರಜೆಗಳು, ಅತ್ಯಂತ ಪ್ರಮುಖರಾದ ಶಾಹಿ ಸೈನಿಕರು, ಅವನಿಂದ ದೂರ ಉಳಿದರು.

ಮಹಬ್ಬತ್‌ಖಾನನಿಗೆ ಸಂಕಟಕ್ಕಿಟ್ಟುಕೊಂಡಿತು. ಅವನೇನೂ ಘೋಷಿತ ಬಾದಶಾಹನಲ್ಲ. ಬಾದಶಾಹರ ಪರವಾಗಿ ಆಡಳಿತ ನಡೆಸುತ್ತಿದ್ದ. ಆದ್ದರಿಂದ, ಅಂದಿನ ಪರಿಸ್ಥಿತಿಯ ಬಗ್ಗೆ ಜಹಾಂಗೀರನನ್ನು ಭೇಟಿಯಾಗಿ ವಿವರಿಸಿದ. ಈ ದಂಗೆಗೆ ಕಾರಣರಾದ ಅಹದಿಗಳನ್ನು ಕರೆಸಿ ಅವರನ್ನು ಶಿಕ್ಷಿಸಬೇಕೆಂದು ಕೇಳಿಕೊಂಡ. ಆದರೆ ಜಹಾಂಗೀರ್, ಅನಾರೋಗ್ಯದಿಂದ ಉಸಿರಾಡಲೂ ಕಷ್ಟಪಡುತ್ತಲೇ ಮಹಬ್ಬತ್‌ಖಾನನಿಗೆ ಛೀಮಾರಿ ಹಾಕಿ, ಬೇರೆ ನಾಯಕರನ್ನು, ಪ್ರತಿನಿಧಿಗಳನ್ನು ಹುಡುಕಿಕೊಳ್ಳಲು ಆದೇಶಿಸಿ, ಕೂಡಲೇ ಹೊರಟು ಹೋಗೆಂದ.

ಮುಖ ಭಂಗ ಮಾಡಿಕೊಂಡ ಮಹಬ್ಬತ್‌ಖಾನನಲ್ಲಿದ್ದ ದರ್ಪ, ಅಹಂಕಾರಗಳು ಸೋರಿಹೋದವು. ಅಸಹಾಯಕತೆ, ತಲ್ಲಣಗಳು, ಭಯಭೀತಿಗಳು ಅವನನ್ನು ಕಾಡಿದವು.

ನಡೆದ ಸಂಗತಿಗಳ ಪ್ರತಿಯೊಂದು ವಿವರವೂ ನಿಷ್ಠಾವಂತ ಸೇವಕ ಮತ್ತು ಗುಪ್ತಚರನೂ ಆಗಿದ್ದ ಹೋಷಿಯಾರ್‌ಖಾನ್ ಮೂಲಕ ನೂರ್ ಜಹಾನಳನ್ನು ತಲುಪುತ್ತಿತ್ತು. ಅವಳಿಗೆ ಈಗ ಒಳ್ಳೆಯ ಅವಕಾಶ, ಹದಗೊಂಡ ಪರಿಸರ, ತನ್ನ ಯೋಜನೆ, ಯೋಚನೆಗಳ ಅನುಷ್ಠಾನಕ್ಕೆ ಲಭ್ಯವಾಯಿತು. ಅವಳಲ್ಲಿನ ರಾಜಕೀಯ ತಂತ್ರ ನೈಪುಣ್ಯತೆಯ ಪ್ರಯೋಗಕ್ಕೆ ಇದು ಅತ್ಯಂತ ಸೂಕ್ತವಾದ ಸಮಯವೆಂದು ಮನವರಿಕೆಯಾಯಿತು.

ಮೆಲ್ಲನೆ ತನ್ನ ಮೇಲಿನ ಮಹಬ್ಬತ್‌ಖಾನನ ದ್ವೇಷ, ಅಸಮಾಧಾನಗಳನ್ನು ದೂರಮಾಡುವ, ತನ್ನ ಮೇಲಿನ ಮೊದಲಿನ ಅಭಿಪ್ರಾಯಗಳನ್ನು ಬದಲಾಯಿಸಿಕೊಳ್ಳುವ ರೀತಿಯಲ್ಲಿ ಅವನೊಂದಿಗೆ ವ್ಯವಹರಿಸಬೇಕೆಂದೂ, ಇನ್ನು ಮುಂದೆ ಮೊದಲಿನ ಸ್ನೇಹವೇ ಮುಂದುವರೆಯಬೇಕೆಂಬ ತನ್ನ ವಿಚಾರಗಳು ಅವನನ್ನು ತಲಪುವಂತೆ ಪ್ರಯತ್ನಿಸಿದಳು. ಗಂಡ ಜಹಾಂಗೀರನಿಗೂ ಅವನೊಂದಿಗೆ ನಡೆದುಕೊಳ್ಳಬೇಕಾದ ರೀತಿಯನ್ನು ವಿವರಿಸಿ ತಿಳಿಸಿದಳು. ಈಗ ಜಹಾಂಗೀರನಲ್ಲಿ ನಂಬಿಕೆ, ವಿಶ್ವಾಸಗಳು ಮೊದಲಿನಂತೆ ಆಗಲು ಪ್ರಯತ್ನಿಸಿದ. ಕೂಡಲೇ, ಜಹಾಂಗೀರ್ ಮಹಬ್ಬತ್‌ಖಾನನಿಗೆ ಹೇಳಿ ಕಳಿಸಿದ. ಜೋಲು ಮುಖ ಹಾಕಿಕೊಂಡು ಹಲ್ಲುಕಿತ್ತ ಹಾವಿನ ತೆರದಲ್ಲಿ ಅಸಹಾಯಕತೆಯ ಭಾವದೊಂದಿಗೆ ಜಹಾಂಗೀರನ ಮುಂದೆ ಬಂದು ಕೋರ್ನಿಶ್ ಮಾಡಿ ನಿಂತ.

"ಜಹಾಂಪನಾಹ್. ನನ್ನ ನಡವಳಿಕೆಗಳಿಂದ ನಿಮ್ಮ ಮನಸ್ಸಿಗೆ ನೋವುಂಟುಮಾಡಿದ್ದಕ್ಕೆ ಮಾಫಿ ಬೇಡುತ್ತೇನೆ. ಇಷ್ಟೆಲ್ಲ ಅನಾಹುತಗಳಾಗುತ್ತವೆಂಬ ಕಲ್ಪನೆ ನನಗಿರಲಿಲ್ಲ. ಎಂದೂ ನಿಮ್ಮ ವಿರುದ್ಧ ನನಗೆ ಕೆಟ್ಟ ಭಾವನೆಗಳು ಇರಲಿಲ್ಲ. ಹಾನಿ ಮಾಡುವ ಉದ್ದೇಶವೂ ನನಗಿರಲಿಲ್ಲ, ಆದರೆ ಮೊಘಲ್ ಸಾಮ್ರಾಟರು, ಅದೂ ಅತ್ಯಂತ ಸಮರ್ಥರೂ, ವರಿಷ್ಠರೂ, ನ್ಯಾಯಪರರೂ, ಭುಜಬಲ ಪರಾಕ್ರಮಿಗಳೂ ಆದವರು, ಒಬ್ಬ ಸಾಮಾನ್ಯ ಹೆಣ್ಣಿನ ಮೋಹಪಾಶಕ್ಕೆ ಸಿಕ್ಕಿ ಜನರು ಹಗುರವಾಗಿ ಮಾತನಾಡುವುದನ್ನು ಕಂಡಾಗ ನನಗೆ ಸಹಿಸಲಾಗಲಿಲ್ಲ. ಬೇಗಂ ನೂರ್ ಜಹಾನ್‌ರ ಕಪಿಮುಷ್ಟಿಯಿಂದ ನಿಮ್ಮನ್ನು ಬಿಡಿಸಬೇಕೆಂಬ ಒಂದೇ ಒಂದು ಬಯಕೆ ನನ್ನನ್ನು ದಂಗೆಕೋರನಾಗುವತ್ತ ಪ್ರಚೋದಿಸಿತು."

"ಮಿರ್ಜಾ ಮಹಬ್ಬತ್, ಆದದ್ದು ಆಯಿತು. ನಿಜವಾಗಿಯೂ ನೀನು ಒಳ್ಳೆಯದನ್ನೇ ಮಾಡಿದೆ. ನನ್ನ ಕಣ್ಣು ತೆರೆಸಿದೆ. ಅವಳ ರೂಪ ಸೌಂದರ್ಯಗಳ ಹಿಂದೆ ಬಿದ್ದು ಹುಚ್ಚನಾಗಿ, ಅವಳ ಸೆರಗು ಹಿಡಿದು ಹಿಂಬಾಲಿಸಿದೆ. ದುರ್ವ್ಯಸನಗಳಿಗೆ ಗುರಿಯಾದೆ. ರಾಜ್ಯಭಾರದ ವಿಷಯವನ್ನೇ ಮರೆತೆ. ಮೋಡಿ ಮಾಡಿ ನನ್ನಿಂದ ಅಧಿಕಾರ, ವ್ಯಕ್ತಿತ್ವಗಳನ್ನೂ ಕಸಿದುಕೊಂಡಳು. ನಾನು ಬದುಕಿರುವುದೂ ಕೂಡಾ ಅವಳಿಗೆ ಅಡ್ಡಿಯಾಗಿದೆ. ಈಗ ಈ ಅನಾರೋಗ್ಯ ಅವಳಿಗೆ ವರದಾನವಾಗಿದೆ. ನನ್ನ ಸಾವಿನ ನಿರೀಕ್ಷೆಯಲ್ಲಿದ್ದಾಳೆ. ಇದಕ್ಕೆ ಮೊದಲೂ ಕೂಡಾ ನನ್ನನ್ನು ಸಾಯಿಸುವ ಯೋಚನೆ ಇದ್ದರೂ ಇದ್ದಿರಬಹುದು. ಅವಳಿಗೆ ಆಗದವರ್‍ಯಾರನ್ನೂ ಉಳಿಸುವುದಿಲ್ಲ. ನಿನ್ನನ್ನೂ ಕೂಡಾ ವಿಷಹಾಕಿ ಕೊಲ್ಲಿಸುವ ಸಾಧ್ಯತೆಯಿದೆ. ಎಚ್ಚರದಿಂದ ಇರುವುದು ಒಳ್ಳೆಯದು" ಎಂದು ಆಪ್ತ ಸಲಹಕಾರನಂತೆ ಮಾತಾಡಿದ.

ಮಹಬ್ಬತ್‌ಖಾನ್ ಜಹಾಂಗೀರನ ಮಾತುಗಳನ್ನು ನಿಜವೆಂದೇ ನಂಬಿದ. ಜಹಾಂಗೀರನ ಮಾತುಗಳಲ್ಲಿ ನಂಬಿಕೆ ಬರುವಂತೆ ನೂರ್ ಜಹಾನಳೂ ನಡೆದುಕೊಂಡಳು. ತನ್ನ ಖಾಸಗಿ ನಿವಾಸದಲ್ಲಿಯೆ ಉಳಿದುಕೊಂಡಳು. ಜಹಾಂಗೀರನು ಮೊದಲಿನಂತೆ ದಿನದಿನದ ಸಭೆಯ ಕಲಾಪಗಳಲ್ಲಿ ಭಾಗವಹಿಸಿದ. ತುಂಬಾ ಗೆಲುವಾಗಿ ಕಾಣಿಸಿದ. ನೂರ್ ಜಹಾನ್‌ಳಿಂದ ದೂರವಿದ್ದಂತೆ ಕಾಣಿಸಿಕೊಂಡ. ಝರೋಕಾ ಕಾರ್ಯಕ್ರಮಗಳೂ ಕೇವಲ ಜಹಾಂಗೀರನಿಂದಲೇ ನಡೆಯುತ್ತಿದ್ದವು.

ನೂರ್ ಜಹಾನಳೂ ಅತ್ಯಂತ ರಹಸ್ಯವಾಗಿಯೂ, ಎಚ್ಚರಿಕೆಯಿಂದಲೂ ಮಹಬ್ಬತ್‌ಖಾನನ ಬಗ್ಗೆ ಅಸಮಾಧಾನಗೊಂಡಿದ್ದವರನ್ನು ಪತ್ತೆ ಹಚ್ಚಿಸಿ ಅವರಿಗೆ ಆಮಿಷಗಳೊಡ್ಡಿ ಮಹಬ್ಬತ್‌ಖಾನನ ವಿರುದ್ಧ ಪ್ರಚೋದನೆ ನೀಡಿದಳು. ನೂರ್ ಜಹಾನ್ ಕಡೆಯ ಬಲ ದ್ವಿಗುಣಿಸಿತು. ಯಾರಿಗೂ ತಿಳಿಯದಂತೆ, ತನ್ನ ಕಡೆಯ ಕೆಲವರನ್ನು ಜಹಾಂಗೀರನ ಸೇವೆಯಲ್ಲಿ ಸೇರಿಕೊಳ್ಳುವಂತೆ ನೋಡಿಕೊಂಡಳು. ಹೋಷಿಯಾರ್ ಖಾನನ ಮೂಲಕ ಲಾಹೋರಿನಲ್ಲಿ 2000 ಮಂದಿಯನ್ನು (ಸೈನಿಕರನ್ನು) ಒಟ್ಟುಗೂಡಿಸುವಂತೆ ಆಯೋಜಿಸಿದಳು.

ಜಹಾಂಗೀರನೂ ಮಹಬ್ಬತ್‌ಖಾನನ ಗಮನಕ್ಕೆ ಬಾರದಂತೆ ಒಂದು ಸೈನ್ಯಪಡೆಯನ್ನು ಸಿದ್ಧಗೊಳಿಸಿ, ರೋಹಟಾದಿಂದ ಕೆಲವೇ ಮೈಲುಗಳ ಅಂತರದಲ್ಲಿ ನಿಲ್ಲಿಸಿ, ಮಹಬ್ಬತ್‌ಖಾನನಿಗೆ, ನೂರ್ ಜಹಾನ್ ತನ್ನ ಸೈನ್ಯ ಪಡೆಯ ಪರಿವೀಕ್ಷಣೆಯಲ್ಲಿ ತೊಡಗಿದ್ದಾಳೆಂಬ ಸುದ್ದಿಯನ್ನು ತಲುಪಿಸುವುದರ ಜೊತೆಗೆ, ಕೂಡಲೇ ಮಹಬ್ಬತ್‌ಖಾನ್ ಅವರನ್ನು ಹಿಮ್ಮೆಟ್ಟಿಸಲು ಹೊರಡುವುದು ಸೂಕ್ತವೆಂದು, ಬುಲಂದ್‌ಖಾನ್ ಮತ್ತು ಖ್ವಾಜಾ ಅಬುಲ್‌ಹಸನ್ ಮೂಲಕ ಆದೇಶ ಕಳಿಸಿದ.

ಇದೆಲ್ಲವನ್ನೂ ನಂಬಿ ಮಹಬ್ಬತ್‌ಖಾನ್ ನೂರ್ ಜಹಾನಳ ಸೈನಿಕರೊಂದಿಗೆ, ಕಾದಾಟಮಾಡಿದ. ಅನಿರೀಕ್ಷಿತವಾದ ಪ್ರಸಂಗ ಇದಾದುದರಿಂದ ಮಹಬ್ಬತ್‌ಖಾನ್ ಸಂಪೂರ್ಣವಾಗಿ ಸೋತ. ಅತ್ಯಂತ ಪ್ರಬಲ ಸೇನಾನಾಯಕ ಮಹಬ್ಬತ್‌ಖಾನ್ ಈಗ ಎಲ್ಲವನ್ನೂ ಕಳೆದುಕೊಂಡ. ಶಕ್ತಿ, ಶೌರ್ಯ, ಅಧಿಕಾರ, ಸಾಹಸಗಳೆಲ್ಲವೂ ಅವನಿಂದ ಸೋರಿಹೋಯಿತು. ಸುತ್ತಲೂ ಪ್ರಬಲ ಶತ್ರುಪಡೆ ಕೋಟೆಯಾಗಿ ನಿಂತಿತ್ತು. ಅವಳ ಕೈಗೆ ಸಿಕ್ಕಿದರೆ ಜೀವ ಉಳಿಸುವುದಿಲ್ಲವೆಂಬುದು ಖಾತ್ರಿಯಾಗಿತ್ತು. ಓಡಿ ಹೋಗಿ ತಲೆ ತಪ್ಪಿಸಿಕೊಂಡರೆ ಮುಂದೆ ಹೇಗಾದರೂ ಪ್ರಾಣ ಉಳಿಸಿಕೊಳ್ಳಬಹುದೆಂದು ಯೋಚಿಸಿ ಪಲಾಯನ ಮಾಡಿದ. ತನ್ನ ಸುರಕ್ಷತೆಗಾಗಿ ಅಸಫ್‌ಖಾನ್, ಅಬು ತಾಲಿಖ್, ದಾನ್ಯಾಲ್‌ನ ಮಕ್ಕಳು–ಹೀಗೆ ಶಾಹಿ ಕುಟುಂಬದ ಸದಸ್ಯರನ್ನು ಒತ್ತೆಯಾಳುಗಳಾಗಿ ಜೊತೆಗೆ ಕರೆದೊಯ್ದ. ಶಾಹಿ ಪಡೆಯ ಸೈನಿಕರು ಅವನನ್ನು ಹಿಂಬಾಲಿಸಿದರು.

ಈಗ ನೂರ್ ಜಹಾನ್ ತುರ್ತಾಗಿ ಕಾರ್ಯೋನ್ಮುಖಳಾದಳು. ಮೊದಲಿಗೆ ಮಹಬ್ಬತ್‌ಖಾನನ ಒತ್ತೆಯಾಳುಗಳಾಗಿರುವ ತನ್ನವರನ್ನು ಬಿಡಿಸಿಕೊಳ್ಳಬೇಕಾಗಿತ್ತು. ಅದಕ್ಕಾಗಿ ಮಹಬ್ಬತ್‌ಖಾನನಿಗೆ ಎಚ್ಚರಿಕೆಯ ಆದೇಶದಲ್ಲಿ, ತನ್ನವರನ್ನು ಕೂಡಲೇ ಬಿಡುಗಡೆ ಮಾಡದಿದ್ದಲ್ಲಿ ಮತ್ತೊಮ್ಮೆ ಅವನೊಂದಿಗೆ ಯುದ್ಧಮಾಡಬೇಕಾದ ಪರಿಸ್ಥಿತಿ ಒದಗುತ್ತದೆ ಎಂದು ಎಚ್ಚರಿಕೆ ನೀಡಿದಳು.

ಅವಳ ಮಾತಿನಂತೆ ಮಹಬ್ಬತ್‌ಖಾನ್, ನೂರ್ ಜಹಾನಳ ಸೋದರ ಅಸಫ್‌ಖಾನನ ಹೊರತಾಗಿ, ಬೇರೆಲ್ಲರನ್ನೂ ತನ್ನ ಸೆರೆಯಿಂದ ಬಿಡುಗಡೆ ಮಾಡಿದ. ತನ್ನ ಸುರಕ್ಷತೆಗೆಂದು ಅಸಫ್‌ಖಾನನನ್ನು ಗುರಾಣಿಯಾಗಿ ಬಳಸಿಕೊಂಡ. ಈ ವಿಷಯವನ್ನು ಜಹಾಂಗೀರನಿಗೂ ತಿಳಿಸಿ ಬರೆದ. ತನಗೆ ಯಾವುದೇ ಹಾನಿ ಮಾಡುವುದಿಲ್ಲವೆಂದು ಭರವಸೆ ನೀಡುವವರೆಗೂ ಅಸಫ್‌ಖಾನನನ್ನು ತನ್ನಲ್ಲಿಯೇ ಇರಿಸಿಕೊಳ್ಳುವುದಾಗಿ ತಿಳಿಸಿದ.

ಸದ್ಯದಲ್ಲಿ ತನ್ನ ಮೇಲೆ ಎರಗಿದ್ದ ದೊಡ್ಡ ಅಪಾಯದಿಂದ ಪಾರಾದನಾದರೂ ಇನ್ನೂ

ಬಹಿರಂಗವಾಗಿ ಕಾಣಸಿಕೊಳ್ಳುವ ಧೈರ್ಯವನ್ನು ಮಾಡಿರಲಿಲ್ಲ. ನೂರ್ ಜಹಾನಳ ನರಿಬುದ್ಧಿಯ ಪರಿಚಯ ಚೆನ್ನಾಗಿಯೇ ಆಗಿತ್ತು. ಆದ್ದರಿಂದ ಅಸಫ್‌ಖಾನನನ್ನು, ತನ್ನ ಮಾತಿನಂತೆ ಬಿಡುಗಡೆ ಮಾಡಿದರೂ ಅವನ ಮಗ ಅಬು-ತಾಲಿಖ್‌ನನ್ನು ಇನ್ನೂ ಒತ್ತೆಯಾಳಾಗಿಯೇ ಇರಿಸಿಕೊಂಡಿದ್ದ.

ನಂತರ ಅವನನ್ನೂ ಬಿಟ್ಟುಕೊಟ್ಟು, ರಾಜಾಜ್ಞೆಗಳನ್ನು ಪಾಲಿಸಲು ಸಿದ್ಧನಾದ. ಆದರೆ ಅವನು ಈಗ ಯಾವ ಅಧಿಕಾರವೂ ಇಲ್ಲದೆ, ನೆಲೆಯೂ ಇಲ್ಲದೆ ಅಲೆದಾಡುವ ಸ್ಥಿತಿ ತಲುಪಿದ. ಈಗ ನೇರವಾಗಿ, ರಾಜಾರೋಷವಾಗಿ ನೂರ್ ಜಹಾನ್ ಸಂಪೂರ್ಣವಾಗಿ ರಾಜ್ಯಾಡಳಿತವನ್ನು ತನ್ನ ಕೈವಶ ಮಾಡಿಕೊಂಡಿದ್ದಳು. ಶತ್ರುಗಳನ್ನು, ಮಿತ್ರರನ್ನು ಹೇಗೆ ನಡೆಸಿಕೊಳ್ಳಬೇಕು. ತನ್ನವರಿಗೆ ಎಂತೆಂತಹ ಅಧಿಕಾರ ಸ್ಥಾನಗಳನ್ನು ನೀಡಬೇಕು ಎಂಬುದನ್ನು ತಾನೇ ನಿರ್ಧರಿಸಿದ್ದರೂ ಸೌಜನ್ಯಕ್ಕಾಗಿ ಜಹಾಂಗೀರನ ಗಮನಕ್ಕೆ ತರುತ್ತಿದ್ದಳಾದರೂ, ಜಹಾಂಗೀರ್ ಬಹಳ ಗಂಭೀರ ಸ್ಥಿತಿಯಲ್ಲಿದ್ದ, ಅಸಫ್‌ಖಾನನನ್ನು ರಾಜದೂತನಾಗಿಯೂ ಪಂಜಾಬ್ ಗವರ್ನರ್ ಆಗಿಯೂ ನೇಮಿಸಿದಳು. ಅವನ ಜೊತೆಯ ಅಬುಲ್‌ಹಸನ್ ದಿವಾನನಾಗಿ ಅಧಿಕಾರ ವಹಿಸಿಕೊಂಡ.

ಇದೆಲ್ಲ ಮಾರ್ಪಾಡುಗಳಾದರೂ ಮೊದಲಿನಂತೆ ಆಡಳಿತವಿರಲಿಲ್ಲ. ಇನ್ನೂ ಗಾದಿಗಾಗಿ ದಂಗೆಯೇಳುವವರು, ಪ್ರಯತ್ನಿಸುವವರು ಕಾಯುತ್ತಲೇ ಇದ್ದರು. ಅಂತಹವರಿಗೆ ನೆರವಾಗಿ, ತನ್ನಿಂದ ಅಧಿಕಾರ, ಹಣ, ಜಾಗೀರುಗಳೆಲ್ಲವನ್ನೂ ಕಸಿದುಕೊಂಡು ತನ್ನನ್ನೊಬ್ಬ ನಿರ್ಗತಿಕನೆಂಬಂತೆ ಮಾಡಿದವಳನ್ನು ಯಾವ ಮುಲಾಜು ಇಲ್ಲದೆ ಸೇಡುತೀರಿಸಿಕೊಂಡು, ಅವಳ ಶತ್ರುಗಳ ಜೊತೆಯೇ ಕೈಜೋಡಿಸಿ ಅವಳು ತನ್ನ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಳ್ಳಲು ಅವಕಾಶವೇ ಇಲ್ಲದಂತೆ ಮಾಡಬೇಕೆಂದುಕೊಂಡು ಖುರ್‍ರಂನ ಜೊತೆ ಕೈ ಜೋಡಿಸಲು ಮುಂದಾದ. ನಾಸಿಕ್‌ನಲ್ಲಿದ್ದ ಖುರ್‍ರಂಗೆ, ಮಹಬ್ಬತ್‌ಖಾನ್ ದಂಗೆಯೆದ್ದು, ನೂರ್ ದಂಪತಿಗಳಿಗೆ ಗತಿ ಕಾಣಿಸಿದ ರೀತಿ, ನಂತರ ನೂರ್ ಜಹಾನ್ ತನ್ನ ಚಾಣಾಕ್ಷತೆಯಿಂದ ಮಹಬ್ಬತ್‌ಖಾನನಿಗೆ ಪಾಠ ಕಲಿಸಿದ್ದನ್ನೂ ಕೇಳಿಸಿಕೊಂಡಿದ್ದ. ತನ್ನದೂ ಒಂದು ಪ್ರಯತ್ನವಿರಲೆಂದು, ಕೂಡಲೇ ಸೈನ್ಯದೊಂದಿಗೆ ಹೊರಟ. ಅವನಿಗಂತೂ ಮಹಬ್ಬತ್‌ಖಾನ್, ನೂರ್ ಜಹಾನ್‌ಗೆ ಪಾಠಕಲಿಸಿದನೆಂದು ಸಂತೋಷವಾಯಿತು. ನೂರ್ ಜಹಾನಳ ಸೋಲು, ತಂದೆಯ ಅನಾರೋಗ್ಯ ಎಲ್ಲವೂ ಅವನಿಗೆ ತೀರಾ ಅನುಕೂಲ ಪರಿಸರ ಒದಗಿದೆ ಎನಿಸಿತು. ಅವನಿಗೆ ಖಜಾನೆಯನ್ನು ಲೂಟಿ ಮಾಡುವುದೋ, ತಂದೆಯ ಮೇಲೆ ದಂಡೆತ್ತಿ ಹೋಗುವುದೋ ಎನ್ನುವ ಸಂದಿಗ್ಧ ಉಂಟಾಯಿತು. ಒಟ್ಟಾರೆ ತನ್ನ ಈ ಪ್ರಯತ್ನದಲ್ಲಿ ಗೆದ್ದರೆ, ರಾಜಮುಕಟ ತನಗೇ ಆಗುತ್ತದೆ ಎಂದು ಹುಂಬ ನಂಬಿಕೆಯಲ್ಲಿ ಹೊರಟ. ಹಾದಿಯಲ್ಲಿ ತನ್ನ ಪರವಾಗಿದ್ದ ಪ್ರಾಂತಾಧಿಕಾರಿಗಳ ಸಹಾಯವನ್ನೂ ಕೂಡಿಸಿಕೊಂಡು ಊರೂರುಗಳನ್ನು ಲೂಟಿ ಹೊಡೆಯುತ್ತಾ ಮುಂದೆ ಮುಂದೆ ಸಾಗಿದನಾದರೂ, ತಾನು ಅಂದುಕೊಂಡಂತೆ ಗೆಲುವನ್ನು ಸಾಧಿಸಲು ಆಗಲಿಲ್ಲ. ಖುರ್‍ರಂನ ಸೋಲಿನ ಸುದ್ದಿ ತಿಳಿದ ಮಹಬ್ಬತ್‌ಖಾನ್, ಖುರ್‍ರಂ ತಖ್ತ್ ತಾಜ್‌ಗಳನ್ನು ಗೆದ್ದುಕೊಳ್ಳಲು, ಶಕ್ತಿ ಮೀರಿ ಸಹಾಯ ಮಾಡುವುದಾಗಿ ಭರವಸೆ ಕೊಡುವುದಾಗಿ ತಿಳಿಸಿದ.

ಇದೇ ಸಮಯಕ್ಕೆ ಅವನಿಗೆ ವರವೋ ಎಂಬಂತೆ ಪರವೇಜ್‌ನ ಸಾವಿನ ಸುದ್ದಿಯೂ ಶಹರಿಯಾರನು ಕುಡಿದು ಕುಡಿದು ಆರೋಗ್ಯ ಕೆಡಿಸಿಕೊಂಡು ಹಾಸಿಗೆ ಹಿಡಿದಿದ್ದಾನೆಂಬ ಸುದ್ದಿಯೂ ತಲುಪಿ, ಅವನ ಆತ್ಮವಿಶ್ವಾಸ, ಆತ್ಮಬಲಗಳು ಹೆಚ್ಚಿದವು. ಅತ್ಯಂತ ಸ್ಫುರದ್ರೂಪಿಯಾಗಿದ್ದ ಶಹರಿಯಾರ್ ವಿಕಾರವಾಗಿ ಕಾಣಿಸಿಕೊಂಡು ತಲೆಕೂದಲೆಲ್ಲಾ ಉದುರಿಹೋಯಿತು. ಚರ್ಮ ತೊನ್ನಿನಂತಾಯಿತು. ಅಲ್ಲಲ್ಲಿ ಕೆಂಪು ಕೆಂಪಾದ ಮಚ್ಚೆಗಳು ಕಾಣಿಸಿಕೊಂಡವು. ಅವನಿಗೆ ಹೊರಬರುವುದಕ್ಕೂ ಸಂಕೋಚವಾಗುತ್ತಿತ್ತು. ಯಾವಾಗಲೂ ಕತ್ತಲಕೋಣೆ ಸೇರಿಕೊಂಡು ಯಾರಿಗೂ ಕಾಣಿಸಿದಂತೆ ಇದ್ದ. ಇಷ್ಟಾದರೂ ಅವನ ಕುಡಿತದ ಚಟ ಬಿಟ್ಟಿರಲಿಲ್ಲ. ಬಡಪಾಯಿ ಲಾಡ್ಲಿಯ ಗೋಳು ಹೇಳತೀರದಾಗಿತ್ತು.

ನೂರ್ ಜಹಾನ್, ಅಳಿಯನ ಮತ್ತು ಗಂಡನ ಸ್ಥಿತಿಯಿಂದ ಅಸಹನೀಯ ಆಘಾತಕ್ಕೆ ಒಳಗಾಗಿದ್ದಳು. ಜಹಾಂಗೀರ್ ದಿನಗಳನ್ನೋ ಗಂಟೆಗಳನ್ನೋ ಎಣಿಸುತ್ತಿದ್ದ. ಏಕಕಾಲದಲ್ಲಿ ನೂರ್ ಜಹಾನಳಿಗೆ ಎಲ್ಲ ಕಡೆಯಿಂದಲೂ ಸಂಕಟಗಳು ಎದುರಾದವು. ಗಂಡನ ಸಾವಿನ ನಂತರವಾದರೂ ಅಳಿಯನನ್ನು ಗಾದಿಗೇರಿಸಿ, ಮಗಳನ್ನು ಬಾದಶಾಹ್ ಬೇಗಂ ಆಗಿ ನೋಡುವ ಮತ್ತು ಪರೋಕ್ಷವಾಗಿ ಆಡಳಿತ ಸೂತ್ರಗಳನ್ನು ತನ್ನ ಕೈಲಿರಿಸಿಕೊಂಡು, ಅಳಿಯನನ್ನು ಮಹಾ ಸಾಮ್ರಾಜ್ಯದ ಸಾಮ್ರಾಟನನ್ನಾಗಿ ನೋಡುವ ಅವಳ ಮಹದಾಸೆ ಅಳಿಯನ ಕಾಯಿಲೆಯಿಂದ ನುಚ್ಚುನೂರಾಯಿತು.

ಅಧಿಕೃತವಾಗಿ ಗಾದಿಯೇರುವುದಕ್ಕೆ ಮೊದಲೇ, ದೊಡ್ಡ ದೊಡ್ಡ ಅಧಿಕಾರಿಗಳು, ಸೇನಾನಾಯಕರು, ಶ್ರೀಮಂತರು, ವರಿಷ್ಠರು, ತುಂಬಾ ವರ್ಚಸ್ಸನ್ನುಳ್ಳ ವ್ಯಕ್ತಿಗಳು–ಎಲ್ಲರನ್ನೂ ಆಹ್ವಾನಿಸಿ ಅತ್ಯಂತ ಅದ್ದೂರಿಯಾದ ಔತಣಕೂಟವನ್ನು ಏರ್ಪಡಿಸಿದಳು. ಶಹರಿಯಾರನನ್ನು ಎಲ್ಲರಿಗಿಂತ ಉನ್ನತಾಸನದಲ್ಲಿ ಕುಳ್ಳಿರಿಸಿ, ಎಲ್ಲರೂ ಕೋರ್ನಿಶ್ ಮಾಡುವ ಹಾಗೆ ಮಾಡಿ, ಅವನೇ ಮುಂದಿನ ಬಾದಶಾಹ್ ಎನ್ನುವ ನಂಬಿಕೆಯ ಬೀಜವನ್ನು ಅವರಲ್ಲಿ ಬಿತ್ತಿದಳು. ಅವನ ಬಗ್ಗೆ ಭಯ, ಭಕ್ತಿ ಗೌರವಗಳು ಮೂಡುವಂತೆ ಮಾಡುವುದು ಅವಳ ಉದ್ದೇಶವಾಗಿತ್ತು. ಆದರೆ ಶಹರಿಯಾರ್ ನೋಡಿದವರಿಗೆ ಅತ್ಯಂತ ಭೀಕರವೂ ಬೀಭತ್ಸವೂ ಆಗಿ ಕಾಣಿಸುವ ಸ್ಥಿತಿ ತಲುಪಿದ್ದು, ನೂರ್ ಜಹಾನ್‌ಳ ಕನಸುಗಳನ್ನು ಒಮ್ಮೆಲೇ ನುಚ್ಚು ನೂರು ಮಾಡಿದ್ದ. ಹಕೀಮರನ್ನು ನೇಮಿಸಿ ಎಷ್ಟೇ ಖರ್ಚಾದರೂ ಹಿಂದು ಮುಂದು ನೋಡದೆ, ಅವನ ಕಾಯಿಲೆಯನ್ನು ವಾಸಿ ಮಾಡಲು, ದೈನ್ಯದಿಂದ ಬೇಡಿಕೊಂಡಳು. ಆದರೆ ಹಕೀಮರು ಅದೊಂದು ಬಗೆಯ ಕುಷ್ಠರೋಗವೆಂತಲೂ, ಪ್ರಪಂಚದಲ್ಲಿ ವಾಸಿಮಾಡಲು ಯಾವುದೇ ಔಷಧಿ ಇಲ್ಲವೆಂತಲೂ ಹೇಳಿಬಿಟ್ಟಿದ್ದರು. ಕುಸಿದು ಕಂಗಾಲಾದ ನೂರ್ ಜಹಾನಳಿಗೆ ತಡೆದುಕೊಳ್ಳಲಾಗದ ಆಘಾತದಿಂದ ಬಿಕ್ಕಿಬಿಕ್ಕಿ ಅಳತೊಡಗಿದ್ದಳು. ಸೇವಕರೂ ಶಹರಿಯಾರನ ಭಯಾನಕರೂಪ ನೋಡಿ, ಹತ್ತಿರ ಹೋದರೆ ಸೋಂಕು ತಗುಲೀತೆಂದು ಹೆದರಿ ಅಸಹಾಯಕತೆಯಿಂದ, ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತಿದ್ದರು. ತನ್ನ ಮಗಳು ಲಾಡ್ಲಿಯೇನಾದರೂ ಇದನ್ನು ನೋಡಿದರೆ ಖಂಡಿತವಾಗಿ ಬದುಕುವುದಿಲ್ಲ. ನಾನೆಂತಹ ಕೆಲಸ ಮಾಡಿದೆ? ರತ್ನದಂತಹ ಹುಡುಗಿಯನ್ನು, ಸಾಮ್ರಾಜ್ಯವನ್ನು ಕೈವಶ

ಮಾಡಿಕೊಳ್ಳಬೇಕೆಂಬ, ದುರಾಶೆ, ದುರಾಲೋಚನೆಯಿಂದ ಅವಳ ಬದುಕಿಗೇ ಕೊಳ್ಳಿಯಿಟ್ಟ ನಾನು ಎಂತಹ ತಾಯಿ ಎಂದು ಮಮ್ಮಲ ಮರುಗಿದಳು. ಅದರ ಜೊತೆಗೆ, ಹುಚ್ಚನಂತೆ ನಗುತ್ತಿದ್ದ ಶಹರಿಯಾರ್‌ನನ್ನು ನೋಡಿ ಭಯಭೀತಳಾದಳು.

"ಬಾದಶಾಹ್ ಬೇಗಂ, ನೋಡಿ ನೋಡಿ, ನಿಮ್ಮ ಅಳಿಯ ಎಂತಹ ಸುಂದರ ಪುರುಷ! ಮೊಘಲ್ ಸಾಮ್ರಾಜ್ಯದ ಭಾವಿ ಬಾದಶಾಹ್" ಎಂದು ಹುಚ್ಚು ನಗೆಯೊಂದಿಗೆ ವ್ಯಂಗ್ಯದ ಮಾತನಾಡಿ, ಹೊದ್ದುಕೊಂಡಿದ್ದ ಹೊದಿಕೆಯನ್ನು ಸರಿಸಿ ಕೊಳೆತುನಾರುತ್ತಿದ್ದ ತನ್ನ ದೇಹವನ್ನು ಪ್ರದರ್ಶಿಸಿದ.

"ಶಹರಿಯಾರ್! ಸಾಕು! ಸಾಕು, ಸಾಯುತ್ತಿರುವವಳನ್ನು ಇದರಿಂದ ಕೂಡಲೇ ಸಾಯಿಸಬೇಡ. ಜಹಾಂಪನಾಹ್‌ರು ಅನಾಥರಾಗುತ್ತಾರೆ. ನಿನ್ನ ಅಬ್ಬಾಜಾನ್ ನಿನಗಿಂತಲೂ ಹೆಚ್ಚು ಹಿಂಸೆ ಪಡುತ್ತಿದ್ದಾರೆ, ಖುದಾ ಬಯಸಿದಲ್ಲಿ ಎಲ್ಲವೂ ಸರಿಹೋಗುತ್ತದೆ."

"ಬಾದಶಾಹ್ ಬೇಗಂ. ಪೊಳ್ಳು ಭರವಸೆಗಳಿಂದ ಸಮಾಧಾನಪಡಿಸಲು ಪ್ರಯತ್ನಿಸಬೇಡಿ. ನಾನು ಸಾಯುವುದಂತೂ ಖಂಡಿತ. ಅಬ್ಬಾಜಾನ್‌ರಿಗೆ ಈ ನಾಲಾಯಕ್ ಬೇಟಾನನ್ನು ಕ್ಷಮಿಸಬೇಕೆಂದು ಕೇಳಿಕೊಳ್ಳಿ. ಲಾಡ್ಲಿಯನ್ನು ಏನೇ ಆದರೂ ಈ ಸ್ಥಿತಿಯಲ್ಲಿರುವ ನನ್ನ ಬಳಿಗೆ ಬಾರದಂತೆ ನೋಡಿಕೊಳ್ಳಿ. ಖುದಾ ಹಾ ಫಿಜ್" ಎಂದಾಗ ನೂರ್ ಜಹಾನಳಂತಹವಳ ಕಲ್ಲು ಹೃದಯವೂ ಕರಗಿ ಜೋಗದ ಜಲಪಾತದಂತೆ ಕಂಬನಿ ಬೋರೆಂದು ಧುಮ್ಮಿಕ್ಕಿತು.

"ಶಹರಿಯಾರ್ ಬೇಟಾ. ಸಾಯುವ ಕಲ್ಪನೆಯನ್ನು ಬಿಟ್ಟುಬಿಡು. ನಿನ್ನ ಅಬ್ಬುವಿಗೆ ಸಂತೋಷವಾಗುವಂತೆ ಗಾದಿಯನ್ನು ಏರಲೇಬೇಕು. ಕೂದಲು ಇಲ್ಲದಿದ್ದರೇನಂತೆ! ಕೃತಕವಾದ ರೀತಿಯಲ್ಲಿ ನಿನ್ನನ್ನು ಮೊದಲಿನಂತೆ ಸುಂದರವಾಗಿ ಸೃಷ್ಟಿಸಬಹುದು. ಗಾದಿ ಖಾಲಿಯಾಗಿ ಬಿಡುವ ಹಾಗಿಲ್ಲ."

"ಇದೆಂಥ ಮಾತು ಬಾದಶಾಹ್ ಬೇಗಂ. ಈ ಸ್ಥಿತಿಯಲ್ಲಿಯೂ ನಿಮಗೆ ತಖ್ತ್, ತಾಜ್‌ಗಳ ಚಿಂತೆಯೇ? ದಯವಿಟ್ಟು ಇಲ್ಲಿಂದ ಹೊರಟು ಹೋಗಿ. ಸುಳ್ಳು ಆಸೆ ಭರವಸೆಗಳನ್ನು ತುಂಬಿ ನನ್ನನ್ನು ಹಿಂಸಿಸಬೇಡಿ. ದಯವಿಟ್ಟು ಹೊರಟು ಹೋಗಿ. ನನಗೆ ಏಕಾಂತ ಬೇಕಿದೆ. ಶಾಂತಿ ಬೇಕಿದೆ. ಅಬ್ಬುವಿಗೆ ಸಮರ್ಥನಾದ ಮಗ ಇದ್ದಾನೆ. ಅವನೇ ಸಾಮ್ರಾಜ್ಯ ಆಳಲಿ. ನನ್ನಂತಹ ಅಸಮರ್ಥರ ಕೈಗೆ ಹೋಗಬಾರದೆಂದೇ ಅಲ್ಲಾಹ್ ನನಗೆ ಈ ಶಿಕ್ಷೆ ನೀಡಿದ್ದಾನೆ. ಹೊರಟು ಹೋಗಿ, ಯಾವುದಕ್ಕೂ ಬಲವಂತಪಡಿಸಬೇಡಿ" ಎಂದು ಹೇಳುತ್ತಾ ಪಕ್ಕಕ್ಕೆ ಹೊರಳಿ, ಅವಳಿಗೆ ಮುಖ ಕಾಣಿಸದಂತೆ ಹೊದಿಕೆಯನ್ನು ಎಳೆದುಕೊಂಡ.

ಅದೇ ಸಮಯಕ್ಕೆ ಹೋಷಿಯಾರ್ ಪ್ರವೇಶಿಸಿ, ಕೋರ್ನಿಶ್ ಮಾಡಿ, "ಬಾದಶಾಹ್ ಬೇಗಂ ಹುಜೂರ್, ಜಹಾಂಪನಾಹ್‌ರ ಸ್ಥಿತಿ ಗಂಭೀರವಾಗಿದೆ. ತಮ್ಮ ಉಪಸ್ಥಿತಿ ಬೇಕೆಂದು ಹೇಳುತ್ತಿದ್ದಾರೆ. ಸೇವಕರೆಲ್ಲರೂ ಏನು ಮಾಡಲೂ ತೋಚದೆ ನಿಂತಿದ್ದಾರೆ. ಕೂಡಲೇ ಕರೆತರಲು ಆದೇಶಿಸಿದ್ದಾರೆ" ಎಂದ ಕೂಡಲೇ ಅಸಹಾಯಕತೆಯ ನಿಟ್ಟುಸಿರಿನೊಂದಿಗೆ ಹೋಷಿಯಾರ್‌ನ ಜೊತೆ ಹೊರಟಳು.

ನೂರ್ ಜಹಾನಳ ಏರು ದಿನಗಳು, ಇಳಿಮುಖವಾಗತೊಡಗಿವೆ ಎನ್ನುವುದಕ್ಕೆ ಅವಳ

ಖಾಸಾ ಗುಪ್ತಚರರಿಂದ, ಖುರ್‍ರಂ (ಶಹಜಹಾನ್), ಮಹಬ್ಬತ್‌ಖಾನ್, ಒಟ್ಟಾಗಿ ಮತ್ತು ನೂರ್ ಜಹಾನಳ ಸೋದರ ಅಸಫ್‌ಖಾನರೂ ಸೇರಿದಂತೆ, ದಂಡೆತ್ತಿ ಬರಲಿದ್ದಾರೆಂಬ ಸುದ್ದಿಯೂ ಬಂತು.

ಈ ಮೂವರೂ ಈಗ ಅವಳ ಪ್ರಬಲಶತ್ರುಗಳಾಗಿದ್ದರು. ಅಧಿಕಾರ ಕೈಲಿದ್ದಾಗ, ಅಹಂಕಾರ ಮಹತ್ವಾಕಾಂಕ್ಷೆಗಳು ಇದ್ದವು. ಅನೇಕ ಮಂದಿ ಅಧಿಕಾರಿಗಳು, ಆತ್ಮೀಯರು, ಆಸ್ಥಾನಿಕರು, ರಕ್ತಸಂಬಂಧಗಳು ಯಾವುದನ್ನೂ ಪರಿಗಣಿಸದೆ ಅವರನ್ನೆಲ್ಲಾ ಅವಮಾನ ಮಾಡಿ ಅಧಿಕಾರ ಚಲಾಯಿಸಿ, ಅವರ ಆಸ್ತಿ ಪಾಸ್ತಿ, ಜಾಗೀರುಗಳೆಲ್ಲವನ್ನೂ ಸುಳ್ಳು ಆರೋಪಗಳನ್ನು ಹೊರಿಸಿ ಶತ್ರುಗಳನ್ನಾಗಿ ಮಾಡಿಕೊಂಡಿದ್ದಳು. ಈಗ ಅವಳ ಬೀಳು ಶುರುವಾದದ್ದೇ ಅವರೆಲ್ಲರೂ ಸೇಡು ತೀರಿಸಿಕೊಳ್ಳಲು ಹೊಂಚು ಹಾಕುತ್ತಿದ್ದು, ಅವಳ ಅಸಹಾಯಕ ಪರಿಸ್ಥಿತಿಯ ಲಾಭಪಡೆಯಲು ಮುಂದಾದರು.

ಶಹಜಹಾನನನ್ನು ಎದುರಿಸಲು ಹೊರಡುವಂತೆ, ಜಹಾಂಗೀರ್ ಮಹಬ್ಬತ್‌ಖಾನನನಿಗೆ ಆದೇಶ ಕಳಿಸಿದ. ಹಾಗೆಯೇ ಅಸಫ್‌ಖಾನನನ್ನೂ ಬಿಡುಗಡೆ ಮಾಡುವಂತೆ ತಿಳಿಸಿದ. ಮಹಬ್ಬತ್‌ಖಾನ್ ಇದು ಯಾವುದನ್ನೂ ಪಾಲಿಸದೆ, ಶತಾಯ ಗತಾಯ ನೂರ್ ಜಹಾನಳನ್ನು ಇನ್ನಿಲ್ಲದಂತೆ ಮಾಡುವುದಾಗಿ ಪ್ರತಿಜ್ಞೆ ಮಾಡಿದ. ಅಸಫ್‌ಖಾನನೂ, ತಂಗಿಯಿಂದ ಹಲವುಬಾರಿ ಅವಮಾನಿತನಾಗಿದ್ದ. ಆದ್ದರಿಂದ ಅವನೂ ಕೂಡಾ ಶಹಜಹಾನ್‌ನ ಪರವಾಗಿಯೇ ನಿಂತ. ಶಹಜಹಾನ್(ಖುರ್‍ರಂ) ಈಗ ತನ್ನ ಹೆಸರನ್ನು ಸಾರ್ಥಕಪಡಿಸಿಕೊಳ್ಳಲು ಉತ್ಸಾಹದಿಂದ ಮುಂದುವರೆದ. ಈ ಇಬ್ಬರೂ ತನಗೆ ಸಹಾಯವಾಗಿ ನಿಂತಿರುವುದರಿಂದ ಮೊಘಲ್ ಗದ್ದುಗೆ ತನ್ನದಾಗುವುದೆಂಬುದರಲ್ಲಿ ಸಂದೇಹವಿಲ್ಲವೆಂದುಕೊಂಡ. ನೂರ್ ಜಹಾನ್ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿಕೊಂಡಿದ್ದರೂ, ಹೇಗಾದರೂ ತನ್ನ ಶತ್ರುಗಳನ್ನು ಹತ್ತಿಕ್ಕಲು, ಉಪಾಯಗಳನ್ನು ಯೋಚಿಸುತ್ತಿದ್ದಳು. ಆದರೆ ಜಹಾಂಗೀರ್, ತನ್ನ ಮಕ್ಕಳ ಬಗ್ಗೆ ಹಚ್ಚಿಕೊಂಡ ಯೋಚನೆಗಳಿಂದ ತಾನು ಸಾವಿನ ಸಮೀಪವಾಗುತ್ತಿರುವ ಅರಿವಿನಿಂದ ಒತ್ತಡ ಹೆಚ್ಚಾಗಿ ವಿಪರೀತ ಕೆಮ್ಮು ಹೆಮ್ಮಾರಿಯಾಗಿ ಅವನನ್ನು ಹಿಂಡಿ ಹಿಪ್ಪೆ ಮಾಡುತ್ತಿತ್ತು. ಗಂಡನ ಸಂಕಟವನ್ನು ನೂರ್ ಜಹಾನಳಿಗೆ ನೋಡಲಾಗಲಿಲ್ಲ. ತನ್ನ ಸಾವು ಸಮೀಪಿಸುತ್ತಿದೆ ಎಂದು ನೂರ್‌ಗೆ ಹೇಳಿದಾಗ, ಅವಳಿಗೆ ಇನ್ನೂ ಸಂಕಟವಾಯಿತು. "ಜಹಾಂಪನಾಹ್, ನಿಮ್ಮನ್ನು ಸಮೀಪಿಸಲು ಸಾವಿಗೆ ಎಲ್ಲಿದೆ ಧೈರ್ಯ? ನೀವು ನೂರು ವರ್ಷ ಬಾಳಿ, ಮೊಘಲ್ ಸಾಮ್ರಾಜ್ಯದ ಕೀರ್ತಿಯನ್ನು ವಿಶ್ವದಾದ್ಯಂತ ಪಸರಿಸುತ್ತೀರಿ. ಇಲ್ಲಸಲ್ಲದ ಆಲೋಚನೆಗಳನ್ನು ಬಿಡಿ. ಬರಿ ಕೆಮ್ಮಿನಿಂದ ಇಷ್ಟೊಂದು ಅಧೀರರಾಗಬೇಕಾದ್ದಿಲ್ಲ."

"ನೀನು ಹೇಳುವುದು ನಿಜವೇ ನೂರ್?"

"ಹೌದು. ವಾತಾವರಣದಿಂದ ಹಾಗಾಗಿದೆ."

"ಹಕೀಮರನ್ನು ವಿಚಾರಿಸಿ, ನಾವು ಕಾಶ್ಮೀರಕ್ಕೆ ಹೋದರೆ, ಹವಾ ಬದಲಾವಣೆಯಿಂದ ಪ್ರಯೋಜನವಾಗುವುದಾದರೆ ಹೊರಡೋಣ."

ಜಹಾಂಗೀರನ ಮಾತಿನಂತೆ, ಹಕೀಮರೂ ಒಪ್ಪಿಗೆ ಕೊಟ್ಟುದರಿಂದ ಸ್ವಚ್ಛ ವಾತಾವರಣದಲ್ಲಿ ಕಾಶ್ಮೀರದ ಪರಿಸರದಲ್ಲಿ ಚೇತರಿಸಿಕೊಳ್ಳಬಹುದೆನಿಸಿತು. ಹೊರಡುವ

ಹಿಂದಿನ ರಾತ್ರಿ ಜಹಾಂಗೀರ್, ಆಸ್ತಮಾ, ಉಸಿರಾಟದ ತೊಂದರೆ, ಎದೆನೋವುಗಳಿಂದ ತತ್ತರಿಸಿ ಹೋದ. ಬೆಳಗಾಗುವುದನ್ನೇ ಕಾಯುತ್ತಿದ್ದ ನೂರ್ ಜಹಾನ್, ತಮ್ಮ ಸೇವಾ ಪರಿವಾರದೊಂದಿಗೆ ಕಾಶ್ಮೀರದತ್ತ ಗಂಡನೊಂದಿಗೆ ಪ್ರಯಾಣಕ್ಕೆ ಸಿದ್ಧಳಾದಳು.

ಹಾದಿಯುದ್ದಕ್ಕೂ ತನ್ನ ಸಂಕಟಗಳ ಬಗ್ಗೆ ಚಿಂತಿಸುತ್ತಿದ್ದಳು. ಗಂಡನಿಗೆ ಸಮಾಧಾನ, ಧೈರ್ಯವನ್ನು ಹೇಳಿದಳು. ಆದರೂ ಅವಳಿಗೆ ಗೊತ್ತು, ಗಂಡ ಇನ್ನು ಬಹುಶಃ ದಿನಗಳನ್ನೂ ನೋಡಲಾರ ಎಂದು.....ಅವಳಿಗೆ ಆಗಲೂ ಸಾಮ್ರಾಜ್ಯದ ಭವಿಷ್ಯದ ಚಿಂತೆ. ಆಕಸ್ಮಿಕವಾಗಿ ಜಹಾಂಗೀರನು ಸತ್ತುಹೋದರೆ? ಗಾದಿ ಖಾಲಿಯಾಗಿರಲು ಒಂದು ನಿಮಿಷವೂ ಬಿಡುವ ಹಾಗಿಲ್ಲ. ಖುರ್ರಂ ಹದ್ದಿನ ಕಣ್ಣಿಟ್ಟಿರುವುದೇ ಅಲ್ಲದೆ, ಅತ್ಯಂತ ಸಮರ್ಥನೂ ಸಾಹಸಿಯೂ ಆಗಿರುವುದರಿಂದ ಯಾವ ಕ್ಷಣದಲ್ಲಾದರೂ ಎರಗಿ ಬೀಳಬಹುದು. ಅಲ್ಪಾವಧಿಗಾದರೂ ಶಹರಿಯಾರನನ್ನು ಕೂರಿಸಿ, ಗಾದಿ ಖಾಲಿ ಇರದಂತೆ ನೋಡಿಕೊಂಡು, ಮುಂದಿನ ಯೋಜನೆಗಳ ಬಗ್ಗೆ ಯೋಚಿಸಬಹುದು ಎನಿಸಿ, ಶಹರಿಯಾರನಿಗೆ ಹಲವು ರೀತಿಯಲ್ಲಿ ಬುದ್ಧಿ ಹೇಳಿದಳು. ಅವನಿಗೆ ತನ್ನ ವಿಕೃತರೂಪದೊಂದಿಗೆ ಕಾಣಿಸಿಕೊಳ್ಳಲು ಹಿಂಜರಿಕೆ. ಆದರೆ ಅವನಿಗೂ ಮನದಾಳದಲ್ಲಿ ಗಾದಿಯ ಆಸೆ ಇದ್ದುದರಿಂದ, ಸ್ವಲ್ಪ ಮಟ್ಟಿಗೆ ಒಪ್ಪಿಗೆ ತೋರಿಸಿದ.

ಆದರೆ ಜಹಾಂಗೀರನ ಮನಸ್ಸಿನಲ್ಲಿ, ಖುರ್ರಂ ಹೊರತು ಬೇರೆ ಯಾರಿಗೂ ಮೊಘಲ್ ಸಲ್ತನತ್ ಆಳುವ ಯೋಗ್ಯತೆ ಇಲ್ಲವೆನಿಸಿದ್ದರಿಂದ, ನೂರ್ ಜಹಾನಳನ್ನು ಹೇಗಾದರೂ ಒಪ್ಪಿಸಬೇಕೆಂದು –

"ನೂರ್ ಬೇಗಂ, ಸಾಯುತ್ತಿರುವ ಈ ಮನುಷ್ಯನ ಕಡೆಯಾಸೆಯೊಂದನ್ನು ನಡೆಸಿಕೊಡುತ್ತೀಯ?" ಎಂದು ದೈನ್ಯವಾಗಿ ಕೇಳಿಕೊಂಡ.

"ಹೇಳಿ ಜಹಾಂಪನಾಹ್, ನಿಮ್ಮಾಸೆಯೇನೆಂಬುದನ್ನು ತಿಳಿಸಿ. ನನ್ನ ಕೈಲಾದಮಟ್ಟಿಗೆ ಪ್ರಯತ್ನಿಸುತ್ತೇನೆ."

"ನಿನಗೆ ಗೊತ್ತಿದೆ, ನನ್ನಿಬ್ಬರು ಮಕ್ಕಳೂ ನನ್ನಿಂದ ದೂರವಾದರು. ಇರುವ ಇಬ್ಬರಲ್ಲಿ ಶಹರಿಯಾರನ ಶಕ್ತಿ ಸಾಮರ್ಥ್ಯಗಳು ಏನೆಂಬುದು ನಿನಗೇ ತಿಳಿದಿದೆ. ನರಸತ್ತವನಂತೆ ವರ್ತಿಸುವ ಶಹರಿಯಾರ್, ಸಿಂಹಾಸನವೇರಿದ ಕ್ಷಣದಲ್ಲಿ ಶತ್ರುಗಳು ಆಕ್ರಮಣ ಮಾಡಿ, ಮೊಘಲ್ ಸಾಮ್ರಾಜ್ಯವನ್ನು ಕಸಿದುಕೊಂಡು ನಮ್ಮ ವಂಶ ಪರಂಪರೆಗೆ ಸಮಾಧಿ ಕಟ್ಟಿಬಿಡುತ್ತಾರೆ. ಅದಾಗದೆ, ಸುರಕ್ಷಿತವಾಗಿಯೂ, ಕೀರ್ತಿವಂತವಾಗಿಯೂ ಸಾಮ್ರಾಜ್ಯ ನಮ್ಮದಾಗಿ ಮುಂದುವರೆಯಬೇಕಾದರೆ ಶಹಜಾದೆ ಖುರ್ರಂ, ನಮ್ಮ ಶಹಜಹಾನನೇ ಸಮರ್ಥ ವ್ಯಕ್ತಿ, ಅವನನ್ನೇ ಗಾದಿಯೇರಿಸಿ, ಸಾಮ್ರಾಜ್ಯವನ್ನು ರಕ್ಷಿಸಿಕೊಳ್ಳುವ ಜವಾಬ್ದಾರಿ ನಿನಗೆ ವಹಿಸುತ್ತಿದ್ದೇನೆ. ತೆಗೆದುಕೊ. ಇದು ಅಮೂಲ್ಯವಾದ ಖಡ್ಗ 'ಅಲಂಗೀರ್' ಇದನ್ನು ಶಹಜಹಾನನಿಗೆ ಕೊಡು. ಅವನು ಅದೃಷ್ಟವಂತನಾಗುತ್ತಾನೆ."

ಜಹಾಂಗೀರನ ಮಾತುಗಳು ಅವಳೆದೆಯನ್ನು ಅಲಗಿನಂತೆ ಇರಿದವು. ಅವಳ ಉದ್ದೇಶವೇ ಬೇರೆಯಾಗಿತ್ತು. ನೆಪಕ್ಕೆ ಶಹರಿಯಾರನನ್ನು ಕೂರಿಸಿ, ತಾನಾಳಬೇಕೆಂಬ ಮಹತ್ವಾಕಾಂಕ್ಷೆಯ ಉದ್ದೇಶ ಅವಳದಾಗಿರುವಾಗ, ಅವನು ಎಂತಹವನಾದರೇನು? ಕೂರಬೇಕೆಂಬ ಅವನ ಆಸೆ, ಆಳಬೇಕೆಂಬ ತನ್ನಾಸೆ – ಎರಡೂ ಒಟ್ಟಿಗೆ ಸಾಧಿಸಲು

ಸಾಧ್ಯವಾಗುವುದು, ಶಹರಿಯಾರನ ಸಿಂಹಾಸನಾರೋಹಣದಿಂದ ಮಾತ್ರ ಸಾಧ್ಯವೆಂಬುದು ಅವಳ ಲೆಕ್ಕಾಚಾರ. ಆದರೆ ಕಾಲವೇ ಮುಂದಿನದನ್ನು ನಿರ್ಣಯಿಸಬೇಕಿತ್ತು.

ಅಂದುಕೊಂಡಂತೆ ಕಾಶ್ಮೀರದ ಹವಾಗುಣದಿಂದಾಗಿ ಜಹಾಂಗೀರ್ ಸಾಕಷ್ಟು ಚೇತರಿಸಿಕೊಂಡ. ಆರೋಗ್ಯವೂ ಸುಧಾರಿಸಿತು. ಬಹಳಕಾಲ ರಾಜ್ಯಾಡಳಿತದ ವ್ಯವಹಾರಗಳಿಂದ ದೂರವಿದ್ದ. ಕೂಡಲೇ ಅವನಿಗೆ ಲಾಹೋರಿಗೆ ಹಿಂತಿರುಗಿ ಹೋಗಲು ಮನಸಾಯಿತು. ನೂರ್ ಜಹಾನಳ ಒಪ್ಪಿಗೆಯೂ ದೊರೆಯಿತು. ಮತ್ತೆ ಪರಿವಾರ ಲಾಹೋರಿನತ್ತ ನಡೆಯಿತು. ಸ್ವಲ್ಪ ಚೇತರಿಕೆ ಕಂಡದ್ದೇ ಅವನಲ್ಲಿ ಮೊದಲಿನ ಹಂಬಲಗಳು ಮರುಕಳಿಸಿದವು. ಮದ್ಯ ಸೇವನೆ, ಅಫೀಮು ಸೇವನೆ, ಬೇಟೆಯ ಬಯಕೆ ಇವುಗಳನ್ನು ಹತ್ತಿಕ್ಕಿಕೊಳ್ಳಲು ಅವನಿಗೆ ಸಾಧ್ಯವೇ ಆಗಲಿಲ್ಲ. ನೂರ್ ಜಹಾನಳನ್ನು, ಇವುಗಳಿಗಾಗಿ ಬೇಡಿಕೊಳ್ಳುತ್ತಿದ್ದ. ಇವರ ಜೊತೆಯಲ್ಲಿಯೇ ಶಹರಿಯಾರನೂ ಬಂದಿದ್ದ. ಕುದುರೆ ಸವಾರಿ ಮಾಡಿಕೊಂಡು ಪ್ರಯಾಣ ಮಾಡುವುದು ಸಾಧ್ಯವಿರಲಿಲ್ಲವಾಗಿ, ಪಲ್ಲಕ್ಕಿಯಲ್ಲಿ ಹೊರಟ. ಹಾದಿಯಲ್ಲಿ ಬೇಟೆಗೆ ಪ್ರಶಸ್ತವಾದ ಒಂದು ಜಾಗ ಗುರುತಿಸಿ, ಜಹಾಂಗೀರ್ ಬೇಟೆಯಾಡಲು ಬಯಸಿದ. ನೂರ್ ಜಹಾನಳಿಂದ ಒಪ್ಪಿಗೆ ಕೇಳಿದ. ಜಹಾಂಗೀರನನ್ನು ಆ ಸ್ಥಿತಿಯಲ್ಲಿ ಬೇಟೆಯಾಡಲು ಕಳಿಸುವುದು ಅಪಾಯಕರವೆನಿಸಿತು. ಆದರೂ ಅವನ ಹಠ, ಅಂಗಲಾಚುವಿಕೆಗಳಿಗೆ ಕರಗದೆ ಇರಲು ನೂರ್ ಜಹಾನಳಿಗೆ ಸಾಧ್ಯವಾಗಲೇ ಇಲ್ಲ, ಆದರೂ ಒಳಗೆ ಹೆದರಿಕೆ ಇದ್ದೇ ಇತ್ತು. ಒಂದು ವೇಳೆ, ಅವನನ್ನು ಬೇಟೆಯಾಡಲು ಬಿಡದೆ ತಡೆದರೆ ಆಕಸ್ಮಿಕ ಸಾವು ಸಂಭವಿಸಿದರೆ, ಅವನ ಆಸೆಯನ್ನು ಪೂರೈಸಲಿಲ್ಲವಲ್ಲ ಎನ್ನುವ ಕೊರಗು ಕಾಡದೆ ಬಿಡುವುದಿಲ್ಲವೆನಿಸಿ, ಮೀರ್ ಶಿಕಾರ್‌ನನ್ನು ಕರೆಸಿ, ಬೇಟೆಯಾಟಕ್ಕೆ ಹೊರಡಿಸುವ ಸಿದ್ಧತೆ ಮಾಡಿದಳು.

ದಟ್ಟವಾದ ಕಾಡಿನ ಒಳಭಾಗವನ್ನು ಪ್ರವೇಶಿಸಿದ ರಾಜ ಶಿಕಾರಿಗಳು, ಬೇಟೆಗೆ ದೊರೆಯಬಹುದಾದ ಪ್ರಾಣಿಗಳಿಗಾಗಿ ಹುಡುಕಾಟ ನಡೆಸುವಾಗ, ಜಿಂಕೆಯೊಂದು ಜಹಾಂಗೀರನ ಕಣ್ಣಿಗೆ ಬಿತ್ತು. ಕುರ್ಚಿಯಿಂದ ತನ್ನನ್ನು ಇಳಿಸಲು ಕೇಳಿಕೊಂಡು, ತನ್ನ ಬಂದೂಕನ್ನು ಕೈಲಾಗದಿದ್ದರೂ ಹೆಗಲ ಮೇಲೆತ್ತಿ ಇರಿಸಿಕೊಂಡು ಜಿಂಕೆಯ ಕಾಲಿಗೆ ಗುರಿಯಿಟ್ಟು ಹೊಡೆದ.

ಸೈನಿಕರು, ಅದನ್ನು ಹಿಂಬಾಲಿಸಿ ಹೋದರು. ಜಹಾಂಗೀರ್ ತೀರಾ ದಣಿದು ಕುಸಿದುಬಿದ್ದ. ಅವನ ಸುತ್ತಲಿದ್ದವರು ಗಾಬರಿಯಿಂದ "ಜಹಾಂಪನಾಹ್! ಜಹಾಂಪನಾಹ್!" ಎಂದು ಕಿರುಚಿದರು. ಆದರೂ ಅವನಿಂದ ಉತ್ತರ ಬರಲಿಲ್ಲ. ಬೇಟೆಗೆಂದು ಜಹಾಂಗೀರನ ಜೊತೆ ಬಂದಿದ್ದ ಸೇವಕರು, ಗುರಿಕಾರರೂ ಒಮ್ಮೆಲೇ ಜಹಾಂಗೀರನಿದ್ದ ಸ್ಥಳಕ್ಕೆ ಬಂದು ನೋಡಿದರು. ಕೂಡಲೇ ಅವರಲ್ಲಿ ಕಂಪನ ಶುರುವಾಯಿತು. ಬಾದಶಾಹರನ್ನು ತಮ್ಮ ರಕ್ಷಣೆಯಲ್ಲಿ ಕಳಿಸಿಕೊಟ್ಟಿರುವಾಗ ಹೀಗಾಯಿತಲ್ಲ" ಬಾದಶಾಹ್‌ಬೇಗಂ ಹುಜೂರ್ ತಮಗೆ ಎಂಥ ಶಿಕ್ಷೆ ವಿಧಿಸುತ್ತಾರೋ ಎಂದು ನಡುಗುತ್ತ ನಿಂತಿದ್ದರು. ಆದರೆ ಅವರನ್ನು ಬಿಡಾರಕ್ಕೆ ತಲುಪಿಸಬೇಕಿತ್ತು. ಕುರ್ಚಿಯಲ್ಲಿ ಮತ್ತೆ ಕೂರಿಸಿ ಹೊತ್ತು ನಡೆದರು. ಕಡಿದಾದ ಕಾಡು ಪ್ರದೇಶ. ಕಾಲು ನಡಿಗೆ, ಅದೂ ಭಾರ ಹೊತ್ತು ಸಾಗುವುದು ಅತ್ಯಂತ ಪ್ರಯಾಸಕರ. ಆದರೂ ಕರ್ತವ್ಯ ನಿರ್ವಹಿಸಬೇಕಿತ್ತು.

ಅಂತೂ ಇಂತೂ ಹರಸಾಹಸಮಾಡಿ, ಜಹಾಂಗೀರನನ್ನು ಬಿಡಾರಕ್ಕೆ ತಲುಪಿಸಿದರು.

ನೂರ್ ಜಹಾನ್ ಕೂಡಲೇ ಗಂಡನ ಸ್ಥಿತಿಯನ್ನು ನೋಡಿ ಗಾಬರಿಗೊಂಡಳು. ಏದುಸಿರು ಬಿಡುತ್ತಿದ್ದ "ನೂರ್! ನೂರ್! ಎಂದು ಗಾಬರಿಯಿಂದ ಅವನು ಅವಳ ಹೆಸರಿಡಿದು ಕೂಗುತ್ತಿದ್ದ."

"ಜಹಾಂಪನಾಹ್, ನಿಮ್ಮ ನೂರ್ ನಿಮ್ಮ ಪಕ್ಕದಲ್ಲಿಯೇ ಇದ್ದಾಳೆ. ಯಾಕಿಷ್ಟು ಗಾಬರಿ?"

"ನೂರ್ ನನ್ನ ಕ್ಷಣಗಳು ಮುಗಿಯುತ್ತಿವೆ. ಇನ್ನು ನಾನು ಬದುಕುವುದಿಲ್ಲ. ನನ್ನ ದಾದಾ, ಪರ್‌ದಾದಾರೂ ನನ್ನನ್ನು ಕರೆಯುತ್ತಿದ್ದಾರೆ. ಎಲ್ಲಿ ನನ್ನ ಖುಸ್ರೊ? ಖುರ್ರಂ ಎಲ್ಲಿ? ಅವರು ನನ್ನನ್ನು ರಕ್ಷಿಸಿಕೊಳ್ಳಲಿ. ನಾನು ಹಿಂದೂಸ್ತಾನದ ಬಾದಶಾಹ್ ಆಗಿ ನನ್ನ ಮಕ್ಕಳ ಜೊತೆ ಸಾಮ್ರಾಜ್ಯವನ್ನು ಆಳಬೇಕು. ನನಗೆ ಸಾಯುವುದು ಇಷ್ಟವಿಲ್ಲ. ನೂರ್, ನೂರ್, ಏನಾದರೂ ಮಾಡಿ ನನ್ನನ್ನು ಬದುಕಿಸು" ಎಂದು ಸಣ್ಣ ಮಗುವಿನಂತೆ ಬಿಕ್ಕಿ ಬಿಕ್ಕಿ ಅಳತೊಡಗಿದ. ನೂರ್ ಜಹಾನಳ ಕಣ್ಣೂ ಒದ್ದೆಯಾಯಿತು. ಎಂತಹ ಅಸಹಾಯಕತೆ! ವಿಶಾಲವಾದ ಮೊಘಲ್ ಸಾಮ್ರಾಜ್ಯಾಧಿಪತಿಗೆ ಇಷ್ಟು ದೈನ ಸ್ಥಿತಿಯೇ?

ಯಾ ಅಲ್ಲಾಹ್! ಇದೇನಾ ನಿನ್ನ ಕರುಣೆಯ ಮುಖ!? ಎಂದು ತನ್ನಷ್ಟಕ್ಕೆ ತಾನೇ ಬಿಕ್ಕುತ್ತಿದ್ದಳು. ಎಲ್ಲವೂ ಸರಿಯಾಗಿದ್ದ ಕ್ಷಣಗಳಲ್ಲಿ ಜಹಾಂಗೀರ್ ಹೇಳಿದ ಸಾಲುಗಳು ನೆನಪಾದವು. "ಆರ್ತ ಸ್ವರಗಳನ್ನು ಗಾಳಿಯಲ್ಲಿ ತುಂಬಲು ನಾನೇನೂ ಬುಲ್‌ಬುಲ್ ಪಕ್ಷಿಯಲ್ಲ. ಒಂದು ಅಣುವಿನಷ್ಟೂ ಗೋಳಾಟವಿಲ್ಲದೆ ಗೊಣಗಾಟವಿಲ್ಲದೆ ಸಾಯುವ ಪತಂಗ ಮಾತ್ರ!" ಎಂದವರಿಗೆ ಈ ನೋವು, ಸಂಕಟಗಳೇ! ನಿರಾಳವಾಗಿ, ನೆಮ್ಮದಿಯ ಸಾವನ್ನು ನೀಡಬಾರದೇ ಎಂದು ಅಲ್ಲಾಹ್‌ನನ್ನು ಪ್ರಾರ್ಥಿಸಿದಳು.

ಸಾವೆನ್ನುವುದು ಎಂತಹ ಪ್ರಬಲ ಶಕ್ತಿ. ಎಷ್ಟೇ ದೊಡ್ಡವರಾದರೂ ವಿಶ್ವ ವಿಜೇತರಾದರೂ ಸಾವಿನ ಮುಂದೆ ಹತಾಶರಾಗುತ್ತಾರೆ. ಗಿಡಗಿಡಾಯಿಸುತ್ತಾರೆ! '......ಓ ಸಾವೇ ನೀನು ಅಪಾರ ಶಕ್ತಿವಂತನೇ! ಎಂತಹ ಅಹಂಕಾರಿಯನ್ನೂ ಮೆದುಗೊಳಿಸುತ್ತೀಯ!' ಎಂದು ಸಾವಿನ ಬಗ್ಗೆ ಅತ್ಯಂತ ಗಂಭೀರ ಚಿಂತನೆ ನಡೆಸಿದಳು. ಇಂದು ಜಹಾಂಪನಾಹ್! ನಾಳೆ .......ಯಾರು?

ಅವಳ ಸಾವಿನ ಬಗೆಗಿನ ಚಿಂತನೆಗಳು ನಿಧಾನವಾಗಿ ಸಾಗುತ್ತಿದ್ದರೆ, 'ನೂರ್! ನೂರ್' ಎಂಬ ಕೂಗು ಚಿಂತನೆಯ ಸರಣಿಯನ್ನು ಕತ್ತರಿಸಿತು. "ಜಹಾಂಪನಾಹ್ ಕರೆದಿರಾ ಎಂದು ಹತ್ತಿರ ಬಂದಳು. ಏನಾದರೂ ಬೇಕಿತ್ತೇ?......"

"ಬೇಗಂ ಒಂದು ಬಟ್ಟಲು ಮಧುವನ್ನು ನನ್ನ ತುಟಿಗೆ ಸೋಂಕಿಸುವೆಯಾ?" ದೈನ್ಯದಿಂದ ಸಣ್ಣ ಮಗುವಿನಂತೆ ಕೇಳಿದ.

ಕೂಡಲೇ ಅವನ ಅಂತಿಮ ಕೋರಿಕೆಯಂತೆ, ಮಧು ಬಟ್ಟಲನ್ನು ಅವನ ತುಟಿಗೆ ಹಿಡಿದಳು. ಮಧುವನ್ನು ಹೀರಿಕೊಳ್ಳುವಷ್ಟು ಶಕ್ತಿಯೂ ಇರಲಿಲ್ಲ. ಕ್ರಮೇಣ ಉಸಿರಾಟದ ವೇಗ ಕ್ಷೀಣಿಸುತ್ತಿತ್ತು. ಅಂಥಾದ್ದರಲ್ಲಿ ಏದುಸಿರುಬಿಡುತ್ತಾ, "ನೂರ್ ನನ್ನ ಮಗ ಖುರ್ರಂನನ್ನು ಬಾದಶಾಹ್ -ಎ- ಹಿಂದೂಸ್ತಾನ್ ಮಾಡು. ಅವನು ನಿನಗೂ ಮಗನೇ!!" ..... ಎಂದು ತಡೆ ತಡೆದು ಹೇಳುತ್ತಲೇ ಹೋದಂತೆ ಉಸಿರಾಟ ಏರಿಳಿತಗಳಿಲ್ಲದೆ ಸರಳ

ರೇಖೆಯಂತೆ ಸಾಗಿ ನಿಂತುಹೋಯಿತು. 28ನೇ ಅಕ್ಟೋಬರ್, 1627. ಅದೇ ವರ್ಷಕ್ಕೆ 58ರ ಪ್ರಾಯ. ಮೊಘಲ್ ಸಾಮ್ರಾಜ್ಯದ ಆಕಾಶದಲ್ಲಿನ ಮಹಾ ನಕ್ಷತ್ರವೊಂದು ಕಣ್ಮರೆಯಾಯಿತು.

ಸುದ್ದಿ ಕಾಳ್ಗಿಚ್ಚಿನಂತೆ ಹಬ್ಬಿತು.

ರಾಜ ಪರಿವಾರದ ಸದಸ್ಯರು, ಜನಾನಾದ ಹೆಂಗಸರು, ಅಧಿಕಾರಿಗಳು, ಸೇನಾನಾಯಕರು, ಯೋಧರು, ಪ್ರಜೆಗಳು, ಗುಂಪುಗುಂಪಾಗಿ ಬಂದು ಬಿಡಾರವನ್ನು ಸುತ್ತುವರೆದು ನಿಂತರು.

ನೂರಜಹಾನ್‌ಳ ಆತ್ಮವಿಶ್ವಾಸ, ಧೈರ್ಯ, ಸಾಹಸಗಳು ಕರಗಿಹೋದವು. ಲಾಡ್ಲಿಯನ್ನು ಅಪ್ಪಿಕೊಂಡು ಗೋಳಾಡಿದಳು. ಒಂಟಿತನದ ಕಲ್ಪನೆಯೇ ಅವಳನ್ನು ನಡುಗಿಸಿತು. ಆ ಕ್ಷಣಕ್ಕೆ ಅವಳಿಗೆ ಯಾವುದೂ ಬೇಡವೆಂಬ ವಿರಕ್ತ ಸ್ಥಿತಿ ಆವರಿಸಿತು. ಒತ್ತರಿಸಿ ಬರುತ್ತಿದ್ದ ದುಃಖದಿಂದ, ಜಹಾಂಗೀರನ ಕೊರೆಯುವಷ್ಟು ತಣ್ಣಗಿದ್ದ ದೇಹವನ್ನು ಅಪ್ಪಿಕೊಂಡು, "ಜಹಾಂಪನಾಹ್ ಎದ್ದೇಳಿ. ಒಂದೇ ಒಂದು ಸಲ ಮಾತಾಡಿ" ಎಂದು ಗೋಳಿಡುತ್ತಾ ಅವನ ಮುಖವನ್ನು ಬೊಗಸೆಯಲ್ಲಿ ಹಿಡಿದಳು; ದೇಹವನ್ನು ಅಲುಗಾಡಿಸಿದಳು. ಮತ್ತೊಮ್ಮೆ ನಿಜವಾಗಿಯೂ ಸಾವನ್ನಪ್ಪಿರುವನೇ ಎಂದು ಎದೆ ಬಡಿತ, ಕೈಕಾಲುಗಳನ್ನು, ಕಣ್ಣುಗಳನ್ನು ಬಿಡಿಸಿ ಪರೀಕ್ಷಿಸಿ ನೋಡಿದಳು. ಅತ್ತೂ ಅತ್ತೂ ದಣಿದು ಹೋಗಿದ್ದಳು. ಆದರೆ ಎಷ್ಟು ಹೊತ್ತು? ಅಳುವಿನಲ್ಲಿಯೇ ಬದುಕನ್ನು ಮುಗಿಸಲು ಸಾಧ್ಯವಿಲ್ಲ. ತನ್ನ ಮುಂದೆ ರಾಶಿರಾಶಿ ಕೆಲಸಗಳಿವೆ. ಶಹರಿಯಾರ್ ಈಗ ಹತ್ತಿರದಲ್ಲಿ ಇಲ್ಲ. ಅವನನ್ನೇ ಬಾದಶಾಹನನ್ನಾಗಿ ಘೋಷಿಸಬೇಕು. ಪ್ರಜೆಗಳ, ಅಧಿಕಾರಿಗಳ ಮುಂದೆ ಕೇಳಿಕೊಳ್ಳಬೇಕು.

ಬಿಡಾರವನ್ನು ಸುತ್ತುವರೆದು ನಿಂತಿದ್ದವರು ಶೋಕತಪ್ತರಾಗಿದ್ದರು. ಅವರವರ ಅಧಿಕಾರ, ಅಂತಸ್ತುಗಳಿಗೆ ತಕ್ಕಂತೆ ಶಿಸ್ತಿನಿಂದ ಸಾಲುಗಟ್ಟಿ ನಿಂತಿದ್ದರು. ಎಲ್ಲರಿಗೂ ನೂರ್ ಜಹಾನ್ ಬಗ್ಗೆಯೇ ಕುತೂಹಲ? ಈಗೇನು ಮಾಡುತ್ತಾಳೆ. ಉತ್ತರಾಧಿಕಾರಿಯನ್ನಾಗಿ ಯಾರನ್ನು ಘೋಷಿಸುತ್ತಾಳೆ ಎಂದು ಅವರವರ ಕಲ್ಪನೆಗೆ ಅನುಗುಣವಾಗಿ ಲೆಕ್ಕಾಚಾರ ಹಾಕುತ್ತಿದ್ದರು. ನೂರ್ ಜಹಾನ್ ತನ್ನದೇ ರೀತಿಯಲ್ಲಿ ಯೋಚಿಸುತ್ತಿದ್ದಳು. ಆಸ್ಥಾನಿಕರ, ಅಧಿಕಾರಿಗಳ ಸಮ್ಮತಿಯಿಲ್ಲದೆ ಏಕ ಪಕ್ಷೀಯವಾಗಿ ತನ್ನ ನಿರ್ಧಾರವನ್ನು ತಿಳಿಸಿದರೆ, ಅವರಲ್ಲಿ ಗೊಂದಲ ಅನುಮಾನಗಳು ಹುಟ್ಟಬಹುದು. ಆದ್ದರಿಂದ ಮೊದಲಿಗೆ, ಅವರ ಸಹಾನುಭೂತಿ, ಮಾತಿನಲ್ಲಿ ನಂಬಿಕೆ ಬರುವಂತೆ ವರ್ತಿಸಬೇಕೆಂದುಕೊಂಡು, ತನ್ನ ಸಮೀಪದಲ್ಲಿಯೇ ಪ್ರತ್ಯಕ್ಷವಾಗಿ, ಪರೋಕ್ಷವಾಗಿ, ತನ್ನ ದುಃಖ ಸಂಕಟಗಳಲ್ಲಿ ಜೊತೆಯಾಗಿಯೆ ಇದ್ದ, ಅತ್ಯಂತ ವಿಶ್ವಾಸಪಾತ್ರ ಸೇವಕ, ಹೋಷಿಯಾರ್‌ನನ್ನು ಕರೆದು, "ಹೋಷಿಯಾರ್, ಹೊರಗಡೆ ಜನರ ನಡವಳಿಕೆ ಹೇಗಿದೆ ಎಂದು ತಿಳಿದು ಬರುವೆಯಾ? ಎಲ್ಲವೂ ಅನುಕೂಲಕರವಾಗಿ ಇದ್ದರೆ, ಜಹಾಂಪನಾಹ್ ಜಹಾಂಗೀರರ ಮನಸ್ಸಿನಲ್ಲಿ ಇದ್ದ ಭಾವನೆಗಳನ್ನು ಅವರಿಗೆ ತಿಳಿಸಿ ಅವರ ಸಹಾಯ, ಸಹಕಾರ ಯಾಚಿಸಬೇಕೆಂದಿದ್ದೇನೆ."

"ಈಗಲೇ ಹೋಗಿ ಬರುತ್ತೇನೆ, ಬಾದಶಾಹ್ ಬೇಗಂ ಹುಜೂರ್" ಎಂದು ಹೇಳಿ

ಬಿಡಾರದ ಬಾಗಿಲಿಗೆ ಇದ್ದ ಬಟ್ಟೆಯ ಪರದೆಯನ್ನು ಸರಿಸಿ ಹೊರಬಂದು, ಒಂದು ನೋಟವನ್ನು ಬೀರಿದ. ಬಂದವನೇ ಎಲ್ಲರಿಗೂ ಸಲಾಂ ಹೇಳಿ, "ನೂರ್ ಜಹಾನ್ ಬೇಗಂ, ತಮ್ಮೊಂದಿಗೆ ಪರಾಮರ್ಶಿಸಲು ಬಯಸುತ್ತಿದ್ದಾರೆ. ಇಷ್ಟರಲ್ಲೇ ತಮ್ಮನ್ನು ಉದ್ದೇಶಿಸಿ ಮಾತನಾಡಬೇಕೆಂದಿದ್ದಾರೆ" ಎಂದು ಘೋಷಿಸಿ ಒಳ ಹೋದ. ವಾಸ್ತವವಾಗಿ ನೂರ್ ಜಹಾನಳ ಅಣ್ಣ ಅಸಫ್‌ಖಾನ್ ತಂಗಿಯ ಜೊತೆ ಒಳಗಿದ್ದು, ಅವಳ ಶೋಕದಲ್ಲಿ ಭಾಗಿಯಾಗಬೇಕಿತ್ತಾದರೂ, ಎಲ್ಲರಿಗಿಂತ ಮೊದಲಿನ ಸಾಲಿನಲ್ಲಿ ತನ್ನ ವಿಶ್ವಾಸಪಾತ್ರ ಸೇವಕರು, ಸೈನಿಕರನ್ನು ಇರಿಸಿಕೊಂಡು ತನ್ನ ಆಲೋಚನೆಗಳಲ್ಲಿ ಮಗ್ನನಾಗಿದ್ದ. ಅವಳು ಬಂದು ತಮ್ಮನ್ನು ಉದ್ದೇಶಿಸಿ ಮಾತನಾಡಬೇಕೆಂದು ಬಯಸುತ್ತಿರುವುದನ್ನು ತಿಳಿದು, ಒಳಗೇ ಸ್ವಲ್ಪ ಭಯ, ಅನುಮಾನಗಳು ಉಂಟಾದವು. ಅವಳ ಚಾಣಾಕ್ಷತೆಯಿಂದ ಜನರನ್ನು ಗೆದ್ದುಕೊಂಡರೆ ತನ್ನ ಪ್ರಯತ್ನಗಳ, ಆಲೋಚನೆಗಳ ಗತಿಯೇನು? ತಮ್ಮ ವಿರುದ್ಧ ಹಲವಾರು ಕುತಂತ್ರಗಳನ್ನು ಮಾಡಿ, ಅವಮಾನಪಡಿಸಿದ್ದಾಳಾದರೂ, ತನ್ನ ಸೂಕ್ಷ್ಮಮತಿಯಿಂದ ಚಾಣಾಕ್ಷತೆಯಿಂದ ಅವಳ ಮಾತು, ನಿರ್ಧಾರಗಳಿಗೆ, ಅವರೆಲ್ಲ ತಲೆಯಾಡಿಸಿದರೆ, ಗತಿಯೇನು? ಅವಳ ಬಗ್ಗೆ ವಿಶ್ವಾಸವಿಟ್ಟಿರುವವರೂ ಈ ಸಮೂಹದಲ್ಲಿ ಇದ್ದಾರೆ ಎಂದು ಒಂದು ರೀತಿಯ ಕುತೂಹಲ, ಭಯಗಳೊಂದಿಗೆ, ಅವಳ ಬರುವಿಕೆಯನ್ನು ನಿರೀಕ್ಷಿಸುತ್ತಿದ್ದ.

ನೂರ್ ಜಹಾನ್ ದುಃಖತಪ್ತ, ವಿಷಾದ ಮುಖವನ್ನು ಕಾಣಿಸದಂತೆ ಮುಖದ ಮೇಲೆ ತೆಳು ಪರದೆಯನ್ನು ಎಳೆದುಕೊಂಡು ಹೋಷಿಯಾರ್ ಜೊತೆ ಹೊರಗೆ ಬಂದು, ಜನರ ಎದುರಿಗೆ ಬಂದು ನಿಂತಳು. ಜನರು ಭಯ ಭಕ್ತಿಗಳಿಂದ, ಕೋರ್ನಿಶ್ ಮಾಡಿದರು. ನೂರ್ ಜಹಾನಳೂ ಪ್ರತಿಯಾಗಿ ಸ್ಪಂದಿಸಿದಳು.

ಅಲ್ಲಿ ನೆರೆದಿದ್ದವರೆಲ್ಲ ಬಿಳಿ ಉಡುಪುಗಳನ್ನು ಧರಿಸಿದ್ದರು. ಶೋಕಾರ್ತರಾಗಿ ತಲೆಬಾಗಿಸಿ ನಿಂತಿದ್ದರು. ನೂರ್ ಸ್ವಲ್ಪ ಮುಂದಕ್ಕೆ ಬಂದು,

"ಪ್ರಜಾ ಬಂಧುಗಳೇ, ಗೌರವನೀಯ ಅಧಿಕಾರಿಗಳೇ, ನಿಮಗೆಲ್ಲರಿಗೂ ಗೊತ್ತಿದೆ ಮೊಘಲ್ ದೊರೆಗಳ ಸಾಲಿನಲ್ಲಿ ಸಿತಾರಾದಂತೆ ಹೊಳೆಯುತ್ತಿದ್ದ, ನ್ಯಾಯ ನಿಷ್ಠ, ಪ್ರಜಾವತ್ಸಲ, ಭುಜಬಲ ಪರಾಕ್ರಮಿ ಆಶ್ರಯದಾತರ ಕಲ್ಪವೃಕ್ಷದಂತೆ ಇದ್ದ ಬಾದಶಾಹರು ನಮ್ಮನ್ನಗಲಿ ಅಲ್ಲಾಹ್‌ನಿಗೆ ಪ್ರಿಯರಾಗಿ ಹೊರಟುಹೋದರು. ಹೊರಡುವ ಸಮಯದಲ್ಲಿ ನಮಗೆ ಕೆಲವು ಆದೇಶಗಳನ್ನು, ನಿರ್ದೇಶಗಳನ್ನು ಮತ್ತು ಅವರ ಬಯಕೆಗಳನ್ನೆಲ್ಲ ತಿಳಿಸಿ, ನಿಮ್ಮೆಲ್ಲರ ಸಹಕಾರ ಪಡೆದು ಸಾಮ್ರಾಜ್ಯವನ್ನು ಮುನ್ನಡೆಸುವಂತೆ ಕೇಳಿಕೊಂಡಿದ್ದಾರೆ. ಇದೋ ಅವರು ನನ್ನ ಕೈಗಿತ್ತ ರಾಜಮುದ್ರೆ ಮತ್ತು ಮರಣಶಾಸನವನ್ನು ನಿಮ್ಮ ಮುಂದೆ ಪ್ರಸ್ತುತಪಡಿಸುತ್ತಿದ್ದೇನೆ. ಇದೆಲ್ಲಕ್ಕೂ ನಿಮ್ಮ ಒಪ್ಪಿಗೆ ಸಹಕಾರಗಳು ಇರುತ್ತವೆಂದು ಭಾವಿಸುತ್ತೇನೆ. ಈಗ ನಾನೊಬ್ಬ ಅಸಹಾಯಕ ಹೆಣ್ಣು. ಗಂಡನ ಆದೇಶಗಳನ್ನು ಕಾರ್ಯಗತಗೊಳಿಸುವುದಷ್ಟೇ ನನ್ನ ಕರ್ತವ್ಯ. ನೀವೆಲ್ಲಾ ಅವರ ಪ್ರೀತಿಯ ಪ್ರಜೆಗಳು" ಎಂದು ಹೇಳುತ್ತಾ ಬಿಕ್ಕಿ ಬಿಕ್ಕಿ ಅಳುವುದಕ್ಕೆ ಆರಂಭಿಸಿದಳು. ಬಿಕ್ಕುಗಳೂ ಕೇಳಿಸುತ್ತಿದ್ದವು. ಉದುರುತ್ತಿದ್ದ ಕಂಬನಿಗಳೂ ಅವಳ ತೀರಾ ಸಮೀಪಕ್ಕೆ ಇದ್ದವರ ಕಣ್ಣಿಗೆ ಕಾಣಿಸುತ್ತಿದ್ದವು. ಅದೇ ದುಃಖದ ಧ್ವನಿಯಲ್ಲಿ ಮುಂದುವರೆಯುತ್ತಾ,

"ನನಗೆ ಗೊತ್ತು, ನೀವೆಲ್ಲ ನಮ್ಮ ಬಾದಶಾಹರಿಗಾಗಿ ಮಾಡಿದ ತ್ಯಾಗ, ಬಲಿದಾನಗಳನ್ನು ಮಾಡಿದ ಸಹಾಯವನ್ನು ಮೊಘಲ್ ಸಾಮ್ರಾಜ್ಯದ ಕೀರ್ತಿ ಪತಾಕೆಯನ್ನು ಆಕಾಶದೆತ್ತರಕ್ಕೆ ಹಾರಿಸಲು ಪ್ರಯತ್ನಿಸಿದ್ದನ್ನು ನಾನು ಕಂಡಿದ್ದೇನೆ; ಗುರುತಿಸಿದ್ದೇನೆ. ಇದೇ ನಿಷ್ಠೆ, ಸಹಾಯ, ಸಹಕಾರ, ತ್ಯಾಗ ಮನೋಭಾವಗಳಿಗೆ ಬದ್ಧರಾಗಿ ಬಾದಶಾಹರು ಸೂಚಿಸಿರುವ ಉತ್ತರಾಧಿಕಾರಿಗೂ ಸಹಕರಿಸುತ್ತೀರೆಂದು ನಂಬಿದ್ದೇನೆ." ಎಂದಾಗ ಜನರಲ್ಲಿ ಸ್ವಲ್ಪ ಗುಜುಗುಜು ಶುರುವಾಯಿತು. ಯಾರನ್ನು ಎಂಬ ಪ್ರಶ್ನೆ ಅವರನ್ನು ಕಾಡಿತು. ಆದರೆ ಅವಳ ಮಾತುಗಳನ್ನು ಕೇಳಿಸಿಕೊಂಡರೇ ಹೊರತು ಯಾರೂ ತುಟಿ ಬಿಚ್ಚಲಿಲ್ಲ. ಆದರೆ ಯಾರ ಹೆಸರನ್ನು ಸೂಚಿಸುತ್ತಾರೆನ್ನುವುದನ್ನು ತಿಳಿಯುವ ಕುತೂಹಲ ಹೆಚ್ಚಿತು. ಮೊಘಲ್ ಸಾಮ್ರಾಜ್ಯದ ಉತ್ತರಾಧಿಕಾರಿಯಾಗಲು ಶಹಜಹಾನ್‌ಗಲ್ಲದೆ ಬೇರೆ ಯಾರಿಗೂ ಯೋಗ್ಯತೆ ಇಲ್ಲದ್ದನ್ನು ಬಲ್ಲವರಾಗಿದ್ದರು. ಆದ್ದರಿಂದ ಬಹುಶಃ ಅದೇ ಹೆಸರನ್ನು ಹೇಳುತ್ತಾಳೆಂದು ಭಾವಿಸಿದರು.

"ಅಂತಿಮ ಕ್ಷಣಗಳಲ್ಲಿ ಶಹರಿಯಾರನನ್ನು ಬಾದಶಾಹನನ್ನಾಗಿ ಘೋಷಿಸಬೇಕೆಂದು ಆಸೆ ವ್ಯಕ್ತಪಡಿಸಿದ್ದಾರೆ. ಅಲ್ಲದೆ ಇದೇ ವಿಷಯವನ್ನು ತಮ್ಮ ಮರಣಶಾಸನದಲ್ಲಿ ಬರೆದಿದ್ದಾರೆ. ರಾಜಮುದ್ರೆಯೂ ಅದರ ಮೇಲಿದೆ. ನೀವೆಲ್ಲರೂ ನಿಮ್ಮ ಬಾದಶಾಹರನ್ನು ನಡೆಸಿಕೊಂಡಂತೆ ಅವನನ್ನು ನಡೆಸಿಕೊಳ್ಳುತ್ತೀರಿ ಎಂದು ನಂಬಿದ್ದೇನೆ" ಎಂದು ರಾಜಮುದ್ರೆಗಳನ್ನು ಮರಣಶಾಸನದ ಪ್ರತಿಯನ್ನೂ ಹೋಷಿಯಾರ್ ಕೈಲಿತ್ತು, ಅಲ್ಲಿ ನಿಂತಿದ್ದ ಮಂದಿಯ ಎದುರು ಪ್ರದರ್ಶಿಸಲು ಆದೇಶಿಸಿದಳು. ಮತ್ತೆ ಗುಜುಗುಜು! ಏನಾಗುತ್ತಿದೆ? ಜಹಾಂಗೀರನಿಗೆ ಬೇರೆ ಮಕ್ಕಳಿಲ್ಲವೇ? ಎಲ್ಲರನ್ನೂ ಬಿಟ್ಟು ಈ ಹೆಣ್ಣಿಗ ನಾಮರ್ದನನ್ನು ಬಾದಶಾಹನಾಗಿ ಒಪ್ಪಿಕೊಳ್ಳುವುದೇ?

ಎಲ್ಲರಿಗಿಂತಲೂ ಹೆಚ್ಚಿನ ಆಘಾತವಾದದ್ದು ಅಸಫ್‌ಖಾನನಿಗೆ. ಅತ್ಯಂತ ಸಮರ್ಥನೂ ಸಾಹಸಿಯೂ ಆದ ಅಳಿಯ ಶಹಜಹಾನ್‌ನನ್ನು ಪಕ್ಕಕ್ಕೆ ಇರಿಸಿ ಅವಳ ಅಳಿಯನನ್ನು ಗದ್ದುಗೆ ಮೇಲೆ ಕೂರಿಸುವುದೇ? ಗದ್ದುಗೆಯ ಪ್ರತಿಷ್ಠೆ ಏನಾಗುವುದು? ಎಂದು ಯೋಚಿಸುತ್ತಿರುವಾಗಲೇ ನೂರ್ ಜಹಾನ್ ಅಣ್ಣನನ್ನು ಒಳಗೆ ಕರೆಸಿಕೊಂಡು, ಶಹರಿಯಾರನನ್ನು ಕೂಡಲೇ ಗದ್ದುಗೆ ಮೇಲೆ ಕೂರಿಸುವ ಸಿದ್ಧತೆಗಳನ್ನು ಮಾಡಿಕೊಡಲು ಕೇಳಿಕೊಂಡಳು. ಅಸಫ್‌ಖಾನ್ ಅವಳನ್ನು ಅಡಿಯಿಂದ ಮುಡಿವರೆಗೂ ದ್ವೇಷಿಸುತ್ತಿದ್ದ. ಅಂಥವಳಿಗೆ ಸಹಾಯ ಮಾಡಬೇಕೇ? ಎನಿಸಿದರೂ, ತನ್ನ ಭಾವನೆಗಳನ್ನು ಹೊರಗೆ ತೋರಿಸಿಕೊಳ್ಳದೆ ಹಾಗೆಯೇ ಆಗಲೆಂದು ಒಪ್ಪಿಕೊಂಡ.

ಆದರೆ ಶಹರಿಯಾರ್ ಲಾಹೋರ್ ತಲುಪಲು ಇನ್ನೂ ಎರಡು ದಿನ ಬೇಕಾಗಬಹುದು. ಅಷ್ಟರಲ್ಲಿ ಏನಾದರೂ ಆದರೆ ಎನ್ನುವ ಭಯವೂ ಕಾಡಿತು. ಅಸಫ್‌ಖಾನನನ್ನು ನಂಬುವ ಹಾಗಿಲ್ಲ. ಹೌದು, ನಂಬುವುದಾದರೂ ಹೇಗೆ? ತಾನೆಷ್ಟು ಬಾರಿ ಅವನನ್ನು ಅವಮಾನಿಸಿದ್ದೀನಿ. ಆರೋಪಗಳನ್ನು ಹೊರಿಸಿದ್ದೀನಿ? ಆದರೂ ತನ್ನ ಈ ಅಸಹಾಯಕ ಪರಿಸ್ಥಿತಿಯಲ್ಲಿ, ತನ್ನವರೆಂದು ಹೇಳಿಕೊಳ್ಳಲು ಅಸಫ್‌ನ ಹೊರತು ಬೇರೆ ಯಾರೂ ಇರಲಿಲ್ಲ. ತಂದೆ, ತಾಯಿ ಯಾವಾಗಲೋ ತೀರಿಕೊಂಡಿದ್ದರು.

ಅಸಫ್‌ಖಾನ್ ಅವಳು ಹೇಳಿದಂತೆ ಮಾಡುವುದಾಗಿ ಮಾತೇನೋ ಕೊಟ್ಟ. ಆದರೆ

ತನ್ನ ಕಾರ್ಯಾಚರಣೆಯನ್ನು ಆರಂಭಿಸಿದ. ಅಳಿಯ ಖುರ್‍ರಂ ಯಾ ಶಹಜಹಾನ್ ದೂರದಕ್ಷಿಣದಲ್ಲಿ ಇದ್ದಾನೆ. ಇಲ್ಲಿಗೆ ಬರಲು ಕಡೇ ಪಕ್ಷ ಮೂರು ತಿಂಗಳಾಗಬಹುದು. ಅಷ್ಟು ಕಾಲ ಸಿಂಹಾಸನವನ್ನು ಖಾಲಿಯಾಗಿರಿಸಬೇಕೆ? ಸಾಧ್ಯವಿಲ್ಲ. ಶಹರಿಯಾರ್ ಸಮೀಪಿಸುವಷ್ಟರಲ್ಲಿ, ಯಾರನ್ನಾದರೂ ಮಧ್ಯಂತರ ಉತ್ತರಾಧಿಕಾರಿಯನ್ನು ಕೂರಿಸಬೇಕೆಂದು ಯೋಚಿಸಿದ. ನೂರ್ ಬಿಡಾರದೊಳಗಿನ ಹಾಸಿಗೆಯಲ್ಲಿ ಹೊರಳಾಡಿದಳು. ಇಡೀ ರಾತ್ರಿ ನಿದ್ರೆಯಿಲ್ಲ. ಅಸಫ್ ಶಹರಿಯಾರನ ಬಗ್ಗೆ ಸುದ್ದಿ ತರಬಹುದೆಂದು ನಿರೀಕ್ಷಿಸುತ್ತಿದ್ದವಳಿಗೆ ಆಘಾತವಾಯಿತು. ಬಿಡಾರವನ್ನು ಅಸಫ್‌ನ ಸೈನಿಕರು ಸುತ್ತುವರೆದಿದ್ದರು. ಹೊರಗೆ ಬಂದು ನೋಡಿದಳು.

ಹೆದರಿಕೆಯ ದನಿಯಲ್ಲಿ ಸುತ್ತುವರೆದಿದ್ದ ಭಟರನ್ನು "ಇದೇನು ಮಾಡುತ್ತಿದ್ದೀರಿ ಇಲ್ಲಿ" ಎಂದಳು.

"ಬಾದಶಾಹ್ ಬೇಗಂ ಹುಜೂರ್ ಅಸಫ್‌ಖಾನರ ಆಜ್ಞೆಯಾಗಿದೆ. ನೀವು ಹೊರಗೆ ಎಲ್ಲೂ ಹೋಗುವ ಹಾಗಿಲ್ಲ."

ಅಸಫ್‌ಖಾನನ ದ್ರೋಹ ಬಟಾಬಯಲಾಯಿತು. ಹೇಗಾದರೂ ಮಾಡಿ ಶಹರಿಯಾರನನ್ನು ಆದಷ್ಟು ಬೇಗ ಕರೆಸಿಕೊಳ್ಳಬೇಕು ಎಂದುಕೊಂಡಳು. ಅಲ್ಲಿವರೆಗೆ ಇಲ್ಲಿನ ಪರಿಸ್ಥಿತಿ ಹೇಗೆ ಆಗುವುದೋ ಊಹಿಸಲಾಗಲಿಲ್ಲ.

ಹೇಗೋ ಏನೋ ತಂದೆಯ ಸಾವಿನ ಸುದ್ದಿ ಶಹರಿಯಾರ್‌ನನ್ನು ತಲುಪಿತು. ಕೂಡಲೇ ಶಹರಿಯಾರನ ಅಧಿಕಾರದ ಪಿತ್ತ ನೆತ್ತಿಗೇರಿತು. ತಾನೇ ಮೊಘಲ್ ಬಾದಶಾಹ್‌ನೆಂದು ಘೋಷಿಸಿಕೊಂಡು ಸಂಭ್ರಮಿಸಿದ. ಒಂದಷ್ಟು ಸೈನಿಕರನ್ನು ಕೂಡಿಹಾಕಿಕೊಂಡು ಮೊಘಲ್ ಖಜಾನೆಯನ್ನು ಲೂಟಿ ಮಾಡಿಸಿದ. ಆ ಹಣದಿಂದ ಸಾವಿರಾರು ಮಂದಿ ಸೈನಿಕರನ್ನು ಲಂಚ ಕೊಟ್ಟು ಕೊಂಡುಕೊಂಡ.

ನೂರ್ ಜಹಾನ್ ಮತ್ತು ಲಾಡ್ಲಿ ಲಾಹೋರ್ ಕೋಟೆಗೆ ಬಂದ ಮೇಲೆ ಅಳಿಯನನ್ನು ಉತ್ತರಾಧಿಕಾರಿ ಬಾದಶಾಹ್‌ನೆಂದು ಘೋಷಿಸಿ ಸಂತೋಷ ಕೂಟಗಳನ್ನು ಏರ್ಪಡಿಸಿ, ವರಿಷ್ಠ ಶ್ರೀಮಂತರನ್ನು ಅಧಿಕಾರಿಗಳನ್ನು ಆಪ್ತರನ್ನು ಸನ್ಮಾನಿಸಿ, ಅಮೂಲ್ಯವಾದ ಉಡುಗೊರೆಗಳನ್ನು ಕೊಟ್ಟು ಅವರ ಸಹಾಯವನ್ನೂ ಯಾಚಿಸಿದಳು. ನೂರ್ ಜಹಾನ್ ಬಗ್ಗೆ ಬಂದವರಲ್ಲಿ ಗೌರವ, ಮೆಚ್ಚುಗೆಗಳಿದ್ದರೂ, ಶಹರಿಯಾರನನ್ನು ತಮ್ಮ ಬಾದಶಾಹ್‌ನನ್ನಾಗಿ ಒಪ್ಪಿಕೊಳ್ಳುವುದಕ್ಕೆ ಸಾಧ್ಯವಾಗಲಿಲ್ಲ. ಈಗಾಗಲೇ ತಾನು ಸಾಮ್ರಾಜ್ಯಾಧಿಪತಿಯಾಗಿಬಿಟ್ಟೆನೆಂಬ ಭ್ರಮೆಯಲ್ಲಿ ಮನಬಂದಂತೆ ವರ್ತಿಸುತ್ತಿದ್ದ. ಮೋಸದ ಹೊಳೆಯಲ್ಲಿ ಮೀಯುತ್ತಾ, ಮೀಯಿಸುತ್ತಾ, ಮದೋನ್ಮತ್ತನಾಗಿ ವರ್ತಿಸಿದ. ಲೂಟಿ ಹೊಡೆದ. ಖಜಾನೆಯಿಂದ ಹಣವನ್ನು ನೀರಾಗಿ ಹರಿಸಿದ. ಹೆಂಡವಿದ್ದ ಮೇಲೆ ಹೆಣ್ಣೂ ಬೇಕೆಂದು ನಾಚವಾಲಿಗಳನ್ನು ಕರೆಸಿದ. ಲಾಡ್ಲಿಗೆ ತನ್ನ ಗಂಡನ ವರ್ತನೆ ನೋಡಿದಾಗ ಹೇಸಿಗೆ ಎನಿಸುತ್ತಿತ್ತು. ಇಂಥವನು ರಾಜನಾದರೆ ಇಡೀ ಮೊಘಲ್ ರಾಜ ಪರಂಪರೆಗೇ ಒಂದು ಕಳಂಕವಾಗುತ್ತದೆ. ಇವನನ್ನು ಪ್ರೀತಿಸಿದ್ದು ನಿಜವಾದರೂ ಮದುವೆಯಾದದ್ದು ಮಹಾಪರಾಧವೆನಿಸಿತು. ಮೊಘಲ್ ರಾಜಕುಮಾರಿಯರಿಗೆ ಹೇಗಿದ್ದರೂ ಮದುವೆಯಾಗುವ ಹಕ್ಕಿಲ್ಲವೆಂಬ ಶಾಸನದಂತೆ ಸುಮ್ಮನಿದ್ದಿದ್ದರೆ ಜಹಾಂನಾರಾ

ರೀತಿಯಲ್ಲಿ ಗೌರವದಿಂದ ಪ್ರತಿಷ್ಠೆಯಿಂದ ಬಾಳಬಹುದಾಗಿತ್ತು. ರಾಜ್ಯಾಡಳಿತದ ಚಟುವಟಿಕೆಗಳಲ್ಲೂ ಭಾಗವಹಿಸಬಹುದಾಗಿತ್ತು ಎಂದು ಯೋಚಿಸಿ ನೊಂದುಕೊಂಡಳು. ಪಶ್ಚಾತ್ತಾಪ ಪಟ್ಟಳು. ನೂರ್ ಜಹಾನಳಿಗೂ ಶಹರಿಯಾರನ ವರ್ತನೆ ಭಯ ಹುಟ್ಟಿಸಿತು. ಆದರೆ ಅವಳೊಳಗಿನ ಮಹತ್ವಾಕಾಂಕ್ಷೆಯನ್ನು ಪೂರೈಸಿಕೊಳ್ಳಲು ಅವನೊಬ್ಬನಿಂದಲೇ ಸಾಧ್ಯವೆಂಬ ಅರಿವಿನಿಂದ ಅವನ ಎಲ್ಲಾ ವಿಕಾರಗಳನ್ನೂ ಚೇಷ್ಟೆಗಳನ್ನು ಸಹಿಸಿಕೊಂಡಳು. ಒಮ್ಮೆ ಅವನು ಗದ್ದುಗೆ ಏರಿಬಿಟ್ಟರೆ ಅವನನ್ನು ತನ್ನ ಹದ್ದುಬಸ್ತಿನಲ್ಲಿ ಇರಿಸಿಕೊಳ್ಳುವುದು ಅಂತಹ ದೊಡ್ಡ ಕೆಲಸವೇನೂ ಅಲ್ಲವೆನಿಸಿದ್ದರಿಂದ ಮುಂದಿನ ರಾಜಕೀಯ ತಿರುವುಗಳು ಹೇಗಾಗುವುದೋ ಎಂದು ನಿರೀಕ್ಷಿಸುತ್ತಿದ್ದಳು.

ಲಾಡ್ಲಿಗಂತೂ ಗಂಡ ಅಧಿಕಾರಕ್ಕೆ ಬರುವುದು ಸುತರಾಂ ಇಷ್ಟವಿಲ್ಲ. ತಾಯಿಗೂ ಬುದ್ಧಿ ಹೇಳಿದಳು.

"ಅಮ್ಮಾ, ನಿನಗ್ಯಾಕೆ ಕೆಲಸಕ್ಕೆ ಬಾರದ ಶಹರಿಯಾರನನ್ನೇ ಗಾದಿಯೇರಿಸಬೇಕೆಂದು ಹಠ. ಭಾಯಿಜಾನ್ ಖುರ್ರಂನೇ ಗಾದಿಯೇರಲು ಬಿಡು. ಅವನು ತುಂಬಾ ಸಮರ್ಥ, ಸಾಹಸಿ ತುಂಬಾ ಚೆನ್ನಾಗಿ ರಾಜ್ಯಭಾರ ಮಾಡಿ ಮೊಘಲ್ ಗೌರವ ಪ್ರತಿಷ್ಠೆಗಳನ್ನು ಮತ್ತಷ್ಟು ಎತ್ತರಕ್ಕೇರಿಸುತ್ತಾನೆ. ಅವನ ಆಶ್ರಯದಲ್ಲಿ ಸುಖವಾಗಿರಬಹುದು. ನಮಗೆ ರಾಜ್ಯವೂ ಬೇಡ ರಾಜಸತ್ತೆಯೂ ಬೇಡ. ಶಾಂತಿ ನೆಮ್ಮದಿಗಳಿಂದ ಬದುಕುವುದು ಸಾಧ್ಯವಾದರೆ ಅದಕ್ಕಿಂತ ಹೆಚ್ಚಿನದೇನು ತಾನೇ ಬೇಕು."

"ಲಾಡ್ಲಿ, ಲಾಡ್ಲಿ, ನೀನು ನನ್ನ ಮಗಳಾಗಿಯೂ ಹೇಡಿಯಂತೆ ಮಾತಾಡುತ್ತಿರುವಿ. ಒಂದಿಷ್ಟಾದರೂ ಆಕಾಂಕ್ಷೆಗಳು ಬೇಡವೇ? ನಿನ್ನ ಗಂಡ, ಅಧಿಕಾರದಲ್ಲಿರದಿದ್ದರೆ ಅವನನ್ನು ಶಹಜಹಾನ್ ಖಂಡಿತ ಮುಗಿಸಿಬಿಡುತ್ತಾನೆ. ನನ್ನಂತೆ ನೀನೂ ಕೂಡಾ ಅಸಹಾಯಕ ಬೇವಾ ಎನಿಸಿಕೊಳ್ಳಬೇಕೇ?"

"ಅಮ್ಮೀ ನನಗೆ ಅದ್ಯಾವುದರ ಮೋಹವಿಲ್ಲ. ಪ್ರಶಾಂತ ಬದುಕನ್ನು ಬದುಕುವುದು ನನಗೆ ಮುಖ್ಯ. ಇಲ್ಲಿರುವುದು ಅಪಾಯ ಎನಿಸಿದರೆ, ಬೇರೆಲ್ಲಾದರೂ ಬದುಕನ್ನು ಅರಸೋಣ. ಯಾಕೆ, ದಾದಾಜಾನ್ ಬದುಕನ್ನು ಅರಸಿಕೊಂಡೇ ಬಂದದ್ದಲ್ಲವೇ? ಬಂದು ಎಷ್ಟು ದೊಡ್ಡವರಾದರು, ನಿಮ್ಮ ಕುಟುಂಬವೆಲ್ಲಾ ರಾಜಬಂಧುಗಳು, ಅಧಿಕಾರಿಗಳು ಆಗಲಿಲ್ಲವೇ? ಎಂತೆಂಥ ದೊಡ್ಡ ಪದವಿಗಳನ್ನು ಹಿಡಿಯಲಿಲ್ಲ? ನೀನೇ ಒಂದು ದೊಡ್ಡ ಉದಾಹರಣೆ. ಮರಳುಗಾಡಿನಲ್ಲಿ ಎಲ್ಲೋ ಅನಾಥ ಶಿಶುವಾಗಿ ಬಿದ್ದು ಸಾಯಬೇಕಿದ್ದ ನೀನು ಇಷ್ಟು ವಿಶಾಲ ಸಾಮ್ರಾಜ್ಯದ ಸಾಮ್ರಾಜ್ಞಿಯಾಗಿ ಜಗತ್ತೇ ಬೆರಗಾಗುವ ರೀತಿಯಲ್ಲಿ ಬೆಳೆಯಲಿಲ್ಲವೇ? ಹಾಗೆಯೇ ನಮ್ಮ ನಮ್ಮ ನಸೀಬಿನಂತೆ, ನಾವು ಮಾಡಿದ ಕೆಲಸಗಳನ್ನು ಅವಲಂಬಿಸಿ, ನಮಗೆ ಕಷ್ಟ ಸುಖಗಳು ದೊರೆಯುತ್ತವೆ. ಅದಕ್ಕಾಗಿ ನಿನ್ನ ಪ್ರಯತ್ನ ನಿಲ್ಲಿಸು" ಎಂದು ಒಬ್ಬ ಪ್ರವಾದಿಯ ಹಾಗೆ ದೊಡ್ಡ ಭಾಷಣ ಮಾಡಿದ್ದನ್ನು ಕೇಳಿ ನೂರ್ ಜಹಾನ್ ಮೂಕವಿಸ್ಮಿತಳಾದಳು.

ಆದರೆ ನೂರ್ ಜಹಾನ್‌ಗೆ ಮಗಳ ತತ್ವೋಪದೇಶ ಕೇಳುವ ವ್ಯವಧಾನವಿರಲಿಲ್ಲ.

ಈಗಷ್ಟೇ ದಾವರ್ ಭಕ್ಷ್ ತನ್ನ ಸೈನ್ಯವನ್ನು ತೆಗೆದುಕೊಂಡು ಲಾಹೋರ್ ಕೋಟೆಗೆ ಅತಿ ಸಮೀಪದಲ್ಲಿದ್ದ. ಶಹರಿಯಾರ್‌ನನ್ನು ದಾವರ್‌ನನ್ನು ಎದುರಿಸಲು ಸಿದ್ಧನಾಗುವಂತೆ

ಹೇಳಿ ಕಳಿಸಿದಳು. ಶಹರಿಯಾರ್ ಯುದ್ಧವೆಂದರೆ ತಲೆನೋವಾದರೂ ಈಗ ತಾನು ಗಾದಿ ಹಿಡಿಯಬೇಕಾದರೆ ಶತ್ರುಗಳನ್ನು ಸ್ಪರ್ಧಿಗಳನ್ನು ನಿವಾರಿಸಿಕೊಳ್ಳುವುದು ಅನಿವಾರ್ಯವಾಯಿತು. ಅವನ ಕಡೆ ಸಾಕಷ್ಟು ಸೈನ್ಯ ಮತ್ತು ಶಹರಿಯಾರನ ಆಮಿಷಗಳಿಗಾಗಿ ಬಂದು ಸೇರಿದ್ದರು. ಅವರಿಗೆ ಯುದ್ಧ ಕೌಶಲ್ಯವಾಗಲೀ, ಸಾಕಷ್ಟು ಸಾಹಸವಾಗಲೀ ಇರಲಿಲ್ಲ. ದಾವರ್ ಭಕ್ಷ್‌ನ ಶಾಹಿ ಸೈನ್ಯದ ಮುಂದೆ ಶಹರಿಯಾರನ ಸೈನ್ಯ ನಿಲ್ಲಲಾಗಲಿಲ್ಲ. ಸಾವಿರಾರು ಮಂದಿ ಸೈನಿಕರು ಸಾವನ್ನಪ್ಪಿದರು. ಉಳಿದವರು ಪ್ರಾಣ ಉಳಿಸಿಕೊಳ್ಳಲು ಓಡಿಹೋದರು. ಇಷ್ಟೆಲ್ಲ ಆಗುತ್ತಿದ್ದರೂ ಶಹರಿಯಾರ್ ಆ ಸೈನ್ಯ ಯಾವ ಲೆಕ್ಕ? ಎಂದು ಬೀಗಿದ.

ಅದೇ ಸಮಯದಲ್ಲಿ ಅಸಫ್‌ಖಾನನೂ ಸೈನ್ಯದೊಂದಿಗೆ ಬಂದ. ಅವನ ಜೊತೆಗೂ ಶಹರಿಯಾರನ ಮುಖಾಮುಖಿಯಾಯಿತು. ಆದರೆ ಶಹರಿಯಾರನ ಸೈನಿಕರು ಪೂರ್ತಿಯಾಗಿ ಸೋತು ಶರಣಾಗತರಾದರು. ಲಾಹೋರ್ ಕೋಟೆ ತಲುಪುವುದಕ್ಕೆ ಈಗ ಯಾರಿಂದಲೂ ಅಡ್ಡಿಯಾಗಲಿಲ್ಲ. ಈ ಸೋಲನ್ನು ಎದುರಿಸಲಾರದೆ ನಾಚಿಕೆಯಿಂದ ಶಹರಿಯಾರ್ ಜನಾನಾದಲ್ಲಿ ಅಡಗಿ ಕುಳಿತ. ನೂರ್ ಜಹಾನಳಿಂದ ಯಾವುದೇ ಕುತಂತ್ರಗಳು ಆಗಬಾರದೆಂದು ಅವಳನ್ನೂ ಅವಳ ನಿವಾಸದಲ್ಲಿ ಗೃಹಬಂಧನದಲ್ಲಿ ಇರಿಸಲಾಯಿತು. ಗಂಡನ ಶವಯಾತ್ರೆಯಲ್ಲಿ ಭಾಗವಹಿಸಲು ಅವಕಾಶ ಕೊಡದೆಯೇ ಜಹಾಂಗೀರನ ಅಂತಿಮ ಸಂಸ್ಕಾರದ ಏರ್ಪಾಡನ್ನು ಮಾಡಲಾಯಿತು. ಇಲ್ಲಿನ ಘಟನೆಗಳು ಸಂಭವಿಸುತ್ತಿರುವಷ್ಟರಲ್ಲಿಯೇ ಖುರ್ರಂ ಕೂಡಾ ಬಂದು ಸೇರಿಕೊಂಡಿದ್ದ.

ಅಸಫ್‌ಖಾನ್ ನೇರವಾಗಿ ಜನಾನಾ ಪ್ರವೇಶಿಸಿ, ಶಹರಿಯಾರನನ್ನು ವಶಕ್ಕೆ ಒಪ್ಪಿಸಲು ಅಬ್ಬರಿಸಿ ಹೇಳಿದ. ಅವನ ಸೈನಿಕರು ಜನಾನಾದ ಮೂಲೆಮೂಲೆಯನ್ನು ಶೋಧಿಸಿ, ಶಹರಿಯಾರನನ್ನು ಹೊರಗೆಳೆದು ತಂದು ಅಸಫ್‌ನ ಮುಂದೆ ಪ್ರಸ್ತುತಪಡಿಸಿದರು. ಶಹರಿಯಾರ್ ಚೀರುತ್ತಾ, ಕೂಗುತ್ತಾ ಪ್ರಾಣ ಉಳಿಸಿಕೊಡೆಂದು ಅಂಗಲಾಚಿ ಬೇಡುತ್ತಿದ್ದ. ಆದರೆ ಕರುಣೆ ದಯೆಯೆಂಬುದಕ್ಕೆ ಅಧಿಕಾರದ ಮೇಲಾಟದಲ್ಲಿ ಜಾಗವೇ ಇರಲಿಲ್ಲ.

ಜಹಾಂಗೀರನ ಶವಯಾತ್ರೆಯಲ್ಲಿ ಮತ್ತು ಅಂತಿಮ ಸಂಸ್ಕಾರಗಳಲ್ಲಿ ಭಾಗವಹಿಸಲು ಅಸಫ್‌ಖಾನ್ ತನ್ನ ತಂಗಿಗೆ ಅವಕಾಶ ಕೊಡಲಿಲ್ಲ. ರಾವಿ ನದಿಯ ತೀರದಲ್ಲಿನ 'ದಿಲ್‌ಖುಷಾ ಗಾರ್ಡನ್'ನಲ್ಲಿ ಅವನ ಸಮಾಧಿ ಮಾಡಲಾಯಿತು.

ಅಸಫ್‌ಖಾನ್ ತನ್ನ ತಂಗಿಯನ್ನು ಗೃಹ ಬಂಧನದಲ್ಲಿ ಇರಿಸಿದ. ಅಲ್ಲಿದ್ದುಕೊಂಡೇ ಪರಿಸ್ಥಿತಿಯಿಂದ ಬಿಡುಗಡೆ ಹೊಂದಿ, ಮರಳಿ ಅಧಿಕಾರ ಪಡೆಯಲು ಹಲವು ಸಂಚುಗಳ ಬಗ್ಗೆ ಆಲೋಚಿಸಿದಳು. ಆದರೆ ಒಂದು ನರಪಿಳ್ಳೆಯ ಪ್ರವೇಶಕ್ಕೂ ಅವಕಾಶವಿಲ್ಲದಂತೆ ತನ್ನ ಕಡೆಯ ರಕ್ಷಕ ಭಟರನ್ನು ನೇಮಿಸಿ ತಂಗಿಯ ಚಲನವಲನಗಳ ಮೇಲೆ ಕಣ್ಣಿಟ್ಟಿರುವಂತೆ ಸೂಚಿಸಿದ್ದ. ಆದ್ದರಿಂದ ಅವಳ ಪ್ರಯತ್ನಗಳು ಯಾವುವೂ ಫಲಿಸದೆ ಒಳಗೊಳಗೇ ಕುದಿಯುತ್ತ ಶಾಪ ಹಾಕುತ್ತಿದ್ದಳು. ತನ್ನ ಭಯಂಕರ ಅಸಹಾಯಕತೆ ಭವಿಷ್ಯದ ಕರಾಳ ಛಾಯೆ ಅವಳನ್ನು ಬಹುವಾಗಿ ಅಧೀರಗೊಳಿಸಿತ್ತು. ಕಡೆಗೆ ತನ್ನ ಮಗಳಿಗೂ ಪ್ರವೇಶವನ್ನು ನಿಷೇಧಿಸಲಾಗಿತ್ತು.

ಅಸಫ್‌ಖಾನ್ ಕ್ಷಣಕ್ಷಣಕ್ಕೂ ಅಳಿಯ ಶಹಜಹಾನ್‌ನನ್ನು ಎದುರು ನೋಡುತ್ತಿದ್ದ.

ಒಮ್ಮೆ ಅವನು ಬಂದುಬಿಟ್ಟರೆ ಎಲ್ಲ ಸಮಸ್ಯೆಗಳಿಗೂ ಪರಿಹಾರ ಸಿಕ್ಕಿ, ಮೊಘಲ್ ಸಾಮ್ರಾಜ್ಯದ ಸ್ಥಿತಿ ಸಮತೋಲನ ಸ್ಥಿತಿಗೆ ಬರುತ್ತದೆಂದು ಭಾವಿಸಿದ್ದ. ಅವನಿಂದ ಬರುತ್ತಿದ್ದ ಸಂದೇಶಗಳಿಂದ ಖುರ್ರಂ ತಾನು ಗಾದಿಯೇರಲು ಅತ್ಯಂತ ಸೂಕ್ತವಾದ ಸಮಯ ಬಂದಿದೆ ಎನ್ನುವುದು ಸ್ಪಷ್ಟವಾಯಿತು. ಇಮ್ಮಡಿ ಉತ್ಸಾಹದಿಂದ ದಕ್ಷಿಣದಿಂದ ನಿಲುಗಡೆಯಿಲ್ಲದ ಪ್ರಯಾಣ ಮಾಡಿ ಆಗ್ರಾ ತಲುಪಿದ. ಅವನ ಆಗಮನದ ಸುದ್ದಿಯೂ ಆಗ್ರಾದ ಮೂಲೆಮೂಲೆ ತಲುಪಿತು. ಅಸಫ್ ಅಳಿಯನನ್ನು ಬಹಳ ಸಂಭ್ರಮದಿಂದ ಬರಮಾಡಿಕೊಂಡ. ಇಲ್ಲಿ ಅವನ ಸಿಂಹಾಸನಾರೋಹಣದ ಅದ್ದೂರಿ ವ್ಯವಸ್ಥೆಯನ್ನು ಮಾಡಿದ್ದ. ಹಾಗೆಯೇ ಅದೇ ಸಮಯದಲ್ಲಿ ಪರಂಪರಾಗತ ಹಕ್ಕುದಾರರಾಗಿದ್ದ ಶತ್ರುಶೇಷವನ್ನೂ ಉಳಿಸಬಾರದೆಂದು ದಾವರ್‌ಭಕ್ಷ್, ಶಹರಿಯಾರ್ ಮತ್ತು ಖುಸ್ರೋನ ಇಬ್ಬರು ಮಕ್ಕಳನ್ನೂ ಸೇರಿ ಅವರೆಲ್ಲರಿಗೂ ಮರಣದಂಡನೆ ವಿಧಿಸಿದ.

## ಜಗತ್ತಿನ ಬೆಳಕು ಕತ್ತಲ ಕೂಪದಲ್ಲಿ

ತಂಗಿ ಮೆಹರುನ್ನೀಸಾ ನಿಟ್ಟುಸಿರು ಹತಾಶೆಗಳಲ್ಲಿ ಕಣ್ಣೀರಿಡುತ್ತಾ ತನ್ನ ವರ್ತಮಾನ, ಭವಿಷ್ಯಗಳ ಬಗ್ಗೆ ಚಿಂತಿಸುತ್ತಿದ್ದಳು. ಖುರ್ರಂ ಅವಳನ್ನು ಕಾಣಲು ಹೋಗಲಿಲ್ಲ. ಕರೆಸಿಕೊಳ್ಳಲೂ ಇಲ್ಲ. ಅವಳ ಸಂಚುಗಳು, ಮಹತ್ವಾಕಾಂಕ್ಷೆಗಳು, ರಾಜ್ಯರಾಜಕಾರಣದಲ್ಲಿ ವಹಿಸಿದ ಪಾತ್ರ, ತಂದೆಯನ್ನು ಹಿಡಿತದಲ್ಲಿರಿಸಿಕೊಂಡ ಚಾಣಾಕ್ಷತನಗಳು – ಎಲ್ಲವನ್ನೂ ಬಲ್ಲವನಾಗಿದ್ದ. ವಾಸ್ತವವಾಗಿ ಜೀವಂತವಾಗಿರುವುದೂ ಅಪಾಯವೇ ಎನಿಸಿದರೂ ಅವಳನ್ನು ಸಾಯಿಸುವ ಕ್ರೌರ್ಯವನ್ನು ತೋರಲಿಲ್ಲ. ಆದರೆ ಅವಳ ಆಸ್ತಿ ಪಾಸ್ತಿ ಜಾಗೀರುಗಳು ಹಡಗುಗಳು ಎಲ್ಲವನ್ನೂ ಮುಟ್ಟುಗೋಲು ಹಾಕಿಸಿಕೊಂಡ.

ನೂರ್ ಜಹಾನ್ ಬಿರುದು ಪಕ್ಕಕ್ಕೆ ಸರಿದು ಈಗ ಕೇವಲ ಮೆಹರುನ್ನೀಸಾ ಮಾತ್ರವೇ ಆಗಿದ್ದಳು. ಎಲ್ಲರಂತೆ ಈಗ ಅವಳಿಗೂ ರಾಜಾನುಗ್ರಹ ಬೇಕಿತ್ತು. ಬದುಕಿರುವುದಕ್ಕೆ ಹಣದ ಅಗತ್ಯವಿತ್ತು. ಖಾಸಗಿ ಆಸ್ತಿಯಾಗಿ ಒಂದಷ್ಟು ಒಡವೆ ವಸ್ತ್ರ, ಒಂದಷ್ಟು ನಾಣ್ಯಗಳು ಮಾತ್ರವೇ ಉಳಿದಿತ್ತು. ಸ್ವಾಭಿಮಾನಿಯಾದರೂ ಬದುಕಲೇಬೇಕು. ತಾನೊಬ್ಬಳೇ ಆಗಿದ್ದ ಪಕ್ಷದಲ್ಲಿ ಯಾರ ಹಂಗಿಗೂ ಆಸೆ ಪಡದೆ ಯಾರ ಮುಂದೆಯೂ ಕೈ ಚಾಚದೆ ಆತ್ಮಹತ್ಯೆ ಬೇಕಾದರೆ ಮಾಡಿಕೊಳ್ಳುತ್ತಿದ್ದಳು. ಆದರೆ ಈಗ ಅವಳಿಗೆ ಪರಿವಾರವಿದೆ. ಮಗಳು ಲಾಡ್ಲಿ, ಮೊಮ್ಮಗಳು ಅರ್ಜಾನಿ, ತನ್ನ ನಂಬಿಕಸ್ತ ಸೇವಕ ಹೋಷಿಯಾರ್ – ಇವರೆಲ್ಲರ ಹೊಟ್ಟೆ ತುಂಬಿಸಬೇಕಿತ್ತು.

ಶಹಜಹಾನ್ ನಿರ್ದಾಕ್ಷಿಣ್ಯವಾಗಿ ಅವಳನ್ನು ಆಗ್ರಾದಿಂದ ಬಹಿಷ್ಕಾರ ಹಾಕಿ, ಲಾಹೋರಿಗೆ ಕಳಿಸಿದ. ಗಂಡನ ಸಮಾಧಿಗೆ ಹೊಂದಿಕೊಂಡಂತೆ ಒಂದು ವಿಶಾಲವಾದ ಮನೆಯ ವ್ಯವಸ್ಥೆಯಿತ್ತು. ಆದರೆ ಊಟಕ್ಕೆ ಶಹಜಹಾನನನ್ನು ಪ್ರಾರ್ಥಿಸಿಕೊಳ್ಳಬೇಕು. ತನ್ನ ಅಣ್ಣನ ಮಗಳು ಅರ್ಜುಮಂದ್ ಮನಸ್ಸು ಮಾಡಿದಲ್ಲಿ ತನಗೆ ಜೀವನೋಪಾಯಕ್ಕೆ ದಾರಿ ಮಾಡಿಕೊಡಬೇಕೆಂದು ಪ್ರಾರ್ಥಿಸಿ ಶಹಜಹಾನನಿಗೆ ಪತ್ರ ಬರೆದಿದ್ದಳು.

ಅರ್ಜುಮಂದ್ ಆ ಪತ್ರ ಹಿಡಿದು, ಶಹಜಹಾನನನ್ನು ಭೇಟಿಯಾದಳು.

ದಿವಾನೆಖಾಸ್‌ನಲ್ಲಿ ಒಂದಷ್ಟು ಆಪ್ತರ ಜೊತೆ ಮಾತಾಡುತ್ತಿದ್ದ ಶಹಜಹಾನ್, ಅರ್ಜುಮಂದ್ ಕಡೆಯಿಂದ ಸಂದೇಶವೊಂದನ್ನು ತಂದುಕೊಟ್ಟ ಅವಳ ಸೇವಕನನ್ನು ಗಮನಿಸಿದ ಕೂಡಲೇ ಅವನು ಕೋರ್ನಿಶ್ ಮಾಡಿ,

"ಜಹಾಂಪನಾಹ್, ಬಾದಶಾಹ್ ಬೇಗಂ ಹುಜೂರರು ಕೂಡಲೇ ಅವರನ್ನು ಬಂದು ಕಾಣಬೇಕೆಂದು ಪ್ರಾರ್ಥಿಸಿದ್ದಾರೆ. ಜನಾನಾ ಮಹಲಿನಲ್ಲಿ ತಮಗಾಗಿ ಕಾಯುತ್ತಿದ್ದಾರೆ" ಎಂದು ಹೇಳಿದ್ದೇ ಶಹಜಹಾನ್ ಕೂಡಲೇ ಬರುತ್ತೇನೆಂದು ಹೇಳು ಎಂದು ಆದೇಶಿಸಿ ಹಿಂದಕ್ಕೆ ಕಳಿಸಿದ.

ಶಹಜಹಾನ್ ಅರ್ಜುಮಂದಳನ್ನು ಅಪಾರವಾಗಿ ಪ್ರೀತಿಸುತ್ತಿದ್ದ. ಅವನ ಪ್ರೀತಿಯ ಫಲವಾಗಿ ಸಮೃದ್ಧ ಸಂತಾನವನ್ನು ತನ್ನ ನೆನಪಾಗಿ ನೀಡುತ್ತಿದ್ದಳು. ಅತ್ಯಂತ ಅನ್ಯೋನ್ಯ ದಾಂಪತ್ಯ. ನೂರ್ ಜಹಾನಳಷ್ಟೇ ಸುಂದರವಾಗಿದ್ದಳು. ಜಾಣೆಯಾಗಿದ್ದಳು. ಆದರೆ ಗಂಡನ ಪ್ರೀತಿ ಏಳ್ಗೆಗಳಿಗೆ ಹೊರತಾಗಿ ತನ್ನ ಸ್ವಂತಕ್ಕೆ ಏನನ್ನೂ ಬಯಸುತ್ತಿರಲಿಲ್ಲ. ಯಾವ ಮಹತ್ವಾಕಾಂಕ್ಷೆಯನ್ನು ಇರಿಸಿಕೊಳ್ಳದೆ ಸೌಹಾರ್ದತೆಯೊಂದಿಗೆ ಜನಾನಾವನ್ನು ಆಳುತ್ತಿದ್ದಳು.

ಜನಾನಾದ ಮಹಲಿನಲ್ಲಿ ತನ್ನ ಕೋಣೆಯಲ್ಲಿ ಹಂಸತೂಲಿಕಾತಲ್ಪದಲ್ಲಿ ಆಸೀನಳಾಗಿ, ಯಾವುದೋ ಆಲೋಚನೆಯಲ್ಲಿ ಮಗ್ನಳಾಗಿದ್ದವಳು ಶಹಜಹಾನ್ ಒಳಗೆ ಬಂದಿದ್ದನ್ನು ಗಮನಿಸಲಿಲ್ಲ.

"ಬೇಗಂ ಹುಜೂರ್‌ಗೆ ಸಾವಿರ ಸಲಾಮುಗಳು" ಎಂದು ನಗುತ್ತಾ ಛೇಡಿಸಿದ.

"ಓಹ್ ಜಹಾಂಪನಾಹ್, ಬಂದು ಬಿಟ್ಟಿರಾ ನೀವು ಬಂದದ್ದನ್ನು ಗಮನಿಸಲಿಲ್ಲ."

"ಬೇಗಂರು ಯಾವ ಚಿಂತೆಯಲ್ಲಿ ಇಷ್ಟು ಮಗ್ನರಾಗಿದ್ದೀರಿ? ಈಗ ನೀವು ಚಿಂತೆ ಮಾಡುವ ಅಗತ್ಯವಿಲ್ಲ. ನಿಮ್ಮನ್ನು ಇಷ್ಟು ವರ್ಷಗಳ ಕಾಲ ಅಲೆದಾಡಿಸಿದೆ. ಒಂದೆಡೆ ನೆಲೆನಿಲ್ಲಲು ಆಗದಂತೆ ಅನ್ನಾಹಾರಗಳನ್ನೂ ಒದಗಿಸದೆ ಯುದ್ಧ ಯುದ್ಧ ಯುದ್ಧಗಳಲ್ಲಿಯೇ ಸಮಯ ಕಳೆದು ದಣಿದು ಹೋದೆ, ನಿಮ್ಮನ್ನೂ ದಣಿಸಿದೆ."

"ಜಹಾಂಪನಾಹ್, ನಾನು ನಿಮ್ಮ ಬೇಗಂ. ನೀವು ನನ್ನನ್ನು ನೀವು ಎಂದು ಕರೆದು ಅವಮಾನಿಸಬೇಡಿ. ನಿಮ್ಮೆಲ್ಲ ಪ್ರಜೆಗಳಂತೆ ನಿಮ್ಮ ಆದೇಶಗಳನ್ನು ಪಾಲಿಸುವವಳೇ ಹೊರತಾಗಿ ಖುದಾರಂತೆ ಆದೇಶಗಳನ್ನು ನೀಡುವವಳಲ್ಲ. ಆದ್ದರಿಂದ ತಮಾಷೆಗಾಗಿಯೂ 'ನೀವು' ಎಂದು ಸಂಬೋಧಿಸಬೇಡಿ."

"ಅರ್ಜು, ಅರ್ಜು ನಿನ್ನ ಪ್ರೀತಿ ವಿನಯಗಳೇ ನನ್ನನ್ನು ಸೆಳೆದು ಕಟ್ಟಿಹಾಕಿದ್ದು. ಹೇಳು, ಯಾಕಾಗಿ ನೀನು ನನ್ನನ್ನು ಬರಹೇಳಿದೆ?"

"ಜಹಾಂಪನಾಹ್, ಸಿಟ್ಟಾಗದೆ ಇದ್ದಲ್ಲಿ ಮಾತ್ರವೇ ಹೇಳುತ್ತೇನೆ."

"ಹೇಳು ಸಿಟ್ಟಾಗುವುದಿಲ್ಲವೆಂದು ಮಾತು ಕೊಡುತ್ತೇನೆ."

"ಖುವಾ ಅವರು ತಮಗೊಂದು ಪತ್ರ ಕಳಿಸಿಕೊಟ್ಟಿದ್ದಾರೆ. ಅದರಲ್ಲಿ ತಮ್ಮ ದುಃಖವನ್ನು ಹೇಳಿಕೊಂಡಿದ್ದಾರೆ. ತಾವು ಮಾಡಿದ ಅಪರಾಧಗಳಿಗೆ ಕ್ಷಮೆ ಕೇಳಿದ್ದಾರೆ. ತೆಗೆದುಕೊಳ್ಳಿ. ಇದನ್ನು ಗಂಭೀರವಾಗಿ ಓದಿ." ಎಂದು ಪತ್ರವನ್ನು ಅವನ ಕೈಗೆ ಕೊಟ್ಟಳು. ಓದುವಾಗಲೇ ಅವನ ಮುಖಚರ್ಯೆಯನ್ನು ಪರೀಕ್ಷಿಸುತ್ತಿದ್ದಳು.

ಆ ಪತ್ರದಲ್ಲಿ ತನ್ನ ಕಷ್ಟವನ್ನು ಹೇಳಿಕೊಂಡು ಜೀವನೋಪಾಯಕ್ಕಾಗಿ ಹಣ ಸಹಾಯ ಮಾಡಬೇಕೆಂದೂ, ತನ್ನ ಅಣ್ಣನ ಮಗಳು ಬಾದಶಾಹ್ ಬೇಗಂ ಆಗಿದ್ದಕ್ಕಾಗಿ ಸಂತೋಷವಾಗಿದೆಯೆಂದೂ ತಿಳಿಸಿದ್ದೇ ಅಲ್ಲದೆ, ತನ್ನ ತಪ್ಪುಗಳಿಗಾಗಿ ಕ್ಷಮೆ ಯಾಚಿಸುತ್ತಿರುವುದಾಗಿಯೂ ಮೊಘಲ್ ಸಲ್ತನತ್‌ನ ತಖ್ತ್ ತಾಜ್‌ಗಳಿಂದ ಅಲಂಕೃತವಾಗಿದ್ದಕ್ಕಾಗಿ ಅಭಿನಂದನೆಗಳನ್ನು ತಿಳಿಸುತ್ತಿರುವುದಾಗಿಯೂ ಬರೆದಿದ್ದಳು.

ಶಹಜಹಾನ್ ಆ ಪತ್ರದ ಬಗ್ಗೆ ಪ್ರತಿಕ್ರಿಯಿಸುವುದಕ್ಕೂ ಮೊದಲೇ,

"ಜಹಾಂಪನಾಹ್, ತಪ್ಪುಗಳಾಗುವುದು ಮನುಷ್ಯರಿಂದಲೇ ಅಲ್ಲವೇ? ಬುವಾ, ನಿಜವಾಗಿ ಪಶ್ಚಾತ್ತಾಪ ಪಡುತ್ತಿದ್ದಾರೆ. ಎಳೆತನದಲ್ಲಿ ಅವರು ನಿಮ್ಮನ್ನು ಎತ್ತಿ ಆಡಿಸಿದ್ದಾರೆ. ನಿಮ್ಮನ್ನು ಅತಿಯಾಗಿ ಪ್ರೀತಿಸಿದ್ದಾರೆ. ಅಲ್ಲದೆ ಅವರು ನನ್ನ ಅಬ್ಬುವಿನ ತಂಗಿ. ಅವರೂ ಈಗ ನಿಷ್ಠುರರಾಗಿದ್ದಾರೆ. ಗಂಡನ ಸಾವಿನಿಂದ ನೊಂದು, ವೈಧವ್ಯ, ಅಸಹಾಯಕತೆಗಳಿಂದ ಚಡಪಡಿಸುತ್ತಿದ್ದಾರೆ. ಎಲ್ಲವನ್ನೂ ಮರೆತು ಅವರಿಗೆ ಸಹಾಯ ಮಾಡಬೇಕಾದ್ದು ಧರ್ಮವಲ್ಲವೇ? ನಿಮ್ಮ ಅಬ್ಬಾ ಹುಜೂರ್, ಇಂತಹ ಅಸಹಾಯ ಅನಾಥ ಮಂದಿಗೆ ಎಷ್ಟು ಸಹಾಯ ಮಾಡಿಲ್ಲ. ದ್ವೇಷವನ್ನು ಸಾಧಿಸುವುದು ಅದೂ ಎಲ್ಲವೂ ನಿಮಗೆ ಒಳ್ಳೆಯದಾದ ಮೇಲೂ ಸಾಧಿಸುವುದು ಒಳ್ಳೆಯದಲ್ಲ. ಹೇಗಿದ್ದರೂ ನಿಮ್ಮಲ್ಲಿ ಕ್ಷಮೆ ಯಾಚಿಸುತ್ತಿದ್ದಾರೆ. ದಯವಿಟ್ಟು ನನಗಾಗಿ, ಲಾಡ್ಲಿ ಅರ್ಜಾನಿಗಳಿಗಾಗಿ ಅವರಿಗಾಗಿ ನೀವು ಸಹಾಯ ಮಾಡಲೇಬೇಕು. ತಾಯಿಯ ತಪ್ಪಿಗಾಗಿ ಮಕ್ಕಳನ್ನು ಶಿಕ್ಷಿಸುವುದು ಯಾವ ನ್ಯಾಯ? ನೊಂದವರನ್ನು ನೋಯಿಸುವುದು ಅಸಹಾಯಕರನ್ನು ಮತ್ತಷ್ಟು ಅಸಹಾಯಕತೆಗೆ ತಳ್ಳುವುದು ಸರಿಯಲ್ಲ. ಅವರ ನೋವು, ಸಂಕಟಗಳು ನಮಗೆ ಶಾಪವಾಗುವುದು ಬೇಡ" ಎಂದು ಅಂಗಲಾಚಿ ಬೇಡಿಕೊಂಡಳು.

"ಬೇಗಂ, ನಿನ್ನ ಹೃದಯ ವಿಶಾಲವಾದದ್ದು. ಅವರಿಂದಾಗಿ ನಾನು ಪಟ್ಟಪಾಡು, ಸಾಮಾನ್ಯದ್ದೇನೂ ಅಲ್ಲ. ನನ್ನಿಂದ ಸಿಂಹಾಸನ ಕಸಿದುಕೊಂಡು ನಾಲಾಯಕ್‌ರಾದ ಪರವೇಜ್‌ಗೋ, ಶಹರಿಯಾರ್‌ಗೋ ಕೊಡಿಸಲು ಹುನ್ನಾರ ಮಾಡಿದಳು. ತಂದೆ ಮಕ್ಕಳ ನಡುವೆ ಸಂಘರ್ಷ ಸೃಷ್ಟಿಸಿದಳು. ಒಂದು ರೀತಿಯಿಂದ ಮೊಘಲ್ ಸಾಮ್ರಾಜ್ಯ ಇಲ್ಲಿವರೆಗೆ ಅನುಭವಿಸಿದ ಸಂಕಟಗಳಿಗೆ ಅಬ್ಬು ಅನಾರೋಗ್ಯ, ಮದ್ಯ ವ್ಯಸನಕ್ಕೆ ಗುರಿಯಾದದ್ದೂ ಅವರಿಂದಲೇ! ಈ ವ್ಯಸನಗಳಿಂದ, ಆಡಳಿತವನ್ನು ನಿರ್ಲಕ್ಷಿಸಿ, ಸಂಪೂರ್ಣವಾಗಿ ಅವರ ಕೈವಶಕ್ಕೆ ಕೊಟ್ಟು, ತಾವು ಮಾದಕ ಚಟಗಳಿಗೆ ಗುಲಾಮರಾಗುವಂತೆ ಮಾಡಿ, ಸರ್ವಾಧಿಕಾರವನ್ನು ತಮ್ಮ ಕೈಗೆ ತೆಗೆದುಕೊಂಡರು. ಇಂತಹವರಿಗೆ ಸಹಾಯ ಮಾಡುವುದೇ?"

"ಜಹಾಂಪನಾಹ್, ಯಾವುದೇ ಸಂಬಂಧಗಳಿಲ್ಲದವರಿಗೇ ಆಶ್ರಯ ನೀಡಿ, ಬದುಕಲು ದಾರಿ ಕಾಣಿಸುವ, ದಾದಾಜಾನ್‌ರ ವಂಶ ಪರಂಪರೆಯಲ್ಲಿ ಬಂದವರು ನೀವು. ನಿಮ್ಮ ರಕ್ತ ಸಂಬಂಧವುಳ್ಳ ಅಮ್ಮೀಜಾನ್‌ರನ್ನು ನಿರ್ಲಕ್ಷಿಸುವುದು ಸರಿಯೆನಿಸುತ್ತದೆಯೇ? ದಯೆ, ಧರ್ಮ, ಕರುಣೆಗಳಿಲ್ಲದಿದ್ದಲ್ಲಿ ರಾಜ, ರಾಜನೆನಿಸಿಕೊಳ್ಳುವುದಿಲ್ಲ. ನಿಮ್ಮನ್ನು ಭೇಟಿಯಾಗಿ ಕ್ಷಮೆ ಕೋರಲು ಅವಕಾಶ ಕೊಡುವಂತೆ ಕೇಳಿಕೊಂಡಿದ್ದಾರೆ. ನೀಡುತ್ತೀರಲ್ಲವೇ ಜಹಾಂಪನಾಹ್."

ಶಹಜಹಾನನಿಗೆ ಹೆಂಡತಿಯ ಆರ್ತ ಪ್ರಾರ್ಥನೆಯನ್ನು ನಿರಾಕರಿಸಲು ಸಾಧ್ಯವಾಗಲಿಲ್ಲ. ಅರ್ಜುಮಂದಳಿಗೆ ತಮ್ಮನ್ನು ಬಂದು ಭೇಟಿಯಾಗಲು ಅವಕಾಶವನ್ನು ಕೊಟ್ಟಿರುವುದಾಗಿಯೂ, ಆದರೆ ಇಲ್ಲಿಯೇ ಬಂದು ಉಳಿಯಲು ಮಾತ್ರ ಅವಕಾಶವಿಲ್ಲವೆಂಬುದನ್ನು ತಿಳಿಸಲು ಹೇಳಿದ. ಅರ್ಜುಮಂದಳಿಗೆ ಅಷ್ಟು ಸಿಕ್ಕಿದ್ದು ಸಾಕೆನಿಸಿತು. ತನ್ನ ಬುವಾರ ಸಂಚುಗಳು ಜನಾನಾದ ಹೆಂಗಸರ ಮಾತುಗಳಿಂದ ತಿಳಿದು ಗಂಡನನ್ನು ಎಚ್ಚರಿಸಿದ್ದೂ ಉಂಟು. ಆದರೂ ಅವಳ ಪ್ರೀತಿಪಾತ್ರಳಾದ ಗೆಳತಿ ಲಾಡ್ಲಿಯ ಸಂಕಟ ಅವಳ ಮೇಲೆರಗಿದ ದುರಂತಗಳು, ಅವಳ ಮನಸ್ಸಿಗೆ ದುಃಖವುಂಟು ಮಾಡಿದ್ದವು. ಬಡಪಾಯಿ ಲಾಡ್ಲಿಗೆ ಶಿಕ್ಷೆ ಕೊಡುವುದು ಸಂಕಟಕ್ಕೆ ದೂಡುವುದು ಸಹನೀಯವೆನಿಸಲಿಲ್ಲ.

ವಾರಗಳಷ್ಟು ಪ್ರಯಾಸಕರವಾದ ಪ್ರಯಾಣ ಮಾಡಿ ಆಗ್ರಾಕ್ಕೆ ಬಂದಳು. ಎಲ್ಲ ಹಳೆಯ ನೆನಪುಗಳು ಮರುಕಳಿಸಿದವು. ತಾನು ಓಡಾಡಿದ ಜಾಗಗಳು, ಜನಾನಾಕ್ಕೆ ತಾನು ಬಂದು ಸೇರಿದ ದಿನಗಳು, ಕಡೆಗೆ ಜಹಾಂಗೀರನ ಹೆಂಡತಿಯಾಗಿ ಅದೇ ಜನಾನಾದ ಯಜಮಾನಿಯಾಗಿ ಆಳಿದ್ದು, ತನ್ನ ಸವತಿ ಜಗತ್‌ಗೋಸಿನಿಯೊಂದಿಗೆ ಕಳೆದ ಕ್ಷಣಗಳು, ಅನುಭವಿಸಿದ ಅವಮಾನ, ನಂತರದಲ್ಲಿ ಅವಳೆದುರೇ ಚಕ್ರವರ್ತಿನಿಯಾಗಿ ನಿಂತದ್ದು ಖುರ್‍ರಂನನ್ನು ವಶಮಾಡಿಕೊಂಡದ್ದು, ಎಲ್ಲಾ ನೆನಪುಗಳೂ ಸುಳಿದು ಹೋದವು.

ಶಹಜಹಾನ್‌ನ ಮನಸ್ಸಿನ ದ್ವೇಷ ಎಷ್ಟಿತ್ತೆಂದರೆ, ಅವಳನ್ನು ದಿವಾನ್-ಎ-ಆಮ್‌ಗೆ ಕರೆಸಿಕೊಂಡ. ಜನಪ್ರತಿನಿಧಿಗಳು, ಸಭಾಸದರು ಎಲ್ಲರ ಎದುರಿಗೆ ಅವಳು ಬಂದು ಕೋರ್ನಿಶ್ ಮಾಡಿದರೂ ಅವನು ಸ್ಪಂದಿಸಲಿಲ್ಲ, ಪ್ರತಿಕ್ರಿಯಿಸಲಿಲ್ಲ. ಆದರೆ ಅಸಹಾಯಕ ಹೆಣ್ಣು? ಅವಮಾನದ ನಂಜನ್ನು ನುಂಗಿಕೊಂಡು, ಭಯಭಕ್ತಿಯಿಂದ "ಶಾಹನ್‌ಶಾಹ್ ಎ-ಆಲಮ್ ನನ್ನ ಗೌರವ ಪೂರ್ವಕ ಸಲಾಮುಗಳು. ಈ ದೀನಳೂ ಅಸಹಾಯಕಳೂ ಆದ ಹೆಣ್ಣು, ನಿಮ್ಮಲ್ಲೊಂದು ಕೋರಿಕೆಯನ್ನು ನಿವೇದಿಸಿಕೊಳ್ಳುತ್ತೇನೆ. ನನ್ನ ಗಂಡ ನಿಮ್ಮ ತಂದೆಯೂ ಹೌದು. ಅವರ ನೆನಪಿಗಾಗಿ ಸಮಾಧಿ ಭವನವೊಂದನ್ನು ಕಟ್ಟಿಸಿ ಅದರ ಪರಿಸರದಲ್ಲಿ ಶಾಹನ್‌ಶಾಹ್ ಜಹಾಂಗೀರರ ನೆನಪಿನಲ್ಲಿ ಉಸಿರಾಡಬೇಕೆಂದಿದ್ದೇನೆ. ದಯವಿಟ್ಟು ಅದಕ್ಕೆ ಬೇಕಾದ ಹಣವನ್ನು ಈ ನಿರಾಶ್ರಿತ, ನಿರ್ಧನಿ, ಅಸಹಾಯಕ ಹೆಣ್ಣಿಗೆ ದಯಪಾಲಿಸಬೇಕೆಂದು ಬೇಡುತ್ತೇನೆ. ನನಗೆ ಗೊತ್ತು. ನೀವು ಕರುಣಾಳು ಅನಾಥರನಾಥ. ನನ್ನ ಕರ್ಮಗಳೇ ನನ್ನನ್ನು ಇಂತಹ ದೀನ ಹೀನ ಸ್ಥಿತಿಗೆ ದೂಡಿದೆ ಎನ್ನುವ ಸತ್ಯ ಮನವರಿಕೆಯಾಗಿದೆ."

"ಬೇಗಂ, ಮೆಹರುನ್ನೀಸಾ, ನೀವು ನನ್ನ ತಂದೆಯ ಹೆಂಡತಿ, ಅದಕ್ಕಾಗಿ ನಿಮ್ಮನ್ನು ಗೌರವಿಸುತ್ತೇನೆ. ನಿಮಗಾಗಿ ಅಲ್ಲದಿದ್ದರೂ ನನ್ನ ತಂದೆಗೆ ನನ್ನಿಂದ ಸಲ್ಲಬೇಕಾದ ಗೌರವ ಮಾಡಬೇಕಾದ ಕರ್ತವ್ಯಗಳ ಅರಿವಿನಿಂದ ಖಂಡಿತ ನಿಮ್ಮ ಕೋರಿಕೆ ಮನ್ನಿಸುತ್ತೇನೆ. ನೀವಾಗಿ ನೀವು ತಂದುಕೊಂಡ ನಿಮ್ಮ ಈ ಸ್ಥಿತಿ ನೋಡಿ ಮರುಕವೆನಿಸುತ್ತದೆ. ಆದರೆ ರಾಜಕೀಯವೆಂಬುದು ಒಂದು ಚದುರಂಗದಾಟ! ಆ ಅಲ್ಲಾಹ್ ಒಮ್ಮೆ ಒಬ್ಬರನ್ನು ಮೇಲೇರಿಸಿದರೆ ಇನ್ನೊಬ್ಬರನ್ನು ಕೆಳಗೆ ಉರುಳಿಸುತ್ತಾನೆ. ತಾವಿನ್ನು ಜನಾನಾದಲ್ಲಿ ವಿಶ್ರಾಂತಿ ಪಡೆಯಿರಿ. ನಾವು ಬಂದು ನಿಮ್ಮನ್ನು ಕಾಣುತ್ತೇವೆ."

ಅವನ ಮಾತು ಮುಗಿಯುತ್ತಲೇ ನೂರ್ ಜಹಾನ್ ಕೋರ್ನಿಶ್ ಮಾಡಿ ಹೊರಬಂದಳು. ಅವಳ ಸಂಕಟ ಹೇಳತೀರದು. ಹಿಂದೂಸ್ತಾನದ ಬಾದಶಾಹ್ ಬೇಗಂ ಆಗಿ ಮೆರೆದವಳು, ಎಲ್ಲರೂ ತಾನು ಎದುರಾದರೆ ಸಾಕು, ಭಯ, ಭಕ್ತಿ, ಗೌರವಗಳಿಂದ ಕೋರ್ನಿಶ್ ಮಾಡಿಸಿಕೊಳ್ಳುತ್ತಿದ್ದವಳ ಸ್ಥಿತಿ ಎಲ್ಲಿಂದ ಎಲ್ಲಿಗೆ ಬಂತು. 'ಯಾ ಅಲ್ಲಾಹ್' ಇಂಥ ಅವಮಾನಕ್ಕಿಂತ ಒಮ್ಮೆಲೇ ನನ್ನ ಪ್ರಾಣವನ್ನು ಕಸಿದುಕೊಳ್ಳಬಾರದೇ?' ಎಂದು ತನ್ನಲ್ಲೇ ತಾನು ದುಃಖಿಸಿದಳು. ಸೇಡಿನ ಪರಿ ಭಯಾನಕವೆನಿಸಿತು. ಹಣ, ಅಧಿಕಾರ, ಅಂತಸ್ತುಗಳು ಕಳೆದು ಹೋದಾಗ ಬೆತ್ತಲಾದಾಗ ಆಗುವ ನಾಚಿಕೆ, ಅವಮಾನಗಳನ್ನು ಅನುಭವಿಸಿದಳು. ಈಗ ತಾನು ಪೂರ್ತಿಯಾಗಿ ನಿರ್ಗತಿಕಳಾಗಿ ನಿಂತ ಕಟುಸತ್ಯ ಮತ್ತೊಮ್ಮೆ ಮನಸ್ಸಿಗೆ ಅಪ್ಪಳಿಸಿತು. ಆ ನೋವಿನಲ್ಲೇ ಹಿಂತಿರುಗಿದ ನೂರ್ ಜಹಾನ್‌ಳನ್ನು ಲಾಡ್ಲಿ ನೋಡಿದಳು. ಮುಖ ಬಾಡಿತ್ತು. ಲಾಡ್ಲಿಗೆ ಅಮ್ಮನ ಸ್ಥಿತಿ ಕಂಡು ದುಃಖವಾಯಿತು. ಅಮ್ಮೀ ಮತ್ತು ಖುರ್ರಂ ನಡುವೆ ಏನೋ ಮಾತುಕತೆ ನಡೆದಿರಬಹುದು ಎಂದು ಊಹಿಸಿದಳು.

"ಅಮ್ಮೀ ಏನಾಯಿತು? ಮುಖ ಎಷ್ಟು ಬಾಡಿದೆ. ನೋಡಿಕೊಂಡೆಯಾ? ಭಾಯಿಜಾನ್ ಏನೆಂದ?"

"ಲಾಡ್ಲಿಬೇಟಾ, ನನ್ನ ಭಾಯಿಜಾನ್ ನನ್ನನ್ನು ಆಕಾಶದಿಂದ ಒಮ್ಮೆಲೇ ಒಗೆದು ಬಿಟ್ಟ. ನಾನೀಗ ನೂರ್ ಜಹಾನ್ ಅಲ್ಲ, ಕೇವಲ ಮೆಹರುನ್ನೀಸಾ! ನನ್ನ ಅಮ್ಮಿ, ಅಬ್ಬು ಕೊಟ್ಟ ಹೆಸರಷ್ಟೇ ನನಗೆ ಇನ್ನು ಮುಂದೆ. ಶಾಹನ್‌ಶಾಹ್ ಜಹಾಂಗೀರ್ ಪ್ರೀತಿಯಿಂದ ದಯಪಾಲಿಸಿದ 'ನೂರ್ ಜಹಾನ್' ಬಿರುದಿನ ಗರಿ ಸುಟ್ಟುಹೋಯಿತು..."

"ಅಮ್ಮೀ ಅದಕ್ಕೆಲ್ಲಾ ಇಷ್ಟೊಂದು ಬೇಸರಪಡಬೇಕೆ? ಸಲುಗೆಯಿಂದ ನಿನ್ನನ್ನು ಹಾಗೆ ಕರೆದಿರಬಹುದು."

"ಇಲ್ಲ ಬೇಟಾ, ಎಲ್ಲರ ಎದುರಿಗೆ ದಿವಾನೆ ಆಮ್‌ನಲ್ಲಿ ದರ್ಪದಿಂದ ಕುಳಿತು, ನಾ ಮಾಡಿದ ಕೋರ್ನಿಶ್‌ಗೂ ಬೆಲೆಯಿಲ್ಲದೆ ಅಹಂಕಾರವನ್ನು ಮೆರೆದು ಅವನ ಮುಂದೆ ನಾನೆಷ್ಟರವಳು ಎನ್ನುವುದನ್ನು ಸಾಬೀತುಪಡಿಸುವ ಅಗತ್ಯ ಅವನಿಗೆ ಇದ್ದಂತಿತ್ತು. ನಾನೆಷ್ಟು ಸಣ್ಣವಳಾಗಿಬಿಟ್ಟೆ! ಮೊಘಲ್ ಸಾಮ್ರಾಜ್ಞಿಗೆ ಇಂಥ ಸ್ಥಿತಿ ಬರುವುದೆಂದು ಬಹುಶಃ ಯಾರೂ ಊಹಿಸಿರಲಾರರು. ನೋಡಿದೆಯಾ ಲಾಡ್ಲಿ, ನಿನ್ನ ಅಮ್ಮೀಜಾನ್ ಎಲ್ಲಿಂದ ಎಲ್ಲಿಗೆ ಇಳಿದಿದ್ದಾರೆಂದು. ಆದರೆ ಈಗ ನಾವೇನೂ ಮಾಡುವ ಹಾಗಿಲ್ಲ. ಅಸಹಾಯಕ ಹೆಂಗಸರು ನಾವು. ನಮ್ಮ ವೈಭವದ ಬದುಕು ಈಗ ನಮಗೆ ಬರೀ ನೆನಪು ಮಾತ್ರ. ನನ್ನವರೂ ಕೂಡಾ ನನಗಿಲ್ಲದಂತಾದರು. ನನಗೆ ಬದುಕೇ ಬೇಸರವಾಗಿದೆ. ಜಹಾಂಪನಾಹ್ ಶಹಜಹಾನ್ ನನಗೂ ಮಗನಲ್ಲವೇ?"

"ಅಮ್ಮೀ ಕಳೆದುಹೋದದ್ದನ್ನು ನೆನೆದು ದುಃಖಿಸುವುದರಿಂದ ಬರುವ ಲಾಭವಾದರೂ ಏನು? ಪ್ರಸ್ತುತ ನಮ್ಮಿಬ್ಬರ ಪರಿಸ್ಥಿತಿಯೂ ಒಂದೇ ಆಗಿದೆ. ಬಾದಶಾಹ್ ಜಹಾಂಗೀರರ ಅತ್ಯಂತ ಪ್ರೀತಿಯ ಬೇಗಂ ಆಗಿಯೂ ನೀವು ಅನುಭವಿಸುತ್ತಿದ್ದೀರಿ. ಆದರೆ ಇಲ್ಲಿಯವರೆಗೆ ನೀವು ಅನುಭವಿಸಿದ ಅಧಿಕಾರ, ಕೀರ್ತಿ ಐಷಾರಾಮದ ಬದುಕು ನನಗೆಲ್ಲಿದೆ ಹೇಳಿ. ನನ್ನನ್ನು ಒತ್ತಾಯಿಸಿ, ಕೆಲಸಕ್ಕೆ ಬಾರದ ಶಹರಿಯಾರನ ಕುತ್ತಿಗೆಗೆ ಕಟ್ಟಿದಿರಿ. ನನಗೆ ಯಾವ ಅಧಿಕಾರದ ಆಕಾಂಕ್ಷೆಯೂ ಇಲ್ಲ. ನಮ್ಮ ಪಾಡಿಗೆ

ನಮ್ಮಿಬ್ಬರನ್ನೂ ಬದುಕಲು ಬಿಡಿರೆಂದು ಅಂಗಲಾಚಿ ಬೇಡಿಕೊಂಡರೂ, ನಿಮ್ಮ ಅಧಿಕಾರಾಕಾಂಕ್ಷೆಯನ್ನು ಪೂರೈಸಿಕೊಳ್ಳಲು ಅವನಿಗೆ ತಖ್ತ ತಾಜ್‌ಗಳ ಆಮಿಷ ತೋರಿ ಅಪಾಯಗಳ ಪ್ರಪಾತಕ್ಕೆ ತಳ್ಳಿದಿರಿ. ಆ ಪ್ರಯತ್ನಗಳಲ್ಲಿ ನೀವೂ ಬಲಿಯಾದಿರಿ. ಅರ್ಜುಮಂದ್ ಬುವಾ ಜಹಾಂಪನಾಹ್ ಶಹಜಹಾನ್‌ರನ್ನು ನಿಮ್ಮವರೆಂದೇ ಭಾವಿಸಿ ಅಬ್ಬಾ ಬಾದಶಾಹ್‌ರಿಗೆ ಕೈ ಜೋಡಿಸಿದಂತೆ, ಅವರ ಕೈ ಜೋಡಿಸಿದ್ದರೆ, ನಿಮ್ಮ ಜನಾನಾ ನಿಮಗೇ ಉಳಿದು, ಬಾದಶಾಹ್ ಬೇಗಂ ಪಟ್ಟ ಉಳಿಸಿಕೊಂಡು, ರುಖೈಯ್ಯಾ ದಾದಿ ಜಾನ್‌ರಂತೆ ಮರ್ಯಾದೆಯಿಂದ ಬದುಕಬಹುದಿತ್ತು. ಜಹಾಂಪನಾಹ್ ಶಹಜಹಾನ್ ಮೊದಲಿನಂತೆ ನಿಮ್ಮನ್ನು ಗೌರವದಿಂದ ನಡೆಸಿಕೊಳ್ಳುತ್ತಿದ್ದ. ಅಲ್ಲದೆ ನಿಮ್ಮ ಉಳಿದ ಕನಸುಗಳನ್ನೂ ಪೂರೈಸುತ್ತಿದ್ದ. ನಿಮ್ಮ ಅಧಿಕಾರದ ಮೋಹ, ನಾನೇ ಆಳಬೇಕೆಂಬ ಹಠ, ನಿಮ್ಮನ್ನು ಈ ಸ್ಥಿತಿಗೆ ಇಳಿಸಿದೆ. ಶಹಜಹಾನ್ ಕೆಟ್ಟವರಲ್ಲ, ಮೊಘಲ್ ಸಾಮ್ರಾಜ್ಯದ ಸಮರ್ಥ ಉತ್ತರಾಧಿಕಾರಿ. ಪರಂಪರಾಗತವಾಗಿ ತಖ್ತ್ ತಾಜ್‌ಗಳಿಗೆ ಹಕ್ಕುದಾರ. ಹೆಂಡತಿ ಮಕ್ಕಳೊಂದಿಗೆ ಅಲೆದಾಡುತ್ತಾ, ತಲೆ ಮರೆಸಿಕೊಂಡು ಯುದ್ಧಗಳನ್ನು ಆಹ್ವಾನಿಸುವಂತೆ ಮಾಡಬೇಕಾಗಿ ಬಂದದ್ದು ನಿಮ್ಮಿಂದ. ಆಗೆಲ್ಲ ಎಷ್ಟು ಕಷ್ಟಪಟ್ಟಿರಬೇಕು? ಒಮ್ಮೆ ಯೋಚಿಸಿ ನೋಡಿ."

ನೂರ್ ಜಹಾನಳಾಗಿದ್ದ ಮೆಹರುನ್ನೀಸಾ ಮಗಳ ಮಾತುಗಳನ್ನು ಕೇಳಿ ದಿಗ್ಭ್ರಾಂತಳಾದಳು. ಅವಳ ಪ್ರಬುದ್ಧತೆ, ಸಂಯಮ ಮಾತಿನ ರೀತಿಯಿಂದ ಒಂದು ಕಡೆ ಅಚ್ಚರಿ ಎನಿಸಿದರೆ, ಮತ್ತೊಂದು ಕಡೆ, ಪರೋಕ್ಷವಾಗಿ ತಿವಿದಂತಾಯಿತು. ಅವಳು ಹೇಳಿದ ಒಂದೊಂದು ಅಕ್ಷರವೂ ಸತ್ಯ ಎನಿಸಿತು. ಇಷ್ಟೆಲ್ಲಾ ಮಾಡಿದ್ದು, ತನ್ನ ಮಹತ್ವಾಕಾಂಕ್ಷೆಯನ್ನು ಪೂರೈಸಿಕೊಳ್ಳಬೇಕೆಂದೇ ಅಲ್ಲವೇ? ಇದರಿಂದಾಗಿ ಎಲ್ಲರಿಂದಲೂ ದೂರವಾಗಬೇಕಾಯಿತು. ತನ್ನವರೇ ತನ್ನ ಶತ್ರುಗಳಂತೆ ಬದಲಾಗಬೇಕಾಯಿತು. ನಿಜ, ಹಣ, ಅಧಿಕಾರ, ಅಂತಸ್ತುಗಳ ಮೋಹ ಮನುಷ್ಯನನ್ನು ಎಲ್ಲಿಂದ ಎಲ್ಲಿಗೆ ತಂದು ನಿಲ್ಲಿಸುತ್ತದೆಯೋ ಯಾರಿಗೆ ಗೊತ್ತು. ನಮ್ಮನ್ನೆಲ್ಲ ಆಳುವ ಆ ಅಲ್ಲಾಹ್‌ನೇ ಬಲ್ಲ! ಆದರೆ ಈಗ ತನಗೆ ವರ್ತಮಾನದ ಚಿಂತೆಯೇ ಭಯಂಕರವಾಗಿ ಕಾಡುತ್ತಿದೆಯೆಂದು ಭಾವಿಸಿದಳು. ತನ್ನನ್ನು ತಡವಿಕೊಂಡಳು. ಈ ತನ್ನ ದೈನ್ಯ ಸ್ಥಿತಿಯಿಂದಾಗಿ ತನ್ನ ಆತ್ಮಗೌರವ ಆತ್ಮವಿಶ್ವಾಸಗಳನ್ನು ಬಿಟ್ಟುಕೊಡಬಾರದು. ನನ್ನ ಬಾದಶಾಹರ ನೆನಪುಗಳನ್ನು ಶಾಶ್ವತಗೊಳಿಸುವ ಕೆಲಸಗಳಿಗೆ ಮುಂದಾಗಬೇಕು ಎಂದುಕೊಂಡಳು.

"ಲಾಡ್ಲಿ ಬೇಟಾ, ಇನ್ನು ಇಲ್ಲಿ ಇರುವುದರಿಂದ ಪ್ರಯೋಜನವಿಲ್ಲ. ಕೂಡಲೇ ಲಾಹೋರಿಗೆ ಹೊರಟು ಹೋಗೋಣ. ಈಗಲೂ ನಾವು ಸುರಕ್ಷಿತವಲ್ಲ. ಶಹಜಹಾನ್‌ಗಿಂತಲೂ ನನ್ನ ಅಣ್ಣ ಅಸಫ್‌ನ ಭೀತಿಯೇ ಹೆಚ್ಚಾಗಿದೆ. ಈಗಲೂ ನಮ್ಮ ಮೇಲೆ ಅವನ ನಿಗರಾನಿ ಇದ್ದೇ ಇದೆ. ನಿರಾತಂಕವಾಗಿ ನಮ್ಮನ್ನು ಲಾಹೋರಿಗೆ ಹೋಗಲು ಬಿಟ್ಟರೆ ಅಷ್ಟೇ ಸಾಕು."

ನೂರ್ ಜಹಾನ್ ಉರುಫ್ ಮೆಹರುನ್ನೀಸಾಳ ಸಂಕಟಕ್ಕೆ ಕಾರಣ ಇತ್ತು. ತನ್ನ ಕುಟುಂಬದವರೆಲ್ಲರಿಗೂ ತನ್ನ ವರ್ಚಸ್ಸಿನಿಂದಾಗಿ ಏನೆಲ್ಲ ಮಾಡಿದ್ದಳು. ದೊಡ್ಡ ದೊಡ್ಡ ಅಧಿಕಾರ ಸ್ಥಾನಗಳನ್ನು ಗಳಿಸಿಕೊಟ್ಟಿದ್ದಳು. ಅದ್ಭುತವಾದ ಅರಮನೆಗಳು ತುಂಬಿ

ತುಳುಕುವಷ್ಟು ಐಶ್ವರ್ಯ! ಎಲ್ಲಕ್ಕಿಂತ ಹೆಚ್ಚಾಗಿ, ಮುಂದಿನ ಬಾದಶಾಹನಾಗುವ ಸಾಧ್ಯತೆಯಿದ್ದ ಖುರ್‍ರಂನೊಂದಿಗೆ ಅಣ್ಣನ ಮಗಳಾದ ಅರ್ಜುಮಂದಳನ್ನು ವಿವಾಹ ಮಾಡಿಸಿ ಇಂದು ಬಾದಶಾಹ್ ಬೇಗಂ ಆಗಿ ಕುಳಿತುಕೊಳ್ಳುವಂತೆ ಮಾಡಿದ್ದೂ ಕೂಡಾ ತಾನೇ ಆದರೆ, ಆದರೆ ತನ್ನಿಂದಾದ ಮಹೋಪಕಾರಗಳನ್ನು ಮರೆತು, ತನ್ನನ್ನು ಅಪಾಯಕಾರಿ ಶತ್ರುವಿನಂತೆ ಕಾಣುತ್ತಿದ್ದಾನೆ, ನನಗೆ ಗೊತ್ತು ನನ್ನ ಸುತ್ತೆಲ್ಲ ಸಾಕಷ್ಟು ಮಂದಿ ಗುಪ್ತಚರರನ್ನು ನೇಮಿಸಿದ್ದಾನೆ, ಎಂದೆಲ್ಲಾ ಯೋಚಿಸುತ್ತಿದ್ದಳು.

ದಿಢೀರನೆ ಸೇವಕನೊಬ್ಬ ಪ್ರವೇಶಿಸಿ, ಕೋರ್ನಿಶ್ ಮಾಡಿ

"ಬೇಗಂ ಹುಜೂರ್, ಜಹಾಂಪನಾಹ್ ಶಹಜಹಾನ್ ಮತ್ತು ವಜೀರರಾದ ಅಸಫ್‌ಖಾನರು ತಮ್ಮನ್ನು ದಿವಾನ್ ಎ ಖಾಸ್‌ನಲ್ಲಿ ಬಂದು ಕಾಣಬೇಕೆಂದು ಆಹ್ವಾನಿಸಿದ್ದಾರೆ. ತಮಗಾಗಿ ಕಾಯುತ್ತಿದ್ದಾರೆ."

ಮೆಹರುನ್ನೀಸಾ, ಮಗಳತ್ತ ನೋಡಿದಳು.

"ಹೋಗಿ ಹೇಳು. ಈಗಲೇ ಬರುತ್ತೇವೆಂದು." ಎಂದು ಹೇಳಿದ ಕೂಡಲೇ ಅಹದಿ ಸೇವಕ ಅಲ್ಲಿಂದ ಹೊರಟ.

ಯಾಕೆ ತಮ್ಮನ್ನು ಬರಹೇಳಿದ್ದಾರೆಂದು ಆಲೋಚಿಸತೊಡಗಿದಳು. ಒಳ್ಳೆಯದು. ಇಲ್ಲಿಂದ ಹೊರಡುವ ಮೊದಲು ಒಮ್ಮೆ ಭೇಟಿಯಾಗಿ, ಅವರಿಂದ ಬೀಳ್ಕೊಳ್ಳಲು ಅವಕಾಶವಾಯಿತೆಂದು, ಎದ್ದು ಮಗಳೊಂದಿಗೆ ಹೊರಟಳು. ಸದ್ಯಕ್ಕೆ ಈ ಬಾರಿ, ದಿವಾನ್-ಎ-ಆಮ್‌ಗೆ ಕರೆಸಲಿಲ್ಲವಲ್ಲ ಎಂದು ಸಮಾಧಾನವಾಯಿತು. ಇದೊಂದು ಖಾಸಗಿ ಸಭೆಯಾಗಿತ್ತು. ಶಹಜಹಾನ್ ಎತ್ತರದ ಸಿಂಹಾಸನದಲ್ಲಿ ಕುಳಿತಿದ್ದ. ಪಕ್ಕದಲ್ಲಿ ಅರ್ಜು ಮಂದಳು ಆಸೀನಳಾಗಿದ್ದಳು. ಅವರಿಗಿಂತ ಕೆಳಗೆ ವಜೀರ ಅಸಫ್‌ಖಾನ್ ಕುಳಿತಿದ್ದ.

ನೂರ್ ಜಹಾನ್ ಮತ್ತು ಲಾಡ್ಲಿ ಹಿಂಜರಿಕೆಯಿಂದಲೇ ಪ್ರವೇಶಿಸಿ ಎಲ್ಲರಿಗೂ ತಲೆಬಾಗಿ ಕೋರ್ನಿಶ್ ಮಾಡಿದಳು. ನೂರ್ ಜಹಾನ್ ಗಂಟಲು ಸರಿಪಡಿಸಿಕೊಂಡು,

"ಜಹಾಂಪನಾಹ್, ನಮ್ಮನ್ನು ಇಲ್ಲಿಗೆ ಕರೆಸಿಕೊಂಡದ್ದು ಯಾಕೆಂದು ಅಪ್ಪಣೆ ಕೊಡಿಸುವಿರಾ?"

"ಬಾದಶಾಹ್‌ಬೇಗಂ. ನಿಮ್ಮನ್ನು ಕರೆಸಿಕೊಂಡದ್ದು ನಿಮಗೆ ಅವಮಾನ ಮಾಡಬೇಕೆಂದೇನಲ್ಲ. ನಮ್ಮ ಕೆಲವು ಆದೇಶಗಳನ್ನು ತಿಳಿಸಲು ಕರೆಸಿದ್ದೇವೆ. ವಜೀರರೂ ಮತ್ತು ನಮ್ಮ ಮಾವನವರೂ ಆದ ಮಿರ್ಜಾ ಅಸಫ್‌ಖಾನರು ನಮ್ಮ ಆದೇಶಗಳು ಏನೆಂಬುದನ್ನು ತಿಳಿಸುತ್ತಾರೆ" ಎಂದು ಅಸಫ್‌ಖಾನರ ಕಡೆ ತಿರುಗಿ ಹೇಳಿದ. ಅಸಫ್‌ಖಾನ್ ತಲೆಬಾಗಿ ಶಹಜಹಾನನ ತೀರ್ಮಾನಗಳು ಮತ್ತು ಷರತ್ತುಗಳನ್ನು ಮೆಹರುನ್ನೀಸಾಳಿಗೆ ತಿಳಿಸಲು ಸಜ್ಜಾದ.

"ಮೆಹರುನ್ನೀಸಾ, ನೀನು ರಕ್ತಸಂಬಂಧದಿಂದ ನಿನ್ನ ಅಣ್ಣನೇ ಹೌದಾದರೂ ಈಗ ಮೊಘಲ್ ಸಾಮ್ರಾಜ್ಯದ ಜವಾಬ್ದಾರಿಯುತ ಅಧಿಕಾರಿ. ಜಹಾಂಪನಾಹ್‌ರ ಗುಲಾಮ. ಅವರ ಮತ್ತು ಸಾಮ್ರಾಜ್ಯದ ಹಿತರಕ್ಷಣೆಯೇ ನನ್ನ ಕರ್ತವ್ಯ. ನಾವು ಮೊಘಲ್ ಸಲ್ತನತ್‌ಗೆ ಬಹಳವಾಗಿ ಋಣಿಗಳೆಂಬುದು ನಿನಗೂ ತಿಳಿದಿದೆ. ಆದರೆ ಅದೆಲ್ಲವನ್ನು ಮರೆತು, ನೀನು ಮೊಘಲ್ ಸಲ್ತನತ್‌ನ್ನೇ ಆಕ್ರಮಿಸಿಕೊಂಡೆ. ಬಾದಶಾಹ್ ಎ ಜಹಾಂಗೀರ್ ನಂತರವೂ

ಅದನ್ನು ನಿನ್ನದಾಗಿಸಿಕೊಳ್ಳುವ ಪ್ರಯತ್ನಗಳನ್ನು ಬಾದಶಾಹರು ಬದುಕಿರುವಾಗಿನಿಂದಲೂ ಪ್ರಯತ್ನಿಸಿದೆ. ನಂತರವೂ ಅಣ್ಣ ತಮ್ಮಂದಿರನ್ನೇ ಒಬ್ಬರ ವಿರುದ್ಧ ಒಬ್ಬರನ್ನು ಎತ್ತಿಕಟ್ಟಿದೆ. ನಿನ್ನದು ಬತ್ತಿಹೋಗದ ಚಾಣಾಕ್ಷತನ. ನೀನು ಬದುಕಿರುವವರೆಗೂ ನಿನ್ನಲ್ಲಿ ಷಡ್ಯಂತ್ರಗಳು ಹುಲುಸಾಗಿ ಮೊಳೆಯುತ್ತಲೇ ಇರುತ್ತವೆ. ನಿನ್ನ ಕೆಲಸಗಳಿಗಾಗಿ ಮರಣದಂಡನೆಯನ್ನೇ ವಿಧಿಸಬೇಕಿತ್ತಾದರೂ ಜಹಾಂಪನಾಹ್‌ರು ನಿನ್ನ ಮೇಲೆ ಕನಿಕರ ತೋರಿ, ಬದುಕಲು ಅವಕಾಶ ಕೊಟ್ಟಿದ್ದಾರೆ. ಅವರ ಆದೇಶದಂತೆ ಕೂಡಲೇ ನೀನು ಆಗ್ರಾದಿಂದ ಲಾಹೋರಿಗೆ ಹೋಗಬೇಕು. ಎಂದಿಗೂ ಆಗ್ರಾದ ಬದುಕಿನ ಕನಸು ಹೊತ್ತು ಬರಬಾರದು. ನೀನು ಇಲ್ಲಿ ಇದ್ದಲ್ಲಿ ಅಪಾಯ ತಪ್ಪಿದ್ದಲ್ಲ. ಮುಗ್ಧೆಯಾದ, ಮೃದು ಹೃದಯಿಯಾದ ಅರ್ಜುಮಂದ್ ಮತ್ತು ಶಹಜಹಾನ್ ದಂಪತಿಗಳ ನಡುವೆ ಕಿಚ್ಚು ಹಚ್ಚಿ ಬಂಡಾಯ ಹುಟ್ಟು ಹಾಕುವ ಎಲ್ಲ ಸಾಧ್ಯತೆಯೂ ಇದೆ. ಆದ್ದರಿಂದ ಆದಷ್ಟು ಕೂಡಲೇ ನೀನು ಇಲ್ಲಿಂದ ಹೊರಡಬೇಕು. ಲಾಹೋರಿನಲ್ಲಿ ಎಲ್ಲಿ ಇರಲು ಬಯಸುತ್ತೀಯೋ ಅಲ್ಲಿಯೇ ನಿನ್ನ ವಾಸದ ವ್ಯವಸ್ಥೆ ಮಾಡಲಾಗುತ್ತದೆ. ನಿನ್ನ, ನಿನ್ನ ಮಗಳ, ಮೊಮ್ಮಗಳ ಜೀವನಕ್ಕೆ ತೊಂದರೆಯಾಗದಂತೆ, ವರ್ಷಕ್ಕೆ ಎರಡು ಲಕ್ಷ ರೂಪಾಯಿಗಳನ್ನು ವಿಧವಾ ವೇತನವಾಗಿ ನೀಡಲಾಗುತ್ತದೆ."

"ಭಾಯಿಜಾನ್, ನಿನ್ನ ಈ ಅಸಹಾಯಕ ತಂಗಿಯ ಮೇಲೆ ಅಸಹನೀಯವಾದ ಇಂತಹ ಆರೋಪಗಳು ಶೋಭಿಸುತ್ತವೆಯೇ? ಅರ್ಜುಮಂದ್ ನನ್ನ ಸೋದರ ಸೊಸೆ. ಅವಳ ಹಾನಿಯನ್ನು ಖಂಡಿತ ಕನಸು ಮನಸಿನಲ್ಲಿಯೂ ಊಹಿಸಲಾರೆ. ಅವಳೂ ನನ್ನ ಮಗಳಂತೆಯೇ. ನಾನು ಬಯಸಿದಲ್ಲಿ ಅವಳ ಮದುವೆಯನ್ನು ಮುರಿಯಬಹುದಾಗಿತ್ತು. ಆದರೆ ಹಾಗೆ ಮಾಡಲಿಲ್ಲ. ನನಗೆ ನಿಮ್ಮ ಯಾವ ಸಹಾಯವೂ ಬೇಕಿಲ್ಲ. ನನ್ನ ಬದುಕನ್ನು ನಾನು ಕಟ್ಟಿಕೊಳ್ಳಬಲ್ಲೆ. ಏನಿದ್ದರೂ ಬಾದಶಾಹರ ಸಮಾಧಿಯಿರುವ, ನಾನು ಪ್ರೀತಿಯಿಂದ ಮಾಡಿದ ದಿಲ್‌ಖುಷಾ ಉದ್ಯಾನವಿರುವ ಶಹದಾರಾದ ಪರಿಸರದಲ್ಲಿ ಸಮಾಧಿಯ ಸಾಮೀಪ್ಯದಲ್ಲಿ, ದಿನಂ ಪ್ರತಿ ಅವರ ನೆನಪಿನ ಹನಿಗಳನ್ನು ಹೀರಿಕೊಳ್ಳುತ್ತಾ ಬದುಕಲು ಅವಕಾಶವಿರುವಂತೆ ವಾಸದ ವ್ಯವಸ್ಥೆಯನ್ನು ಮಾಡಿಕೊಡಬೇಕೆಂದು ಪ್ರಾರ್ಥಿಸುತ್ತೇನೆ.

"ನನ್ನ ಪ್ರೀತಿಯ ಗಂಡ, ನನ್ನ ಹೃದಯ ಸಾಮ್ರಾಟನೇ ನನಗಿಲ್ಲದಿರುವಾಗ, ಯಾವ ಷಡ್ಯಂತ್ರಗಳನ್ನು ರಚಿಸಿ ರಾಜ್ಯ ಆಳಬೇಕಿದೆ? ಅಧಿಕಾರ ಮಾಡಬೇಕಿದೆ? ನನಗೆ ಅಲ್ಲಾಹ್‌ನ ಸಾಕ್ಷಿಯಾಗಿ ಹೇಳುತ್ತೇನೆ, ಯಾವುದೇ ಲೌಕಿಕವಾದ ಆಸೆ, ಆಕಾಂಕ್ಷೆಗಳಾಗಲಿ ಸುಖ ಸವಲತ್ತುಗಳಾಗಲಿ ಬೇಕಿಲ್ಲ."

"ಸರಿ. ನಿನ್ನ ನಿರ್ಧಾರಗಳಿಂದ ನನಗೆ ಜಹಾಂಪನಾಹ್‌ರಿಗೆ ಸಂತೋಷವಾಗಿದೆ. ನೀನು ಘೋಷಿಸುತ್ತಿರುವಂತೆ ನಿನ್ನ ಪಾಡಿಗೆ ನೀನಿದ್ದ ಪಕ್ಷದಲ್ಲಿ ನಿನ್ನ ವಿಚಾರವಾಗಿ ನಮಗೆ ಯಾವ ಅಭ್ಯಂತರವೂ ಇಲ್ಲ."

"ಬಾದಶಾಹ್ ಬೇಗಂ ನಿಮ್ಮ ಮೇಲೆ ಸೇಡು ತೀರಿಸಿಕೊಳ್ಳುವ ಉದ್ದೇಶವಿಲ್ಲ. ಅರ್ಜುಮಂದಳಿಗೆ ನಿಮ್ಮ ಬಗ್ಗೆ ಅಪಾರವಾದ ಪ್ರೀತಿಯಿದೆ. ಹಿಂದಿನ ದಿನ ನಿಮ್ಮನ್ನು ದಿವಾನ್ ಎ ಆಮ್‌ನಲ್ಲಿ ಎಲ್ಲರ ಎದುರು ನಿಮ್ಮನ್ನು ಏಕವಚನದಲ್ಲಿ, ನಿಮ್ಮ ಪೂರ್ವದ

ಹೆಸರು ಕರೆದು ನೋಯಿಸಿದೆ. ಮಾಫಿ ಮಾಡಬೇಕೆಂದು ಅರ್ಜಿಸುತ್ತೇನೆ" ಎಂದು ಶಹಜಹಾನ್ ತುಂಬ ವಿನಯದಿಂದ ಹೇಳಿದ. ನಂತರ ಲಾಡ್ಲಿ ಕಡೆ ತಿರುಗಿ, ಎಳೆತನದ ಒಡನಾಟದ ನೆನಪನ್ನು ಮಾಡಿಕೊಂಡು ಅವಳತ್ತ ತಿರುಗಿ "ಲಾಡ್ಲಿ ನೀನು ನಮ್ಮ ಗೆಳತಿ ಸೋದರಿ, ನೀನು ಬಯಸುವುದಾದರೆ, ಅರ್ಜುಮಂದಳ ಜೊತೆಯಲ್ಲಿಯೇ ನಿನ್ನ ಮಗಳೊಂದಿಗೆ ಇರುವುದಕ್ಕೆ ನಮ್ಮ ಅಭ್ಯಂತರವಿಲ್ಲ. ನಮ್ಮ ಬೇಗಂಗೂ ಜೊತೆ ಸಿಕ್ಕಂತಾಗುತ್ತದೆ."

"ಬಾದಶಾಹ್ ಹುಜೂರ್, ನಿಮ್ಮ ಈ ಉದಾರ ಮನಸ್ಸಿಗೆ ನನ್ನ ಶುಕ್ರಿಯಾ. ಎಂದೂ ಸುಖವನ್ನು ಕಾಣದೆ, ನೆಮ್ಮದಿಯನ್ನು ಅನುಭವಿಸದ ಬದನಸೀಬ್ ಹೆಣ್ಣು ಮಗಳು. ಕಷ್ಟವೇ ನನ್ನ ಬದುಕಿನ ಹಾಡಾಗಿದೆ. ಅಮ್ಮೀಜಾನ್ ತೀರಾ ಸಂಕಟ, ನೋವುಗಳಲ್ಲಿ ದಣಿದುಹೋಗಿದ್ದಾರೆ. ಯಾರ ನೆರವು ಸಾಂತ್ವನಗಳಿಲ್ಲದ ಹತಾಶ ಸ್ಥಿತಿಯಲ್ಲಿದ್ದಾರೆ. ಅಂಥವರನ್ನು ಬಿಟ್ಟು ನನ್ನ ಸುಖ ಸಂತೋಷಗಳನ್ನು ಮುಖ್ಯವೆಂದುಕೊಂಡರೆ ನನಗಿಂತ ಮಾತೃದ್ರೋಹಿ ಮತ್ತೊಬ್ಬರು ಇರಲಾರರು. ಹೇಗಿದ್ದರೂ ನಾನೂ ಅವರಂತೆಯೇ ಗಂಡನನ್ನು ಕಳೆದುಕೊಂಡು ನಿಟ್ಟುಸಿರಿನೊಂದಿಗೆ ಬದುಕುತ್ತಿರುವ ಬೇವಾ ಹೆಣ್ಣು. ನಿಮ್ಮ ಈ ಅನುಕಂಪ, ಸಲಹೆಗಳಿಗೆ ನನ್ನ ಕೃತಜ್ಞತೆ" ಎಂದು ಅರ್ಜುಮಂದಳ ಕಡೆ ತಿರುಗಿ,

"ಗೆಳತಿ ಅರ್ಜು,... ಈ ನಿರ್ಗತಿಕಳನ್ನು ಮರೆಯಬೇಡ. ಇಷ್ಟೆಲ್ಲಾ ನಡೆಯುವಾಗಲೂ ಈ ನಿನ್ನ ಮೌನ ನೋಡಿ ದುಃಖವಾಗುತ್ತದೆ."

"ಲಾಡ್ಲಿ, ನಿಮ್ಮ ಸ್ಥಿತಿಗಾಗಿ ಬಹಳಷ್ಟು ಸಂಕಟಪಡುತ್ತಿದ್ದೇನೆ ಅನ್ನುವುದು ತಿಳಿದಿಲ್ಲ. ಮಾತಾಡಲು, ಶಬ್ದಗಳೇ ಸುಟ್ಟುಹೋಗಿ ಕರಕಲಾಗಿವೆ. ಬಾದಶಾಹರು ಸೂಚಿಸಿದಂತೆ ನನ್ನ ಜೊತೆ ಇರಬಹುದಲ್ಲಾ! ನಿನ್ನ ಮಗಳಿಗೂ ಯಾವುದಾದರೂ ಒಳ್ಳೆಯ ಸಂಬಂಧ ನೋಡಿ ನಿಕಾಹ್ ಮಾಡಬಹುದಿತ್ತಲ್ಲ?"

"ನಿನ್ನ ಈ ಮಾತಿಗೆ ಶುಕ್ರಿಯಾ. ಅವರವರ ಪ್ರಾಪ್ತಿ ಅವರವರಿಗೆ. ಇನ್ನು ಬರುತ್ತೇವೆ. ಇದೇ ಕಡೆಯ ಭೇಟಿ. ಖುದಾಹಾಫಿಜ್" ಎಂದು ಹೇಳಿದಳು.

ನೂರ್ ಜಹಾನಳೂ, ದಿಕ್ಕು ತೋಚದವಳಂತೆ ನಿಂತಿದ್ದವಳು ಮಗಳು ಹೇಳಿದ ಆ ಶಬ್ದ ಕೇಳಿ, ತಾನೂ ಖುದಾಹಾಫಿಜ್ ಹೇಳಿದಳು. ಅಸಫ್‌ಖಾನ್ ಅವಳ ಪ್ರಯಾಣಕ್ಕೆ ವ್ಯವಸ್ಥೆ ಮಾಡುವುದಾಗಿಯೂ, ನಾಳೆಯೇ ಹೊರಡಲು ಸಿದ್ಧರಾಗಬೇಕೆಂದು ಆದೇಶಿಸಿದ.

ನೂರ್ ಜಹಾನ್, ಲಾಡ್ಲಿ, ಅರ್ಜಾನಿ ತನ್ನ ಅತ್ಯಂತ ನಂಬಿಕೆಯ ಸೇವಕ ಹೋಷಿಯಾರ್ ಹೀಗೆ ಎಲ್ಲರೂ ಲಾಹೋರಿನತ್ತ ಹೊರಟರು. ದಾರಿಯುದ್ದಕ್ಕೂ ತನ್ನ ಬದುಕಿನಲ್ಲಿ ಆದ ಪಲ್ಲಟಗಳ ಬಗ್ಗೆಯೇ ಚಿಂತಿಸುತ್ತಿದ್ದಳು. ಮನುಷ್ಯ ಕೆಳಕ್ಕೆ ಬಿದ್ದರೆ ಆಳಿಗೊಂದು ಕಲ್ಲು ಎಂಬಂತೆ, ತನ್ನ ಅತ್ಯಂತ ನಂಬಿಕೆಯ ಬಂಟರು, ದೇವರಂತೆ ತನ್ನನ್ನು ಆರಾಧಿಸುತ್ತ ಆಜ್ಞಾಪಾಲಕರಾಗಿದ್ದವರು, ಜನಾನಾದ ಹೆಂಗಸರು, ಯಾರಿಗೆಲ್ಲ ಬದುಕನ್ನು ಕಲ್ಪಿಸಿದ್ದಳೋ ಅವರೆಲ್ಲ ಸಣ್ಣ ಹುಳುಕುಗಳನ್ನೂ ಭೂತಕನ್ನಡಿಯಲ್ಲಿ ಬಿಂಬಿಸಿ ಮಾತನಾಡಿಕೊಳ್ಳುತ್ತಿದ್ದರು. ಇಂಥ ಸಂದರ್ಭದಲ್ಲಿ ತಾಯಿ ಅಸ್ಮತ್ ಅತಿಯಾಗಿ ನೆನಪಿಗೆ ಬಂದರು. ತನ್ನ ಸಂಕಟ, ಹತಾಶ ಸ್ಥಿತಿಗಳಲ್ಲಿ ಸಮಾಧಾನ ಹೇಳುತ್ತಿದ್ದಳು. ಬದುಕನ್ನು ಸಮಯ ಸಂದರ್ಭಗಳಿಗೆ ಹೊಂದಿಕೊಳ್ಳುವ ಹಾಗೆ ರೂಪಿಸಿಕೊಳ್ಳಬೇಕು, ಎಂಥದೇ

ಕಠಿಣ ಪರಿಸ್ಥಿತಿಯಲ್ಲಿ ಎದೆಗೆಡದೆ, ಬಂದದ್ದನ್ನು ಶಾಂತಚಿತ್ತದಿಂದ ಸ್ವೀಕರಿಸಬೇಕು. ಹೆಣ್ಣು ಮಕ್ಕಳಿಗೆ ಸಾಮಾಜಿಕ ಸಂಕೋಲೆಗಳನ್ನು ತೊಡಿಸಿ ಅವರ ಅಸ್ತಿತ್ವವೇ ಗಮನಕ್ಕೆ ಬಾರದಂತೆ ಮಾಡಿದ ಪುರುಷ ಸಮಾಜದ ವಿರುದ್ಧ ಸಿಟ್ಟಿಗೆದ್ದಾಗ ಎಷ್ಟೊಂದು ಸಮಾಧಾನ ಮಾಡಿ, ತನಗೆ ಅವಕಾಶ ಸಿಕ್ಕಾಗ ಸ್ತ್ರೀ ಸಮುದಾಯದ ಉದ್ಧಾರ ಅಭಿವೃದ್ಧಿಯನ್ನು ಮಾಡುವಂತೆ ಪ್ರೋತ್ಸಾಹಿಸಿದ್ದು, ಗಂಡ ಅಲಿಖುಲಿಯ ಉಗ್ರ ರೂಪವನ್ನೂ ಹೆಣ್ಣಿನ ಬಗ್ಗೆ ಇದ್ದ ತಿರಸ್ಕಾರವನ್ನೂ ಸ್ವಾನುಭವದಿಂದ ಅರಿತು, ವಿಧವೆಯಾಗಿ ಜನಾನಾದಲ್ಲಿ ಉಳಿಯಬೇಕಾಗಿ ಬಂದಾಗ, ಅಲ್ಲಿನ ಹೆಂಗಸರ ಶೋಚನೀಯ ಸ್ಥಿತಿ, ದಾಸ್ಯದ ಕ್ರೌರ್ಯ, ಅವರಲ್ಲಿನ ಅಜ್ಞಾನ, ಅಸಹಾಯಕತೆಗಳನ್ನು ದೂರ ಮಾಡಲು ತಾನು ಮಾಡಿದ ಪ್ರಯತ್ನಗಳ ಹಿಂದೆ, ಜನಾನಾದ ಅಡಿಗೆ ಮನೆಯ ಮೇಲ್ವಿಚಾರಣೆಯಲ್ಲಿದ್ದ ತಾಯಿಯ ಪ್ರೇರಣೆ, ಪ್ರೋತ್ಸಾಹಗಳು ಈಗಲೂ ಅವಳಿಗೆ ನೆನಪಾಗುತ್ತಿದ್ದವು.

ಆ ಕ್ಷಣದವರೆಗಿನ ತನ್ನ ಬದುಕಿನ ಒಂದೊಂದು ಸನ್ನಿವೇಶವೂ ಅವಳ ಮುಂದೆ ತೆರೆದುಕೊಳ್ಳುತ್ತಿದ್ದವು. ಹಾಗೆಯೇ ಅಂತಹ ಸನ್ನಿವೇಶಗಳಲ್ಲಿನ ತನ್ನ ವರ್ತನೆ, ಆಲೋಚನೆಗಳನ್ನು ಈಗ ಪ್ರಶ್ನಿಸಿಕೊಳ್ಳುತ್ತಿದ್ದಳು.

ಜಹಾಂಗೀರನ ಸಾವಿನ ಜೊತೆಗೇ ತನ್ನ ಕಥೆ ಮುಗಿದಂತಾಯಿತು. ಎಷ್ಟರ ಮಟ್ಟಿಗೆ ಅಸಹಾಯಕ ಸ್ಥಿತಿ ತಲುಪಿದ್ದಳೆಂದರೆ ತನ್ನ ಅಳಿಯ ಶಹರಿಯಾರನ ಜೊತೆ, ತನ್ನ ಶತ್ರುಗಳು ವರ್ತಿಸಿದ ರೀತಿಯೇ ಅತ್ಯಂತ ಕ್ರೂರವೂ ಭಯಾನಕವೂ ಆಗಿತ್ತು. ಮೊದಲೇ ಕುಷ್ಠರೋಗದಿಂದ ವಿಕಾರವಾಗಿ ರೂಪಾಂತರಗೊಂಡಿದ್ದವನನ್ನು ಅವನಿಂದ ಮುಂದೆ ಯಾವ ತೊಂದರೆಯೂ ಇರಲಾರದೆಂಬ ಅಂಶ ತಿಳಿದಿದ್ದರೂ ನರಕದಲ್ಲೂ ಅಂತಹ ಶಿಕ್ಷೆಗೆ ಹಿಂಜರಿವಂತೆ, ಕಣ್ಣುಗಳನ್ನು ಕಾದ ಕಬ್ಬಿಣದ ಸಲಾಕೆಗಳಿಂದ ತಿವಿದು, ಅಮಾನುಷವಾದ ರೀತಿಯಲ್ಲಿ, ಅವನು ಚೀರುತ್ತಿದ್ದರೂ ಕ್ರೂರವಾಗಿ ನಡೆದುಕೊಂಡದ್ದನ್ನು ನೆನಪಿಸಿಕೊಂಡರೆ ಈಗಲೂ ಅವಳಿಗೆ ನಡುಗುವಂತೆ ಆಗುತ್ತಿತ್ತು.

ಇಂಥೆಲ್ಲ ಶಿಕ್ಷೆಗಳಿಗೆ ಗುರಿ ಮಾಡಲು, ತಾನು ಮಾಡಿದ ಅನ್ಯಾಯವಾದರೂ ಏನು? ಯಾವ ಪಾಪಕ್ಕಾಗಿ ಈ ಶಿಕ್ಷೆ? ಅಲ್ಲಾಹ್? ನೀನೆಷ್ಟು ನಿಷ್ಕರುಣಿ! ಎಂದು ಆರ್ತವಾಗಿ ದೂರುತ್ತಿದ್ದಳು. ತಾನು ಮಾಡಿದ ಒಂದೊಂದು ಕೆಲಸದ ಬಗ್ಗೆಯೂ ಸಮಾಲೋಚಿಸುತ್ತಿದ್ದಳು. ಮೊಘಲ್ ವಂಶದ ಒಬ್ಬೊಬ್ಬರ ಬಗ್ಗೆಯೂ ಅವರ ಸ್ವಭಾವ, ಆಸೆ, ಆಕಾಂಕ್ಷೆಗಳ ವಿಶ್ಲೇಷಣೆಯ ಜೊತೆಯಲ್ಲಿಯೇ ತನ್ನ ವ್ಯಕ್ತಿತ್ವ, ವರ್ತನೆ, ಸ್ವಭಾವಗಳನ್ನು ಹೋಲಿಸಿ ನೋಡುತ್ತಿದ್ದಳು.

ಜಹಾಂಗೀರನನ್ನು ಮಾತ್ರ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದಳು. ಅವನ ಆಳ್ವಿಕೆಯ ಅವಧಿ ಸುವರ್ಣಾಕ್ಷರಗಳಲ್ಲಿ ದಾಖಲಾಗುವ ಹಾಗೆ ನೋಡಿಕೊಂಡಳು. ಅವನ ನೆನಪು ಈಗಷ್ಟೇ ಅಲ್ಲ ಎಂದೆಂದಿಗೂ ಬರುವ ದಿನಗಳಲ್ಲಿ ಮುಂದುವರೆಯಬೇಕು. ತಮ್ಮಿಬ್ಬರ ಅನನ್ಯ ಪ್ರೀತಿ, ಸಂಬಂಧದ ಗಾಢತೆಗಳು ಸದಾಕಾಲ ಜನಮಾನಸದಲ್ಲಿ ಉಳಿಯುವ ರೀತಿಯಲ್ಲಿ ಅವನ ಸಮಾಧಿಯ ಪರಿಸರದಲ್ಲಿಯೇ ಅವನ ನೆನಪುಗಳಲ್ಲಿಯೇ ತನ್ನ ಬದುಕು ಸವೆಯಬೇಕು. ಅವನಿಗೆ ನಿಸರ್ಗವೆಂದರೆ ಬಲುಪ್ರೀತಿ, ಆದ್ದರಿಂದ ದಿಲ್‌ಖುಷಾ

ಉದ್ಯಾನದಲ್ಲಿಯೇ ಸುಂದರ ಸಮಾಧಿ ನಿರ್ಮಾಣ ಮಾಡಬೇಕು. ಮುಕ್ತವಾಗಿ ನಿಸರ್ಗ ಪರಿಸರಕ್ಕೆ ತೆರೆದುಕೊಂಡಿರಬೇಕು ಎಂದು ಭಾವಿಸಿ, ಸಮಾಧಿಯ ಮೇಲೆ ಇಸ್ಲಾಮಿನ ಸಾಂಪ್ರದಾಯಿಕ ರೀತಿಯ ಗುಮ್ಮಟವನ್ನು ನಿರ್ಮಿಸಲಿಲ್ಲ.

ದಾರಿಯುದ್ದಕ್ಕೂ ನೆನಪುಗಳು, ಆಲೋಚನೆಗಳು ನಿರಂತರವಾಗಿ ಅವಳ ಸಾಹಚರ್ಯದಲ್ಲಿ ಇದ್ದುದರಿಂದ ದಾರಿ ಸವೆಸುವಲ್ಲಿ ಎದುರಾದ ಕಷ್ಟಗಳು ಅವಳ ಅನುಭವಕ್ಕೆ ಬರಲೇ ಇಲ್ಲ.

ಶಹದಾರ ತಲುಪಿದ ಮೇಲೆ, ಗಂಡನ ಸಮಾಧಿಯ ವ್ಯಾಪ್ತಿಯಲ್ಲಿಯೇ ವಿಶಾಲವಾದ ವಾಸದ ಮನೆಯೊಂದು ಸಿದ್ಧವಾಗಿತ್ತು. ಅದರಲ್ಲಿ ತಾನು, ತನ್ನ ಜೊತೆಯಲ್ಲಿ ಲಾಡ್ಲಿ ಮೊಮ್ಮಗಳು ಅರ್ಜಾನಿ, ತೀರಾ ವಯಸ್ಸಾದ ನಂಬಿಕೆಯ ಬಂಟ ಹೋಷಿಯಾರ್ ಕೂಡ ಇದ್ದು, ಸರಳವಾದ ಜೀವನ ರೂಪಿಸಿಕೊಂಡಿದ್ದಳು.

ಒಂದು ಕಾಲಕ್ಕೆ ಮೊಘಲ್ ಶಾಹಿ ಪರಂಪರೆಯ ಮಹಾಶಕ್ತಿಶಾಲಿ, ಅತ್ಯಂತ ಚಾಣಾಕ್ಷ, ಸಮರ್ಥ ಆಡಳಿತಗಾರ್ತಿಯಾಗಿ, ವಿಶ್ವದಲ್ಲೇ ಸುಂದರಿಯಾಗಿ ಗುರುತಿಸಿಕೊಂಡು ಅವತರಿಸಿದ ಹೆಣ್ಣಾಗಿ ಹಿಂದೂಸ್ತಾನದ ಆಚೆಗೂ ಮೆಚ್ಚುಗೆಗೆ ಪಾತ್ರಳಾಗಿದ್ದ ಹೆಣ್ಣು ಮುನ್ನೂರು ವರ್ಷಗಳ ಮೊಘಲ್ ಆಳ್ವಿಕೆಯಲ್ಲಿ, ಒಬ್ಬಳೇ ಒಬ್ಬ ಅಪರೂಪದ ಹೆಣ್ಣಾಗಿದ್ದವಳು. ಇಂದು ಪೂರ್ಣ ವಿರಾಗಿಣಿಯಾಗಿ ಬದುಕಲು ಮುಂದಾಗಿದ್ದಳು.

ಅಧ್ಯಾತ್ಮ ತತ್ವ ಚಿಂತನೆ, ಪ್ರಾರ್ಥನೆ, ಖುರಾನ್ ಮಾತ್ರವಲ್ಲದೆ ಜಗತ್ತಿನ ಅನ್ಯ ಧರ್ಮ ಗ್ರಂಥಗಳ ಅಧ್ಯಯನ, ಅನುಸಂಧಾನಗಳಲ್ಲಿ ಮುಳುಗಿಹೋದಳು. ಜೊತೆಯಲ್ಲಿಯೇ ಸಮಾಜೋಪಕಾರಿ ಕೆಲಸಗಳಲ್ಲಿ ತೊಡಗಿಸಿಕೊಂಡಳು. ತನ್ನ ಇತಿಮಿತಿಗಳಲ್ಲಿಯೇ, ದೀನ ದಲಿತರಿಗೆ, ಅಸಹಾಯಕರಿಗೆ, ವಿಧವೆಯರಿಗೆ, ಅವಿವಾಹಿತ ಹೆಣ್ಣು ಮಕ್ಕಳಿಗೆ ಸಹಾಯ ಹಸ್ತ ಚಾಚುತ್ತಾ, ಅವರ ಬದುಕುಗಳಿಗೆ ಬಲವಾಗಿ ಬೆಂಬಲವಾಗಿ ನಿಂತಳು. ಒಂದು ದಿನವೂ ತನ್ನ ಕೈಯಿಂದ ಯಾರಿಗೂ ಸಹಾಯ ತಪ್ಪಿಹೋಗದಂತೆ ನೋಡಿಕೊಂಡಳು.

ಸಮಾಧಿಯ ಪರಿಸರವನ್ನೆಲ್ಲ ಗುಡಿಸಿ, ಸಾರಿಸಿ, ಸ್ವಚ್ಛವಾಗಿ ಇರಿಸುತ್ತಿದ್ದಳು. ಸಮಯ ದೊರೆತಾಗಲೆಲ್ಲ ಖುರಾನ್ ಪಠನ ಮಾಡುತ್ತಿದ್ದಳು. ಅವಳ ಸಹಾಯವನ್ನು ಯಾಚಿಸಿ ಬರುವ ಹೆಣ್ಣು ಮಕ್ಕಳಿಗೆ, ತನ್ನ ಕೈಲಾದ ಸಹಾಯ ಮಾಡುತ್ತಿದ್ದಳು. ಹೆಣ್ಣು ಮಕ್ಕಳಲ್ಲಿನ ಅಜ್ಞಾನವನ್ನು ಹೋಗಲಾಡಿಸಲು ಪರ್ಷಿಯನ್ ಅರೇಬಿಕ್ ಭಾಷೆಗಳನ್ನು ಅಭ್ಯಾಸ ಮಾಡಿಸುವುದರ ಮೂಲಕ, ಪವಿತ್ರ ಖುರಾನ್ ಓದುವಷ್ಟು ಮಟ್ಟಕ್ಕೆ ವಿದ್ಯಾವಂತರನ್ನಾಗಿ ಮಾಡುತ್ತಿದ್ದಳು.

ಅವಳ ಹಿಂದಿನ ದಿನಗಳ ವೈಭವದ ಬದುಕನ್ನು ಜನ ಮರೆತುಬಿಟ್ಟರು. ಅವಳ ಹೆಸರಿನ ನಾಣ್ಯಗಳು ಚಲಾವಣೆಯಿಂದ ಹಿಂದೆ ಸರಿದವು. ಅವಳ ಹಿಮಾಲಯದೆತ್ತರದ ಕೀರ್ತಿ ನೆಲಕ್ಕೆ ಅಪ್ಪಳಿಸಿತು. ಆದರೆ ಈಗ ಮತ್ತೊಂದು ರೀತಿಯಿಂದ ಖ್ಯಾತಿ ವಂತಳಾದಳು. ಅವಳ ವಾಸದ ಮನೆ, ನಿರಾಶ್ರಿತರಿಗೆ ಆಶ್ರಯಧಾಮವಾಯಿತು. ಅವಳ ಔದಾರ್ಯ, ಸೇವಾ ಚಟುವಟಿಕೆಗಳು ಮತ್ತೊಂದು ರೀತಿಯಿಂದ ಖ್ಯಾತಿಯನ್ನು

ತಂದುಕೊಟ್ಟವು. ಸಾಮ್ರಾಜ್ಯದಲ್ಲಿ ಅಧಿಕಾರದ ಕಾರಣದಿಂದ ಅವಳ ಏಳ್ಗೆಯನ್ನು ಸಹಿಸಲಾಗದೆ, ಅವಳ ರೂಪ ಸೌಂದರ್ಯ, ಸಾಮರ್ಥ್ಯ, ಬುದ್ಧಿವಂತಿಕೆಗಳಿಗಾಗಿ ಪ್ರತಿಭೆ, ಪಾಂಡಿತ್ಯಗಳಿಗಾಗಿ ದ್ವೇಷಿಸುವವರು ಅಸೂಯೆ ಪಡುವವರು ಇದ್ದ ಹಾಗೆಯೇ ಅವಳ ಆ ಗುಣಗಳಿಗಾಗಿ ಔದಾರ್ಯಗಳಿಗಾಗಿ ಮೆಚ್ಚಿ ಪ್ರೀತಿಸುವವರೂ ಅಪಾರ ಸಂಖ್ಯೆಯಲ್ಲಿ ಇದ್ದೇ ಇದ್ದರು. ಈಗ ಅವಳಲ್ಲಿ ಯಾವ ಅಧಿಕಾರ ಶ್ರೀಮಂತಿಕೆಗಳು ಇಲ್ಲದಿದ್ದರೂ ಅವಳ ದರ್ಶನಕ್ಕಾಗಿ ಜನ ಬರುತ್ತಲೇ ಇದ್ದರು. ಅವರ ಕಷ್ಟ ಸುಖಗಳಿಗೆ ಸ್ಪಂದಿಸಿ ಸಹಾಯ ಸಲಹೆಗಳನ್ನು ನೀಡುತ್ತಿದ್ದಳು. ಅವಳಿಗೆ ಈಗ ಯಾವುದೂ ಬೇಕಿರಲಿಲ್ಲ. ಸಮಾಧಿಯಲ್ಲಿ ಚಿರನಿದ್ರೆಗೆ ಸಂದ ಗಂಡನೊಂದಿಗೆ ಏಕೀಭಾವವನ್ನು ಅನನ್ಯತೆಯನ್ನು ಅನುಭವಿಸುತ್ತ ಭೌತಿಕ ಸುಖಗಳಿಗಾಗಿ ಒಂದು ಕ್ಷಣವೂ ಹಂಬಲಿಸಲಿಲ್ಲ. ವೇಷಭೂಷಣ ಊಟೋಪಚಾರಗಳಲ್ಲಿ ಅತ್ಯಂತ ಸಾದಾತನ ಸರಳತೆಗಳನ್ನೇ ಬಯಸುತ್ತಿದ್ದಳು. ಒಟ್ಟಿನಲ್ಲಿ ಸಾಧು ಸಂತರು ವಿರಕ್ತರ ರೀತಿಯಲ್ಲಿ ಜೀವಿಸುತ್ತಿದ್ದಳು. ಅವಳ ಸಂಯಮ, ನಿಗ್ರಹಗಳು ಅನನ್ಯವಾಗಿದ್ದವು.

ಮಗಳು ಲಾಡ್ಲಿಯ ಬದುಕೂ ತಾಯಿಯಂತೆಯೇ ಇತ್ತು. ತಾಯಿಯ ಅನುಸರಣೆಯೇ ಅವಳ ಬದುಕಿನ ಗುರಿಯಾಗಿತ್ತು. ತಾಯಿ ಮಕ್ಕಳಿಬ್ಬರೂ ಅತ್ಯಂತ ಧರ್ಮನಿಷ್ಠರಾಗಿದ್ದರು. ಏನಿಲ್ಲವೆಂದರೂ ದಿನಕ್ಕೆ ಐದು ಬಾರಿ ನಮಾಜು ಮಾಡುತ್ತಿದ್ದರು.

ಶಹಜಹಾನ್ ವಾರ್ಷಿಕ ಅನುದಾನವಾಗಿ ಎರಡು ಲಕ್ಷ ರೂಪಾಯಿಗಳನ್ನು ಕೊಡುತ್ತಿದ್ದ. ಆದರೆ ಅದಷ್ಟೇ ಜೀವನಕ್ಕೆ, ಜನ ಸೇವೆಗೆ, ದಾನ ಧರ್ಮಗಳಿಗೆ ಸಾಕಾಗುತ್ತಿರಲಿಲ್ಲ. ಹಾಗೆಂದು ಆಶಿಸಿ ಬಂದವರನ್ನು ನಿರಾಸೆಗೊಳಿಸಿ ಕಳಿಸಲು ಮನಸ್ಸು ಬರಲಿಲ್ಲ. ಆದರೆ ಹಣ ಸಂಗ್ರಹಿಸುವುದು ಹೇಗೆ ಎಂಬ ಚಿಂತೆ ಅವಳನ್ನು ಕಾಡತೊಡಗಿತು. ಖುರ್ರಂ ಉರುಫ್ ಶಹಜಹಾನನ್ನು ಕೇಳಬಹುದಾಗಿತ್ತು. ಅವನೂ ಈಗ ನೂರ್ ಜಹಾನ್ ಮೊದಲಿನಂತಲ್ಲ, ಅವಳೊಬ್ಬ ಸಂತಳಂತೆ ಬದುಕುತ್ತಿದ್ದಾಳೆಂಬ ಮತ್ತು ಪರೋಪಕಾರ, ಸಮಾಜ ಸೇವಾ ಕಾರ್ಯಗಳಲ್ಲಿ ಸಂಪೂರ್ಣವಾಗಿ ತೊಡಗಿಸಿ ಕೊಂಡಿದ್ದಾಳೆಂಬ ಸುದ್ದಿಯನ್ನು ಕೇಳಿದ್ದ. ಅವಳ ಬಗ್ಗೆ ತಳೆದಿದ್ದ ಅನುಮಾನಗಳನ್ನು ಬದಿಗೊತ್ತಿದ. ಆದ್ದರಿಂದ ಅವಳು ಹಣದ ಅಗತ್ಯವಿದೆಯೆಂದು ಕೇಳಿದ್ದರೆ ಖಂಡಿತವಾಗಿ ಉದಾರವಾಗಿ ಕೊಡುತ್ತಿದ್ದ. ಆದರೆ ನೂರ್ ಜಹಾನ್ ಸ್ವಾಭಿಮಾನಿ. ಅಂಗಲಾಚಿ ಬೇಡುವುದನ್ನು ಎಂದೂ ಎಂಥ ಕಷ್ಟಕಾಲದಲ್ಲೂ ರೂಢಿಸಿಕೊಂಡಿರಲಿಲ್ಲ. ಆದರೆ ಈಗ ಆದಾಯವನ್ನು ಸೃಷ್ಟಿಸುವುದು ಹೇಗೆ? ಎಂಬ ಚಿಂತೆ.

ತಾಯಿಯ ಈ ಸಮಸ್ಯೆ ಲಾಡ್ಲಿಯನ್ನೂ ಕಾಡಿತು. ಸಮಾಧಿ ನಿರ್ಮಾಣಕ್ಕೂ ಹಣದ ಅಗತ್ಯವಿತ್ತು. ಅವಳಿಗೆ ಶಹಜಹಾನನ್ನು ಕೇಳಬಹುದೆನಿಸಿತು. ಅಬ್ಬು ದಾದಾರ ಮಹಲುಗಳನ್ನು ಮರು ವಿನ್ಯಾಸಗೊಳಿಸಿ ಕಟ್ಟುವುದಕ್ಕೆ ನೀರಿನಂತೆ ಹಣ ಖರ್ಚು ಮಾಡುತ್ತಿರುವಾಗ ಅಬ್ಬುವಿನ ಸಮಾಧಿ ನಿರ್ಮಾಣಕ್ಕೆ ಹಣ ಕೊಡುವುದಿಲ್ಲವೆಂದು ಖಂಡಿತವಾಗಿ ಹೇಳಲಾರ ಎನ್ನುವ ನಂಬಿಕೆಯಿತ್ತು. ಅದಕ್ಕೇ ಒಂದು ದಿನ ಕಸೂತಿ ಕೆಲಸದಲ್ಲಿ ಮಧ್ಯಾಹ್ನದ ಸಮಯದಲ್ಲಿ ತೊಡಗಿಸಿಕೊಂಡಿದ್ದಾಗ ಅವಳ ಬಳಿ ಬಂದು

ಬಣ್ಣದ ದಾರಗಳ ಉಂಡೆಯನ್ನು ಕೈಗೆತ್ತಿಕೊಂಡು ಅದನ್ನು ಸುಮ್ಮನೆ ಬೆರಳಿಗೆ ಸುತ್ತಿಕೊಳ್ಳುತ್ತಾ ತಾಯಿಯ ಗಮನ ಸೆಳೆಯಲು ಒಂದು ಕೆಮ್ಮು ಕೆಮ್ಮಿದಳು. ನೂರ್ ಜಹಾನಳಿಗೆ ಅರ್ಥವಾಯಿತು. ತನ್ನ ಗಮನ ಸೆಳೆಯುವುದಕ್ಕೆ ಇದು ಸೂಚನೆ ಎಂದುಕೊಂಡು ಮುಗುಳು ನಗುತ್ತಾ,

"ಹೇಳು ಬೇಟಾ ಲಾಡ್ಲಿ ಏನಾದರೂ ಹೇಳುವುದಾಗಲೀ ಕೇಳುವುದಾಗಲಿ ಇದೆಯೇನು?"

"(ಸಂತೋಷದಿಂದಲೇ) ಅಮ್ಮೀ ನಿಮಗೆ ಹಣದ ಮುಗ್ಗಟ್ಟು ಇರುವುದು ಗೊತ್ತಿದೆ. ಮೊಘಲ್ ಖಜಾನೆಯಲ್ಲಿ ಸಾಕಷ್ಟು ಹಣ ಇದೆ. ಜೊತೆಗೆ ಅದರ ಮೇಲೆ ನಿಮ್ಮ ಹಕ್ಕೂ ಇದೆ. ಖುರ್ರಂ ಭಾಯಿಜಾನ್ ಈಗ ಬಾದಶಾಹರಾಗಿರಬಹುದು. ಆದರೂ ಹಳೆಯ ನಂಟುಗಳು ಪ್ರೀತಿಗಳು ಮರುಕಳಿಸಿರಬಹುದಲ್ಲವೇ? ನೀವ್ಯಾಕೆ ಒಮ್ಮೆ ಹಣ ಸಹಾಯಕ್ಕಾಗಿ ಕೇಳಿಕೊಳ್ಳಬಾರದು. ನಮ್ಮವರ ಮಧ್ಯೆ ಅದೆಂಥ ಸಂಕೋಚ?"

"ಲಾಡ್ಲಿ, ನಿನ್ನ ಅಮ್ಮ ಯಾರಿಗೂ ತಲೆ ಬಾಗಿಸಿದವಳಲ್ಲ. ಧಾರಾಳವಾಗಿ ಕೇಳಿದವರಿಗೆಲ್ಲ ಹಣ ಅಧಿಕಾರಗಳನ್ನು ಗಳಿಸಿಕೊಟ್ಟಿದ್ದೇನೆ. ಅವನ ದಿಗ್ವಿಜಯಗಳಿಗೆ ಮೆಚ್ಚಿ ನಾನೇ ಶಹನ್‌ಶಾಹ್ ಶಹಜಹಾನ್ ಬಿರುದನ್ನೂ ಅವನ ಅಬ್ಬುಗೆ ಹೇಳಿ ಕೊಡಿಸಿದ್ದೇನೆ. ಬಾಲ್ಯದಲ್ಲಂತೂ ನನ್ನ ಬಿಟ್ಟು ಇರುತ್ತಿರಲಿಲ್ಲ. ಅವನ ಅಮ್ಮಿಗೆ ಅದೇ ಕಾರಣಕ್ಕೆ ನನ್ನ ಮೇಲೆ ವಿಪರೀತ ಕೋಪ. ಮಗನನ್ನು ಗಂಡನನ್ನು ಸೆಳೆದುಕೊಂಡಿದ್ದೇನೆಂದು ಕಡೆ ಗಳಿಗೆವರೆಗೆ ದ್ವೇಷಿಸುತ್ತಿದ್ದಳು. ಇದೆಲ್ಲವನ್ನು ಮರೆತು ತುಂಬಿದ ಸಭೆಯಲ್ಲಿ ನನ್ನನ್ನು "ಮೆಹರುನ್ನೀಸಾ" ಎಂದು ಸಂಬೋಧಿಸಿ, ಪಾತಾಳಕ್ಕೆ ತಳ್ಳಿಬಿಟ್ಟ. ನನ್ನೆಲ್ಲ ಹಿಂದಿನ ವೈಭವದ ವ್ಯಕ್ತಿತ್ವ ಕೀರ್ತಿಗಳು ಒಮ್ಮೆಲೇ ಮಣ್ಣು ಪಾಲಾಗಿಬಿಟ್ಟವು. ಅಲ್ಲದೆ ಇನ್ನೆಂದೂ ಆಗ್ರಾದತ್ತ ಸುಳಿಯಬಾರದೆಂದೂ ಆದೇಶಿಸಿದ್ದಾನೆ. ನನ್ನ ಅಣ್ಣನೂ ಅವನ ಪರವಾಗಿಯೇ ನಿಂತು, ನಾನು ಮಾಡಿದ ಉಪಕಾರಗಳನ್ನೆಲ್ಲಾ ಮರೆತುಬಿಟ್ಟ. ಹೀಗೆ ಇರುವಾಗ ಯಾವ ಮುಖ ಇಟ್ಟುಕೊಂಡು ಅವನೆದುರು ಕೈ ಚಾಚಲಿ?"

ತಾಯಿಯ ಮಾತುಗಳಲ್ಲಿ ಅರ್ಥವಿದೆ ಎನಿಸಿತು. ತನ್ನ 'ಅಮ್ಮಿ ಬಹಳ ಸ್ವಾಭಿಮಾನಿ; ಮೊದಲಿನಂತೆ ಹೀಗೇ ಇರಲಿ. ದೈನ್ಯ ಸ್ಥಿತಿಯಲ್ಲಿ ಸಾಯುವುದಾಗಲೀ, ಬದುಕುವುದಾಗಲೀ ಬೇಡ. ಪ್ರತಿಷ್ಠೆಯ ಪರಾಕಾಷ್ಠೆಯಲ್ಲಿ, ವೈಭವದ ಅಧಿಕಾರದ ಉತ್ತುಂಗದಲ್ಲಿ ಬದುಕುತ್ತಿದ್ದ ಅಮ್ಮಿಗೆ ಅಲ್ಲಾಹ್ ಯಾಕೆ ಇಂತಹ ಕ್ರೂರ ಶಿಕ್ಷೆಯನ್ನು ನೀಡುತ್ತಿದ್ದಾನೆ. ಅಮ್ಮಿಯ ಚಾಣಾಕ್ಷತೆಯಿಂದ, ಮನಸ್ಸು ಮಾಡಿದ್ದರೆ ಮತ್ತೊಮ್ಮೆ ಹಿಂದಿನ ಬದುಕಿಗೆ ಮರಳಬಹುದಾಗಿತ್ತು. ಆದರೆ ಅದ್ಯಾವುದೂ ಬೇಡವೆಂದು ಸ್ವಯಿಚ್ಛೆಯಿಂದ ಇಂತಹ ವಿರಕ್ತ ನಿರ್ಲಿಪ್ತ ಬದುಕನ್ನು ಆಯ್ದುಕೊಂಡಿದ್ದಾಳೆ. ಅಬ್ಬುವನ್ನು ಎಷ್ಟೊಂದು ಗಾಢವಾಗಿ ಪ್ರೀತಿಸುತ್ತಿದ್ದಳು. ಅಂತಹ ಗಂಡನೇ ತನ್ನ ಪಾಲಿಗೆ ಇಲ್ಲವಾದ ಮೇಲೆ ಯಾವ ಸುಖ, ಸಂಪತ್ತು ಅಧಿಕಾರಗಳು ತನಗೇನು ತಾನೇ ಸಂತೋಷ ಕೊಡಬಲ್ಲವು? ಎಂದು ಯಾವಾಗಲೂ ಹೇಳುತ್ತಿದ್ದಳು. ಅದಕ್ಕೆಂದೇ ಈ ಬದುಕನ್ನು ಪ್ರಶಾಂತತೆಯನ್ನು, ಏಕಾಂತವನ್ನು, ಪರಮಾರ್ಥವನ್ನು ಆರಿಸಿಕೊಂಡು ಬದುಕುತ್ತಿದ್ದಾಳೆ.

ನನ್ನ ಸಣ್ಣ ಪ್ರಾಯದಲ್ಲಿನ ದುರಂತಗಳಿಗೆ ತಾನೇ ಕಾರಣವೆನ್ನುವ ಪಾಪ ಪ್ರಜ್ಞೆಯಿಂದ ಒಳಗೊಳಗೇ ಸಂಕಟಪಡುತ್ತಿದ್ದಾಳೆ. ತನ್ನ ನಂತರ ನನ್ನ ಗತಿಯೇನು ಎಂದು ಚಿಂತಿಸಿ, ನರಕಯಾತನೆ ಅನುಭವಿಸುತ್ತಿದ್ದಾಳೆ. ಇಂಥಾದ್ದರಲ್ಲಿ, ದೈನ್ಯತೆಗೆ ದೂಡುವುದು ಬೇಡವೆಂದು ತನ್ನಲ್ಲಿ ತಾನೇ ನಿರ್ಧರಿಸಿ ನೂರ್ ಜಹಾನಳಿಗೆ ಹೇಳಿದಳು.

"ಅಮ್ಮೀ, ನಿಮ್ಮ ಸ್ವಾಭಿಮಾನಕ್ಕೆ ಧಕ್ಕೆ ಬರುವುದೆಂದು ಯೋಚಿಸದೆ ಹೇಳಿದೆ. ಮಾಫಿ ಮಾಡುತ್ತೀರೆಂದು ನಂಬುತ್ತೇನೆ. ಈಗ ನಿಮ್ಮ ಸ್ವಾಭಿಮಾನವೂ ಸುರಕ್ಷಿತವಾಗಿದ್ದು ಸ್ವಾವಲಂಬನೆಯ ಮಾರ್ಗಗಳಿಂದ ಮತ್ತಷ್ಟು ಪ್ರತಿಷ್ಠೆಗೆ ಸಲ್ಲುವ ದಾರಿಯೊಂದಿದೆ."

"ಹೇಳು ಬೇಟಾ, ನನ್ನ ಮಗಳು ಬಹಳ ಬುದ್ಧಿವಂತೆ. ನನ್ನ ಜೀವ, ನನ್ನ ಬದುಕಿನ ಊರುಗೋಲು. ಇಂಥವಳ ಬದುಕಿನಲ್ಲಿನ ಸುಖವನ್ನು ಕಿತ್ತುಕೊಂಡು ಅಪರಾಧ ಮಾಡಿದೆ. ಇವುಗಳನ್ನೆಲ್ಲ ಕಳೆದುಕೊಳ್ಳುವುದು ಹೇಗೆ?"

"ಅಮ್ಮಿ ಸುಮ್ಮನೆ ಇಲ್ಲಸಲ್ಲದ್ದನ್ನು ಹಚ್ಚಿಕೊಂಡು ಸಂಕಟಪಡುತ್ತಿದ್ದೀರಿ. ಮೊದಲು ಹಣವನ್ನು ಹೊಂದಿಸಿ ನಿಮ್ಮ ಯೋಚನೆ, ಯೋಜನೆ ಪೂರೈಸುವುದು ಹೇಗೆಂದು ನೋಡಿ."

ಥಟ್ಟನೆ ನೂರ್ ಜಹಾನಳಿಗೆ ತನ್ನ ಸ್ವಂತ ಆಸ್ತಿಯಾಗಿದ್ದ ಒಡವೆಗಳು ನೆನಪಾದವು.

"ಲಾಡ್ಲಿ ದಾರಿ ಸಿಕ್ಕಿತು" ಎಂದು ಹೇಳುತ್ತಾ ತನ್ನ ಮಲಗುವ ಕೋಣೆಯತ್ತ ಧಾವಿಸಿದಳು. ಅಲಮಾರುಗಳಲ್ಲಿ ಇದ್ದ ಬಟ್ಟೆ ಬರೆಗಳನ್ನೆಲ್ಲ ಎಳೆದೆಳೆದು ನೆಲದ ಮೇಲೆ ಎಸೆದಳು. ಗಾಬರಿಯಾಯಿತು. ತನ್ನ ಆಭರಣಗಳ ಪೆಟ್ಟಿಗೆ ಏನಾಯಿತೆಂದು ಸರಭರ ಹುಡುಕಿದಳು. ಕಡೆಗೆ ಅದು ದೂರದ ಮೂಲೆಯಲ್ಲಿ ಅಡಗಿ ಕುಳಿತಿತ್ತು. ಮುಖ ಅಗಲಿಸಿ ಅದನ್ನು ಕೈಗೆತ್ತಿಕೊಂಡು ಒಂದೊಂದನ್ನೇ ಪರಿಶೀಲಿಸಿದಳು. ಕಣ್ಣು ಒದ್ದೆಯಾಯಿತು. ಹಳೆಯ ನೆನಪುಗಳು ಮರುಕಳಿಸಿದವು. ಜಹಾಂಗೀರ್ ಅವಳ ಪಟ್ಟಕ್ಕೆ ಉಡುಗೊರೆಯಾಗಿ ಕೊಟ್ಟಿದ್ದ ಕಂಠಾಭರಣವನ್ನು ಕೈಗೆತ್ತಿಕೊಂಡು ಜೀವಂತ ಮಗುವನ್ನು ಎದೆಗಪ್ಪಿಕೊಂಡಂತೆ ಆ ಆಭರಣವನ್ನು ಅಪ್ಪಿಕೊಂಡಳು. ಅದರ ಹಿಂದೆ ತಮ್ಮಿಬ್ಬರ ಪ್ರೀತಿಯ ಎಷ್ಟೊಂದು ಮಧುರ ಕ್ಷಣಗಳು! ಆದರೂ ಅದನ್ನು ಈಗ ಮಾರಲೇಬೇಕು. ತನಗದರಿಂದ ಯಾವ ಪ್ರಯೋಜನವೂ ಇಲ್ಲ. ತನಗೆ ಅದನ್ನು ಧರಿಸಿ ಮೆರೆಯಬೇಕಾದ್ದೂ ಇಲ್ಲ. ಹಲವು ತನ್ನ ಖಾಸಗಿ ಒಡವೆಗಳನ್ನು ಲಾಡ್ಲಿಯ ಮಗಳು ಅರ್ಜಾನಿ ಮದುವೆಗೆಂದು ಕೊಟ್ಟುಬಿಟ್ಟಿದ್ದಳು. ಈಗ ಈ ಅಮೂಲ್ಯವಾದ ಆಭರಣಗಳು ಸಾಕಷ್ಟು ಹಣವನ್ನು ತಂದುಕೊಡಬಲ್ಲವೆನಿಸಿತು.

ಬಂದ ಹಣದಿಂದ ಸ್ವಲ್ಪ ಹಣವನ್ನು ಅಸಹಾಯಕ ಹೆಣ್ಣು ಮಕ್ಕಳ ಮದುವೆಗೆಂದಿರಿಸಿದಳು. ಉಳಿದದ್ದರಲ್ಲಿ ಬಹಳವಾಗಿ ನಂಬಿದ್ದ ಹಜರತ್ ಮಿಯಾಂ ಸಂತನಿಗಾಗಿ ಒಂದು ಸಮಾಧಿ ಕಟ್ಟಿಸುವುದು ಮತ್ತು ಹೆಣ್ಣು ಮಕ್ಕಳ ಮದುವೆಗಾಗಿ ಹಣ ಸಹಾಯ ಮಾಡುವುದು ಅವಳ ಉದ್ದೇಶವಾಗಿತ್ತು.

ಜೊತೆಜೊತೆಯಲ್ಲಿಯೇ ಸಣ್ಣ ಪ್ರಮಾಣದಲ್ಲಿ ಹೊಲಿಗೆ, ವಸ್ತ್ರವಿನ್ಯಾಸ, ಕಸೂತಿ ಕಲೆಯನ್ನು ಬಳಸಿಕೊಂಡು ವೃತ್ತಿಯೊಂದನ್ನು ಅಸಹಾಯಕ ಹೆಣ್ಣು ಮಕ್ಕಳನ್ನು ಒಳಗೊಂಡು ಉದ್ದಿಮೆಯನ್ನು ಪ್ರಾರಂಭಿಸಿ, ಅವರಿಗೂ ಒಂದು ಸ್ವಾವಲಂಬಿ

ಬದುಕಿನ ದಾರಿ ತೋರಿ ತಾನೂ ಸ್ವಲ್ಪ ಆದಾಯವನ್ನು ಗಳಿಸಿಕೊಳ್ಳುವ ವ್ಯವಸ್ಥೆಯನ್ನು ಮಾಡಿಕೊಂಡಳು. ಇಷ್ಟೆಲ್ಲಾ ಇದ್ದೂ ತನ್ನ ಧಾರ್ಮಿಕ ದಿನಚರ್ಯೆಯನ್ನು ಬಿಟ್ಟುಕೊಡಲಿಲ್ಲ. ಬಹಳ ನಿಷ್ಠೆಯಿಂದ, ಖುರಾನ್ ಪಠನ, ನಮಾಜುಗಳನ್ನು ಮಾಡುತ್ತಿದ್ದಳು.

ಅರಿವಿಲ್ಲದೆ ದಿನಗಳು ಸಾಗಿಹೋಗುತ್ತಿದ್ದವು. ಕಾಲ ನಿಲ್ಲುವುದಿಲ್ಲ. ಯಾರಿಗಾಗಿಯೂ ಕಾಯುವುದಿಲ್ಲ. ಹೆಚ್ಚು ಸಮಯವನ್ನು ಇತ್ತೀಚೆಗೆ ತನ್ನ ಗಂಡನ ಸಮಾಧಿಯ ಸಾನ್ನಿಧ್ಯದಲ್ಲಿಯೇ ಕಳೆಯುತ್ತಿದ್ದಳು. ವ್ರತ, ನೇಮ, ನಿಷ್ಠೆಗಳ ಅನುಸರಣೆ, ಖುರಾನ್ ಪಠನಗಳು ಹೆಚ್ಚು ವೇಳೆ ನಡೆಯುತ್ತಿದ್ದವು. ಊಟ, ತಿಂಡಿಗಳ ಚಿಂತೆಯಿಲ್ಲ. ದೈನಂದಿನ ಚಟುವಟಿಕೆಗಳಲ್ಲಿ ಸದಾ ತೊಡಗಿಸಿಕೊಂಡೂ ಇರುತ್ತಿದ್ದಳು. ಮಾಡಬೇಕಾದ ಕರ್ತವ್ಯಗಳನ್ನು, ಬೇಡಿ ಬಂದವರಿಗೆ ಅನ್ನ, ಬಟ್ಟೆಗಳನ್ನು ಅಲ್ಪಸ್ವಲ್ಪ ಹಣದ ಸಹಾಯವನ್ನೂ ಮಾಡುತ್ತಿದ್ದಳು. ವಯಸ್ಸೂ ಮಾಗುತ್ತಿತ್ತು. ಮನಸ್ಸೂ ಮಾಗುತ್ತಿತ್ತು. ಕಾಲದ ಪ್ರಭಾವದ ಕುರುಹಾಗಿ ನಳನಳಿಸುತ್ತಿದ್ದ, ಕಾಂತಿಯುಕ್ತವಾಗಿ ಹೊಳೆಯುತ್ತಿದ್ದ, ಶ್ವೇತ ಕಮಲದಂತೆ ನವಿರಾಗಿ, ನುಣುಪಾಗಿ ಇದ್ದ ಮೊಗದಲ್ಲಿ ಸುಕ್ಕುಗಳು ಅಲೆಅಲೆಯಾಗಿ ಕಾಣಿಸಿಕೊಳ್ಳತೊಡಗಿದವು. ಬದುಕಿನ ಬಗ್ಗೆ ಪ್ರಪಂಚದ ಬಗ್ಗೆ ನಿರ್ಮೋಹಿಯಾದಳು. ಹೋಷಿಯಾರನ ಸಾವು, ವಯಸ್ಸಿನಿಂದಾಗಿ, ಸಹಜವೇ ಆಗಿದ್ದರೂ, ಅವಳನ್ನು ಸ್ವಲ್ಪ ಮಟ್ಟಿಗೆ ಅಧೀರಳನ್ನಾಗಿಸಿತು. ಬದುಕಿನ ನಶ್ವರತೆ ಅರ್ಥವಾಗಿತ್ತು. ತನ್ನನ್ನು ಸಂಪೂರ್ಣವಾಗಿ ಅಲ್ಲಾಹ್‌ನಿಗೆ ಸಮರ್ಪಿಸಿಕೊಂಡಳು.

ತಾಯಿಯಲ್ಲಿ ಕ್ರಮೇಣ ಆಗುತ್ತಿದ್ದ ಬದಲಾವಣೆಗಳನ್ನು ಲಾಡ್ಲಿ ಗಮನಿಸಿದಳು. ಏನೋ ಹೇಳಲಾಗದ ಸಂಕಟ, ಯಾವುದೋ ಅಪರಾಧಭಾವ ಅವಳನ್ನು ಕಾಡುತ್ತಿತ್ತು.

ರಾತ್ರಿಗಳು ಭಯಾನಕವೆನಿಸುತ್ತಿದ್ದವು. ನಿದ್ದೆ ಬಾರದೆ ಎದ್ದು ಶತಪಥ ತಿರುಗುತ್ತಿದ್ದಳು. ಏನೇನೋ ನೆರಳುಗಳನ್ನು ಕಂಡಂತೆ ಭಯಭೀತಳಾಗುತ್ತಿದ್ದಳು. ಸುಮ್ಮನೆ ಮನೆಯ ಸುತ್ತ ಒಂದು ಸುತ್ತು ಹಾಕುತ್ತಿದ್ದಳು. ಒಮ್ಮೊಮ್ಮೆ "ಲಾಡ್ಲಿ ಜಹಾಂಪನಾಹ್‌ರು ನನ್ನನ್ನು ಕರೆಯುತ್ತಿದ್ದಾರೆ. ನಾನು ಹೋದರೆ ನಿನ್ನ ಗತಿ ಏನಾಗುವುದೋ ಎನ್ನುವ ಚಿಂತೆ ಕಾಡುತ್ತಿದೆ. ಆತ್ಮಶೋಧ ಮಾಡಿಕೊಳ್ಳಬೇಕು. ತನ್ನಿಂದಾದ ತಪ್ಪುಗಳನ್ನು ಒಪ್ಪಿಕೊಂಡು ಅಲ್ಲಾಹ್‌ನಿಂದ ಕ್ಷಮೆ ಯಾಚಿಸಬೇಕು. ಎಲ್ಲರಿಗೂ ಮಾಡಿದ ಅನ್ಯಾಯ ಅನಾಹುತಗಳಿಗಿಂತ ಹೆತ್ತ ಮಗಳಿಗೇ ಅನ್ಯಾಯ ಮಾಡಿದ್ದು ಸುಖ, ಸಂತೋಷಗಳಿಂದ ಬದುಕುವ ಆಸೆಯನ್ನೇ ಚಿವುಟಿಬಿಟ್ಟಿದ್ದು, ಸುಖಪಡಬೇಕಾದ ಕ್ಷಣಗಳಲ್ಲಿ ಗಾದಿಗಾಗಿ ಅಯೋಗ್ಯ ಶಹರಿಯಾರನನ್ನು ಅವಳ ಕುತ್ತಿಗೆಗೆ ಬಿಗಿದದ್ದು, ಆ ಅಸಮರ್ಥನ ಸಾವಿನಿಂದ ಎಳೆಯ ಪ್ರಾಯದಿಂದಲೇ ವೈಧವ್ಯದ ಹೊರೆ ಹೊರುವಂತೆ ಮಾಡಿದ್ದು, ಜಗತ್ ಪ್ರಸಿದ್ಧ ಕಲಾವಿದನೊಂದಿಗಿನ ಅವಳ ಪ್ರೀತಿಯನ್ನು ಹೊಸಕಿಹಾಕಿದ್ದೇ ಅಲ್ಲದೆ ಅವನನ್ನು ಕೊಲ್ಲಿಸಿದ್ದಂತೂ ಅಕ್ಷಮ್ಯ ಅಪರಾಧ. ಆ ಅಪರಾಧದ ಹೊರೆ ಹೊತ್ತು ಸತ್ತು ನರಕ ಅನುಭವಿಸುವುದಕ್ಕಿಂತ ನನ್ನ ಮಗಳಿಗೆ ಸತ್ಯ ಹೇಳಿ ಹೊರೆಭಾರ ಇಳಿಸಿಕೊಳ್ಳುವುದೇ ಕ್ಷೇಮವೆಂದುಕೊಂಡಳು. ಆದರೆ ಈ ಸತ್ಯ ಸಂಗತಿ ತಿಳಿದರೆ ಇಲ್ಲಿವರೆಗೆ ತನ್ನ ಮೇಲೆ ಬೆಳೆಸಿಕೊಂಡ ಪ್ರೀತಿ, ನಂಬಿಕೆಗಳು ಏನಾಗಬಹುದೆಂದು ನೂರ್ ಜಹಾನಳು ಸಂದಿಗ್ಧದಲ್ಲಿ ಸಿಲುಕಿದಳು. ಆದರೂ ಪಾಪ ಪ್ರಜ್ಞೆಯಿಂದ ಬಿಡುಗಡೆ

ಹೊಂದಲು ಸತ್ಯವನ್ನು ಅವಳಿಗೆ ತಿಳಿಸಲೇ ಬೇಕು ಎಂದು ದೃಢ ನಿರ್ಧಾರ ಮಾಡಿದ ಮೇಲೆ ಸ್ವಲ್ಪ ಹಗುರಾದ ಮೇಲೆ ನಿದ್ದೆಗೆ ಜಾರಿದಳು.

ಮರುದಿನ ಎಂದಿನಂತೆ, ಮಸುಕು ಮಸುಕು ಬೆಳಕಿನಲ್ಲಿಯೇ ಎದ್ದು ಪ್ರಾರ್ಥನೆಗೆ ಸಿದ್ಧಳಾಗುತ್ತಿದ್ದವಳು ಇಷ್ಟು ಹೊತ್ತೇರಿದರೂ ಕಣ್ಣು ಬಿಟ್ಟಿರಲಿಲ್ಲ. ದೇಹವೆಲ್ಲ ಜಡವಾಗಿತ್ತು. ಅವಳ ಕೋಣೆ ಮೌನವಾಗಿತ್ತು. ಎದ್ದ ಗದ್ದಲ ಕೇಳಿಸಲಿಲ್ಲ. ಲಾಡ್ಲಿಗೆ ಯಾಕೋ ಅನುಮಾನ. ಅಮ್ಮೀಗೆ ಏನೂ ಆಗದಿರಲಿ, ಯಾ ಅಲ್ಲಾಹ್ ಅಂದುಕೊಳ್ಳುತ್ತಾ ಒಳಗೆ ಪ್ರವೇಶಿಸಿ, ಮೆಲ್ಲಗೆ ಅಲ್ಲಾಡಿಸಿದಳು. ಸಾವಿನ ನಿದ್ದೆಯಿಂದ ಎದ್ದವಳಂತೆ ಕಣ್ಣೆಳೆಯುತ್ತಲೇ ಎವೆಗಳನ್ನು ಬಿಚ್ಚಿದಳು. ದುರ್ಬಲ ನೋಟ ಬೀರಿದಳು. ಲಾಡ್ಲಿಯೇ ಅಮ್ಮನನ್ನು ಪ್ರಶ್ನಿಸುವ ಬದಲು ಅಮ್ಮನೇ ಅವಳನ್ನು "ಲಾಡ್ಲಿ ಯಾಕೆ ನಿದ್ದೆ ಮಾಡಲಿಲ್ಲವೇ? ಇಷ್ಟು ಬೇಗ ಎದ್ದು ಬಂದಿದ್ದೀಯ?" ಎಂದಳು.

"ಅಮ್ಮೀ ಈ ಪ್ರಶ್ನೆಯನ್ನು ನಾನು ನಿನಗೆ ಕೇಳಬೇಕು. ಎಷ್ಟು ಹೊತ್ತಾಗಿದೆ ನೋಡು."

"ಹೌದೇ? ಮೈ ಮೇಲೆ ಎಚ್ಚರವೇ ಇರಲಿಲ್ಲ" ಯಾಕೋ ನಿದ್ದೆ ಮಾಡುತ್ತಲೇ ಇರಬೇಕೆನಿಸುತ್ತದೆ. ಕಣ್ಣು ಬಿಟ್ಟರೆ ಭಯವಾಗುತ್ತದೆ. ನನ್ನ ಸುತ್ತಲೂ ಬೇಟೆಗಾರರು ಇದ್ದಂತೆ ಭಾಸವಾಗುತ್ತದೆ.

ಲಾಡ್ಲಿಗೆ ಅಮ್ಮನ ಸ್ಥಿತಿ ಗಾಬರಿ ಹುಟ್ಟಿಸಿತು. ಅವಳ ಬೆದರಿದ ಕಣ್ಣುಗಳು, ಕಣ್ಣುಗಳ ಸುತ್ತ ಕಪ್ಪನೆಯ ವರ್ತುಲಗಳು. ಬಡಪಾಯಿ ಲಾಡ್ಲಿ ಈಗ ಒಬ್ಬಳೇ. ಜೊತೆಗಿದ್ದ ಹೋಷಿಯಾರ್ ಕೂಡಾ ತೀರಿಕೊಂಡಿದ್ದ. ಏನು ಮಾಡಬೇಕೆಂದು ತೋಚಲಿಲ್ಲ. ಕೂಡಲೇ ತಮಗೆ ಮೊದಲಿನಿಂದಲೂ ಪರಿಚಿತನಿದ್ದ ಹಕೀಮನನ್ನು ಕರೆಸಿ ಪರೀಕ್ಷಿಸಿ ಹೇಳಲು ಕೇಳಿಕೊಂಡಳು. ಆ ಹಕೀಮ ನೂರ್‌ಳನ್ನು ಬಹಳ ಸೂಕ್ಷ್ಮವಾಗಿ ಪರೀಕ್ಷಿಸಿದ. ನಾಡಿ ಹಿಡಿದು ನೋಡಿದ. ಯಾವುದೇ ಕಾಯಿಲೆಯ ಲಕ್ಷಣ ಕಾಣಿಸಲಿಲ್ಲ. ಆದರೆ ಬಹಳವಾಗಿ ಸೊರಗಿ ಹೋಗಿದ್ದಳು.

"ಲಾಡ್ಲಿ ಬೇಗಂ ನಿನ್ನ ಅಮ್ಮಿಗೆ ಯಾವುದೇ ಕಾಯಿಲೆಯಿಲ್ಲ. ಮನೋರೋಗ ಅವರನ್ನು ಈ ಸ್ಥಿತಿಗೆ ತಂದಿದೆ. ಮನಸ್ಸಿನಲ್ಲಿ ಯಾವುದೋ ಗಂಭೀರ ಚಿಂತೆಯನ್ನು ಇರಿಸಿಕೊಂಡಿದ್ದಾರೆ. ಮನಸ್ಸಂತೋಷವನ್ನು ತಂದುಕೊಂಡರೆ ಮಾತ್ರವೇ ಆರೋಗ್ಯ ಸುಧಾರಿಸಬಲ್ಲದು. ಈಗ ಸದ್ಯಕ್ಕೆ ಕೆಲವು ಔಷಧಗಳನ್ನು ಕೊಡುತ್ತೇನೆ. ಮನಸ್ಸು ಶಾಂತವಾಗುತ್ತದೆ" ಎಂದು ಹೇಳಿ ಹಕೀಮ ಒಂದಷ್ಟು ಔಷಧಿಗಳನ್ನು ಪುಡಿಗಳ ರೂಪದಲ್ಲಿ ಕೊಟ್ಟು ಹೇಗೆ ಬಳಸಬೇಕೆಂಬುದನ್ನು ವಿವರಿಸಿದ. ಒಂದೆರಡು ದಿನಗಳನ್ನು ಬಿಟ್ಟು ಮತ್ತೆ ಬಂದು ನೋಡುವುದಾಗಿ ಹೇಳಿದ.

ಲಾಡ್ಲಿ ಹಕೀಮನ ಹಿಂದೆ ಹೋಗಿ, ಕಳಿಸಿಕೊಟ್ಟು ಮತ್ತೆ ಅಮ್ಮನ ಬಳಿಗೆ ಹಿಂತಿರುಗಿದಳು.

"ಅಮ್ಮೀ ಆಗಿ ಹೋದದ್ದನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳುವುದರಿಂದ ನಿನಗೆ ಬರುವ ಪ್ರಯೋಜನವಾದರೂ ಏನು? ದೇವರನ್ನು ಸ್ಮರಿಸುತ್ತಾ ಪಾಪಗಳನ್ನು ಕಳೆಯುವಂತೆ ಪ್ರಾರ್ಥಿಸು."

"ಲಾಡ್ಲಿ, ನಾನು ಮಾಡಿದ ಪಾಪದ ಪ್ರಮಾಣ ಸಣ್ಣದಲ್ಲ. ಅಲ್ಲಾಹ್ ಎಂದೆಂದಿಗೂ ಕ್ಷಮಿಸುವುದಿಲ್ಲ. ನಾನು ಯಾರಿಗೆ ಅನ್ಯಾಯ ಮಾಡಿದೆನೋ ಅವರಿಂದಲೇ ಕ್ಷಮೆ ಸಿಗುವುದಾದರೆ ಬಹುಶಃ ಅಲ್ಲಾಹ್‌ನಿಂದಲೂ ಕ್ಷಮೆ ಸಿಗಬಹುದು."

"ಯಾರಿಗಂತಹ ಅನ್ಯಾಯ ಮಾಡಿದ್ದೀಯ ಅಮ್ಮೀ. ನೀನು ಅನ್ಯಾಯ ಮಾಡುವುದಕ್ಕೆ ಪಾಪ ಮಾಡುವುದಕ್ಕೆ ಸಾಧ್ಯವೇ ಇಲ್ಲ."

"ಅದು ನಿನ್ನ ಅತಿಯಾದ ಭರವಸೆ, ನಂಬಿಕೆ. ಲಾಡ್ಲಿ ನನ್ನನ್ನು ಕಂಡರೆ ನಿನಗೆ ಬೇಸರ, ಅಸಮಾಧಾನ ಇಲ್ಲ ತಾನೇ?"

"ಇದ್ಯಾಕೆ ಇದ್ದಕ್ಕಿದ್ದಂತೆ ಇಂತಹ ಅನುಮಾನ?... ನಿನ್ನನ್ನು ನಾನು ಆರಾಧಿಸುತ್ತೇನೆ. ನಿನ್ನ ಮಹಾನ್ ಶಕ್ತಿ ಸಾಮರ್ಥ್ಯಗಳಿಗಾಗಿ ನಾನು ನಿನ್ನನ್ನು ಗೌರವಿಸುತ್ತೇನೆ ಅಂಥಾದ್ದರಲ್ಲಿ ಈ ಅನುಮಾನ?"

"ಇಲ್ಲ ಲಾಡ್ಲಿ. ನಿನಗೆ ಊಹಿಸಿಕೊಳ್ಳಲೂ ಸಾಧ್ಯವಾಗದ ದ್ರೋಹ, ನಿನ್ನ ಅಮ್ಮಿಯಿಂದ ನಿನಗಾಗಿದೆ. ನಿನ್ನ ಬದುಕನ್ನೇ ಹಾಳು ಮಾಡಿದೆ. ನಿನ್ನ ಕನಸುಗಳನ್ನು ಸುಟ್ಟು ಹಾಕಿದೆ. ನನ್ನ ಸ್ವಾರ್ಥಕ್ಕಾಗಿ ನಿನ್ನ ಮನಸ್ಸಿನ ಭಾವನೆಗಳನ್ನು ಅರ್ಥ ಮಾಡಿಕೊಳ್ಳದೆ, ನಿನ್ನ ಆಸೆ ಆಕಾಂಕ್ಷೆಗಳಿಗೆ ವಿರುದ್ಧವಾದ ಕೆಲಸಗಳಿಗೆ ಒತ್ತಾಯಿಸಿದೆ. ಖುಸ್ರೋ, ಖುರ್ರಂ, ಶಹರಿಯಾರರನ್ನು ಒಲಿಸಿಕೊಳ್ಳುವಂತೆ ಒತ್ತಾಯಿಸಿ ಕೆಟ್ಟ ಅಮ್ಮನಾದೆ. ಹೃದಯಾಂತರಾಳದಿಂದ ಪ್ರೀತಿಸಿದ ಕಲಾವಿದನನ್ನು ನಿನ್ನಿಂದ ದೂರ ಮಾಡಿದೆ. ಒಬ್ಬ ಸಾಮಾನ್ಯ ಬಡ ಕಲಾವಿದನನ್ನು ನಾಳೆ ಚಕ್ರವರ್ತಿನಿಯಾಗಿ ಮೆರೆಯಬೇಕಾದ ನೀನು ಪ್ರೀತಿಸುವುದನ್ನು ನನಗೆ ಸಹಿಸಿಕೊಳ್ಳಲು ಆಗಲಿಲ್ಲ. ಆದರೆ ನನ್ನ ವಿಚಾರ ಬೇರೆ? ನಿಜವಾಗಿಯೂ ನಾನು ಸಲೀಂ ಜಹಾಂಗೀರ್ ಬಾದಶಾಹರನ್ನು ಪ್ರೀತಿಸಿದೆ. ಆದರೆ ಜನ ಅದನ್ನು ಅರ್ಥ ಮಾಡಿಕೊಳ್ಳಲಿಲ್ಲ. ನಾನು ಅಧಿಕಾರಕ್ಕಾಗಿ ತಖ್ತ್ ತಾಜ್‌ಗಳಿಗಾಗಿ ಪ್ರೀತಿಸಿದೆ ಎಂದೇ ಭಾವಿಸಿದ್ದಾರೆ. ಆದರೆ ನೀನು ಯಾವುದೇ ಸ್ವಾರ್ಥವಿಲ್ಲದೆ ನಿಷ್ಕಲ್ಮಷ ಮನಸ್ಸಿನಿಂದ, ಆ ಬಡ ಕಲಾವಿದ, ಏನು ಅವನ ಹೆಸರು...? ಎಂದು ಮಾತಾಡುತ್ತಲೇ ಆಯಾಸದಿಂದ ಕೆಮ್ಮುವುದಕ್ಕೆ ಆರಂಭಿಸಿದಳು.

"ಅಮ್ಮೀ ಅದೆಲ್ಲ ಈಗೇಕೆ? ಅಲ್ಲಾಹ್‌ನ ನಿರ್ಣಯದಂತೆ ಘಟನೆಗಳು ನಡೆಯುತ್ತವೆ. ಯಾರು ಯಾರಿಗೆ ಮೋಸ ಮಾಡಿದರು, ಯಾಕೆ ಎನ್ನುವುದು ಅವನಿಗೆ ಮಾತ್ರವೇ ತಿಳಿದಿರುತ್ತದೆ. ಸುಮ್ಮನೆ ಮಾತಾಡಿ ಆಯಾಸ ತಂದುಕೊಳ್ಳಬೇಡ."

"ಲಾಡ್ಲಿ ನನ್ನನ್ನು ತಡೆಯಬೇಡ. ಸಾಯುವುದಕ್ಕೆ ಮೊದಲು ಮಾಡಿದ ಅಪರಾಧವನ್ನು ಒಪ್ಪಿಕೊಂಡು, ಅದೆಂಥದ್ದೆಂದು ವಿವರಿಸಿ, ಸತ್ಯವನ್ನು ಬಯಲು ಮಾಡದಿದ್ದರೆ, ಸತ್ತ ಮೇಲೆ ವಿಚಾರಣೆಯನ್ನು ಆ ಅವನ ಮುಂದೆ ಎದುರಿಸುವುದಾದರೂ ಹೇಗೆ?"

"ಅಮ್ಮೀ, ಅವನು ನಾನು ಪ್ರೀತಿಸಿದ್ದು ನಿಜ. ಆ ಪ್ರೀತಿಯೂ ಕೂಡ ನಿಮ್ಮ ಕಣ್ಣಾಣೆಯಲ್ಲಿ ಇತ್ತು. ಜಹಾಂಪನಾಹ್‌ರ ದೃಷ್ಟಿಗೆ ಬಿದ್ದರೆ ಇಮ್ರಾನ್‌ಗೆ ಮರಣದಂಡನೆ ತಪ್ಪುತ್ತಿರಲಿಲ್ಲ. ದೊಡ್ಡವರ ಮಕ್ಕಳಾಗಿ ಬಾಳುವುದೆಂದರೆ, ಶಾಪವನ್ನು ಅನುಭವಿಸುವುದಾಗಿದೆ. ಎಂದಿಗೂ ಅವರು ಮದುವೆಗೆ ಒಪ್ಪುತ್ತಿರಲಿಲ್ಲ. ಹಾಗೆಯೇ ಇಮ್ರಾನ್‌ನನ್ನು ಬಿಟ್ಟು ಬಿಡಬಹುದಿತ್ತು. ಎಚ್ಚರಿಕೆ ನೀಡಬಹುದಿತ್ತು. ಅದರ ಬದಲು

ಅವನ ಕೊಲೆ? ಎಂಥ ಭಯಾನಕ ಶಿಕ್ಷೆ!! ಇಷ್ಟಕ್ಕೂ ಅವನು ಮಾಡಿದ ತಪ್ಪೇನು? ಪ್ರೀತಿಸಿದ್ದು!? ಇದೇನು? ಮಹಾಪರಾಧವಂತೂ ಅಲ್ಲವಲ್ಲ? ಕೊಲೆ ಮಾಡಿದ, ಮಾಡಿಸಿದವರು ಎಷ್ಟರ ಮಟ್ಟಿನ ಕ್ರೂರಿಗಳಾಗಿರಬಹುದು!"

"ಅವರು ಯಾರೆಂದು ನಿನಗೆ ಗೊತ್ತೇನು?"

"ಗೊತ್ತು."

"ಗೊತ್ತು? ಹಾಗಾದರೆ ಯಾರು ಹೇಳು."

"ನನ್ನ ಉತ್ತರವನ್ನು ಕೇಳಿ ನಿನಗೆ ಸಹಿಸಿಕೊಳ್ಳಲು ಸಾಧ್ಯವೇ?"

"ಲಾಡ್ಲೀ ಲಾಡ್ಲಿ ಸಾಯುವ ಕ್ಷಣಗಳಲ್ಲಿ ಒಗಟುಗಳು ಬೇಡ. ನಿನಗೆ ಗೊತ್ತಿರುವ ಸತ್ಯವೇನೆಂದು ನಾನೇ ಹೇಳಿಬಿಡುತ್ತೇನೆ... ಕೊಲೆ ಮಾಡಿಸಿದವಳು ನಾನೆ! ನಾನೇ ಲಾಡ್ಲಿ ಆ ಪಾಪಿ ತಾಯಿ ನಾನೇ. ಯಾವ ಮಗಳಿಗೂ ಇಂತಹ ತಾಯಿ ಇರಲು ಸಾಧ್ಯವೇ ಇಲ್ಲ ಅಲ್ಲವೆ."

"ಈಗ ಪಶ್ಚಾತಾಪ ಪಡುವುದರಿಂದ ಬರುವ ಲಾಭವಾದರೂ ಏನು? ನನಗೆ ಗೊತ್ತಿತ್ತು. ಮೊಘಲ್ ರಾಜವಂಶದ ರಾಜರಿಗೆ ದೇಹ ಸುಖವಷ್ಟೇ ಬೇಕು. ಪ್ರೀತಿ ಗೀತಿಗಳು ಅರ್ಥವಾಗುವುದಿಲ್ಲ. ನಿಮ್ಮ ಸಂದರ್ಭದಲ್ಲಿಯೂ ಅದೇ ತಾನೇ. ಅದನ್ನು ಅಕ್ಬರ್ ಬಾದಶಾಹರು ತೀರಿಕೊಂಡ ಕಾರಣ ಅಲಿಖುಲಿಯೂ ಅಂದರೆ ನನ್ನ ಅಬ್ಬುವೂ, ಕೊಲೆಯಾದ ಕಾರಣ ನಿಮ್ಮ ಪ್ರೀತಿಯ ಹಾದಿ ಸುಗಮವಾಯಿತು. ಆದರೆ ಅದೇ ಅನಾರ್‌ಕಲಿ ಸಲೀಂರನ್ನು ಪ್ರೀತಿಸಿದ್ದಕ್ಕಾಗಿ ಜೀವಂತ ಸಮಾಧಿ ಶಿಕ್ಷೆಯಾಯಿತು. ನನ್ನ ಸಖಿಯರು ಇಂಥದ್ದೆಲ್ಲವನ್ನೂ ನನಗೆ ಹೇಳಿ ಹೆದರಿಸಿದರು. ಪ್ರೀತಿಸುವುದನ್ನು ಬಿಟ್ಟು ಬಿಡು ಎಂದರು. ಆದರೆ ಹೇಗೋ ನಾವಿಬ್ಬರೂ ಎಲ್ಲಿಗಾದರೂ ಓಡಿಹೋಗಿ ನಿಕಾಹ್ ಮಾಡಿಕೊಳ್ಳಲು ಯೋಚಿಸಿದೆವು. ಆದರೆ ಅಷ್ಟರಲ್ಲಿ ನಮ್ಮ ಗುಟ್ಟು ರಟ್ಟಾಗಿ ಇಮ್ರಾನ್‌ನ ಕೊಲೆ ಮಾಡಿಸಿದಿರಿ. ಅವನೊಂದಿಗೆ ನನ್ನನ್ನೂ ಕೊಲೆ ಮಾಡಿಸಿದ್ದರೆ ಈ ಬೇವಾ ಬದುಕಿನ ಸಂಕಟದಿಂದ ಪಾರಾಗುತ್ತಿದ್ದೆ. ಆದರೆ ನಿಮ್ಮ ಮಹತ್ವಾಕಾಂಕ್ಷೆಯನ್ನು ಪೂರೈಸಿಕೊಳ್ಳಲು ಹೇಗಾದರೂ ಯಾರಾದರೊಬ್ಬ ಬಾದಶಾಹರ ಮಗನ ಕುತ್ತಿಗೆಗೆ ನನ್ನನ್ನು ಬಂಧಿಸಿ, ನೀವು ಅಧಿಕಾರ ನಡೆಸಬಹುದೆಂಬ ಹುನ್ನಾರದಲ್ಲಿ ಇದ್ದಿರಿ. ಅವನ ಪ್ರೀತಿಯಲ್ಲಿ, ಕೆಲವೇ ದಿನಗಳಾದರೂ ಇಂದಿನವರೆಗೂ ಸಾಧ್ಯವಾಗದ ಸಂತೋಷವನ್ನು ಅನುಭವಿಸಿದೆ. ಆ ನೆನಪುಗಳಷ್ಟೇ ನನ್ನ ಪಾಲಿಗೆ ಉಳಿದಿರುವುದು. ಆದರೆ ನನ್ನಿಂದಾಗಿ ಅವನು ಸಾಯಬೇಕಾಯಿತಲ್ಲ ಎನ್ನುವ ನೋವು ಬೆಂಕಿಯಾಗಿ ನನ್ನ ಒಳಗಿನ್ನೂ ದಹಿಸುತ್ತಿದೆ. ಅಮ್ಮೀ, ಆ ಎಲ್ಲ ನೋವುಗಳನ್ನು ನಿಮಗಾಗಿ ಹತ್ತಿಕ್ಕಿಕೊಂಡಿದ್ದೇನೆ. ತಾಯಿಗಾಗಿ ಈ ಸಣ್ಣ ತ್ಯಾಗವನ್ನು ಮಾಡದಿದ್ದರೆ, ಮಗಳಾಗಿ ಸಾರ್ಥಕವೇನು?"

"ಕ್ಷಮಿಸು ಮಗಳೆ, ದಹದಹಿಸುತ್ತಿರುವ ಬೆಂಕಿಯನ್ನು ಒಳಗೆ ಇರಿಸಿಕೊಂಡು ತಣ್ಣನೆಯ ಭಾವದೊಂದಿಗೆ ನಡೆದುಕೊಳ್ಳುತ್ತಿರುವ ನಿನ್ನ ಸಹನಶಕ್ತಿಗೆ ನಾನು ಏನು ಹೇಳಬೇಕೋ ತಿಳಿಯುತ್ತಿಲ್ಲ. ನನ್ನಲ್ಲಿನ ಕ್ಷುಲ್ಲಕ ಪ್ರವೃತ್ತಿಗಳು ಮುಗಿಲೆತ್ತರದಲ್ಲಿ ಹಾರಾಡುತ್ತ ಜೀಗುತ್ತ ಇದ್ದ ನನ್ನನ್ನು, ನನ್ನ ಅಹಂಕಾರವನ್ನು ಒಮ್ಮೆಲೇ ನೆಲಕ್ಕೆ ಅಪ್ಪಳಿಸಿ ಇನ್ನೆಂದೂ ಎದ್ದು ನಿಲ್ಲಲಾರದಂತೆ ಮಾಡಿದವು."

"ಅಮ್ಮೀ, ಎಲ್ಲರಿಗಿಂತ ಹೆಚ್ಚಾಗಿ ಪ್ರೀತಿಯ ಬೆಲೆ ಏನೆಂಬುದನ್ನು ಬಲ್ಲವಳಾಗಿದ್ದೆ; ಪ್ರೀತಿಯ ಅರ್ಥವೇನೆಂದು ನಿನ್ನ ಅನುಭವದಿಂದಲೇ ತಿಳಿದಿದ್ದೆ. ಬಾದಶಾಹ್ ಜಹಾಂಗೀರ್‌ರನ್ನು ಪ್ರಪಂಚದಲ್ಲಿ ಎಲ್ಲರಿಗಿಂತ ಹೆಚ್ಚಾಗಿ ಪ್ರೀತಿಸಿದ್ದೆ. ಆದರೆ ನನ್ನ ಅಬ್ಬುವನ್ನು ಮದುವೆಯಾದೆ? ಹೇಳು ಅಬ್ಬುವನ್ನು ನಿಜವಾಗಿ ಪ್ರೀತಿಸುತ್ತಿದ್ದೆಯಾ?"

"ಹೇಗೆ ಹೇಳಲಿ ಲಾಡ್ಲಿ. ಆಗಿನ ಪರಿಸ್ಥಿತಿಗಳೇ ಬೇರೆ. ನಾವೆಲ್ಲರೂ ಅಕ್ಬರ್ ಬಾದಶಾಹರ ಸೇವಕರು ಮಾತ್ರ. ಯಾವ ರಾಜವಂಶಕ್ಕೂ ಸೇರಿದವರಲ್ಲ. ಹೀಗಿರುವಾಗ ಬಾದಶಾಹರು ಮಗ ಸಲೀಂ ಜೊತೆ ವಿವಾಹಕ್ಕೆ ಹೇಗೆ ತಾನೆ ಒಪ್ಪುತ್ತಾರೆ. ಉಪಾಯಾಂತರದಿಂದ ಪ್ರಜೆಗಳಿಗೆ ನಮ್ಮಿಬ್ಬರ ಸಂಬಂಧ ಬಯಲಾಗುವುದಕ್ಕೆ ಮೊದಲೇ ಅಲಿಖುಲಿ ಅಥವಾ ಶೇರ್‌ಖಾನ್‌ರ ಜೊತೆ ವಿವಾಹ ಮಾಡಿಸಿಬಿಟ್ಟರು. ಆಗ ನಾವು ಅಸಹಾಯಕರಾಗಿದ್ದೆವು. ಬಾದಶಾಹರ ಹುಕುಂಅನ್ನು ನಿರಾಕರಿಸಿ ಬದುಕುವ ಸಾಧ್ಯತೆಯೆಲ್ಲಿತ್ತು?"

"ಅದಕ್ಕೇ ಬಾದಶಾಹರ ಸಾವಿನ ನಂತರ; ಅಬ್ಬಾಜಾನ್‌ರನ್ನು ಕೊಲೆ ಮಾಡಿಸಿ, ನಿಮ್ಮನ್ನು ನಿಕಾಹ್ ಮಾಡಿಕೊಂಡರು. ಹೌದಲ್ಲವೇ? ನಿಮಗೆ ಅದು ಸಾಧ್ಯವಾಯಿತು. ಆದರೆ ನನಗೆ... ನನಗೆ ನಾನು ಪ್ರೀತಿಸಿದವನನ್ನೇ ಕೊಲೆ ಮಾಡಿಸಿಬಿಟ್ಟರಲ್ಲ?" ಎಂದು ಗಳಗಳನೆ ಅತ್ತುಬಿಟ್ಟಳು.

"ಲಾಡ್ಲಿ ನೀನು ತಿಳಿದಿರುವುದು ತಪ್ಪು. ಬಾದಶಾಹರು ಕೊಲೆ ಮಾಡಿಸಲಿಲ್ಲ." ಎಂದರೂ ಲಾಡ್ಲಿಗೆ ನಂಬಿಕೆ ಬರಲಿಲ್ಲ. ಆದರೂ ಅಮ್ಮನ ಅಂತಿಮ ದಿನಗಳಲ್ಲಿ ನಡೆದ ದುರಂತಗಳನ್ನು ನೆನೆಸಿ ಮತ್ತಷ್ಟು ನೋವುಂಟುಮಾಡುವುದಕ್ಕೆ ಲಾಡ್ಲಿಯ ಮನಸ್ಸು ಒಪ್ಪಲಿಲ್ಲ.

ಪ್ರಪಂಚದಲ್ಲಿ ತಾಯಿಯನ್ನು ಪ್ರೀತಿಸದವರು ಇರುವುದು ಸಾಧ್ಯವೇ ಇಲ್ಲ. ಒಂದು ಮಗುವಿಗೆ ಜನ್ಮ ಕೊಡಲು ಎಷ್ಟು ಕಷ್ಟಪಟ್ಟಿರುತ್ತಾರೆ. ನನ್ನ ಅಮ್ಮಿಯ ಜೀವನಗಾಥೆಯೇ ಅದಕ್ಕೆ ನಿದರ್ಶನ, ಇನ್ನು ಇಂತಹ ಚರ್ಚೆ ಬೇಡ ಎಂದುಕೊಂಡು ಸುಮ್ಮನಾದಳು.

ಸುಮಾರು ಹೊತ್ತು ಇಬ್ಬರೂ ತಮ್ಮ ತಮ್ಮದೇ ರೀತಿಯಲ್ಲಿ ಯೋಚಿಸುತ್ತಾ ಕಂಬನಿಯಿಡುತ್ತಿದ್ದರು.

ನೂರ್ ಜಹಾನ್ ಒಂದೇ ಸಮನೆ ಬಿಕ್ಕಳಿಸಲು ಆರಂಭಿಸಿದಳು. ಎದೆಯಲ್ಲಿ ಸಂಕಟ. ಮಾತಾಡಲು ಕಷ್ಟಪಡುತ್ತಿದ್ದಳು. ಲಾಡ್ಲಿ ಅವಳ ಬಳಿಗೆ ಹೋಗಿ ಕುಳಿತಳು. ಹೂಜಿಯೊಳಗಿಂದ ಒಂದೆರಡು ಹನಿ ನೀರು ಬಗ್ಗಿಸಿ ಕುಡಿಸಲು ಪ್ರಯತ್ನಿಸಿದಳು. ನೂರ್ ಜಹಾನ್ ಪ್ರಯತ್ನಪೂರ್ವಕವಾಗಿ ಮಾತುಗಳನ್ನು ಹೊರಗೆಡಹಲು ಪ್ರಯತ್ನಿಸುತ್ತಿದ್ದಳು.

"ಲಾಡ್ಲಿ... ಲಾಡ್ಲಿ... ಬೇಟಾ, ನಿನ್ನಲ್ಲಿ ಮಾಫಿ ಕೇಳುವ ಯೋಗ್ಯತೆಯೂ ನನಗಿಲ್ಲ. ಹೇಳಬೇಕೆಂದರೆ ನಾನು ನಿನಗೆ ತಾಯಿಯೇ ಅಲ್ಲ. ಎಲ್ಲ ತಾಯಂದಿರು ಮಕ್ಕಳ ಸುಖಕ್ಕಾಗಿ ಮಹತ್ತರ ತ್ಯಾಗ ಬಲಿದಾನಗಳನ್ನು ಮಾಡುತ್ತಾರೆ. ಆದರೆ... ಆದರೆ ನಾನು ನಿನ್ನ ಸುಖವನ್ನೇ ಬಲಿಕೊಟ್ಟೆ. ಕಡೆತನಕ ವೈಧವ್ಯದ ಬೆಂಕಿಯಲ್ಲಿ ಬೇಯುವಂತೆ ಮಾಡಿದೆ. ಅದಕ್ಕೆಂದೇ ಅಲ್ಲಾಹ್ ನನಗೆ ಈ ಶಿಕ್ಷೆ ವಿಧಿಸಿದ್ದಾನೆ. ಒಮ್ಮೆಲೇ ನನ್ನೆಲ್ಲ ಸುಖ ಸಂತೋಷ ಅಧಿಕಾರ ಸಂಪತ್ತು ಕಡೆಗೆ ನನ್ನವರೆಂದುಕೊಂಡಿದ್ದವರನ್ನೆಲ್ಲ ನನ್ನಿಂದ ಕಿತ್ತುಕೊಂಡ. ಈಗಲೂ ನಿನ್ನನ್ನು ಅನಾಥವಾಗಿ ದಿಕ್ಕು ದೆಸೆಯಿಲ್ಲದ ಸ್ಥಿತಿಯಲ್ಲಿ ಬಿಟ್ಟು ಹೋಗುತ್ತಿದ್ದೇನೆ." ಎಂದು ಕಷ್ಟಪಟ್ಟು ತಡೆತಡೆದು ಮಾತು ಮುಗಿಸಿದಳು. ಇನ್ನು

ಮುಂದುವರೆಸುವುದು ಅವಳಿಗೆ ಸಾಧ್ಯವೇ ಆಗಲಿಲ್ಲ. "ಬೇಟಾ ಇನ್ನೊಂದೆರಡು ಗಳಿಗೆ ಮಾತ್ರ. ಲಾಡ್ಲಿ ನಾನು ಸತ್ತ ಮೇಲೆ ನನ್ನನ್ನೂ ನನ್ನ ಗಂಡನ ಸಮಾಧಿಯ ಪಕ್ಕದಲ್ಲಿಯೇ ದಿಲ್‌ಖುಷಾ ಉದ್ಯಾನದಲ್ಲಿ ಸಮಾಧಿ ಮಾಡಿಬಿಡು. ನಾನು ನನಗಾಗಿ ಒಂದು ಜಾಗವನ್ನು ಗುರುತು ಮಾಡಿ ಇಟ್ಟಿದ್ದೇನೆ. ಜೊತೆಗೊಂದು ಕವಿತೆಯನ್ನೂ ಸಮಾಧಿಯ ಮೇಲೆ ಕೆತ್ತಿಸಲು ಇರಿಸಿದ್ದೇನೆ. ಬರುತ್ತೇನೆ ಬೇಟಾ... ಖುದಾಹಾಫಿಜ್.... ಖುದಾಹಾಫಿಜ್... ನನಗಾಗಿ ಅಲ್ಲಾಹ್‌ನನ್ನು ಪ್ರಾರ್ಥಿಸು" ಎಂದು ಹೇಳುತ್ತಾ ತನಗಾಗಿ ತಾನು ಬರೆದಿಟ್ಟಿದ್ದ ಕವಿತೆಯ ಹಾಳೆಯನ್ನು ದಿಂಬಿನಡಿಯಿಂದ ತೆಗೆದುಕೊಟ್ಟಳು.

ಲಾಡ್ಲಿಯ ಕಣ್ಣು ತುಂಬಿ ಮಸುಕಾಗಿತ್ತು. ಬಿಕ್ಕಿ ಬಿಕ್ಕಿ ಅಳುತ್ತಾ ಅಮ್ಮೀ ಅಮ್ಮೀ ನೀನು ಸಾಯುವುದು ಬೇಡ. ನೀನು ಹೋದರೆ ನಾನು ಬದುಕುವುದಾದರೂ ಹೇಗೆ? ಅಮ್ಮೀ... ಅಮ್ಮೀ... ಎಂದು ಗೋಳಾಡುತ್ತಲೇ ಇದ್ದಳು.

ನೂರ್ ಜಹಾನ್ ನೀಡಿದ ಕವಿತೆಯ ಸಾಲುಗಳ ಮೇಲೆ ಕಣ್ಣಾಡಿಸಿದಳು.

**ಈ ಬಡ ಪಯಣಿಗಳ ಸಮಾಧಿಯ ಮೇಲೆ**
**ದೀಪವೊಂದನೂ ಹಚ್ಚದಿರಿ, ಗುಲಾಬಿಗಳಿಂದ**
**ಸಮಾಧಿಯನು ಅಲಂಕರಿಸದಿರಿ**
**ಇದರಿಂದ ಪತಂಗಗಳ ರೆಕ್ಕೆ ಸುಡುವುದಿಲ್ಲ**
**ಕೋಗಿಲೆಗಳ ನಿಟ್ಟುಸಿರು ಹೊಮ್ಮುವುದಿಲ್ಲ**
**ಕಂಬನಿಗಳು ಉಕ್ಕಿ ಧುಮ್ಮಿಕ್ಕಿ ಹರಿಯುವುದಿಲ್ಲ**
**ಇದಿಷ್ಟೇ ನನ್ನ ಪ್ರಾರ್ಥನೆ ನಿಮಗೆ.**



# ನವಕರ್ನಾಟಕ ಪ್ರಕಟಣೆಗಳು

## ಕಾದಂಬರಿ

ವಚನಭಾರತ — *ಡಾ॥ ಎ. ಆರ್. ಕೃಷ್ಣಶಾಸ್ತ್ರೀ*
ದ್ವಾಪರ (ಸಂಕೀರ್ಣ ಮಹಾಭಾರತಕ್ಕೊಂದು ವಿಭಿನ್ನ ವಿಶ್ಲೇಷಣೆ) — *ಕಂನಾಡಿಗಾ ನಾರಾಯಣ*
ತ್ರಿಲೋಕ ಸಂಚಾರಿ ನೀರೆ (ವೈಜ್ಞಾನಿಕ ಕಾದಂಬರಿ) — *ಸವಿತಾ ಶ್ರೀನಿವಾಸ*
ಮುಂದೆ ಬರುವುದು ಮಹಾನವಮಿ — *ಅಲಕ ತೀರ್ಥಹಳ್ಳಿ*
ಬೇಡಿ ಕಳಚಿತು ದೇಶ ಒಡೆಯಿತು — *ಕೋ. ಚೆನ್ನಬಸಪ್ಪ*
ಯಾದ್ ವಶೇಮ್ (ನೂರು ಸಾವಿರ ಸಾವಿನ ನೆನಪು) — *ನೇಮಿಚಂದ್ರ*
ಸಂಕಲ್ಪ — *ಪ್ರೀತೀಶ*
ಜೇನು ಆಕಾಶದ ಅರಮನೆಯೊ... — *ಕ್ಷೀರಸಾಗರ*
ಈಶ್ವರ – ಅಲ್ಲಾ — *ಜಿ. ಕೆ. ಗೋವಿಂದ ರಾವ್*
ಸರಕುಗಳು — *ಫಕೀರ್ ಮುಹಮ್ಮದ್ ಕಟ್ಪಾಡಿ*
ಜೆಹಾದ್ — *ಬೊಳುವಾರು ಮಹಮದ್ ಕುಂಞಿ*
ನನ್ನ ದೇವರು ಹೆಣ್ಣು — *ನೂರ್ ಜ಼ಹೀರ್ (ಅನು : ಎಂ. ಅಬ್ದುಲ್ ರೆಹಮಾನ್ ಪಾಷ)*
ಮರೀಚಿಕೆ – ಆರಿಫ್ ಲವ್ಸ್ ಸುಮಿತ್ರಾ — *ಅಬ್ದುಲ್ಲಾಹ್ ಖಾನ್*
*ಅನು : ಪ್ರೊ॥ ಎಂ. ಅಬ್ದುಲ್ ರೆಹಮಾನ್ ಪಾಷ*
ಸೂತ್ರಧಾರ — *ಅಮಿತಾಭ ಬಾಗ್ಚಿ (ಅನು : ಪ್ರೇಮಾ ಎನ್. ರಾವ್)*
ಕೊನೆಯ ಅಲೆ (ದ್ವೀಪವೊಂದರ ಕಥೆ) — *ಪಂಕಜ್ ಸೇಖ್‌ಸರಿಯಾ*
*(ಅನು : ಸುಮಂಗಲಾ ಎಸ್. ಮುಮ್ಮಿಗಟ್ಟಿ)*
ತಮಸ್ — *ಹಿಂದಿ ಮೂಲ : ಭೀಷ್ಮ ಸಾಹನಿ*
*(ಅನು : ಶಾರದಾ ಸ್ವಾಮಿ, ಡಾ॥ ಎಸ್. ಎಂ. ರಾಮಚಂದ್ರ ಸ್ವಾಮಿ)*
ಮಯ್ಯಾದಾಸನ ವಾಡೆ — *ಹಿಂದಿ ಮೂಲ : ಭೀಷ್ಮ ಸಾಹನಿ (ಅನು : ದು. ನಿಂ. ಬೆಳಗಲಿ)*
ವೋಲ್ಗಾ–ಗಂಗಾ — *ಹಿಂದಿ ಮೂಲ : ರಾಹುಲ ಸಾಂಕೃತ್ಯಾಯನ (ಅನು : ಬಿ. ಎಂ. ಶರ್ಮಾ)*
ಕೊನೆಯ ಜಿಗಿತ — *ಹಿಂದಿ ಮೂಲ : ಶಿವಮೂರ್ತಿ (ಅನು : ಆರ್. ಪಿ. ಹೆಗಡೆ)*
ಹಿಂದೂ : ಬದುಕಿನ ಸಮೃದ್ಧ ಅಡಕಲು — *ಮರಾಠಿ ಮೂಲ : ಡಾ॥ ಭಾಲಚಂದ್ರ ನೇಮಾಡೆ*
*(ಅನು : ಚಂದ್ರಕಾಂತ ಪೋಕಳೆ)*
ನರವಾನರ — *ಮರಾಠಿ ಮೂಲ : ಶರಣಕುಮಾರ ಲಿಂಬಾಳೆ*
*(ಹಿಂದಿಯಿಂದ ಕನ್ನಡಕ್ಕೆ : ಡಾ॥ ಪ್ರಮೀಳಾ ಮಾಧವ್)*
ಬಹುಜನ — *ಮರಾಠಿ ಮೂಲ : ಶರಣಕುಮಾರ ಲಿಂಬಾಳೆ*
*(ಹಿಂದಿಯಿಂದ ಕನ್ನಡಕ್ಕೆ : ಡಾ॥ ಪ್ರಮೀಳಾ ಮಾಧವ್)*
ಮಾಹೀಮ ಖಾರಿ — *ಮರಾಠಿ ಮೂಲ : ಮಧು ಮಂಗೇಶ್ ಕರ್ಣಿಕ (ಅನು : ಚಂದ್ರಕಾಂತ ಪೋಕಳೆ)*
ಕಾಳಿ ಗಂಗಾ — *ಕೊಂಕಣಿ ಮೂಲ : ಮಹಾಬಳೇಶ್ವರ ಸೈಲ್ (ಅನು : ಗೀತಾ ಶೆಣೈ)*
ನೂರು ಸಿಂಹಾಸನಗಳು — *ಮಲಯಾಳಂ ಮೂಲ : ಜಯಮೋಹನ್ (ಅನು : ಕೆ. ಪ್ರಭಾಕರನ್)*
ಅಗ್ನಿಗರ್ಭ — *ಬಂಗಾಳಿ ಮೂಲ : ಮಹಾಶ್ವೇತಾ ದೇವಿ (ಅನು : ಜಿ. ಕುಮಾರಪ್ಪ )*
ತಾಯಿ — *ರಷ್ಯನ್ ಮೂಲ : ಮಕ್ಸೀಂ ಗೋರ್ಕಿ (ಇಂಗ್ಲಿಷ್‌ನಿಂದ ಕನ್ನಡಕ್ಕೆ : ನಿರಂಜನ)*
ಪುನರ್ಜನ್ಮ (ಸಂಕ್ಷಿಪ್ತ) — *ರಷ್ಯನ್ ಮೂಲ : ಲೆವ್ ಟಾಲ್‌ಸ್ಟಾಯ್*
*(ಇಂಗ್ಲಿಷ್‌ನಿಂದ ಕನ್ನಡಕ್ಕೆ : ವಿ. ವಿ. ಉಪಾಧ್ಯಾಯ)*
ನೂರ್ ಜಹಾನ್ (ಐತಿಹಾಸಿಕ ಕಾದಂಬರಿ) — *ಡಾ॥ ವಿಜಯಾ ಸುಬ್ಬರಾಜ್*



# ನೂರ್ ಜಹಾನ್

ಮಾಧ್ಯಮಿಕ ಶಾಲೆಯಲ್ಲಿ ಓದುವಾಗ ನಮಗೆಲ್ಲ ಜಹಾಂಗೀರನ ರಾಣಿಯೆಂದು ಪರಿಚಿತಳಾದ ಮೆಹರುನ್ನೀಸಾ (ನೂರ್ ಜಹಾನ್) ಅವರದು ಇಷ್ಟೊಂದು ಸಂಕೀರ್ಣವಾದ ವ್ಯಕ್ತಿತ್ವವೆಂದು ನಮ್ಮಲ್ಲಿ ಬಹಳ ಜನಕ್ಕೆ ತಿಳಿದಿಲ್ಲ. ಅನಾರ್ಕಲಿಯ 'ದುರಂತ ಕಥನ'ಕ್ಕೆ ಸಿಕ್ಕಷ್ಟು ಗಮನವೂ ಇವಳಿಗೆ ಸಿಕ್ಕಿರಲಿಲ್ಲ. ಡಾ॥ ವಿಜಯಾ ಅವರು ಚರಿತ್ರೆಯ ವಿವರಗಳಿಗೆ ಯಾವುದೇ ಭಂಗ ತರದೆ, ಕಾಲ್ಪನಿಕವಾದ ಸಂಗತಿಗಳನ್ನು ಸೇರಿಸದೆ ಈ ಕಥಾನಕವನ್ನು ರೂಪಿಸಿದ್ದಾರೆ. ಜಹಾಂಗೀರನ ಮರಣದ ನಂತರ ನೂರ್ ಜಹಾನ್ ಅನುಭವಿಸಿದ ಪಡಿಪಾಟಲುಗಳು ಮತ್ತು ಅವಳು ತನ್ನ ಬದುಕನ್ನು ಮರುರೂಪಿಸಿಕೊಂಡ ಬಗೆಯನ್ನು ಕುರಿತ ವಿವರಗಳಿಗೂ ಸಾಕಷ್ಟು ಮಹತ್ವ ಕೊಡಲಾಗಿದೆ. ಹಾಗೆ ಮಾಡುವುದರಿಂದ ಈ ನತದೃಷ್ಟ ರಾಣಿಯ ಹುಟ್ಟಿನಿಂದ ಸಾವಿನವರೆಗಿನ ಸ್ವನಿಯಂತ್ರಿತವಲ್ಲದ ಪಯಣದ ಚಿತ್ರವನ್ನು ಕಟ್ಟಿಕೊಡಲು ಸಾಧ್ಯವಾಗಿದೆ. ನೂರ್ ಜಹಾನ್ ಬದುಕಿನ ಏರುಪೇರುಗಳು ಕುತೂಹಲ ಕೆರಳಿಸುತ್ತದೆ. ಕಾದಂಬರಿಯು ತನ್ನದೇ ಆದ ಓದುಗರನ್ನು ಪಡೆಯುತ್ತದೆ.

– ಎಚ್. ಎಸ್. ರಾಘವೇಂದ್ರರಾವ್

* * *



ಡಾ. ವಿಜಯಾ ಸುಬ್ಬರಾಜ್ ಬೆಂಗಳೂರಿನ ಎಂ.ಇ.ಎಸ್. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಲೇ ಬೇರೆ ಕಡೆ ಆಂಗ್ಲ ಪ್ರಾಧ್ಯಾಪಕರಾಗಿ, ಸ್ನಾತಕೋತ್ತರ ಪದವಿ ಪ್ರಾಧ್ಯಾಪಕರಾಗಿ ಕೂಡ ಸೇವೆ ಸಲ್ಲಿಸಿದ್ದಾರೆ. ಸದ್ಯ ಬಿ.ಎಂ.ಶ್ರೀ. ಪ್ರತಿಷ್ಠಾನದ ಎಂ.ಫಿಲ್. ಮತ್ತು ಪಿಎಚ್.ಡಿ. ತರಗತಿಗಳಿಗೆ ಅತಿಥಿ ಉಪನ್ಯಾಸಕ ರಾಗಿಯೂ, ಸಂಯೋಜನಾಧಿಕಾರಿಯಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ. ಕಾವ್ಯ, ಕಥೆ, ಕಾದಂಬರಿ, ನಾಟಕ, ವಿಮರ್ಶೆ, ಸಂಶೋಧನೆ, ಅನುವಾದ, ಪ್ರವಾಸ ಕಥನ, ಮಕ್ಕಳ ಸಾಹಿತ್ಯ ಇತ್ಯಾದಿ ಪ್ರಕಾರಗಳಿಗೆ ತಮ್ಮ ಅಮೂಲ್ಯವಾದ ಕೊಡುಗೆ ನೀಡಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, ಕುವೆಂಪು ಭಾಷಾ ಭಾರತಿ ಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿ, ಎಸ್. ವಿ. ಪರಮೇಶ್ವರ ಭಟ್ಟ ಪ್ರಶಸ್ತಿ, ಎಚ್. ವಿ. ಸಾವಿತ್ರಮ್ಮ ಪ್ರಶಸ್ತಿ ಇತ್ಯಾದಿ ಗೌರವಗಳು ಇವರಿಗೆ ಸಂದಿವೆ.

ISBN 93-89308-73-9





Code : 003592

₹ 290